ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೧೭

# ಬ್ರಹ್ಮಾಂಡಪುರಾಣಂ

(ಕನ್ನಡ ಅನುವಾದಸಹಿತ)

ಸಂಚಿಕೆ ೫

ಅನುವಾದಕ :

ಆಸ್ಥಾನ ವಿದ್ವಾನ್ ಪಾಟಣಕರ ಚಂದ್ರಶೇಖರಭಟ್ಟ.

---

ಮೈಸೂರು :

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು

೧೯೪೬

# ಮುನ್ನುಡಿ

**ವಾಚಕಮಹಾಶಯರೇ,**

ಈಗ ತಮ್ಮ ಮುಂದೆ ಇರಿಸುವುದು ಬ್ರಹ್ಮಾಂಡಪುರಾಣದ ಐದನೆಯ ಸಂಚಿಕೆಯು. ಇದರಲ್ಲಿ ಆಕರ್ಷಕವಾದ ಅನೇಕ ಪೌರಾಣಿಕ ಉಪಾಖ್ಯಾನಗಳು ಒಳಗೊಂಡಿವೆ. ಈ ಸಂಚಿಕೆಯು ವಾಚಕರ ಚಿತ್ತವನ್ನು ರಂಜಿಸಿ ನನ್ನ ಉದ್ಯಮವು ಸಫಲವಾಗಲೆಂದು ಆಕಾಂಕ್ಷಿಸುತ್ತೇನೆ.

ಇದರಲ್ಲಿ ಬರುವ ಉಪಾಖ್ಯಾನಗಳಿಂದ ನಾವು ತಿಳಿಯಬಹುದಾದ ಮುಖ್ಯಾಂಶಗಳನ್ನು ಸಂಗ್ರಹವಾಗಿ ನಿರೂಪಿಸಲು ಈಗ ಬಯಸುತ್ತೇನೆ. ಉಪಾಖ್ಯಾನಗಳ ಬಾಹ್ಯಕಥಾಭಾಗಗಳಲ್ಲಿ ಸ್ವಾರಸ್ಯವು ಏನೂ ಗಮನಾರ್ಹವಲ್ಲ. ಅದರಲ್ಲಿ ಪ್ರಾಯಕವಾಗಿ ಒಂದು ವ್ಯಕ್ತಿಯು ಪರನಿಗೆ ಅನಿಷ್ಟವನ್ನು ಚಿಂತಿಸುವುದು, ತನ್ನ ಸ್ವಾರ್ಥವನ್ನು ಸಾಧಿಸುವುದು, ಮತ್ತು ತನ್ಮೂಲಕವಾಗಿ ವಿಪತ್ತಿಗೆ ಗುರಿಯಾಗುವುದು; ಅಥವಾ ವಿಷಯಭೋಗಾಕಾಂಕ್ಷೆ, ರೂಪ-ಲಾವಣ್ಯಾದಿ ಲಾಲಸೆ-ಇತ್ಯಾದಿ ದೋಷಗಳಿಂದ ಆಯಾಯ ಚರಿತ್ರೆಗಳು ಬೃಹದಾಕಾರವನ್ನು ಹೊಂದಿವೆ.

ಮೇಲೆ ಹೇಳಿದ ನಿಮಿತ್ತಗಳಿಂದ ಉಂಟಾಗುವ ಕದನಗಳು ದೇವ-ದಾನವರಿಗೆ ಆಗಾಗ ಸಂಭವಿಸುವುವು. ದೇವತೆಗಳಿಗೆ ಒಂದು ವೇಳೆ ಜಯವೂ ಮತ್ತೊಂದು ವೇಳೆ ಅಪಜಯವೂ ಉಂಟಾಗುವುದು. ದೇವತೆಗಳು ಸಾಧುಗಳೆಂದೆನಿಸಿದ್ದರೂ ಅವರಲ್ಲಿ ಉದಯಿಸುವ ಜಯದ ಫಲವಾದ ಸಾಮ್ರಾಜ್ಯ ಸುಖಭೋಗದ ಆಕಾಂಕ್ಷೆಯು ಕದನದಲ್ಲಿ ಅವರನ್ನು ಕೆಳಮಟ್ಟಕ್ಕೆ ತರುವುದು. ಇದು ಧರ್ಮ-ಅಧರ್ಮಗಳ ಪರಸ್ಪರ ಸಂಗ್ರಾಮವು. ಅನಾದಿಯಾಗಿ ಧರ್ಮ-ಅಧರ್ಮಗಳ ಹೋರಾಟವು ನಡೆಯುತ್ತಿರುವುದು. ಒಂದುಸಲ ಧರ್ಮಕ್ಕೆ ವಿಜಯಪತಾಕೆಯ ಪ್ರತಿಷ್ಠೆಯು ದೊರೆತರೆ ಮತ್ತೊಂದುಸಲ ಧರ್ಮವು ಅಧರ್ಮದ ಪಾದಸೇವಿಯಾಗಿರಬೇಕಾಗುವುದು.

ಅಸುರರ ಜಯಸಾಧನೆಗೆ ತಪಶ್ಚರ್ಯೆಯನ್ನು ಮಾಡಲು ಶುಕ್ರಾಚಾರ್ಯನು ಶಿವಲೋಕವನ್ನು ಕುರಿತು ತೆರಳಿರಲು ವಿಷ್ಣು-ಇಂದ್ರರು ಅಸುರರನ್ನು ನಿರ್ಮೂಲ ಮಾಡಲು ಯತ್ನಿಸಿ ಶುಕ್ರಾಚಾರ್ಯ ಜನನಿಯು ಅದಕ್ಕೆ ಅಡ್ಡಿಬರುವಳು. ಆಗ ಆಕೆಯನ್ನು ಮಹಾವಿಷ್ಣುವು ನಿಗ್ರಹಿಸಿದನು. ಅದರಿಂದ ಪುರಾಣಪುರುಷನಾದ ಮಹಾವಿಷ್ಣುವು ಭೃಗುಮುನಿಯ ಶಾಪಕ್ಕೆ ಪಾತ್ರನಾದನು. ಈ ಶಾಪದಿಂದ ವಿಷ್ಣುವು

ಮತ್ತೆ ಮತ್ತೆ ಅನೇಕ ಜನ್ಮಗಳನ್ನು ಎತ್ತಬೇಕಾಯಿತು–ಎಂಬ ಕಥೆಯು ಇದರಲ್ಲಿ ಬರುವುದು. ದುಷ್ಟನಿಗ್ರಹ-ಶಿಷ್ಟಪಾಲನೆಗಳ ಮೂಲಕ ಧರ್ಮೋದ್ಧಾರವು ಮಹಾ ವಿಷ್ಣುವಿನ ಕರ್ತವ್ಯವಾದರೂ ಅದರಿಂದ ತನಗೆ ಶಾಪವು ಪ್ರಾಪ್ತವಾಯಿತು, ಆದರೆ ಬಂಧಕವಾದ ಗುಣತ್ರಯದಿಂದ ಅತೀತನಾದ ಪರಮಾತ್ಮನಿಗೆ ಈ ಶಾಪವು ಮುಂದೆ ಅವಶ್ಯವಾಗಿ ಆಯಾಯ ಜನ್ಮಗಳನ್ನು ಎತ್ತಬೇಕೆಂದಿರುವ ನಿಜಸತ್ಯಸಂಕಲ್ಪದಂತೆ ಸ್ವೇಚ್ಛಾಮಾತ್ರಸೃಷ್ಟಿಯಾದುದರಿಂದ ಪರಮಾತ್ಮನಿಗೆ ಅದರಿಂದ ಹೀನತ್ವವು ಬರಲಾರದು.

ಆದರೆ ಮಿಕ್ಕ ದೇವಾದಿ ಉತ್ತಮಾಧಿಕಾರಿಗಳಿಗೆ ಕೂಡ ವಿಹಿತವಾದ ಉದ್ಯಮಗಳಿಂದ ತಮ್ಮಲ್ಲಿ ಉನ್ನತಿ-ಅವನತಿಗಳ ಪರಿಣಾಮಗಳನ್ನು ಪರಂಪರೆಯಾಗಿ ಉಂಟುಮಾಡುವ ಅನೇಕ ಸನ್ನಿವೇಶಗಳು ಒದಗುವುವು.

ಆದ್ದರಿಂದ ಮಾನವರು ಬಾಹ್ಯವಾದ ಜಯ-ಅಪಜಯಗಳ ದೃಷ್ಟಿಯನ್ನು ಬಿಟ್ಟು ಮಾನಸವಾದ ಅಸಾಧು ವೃತ್ತಿಗಳೆಂಬ ಅಸುರರನ್ನು ಸಾಧುವೃತ್ತಿಗಳೆಂಬ ದೇವತೆಗಳಿಂದ ಜಯಿಸಲು ಯತ್ನಿಸುವುದು ಎಂದೆಂದಿಗೂ ಹೀನದಶೆಗೆ ತರದಿರುವ ವಿಶ್ವಸಂಗ್ರಾಮ ಜಯಾಭಿಲಾಷೆಯೆನಿಸುವುದು. ಕಾಮ-ಕ್ರೋಧಾದಿ ಮಾನಸ ಶತ್ರುಗಳು ಪ್ರತಿಯೊಂದು ದೇಹವೆಂಬ ನಗರಗಳಲ್ಲಿ ವಾಸಮಾಡುವುದರಿಂದ ಅಹಿಂಸಾ-ಸತ್ಯ ಮುಂತಾದ ಸಾತ್ತ್ವಿಕವೃತ್ತಿಗಳಿಂದ ಅವುಗಳನ್ನು ಜಯಿಸಬೇಕಾದುದು ಪುರಸ್ವಾಮಿಯಾದ ಪ್ರತಿಯೊಬ್ಬ ಮಾನವನ ಕರ್ತವ್ಯವು.

ಯಯಾತಿರಾಜನು ವಿಷಯಸುಖಭೋಗಿಯಾಗಿ ತೃಪ್ತಿಯುಂಟಾಗದೆ ತನ್ನ ಪುತ್ರರಿಂದ ತಾರುಣ್ಯವಿನಿಮಯವನ್ನು ಬಯಸಿ ಅನೇಕ ಪುತ್ರರು ಸಮ್ಮತಿಸದಿರಲು ಅವರಿಗೆ ಅನಿಷ್ಟವನ್ನು ಸಂಕಲ್ಪಿಸಿ ಕಡೆಗೆ ಕಿರಿಯ ಪುತ್ರನಿಂದ ತಾರುಣ್ಯವನ್ನು ತೆಗೆದುಕೊಂಡು ವಿಷಯಸುಖವನ್ನು ಭುಂಜಿಸಿದನು. ಅನೇಕ ಸಹಸ್ರಾರು ವರ್ಷಗಳ ದೀರ್ಘಕಾಲ ಅನುಭವಿಸಿದನು. ಆದರೆ ವಿಷಯಸುಖಭೋಗತೃಷ್ಣೆಗೆ ಪಾರವೆಲ್ಲಿ! ಕಡೆಯಲ್ಲಿ ವಿರಕ್ತಿಯನ್ನು ಹೊಂದಿ ಗೀತೆಗಳನ್ನು ಹಾಡಿದನು. ಹೀಗೆ ಈ ಚರಿತ್ರೆಗಳಿಂದ ತತ್ತ್ವವನ್ನು ಪರೀಕ್ಷಿಸಬಹುದು.

ಈ ರೀತಿಯಾಗಿ ಧರ್ಮ-ಅಧರ್ಮಗಳ ಅನಾದಿಯಾದ ಸಂಗ್ರಾಮಪ್ರವೃತ್ತಿ ಜಯ-ಅಪಜಯಗಳ ಅವ್ಯವಸ್ಥೆ, ಜಯಫಲವಾದ ಸಾಮ್ರಾಜ್ಯಭೋಗ ತೃಷ್ಣೆಯ ಅಪಾರತ್ವ, ಇವುಗಳನ್ನು ಚಿಂತಿಸಿ ತನು–ಮನಗಳ ಧೀರತೆಯನ್ನು ಸಂಪಾದಿಸಿ ಅಧ್ಯಾತ್ಮಸಂಸ್ಕೃತಿಯನ್ನು ಗಮನದಲ್ಲಿಡಬೇಕಾದುದೆಂಬ ಅಂಶವನ್ನು ಸಮಸ್ತ

ಉಪಾಖ್ಯಾನಗಳು, ದಿವ್ಯ ಚರಿತ್ರೆಗಳು ಉಪದೇಶಿಸುತ್ತವೆ. ಇಂತಹ ಅನೇಕ ಉಪಾಖ್ಯಾನಗಳಿಂದಕೂಡಿ ಈ ಸಂಚಿಕೆಯು ಸಮಾಪ್ತಿ ಹೊಂದಿರುವುದು.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,** ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನ ಮಾಡಿರುತ್ತೇನೆ. ಇದು ಉತ್ತಮರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶ ಮಾಡಿಕೊಟ್ಟ ಮಹನೀಯರಿಗೆ ತುಂಬ ಕೃತಜ್ಞನಾಗಿರುತ್ತೇನೆ.

**ಅನುವಾದಕ.**



# ವಿಷಯಾನುಕ್ರಮಣೀ

| ಅಧ್ಯಾಯ | ವಿಷಯ | ಪುಟಗಳು |
|---|---|---|





ಶ್ರೀಃ

# ಬ್ರಹ್ಮಾಂಡಪುರಾಣಂ

## ಏಕೋನಷಷ್ಟಿತಮೋಽಧ್ಯಾಯಃ

**ಬೃಹಸ್ಪತಿರುವಾಚ :—**

**ಋಷಯಸ್ತ್ವೇವಮುಕ್ತಾಸ್ತು ಪರಂ ಹರ್ಷಮುಪಾಗತಾಃ ।**
**ಪರಂ ಶುಶ್ರೂಷಯಾ ಭೂಯಃ ಪಪ್ರಚ್ಛುಸ್ತದನಂತರಮ್ ॥ ೧ ॥**

**ಋಷಯ ಊಚುಃ :—**

**ವಂಶಾನಾಮಾನುಪೂರ್ವ್ಯೇಣ ರಾಜ್ಞಾಂ ಚಾಮಿತತೇಜಸಾಮ್ ।**
**ಸ್ಥಿತಿಂ ಚೈಷಾಂ ಪ್ರಭಾವಂ ಚ ಬ್ರೂಹಿ ನಃ ಪರಿಪೃಚ್ಛತಾಮ್ ॥ ೨ ॥**

**ಏವಮುಕ್ತಸ್ತತಸ್ತೈಸ್ತು ತದಾಸೌ ಲೋಮಹರ್ಷಣಃ ।**
**ಶೃಣ್ವತಾಮುತ್ತರಾಖ್ಯಾನೇ ಋಷೀಣಾಂ ವಾಕ್ಯಕೋವಿದಃ ॥ ೩ ॥**

---

೧. ಬೃಹಸ್ಪತಿಯು ಇಂತೆಂದನು :—ಈ ರೀತಿಯಾಗಿ ಹೇಳಲ್ಪಟ್ಟ ಮಹರ್ಷಿಗಳು ಅಗಾಧವಾದ ಸಂತೋಷವನ್ನು ಹೊಂದಿದರು. ತರುವಾಯ ಮತ್ತು ಹೆಚ್ಚಿನ ಪರಮಾರ್ಥಗಳನ್ನು ತಿಳಿಯಬೇಕೆಂಬ ಕುತೂಹಲದಿಂದ ಮತ್ತೆ ಪ್ರಶ್ನಿಸಿದರು.

೨. ಋಷಿಗಳು ಇಂತೆಂದರು :—ಅಗಾಧವಾದ ಮಹಿಮೆಯಿಂದ ರಾಜಿಸುವ ರಾಜರ ಮತ್ತು ಅವರ ವಂಶದವರ ಸ್ಥಿತಿ–ಪ್ರಭಾವಾತಿಶಯಗಳನ್ನು ಕೇಳಬೇಕೆಂದಿರುವ ನಮಗೆ ಅವುಗಳನ್ನು ಕ್ರಮವಾಗಿ ವಿವರಿಸು.

೩. ತರುವಾಯ ಮಹರ್ಷಿಗಳಿಂದ ಈ ರೀತಿಯಾಗಿ ಪ್ರಾರ್ಥಿಸಲ್ಪಟ್ಟ ಲೋಮಹರ್ಷಣ ಮುನಿಯು ಆಗ ಚರಿತ್ರವನ್ನು ಶ್ರವಣಮಾಡುವ ಮಹರ್ಷಿಗಳಿಗೆ ಉತ್ತರವನ್ನು ನಿರೂಪಿಸುವ ವಚನೋಪನ್ಯಾಸದಲ್ಲಿ ಕೌಶಲವನ್ನು ಅವಲಂಬಿಸಿದನು.

1

ಆಖ್ಯಾನಕುಶಲೋ ಭೂಯಃ ಪರಂ ವಾಕ್ಯಮುವಾಚ ಹ ।
ಬ್ರುವತೋ ಮೇ ನಿಬೋಧಧ್ವಂ ಋಷಿರಾಹ ಯಥಾ ಮಮ ॥ ೪ ॥

ವಂಶಾನಾಮಾನುಪೂರ್ವ್ಯೇಣ ರಾಜ್ಞಾಂ ಚಾಮಿತತೇಜಸಾಮ್ ।
ಸ್ಥಿತಿಂ ಚೈಷಾಂ ಪ್ರಭಾವಂ ಚ ಕ್ರಮತೋ ಮೇ ನಿಬೋಧತ ॥ ೫ ॥

ವರುಣಸ್ಯ ಸಪತ್ನೀಕಾತ್ ಸ್ತುತಾ ದೇವೀ ಉದಾಹೃತಾ ।
ತಸ್ಯಾಃ ಪುತ್ರೌ ಕಲಿರ್ವೈದ್ಯಃ ಸ್ತುತಾ ಚ ಸುರಸುಂದರೀ ॥ ೬ ॥

ಕಲಿಪುತ್ರೌ ಮಹಾವೀರ್ಯೌ ಜಯಶ್ಚ ವಿಜಯಶ್ಚ ಹ ।
ವೈದ್ಯಪುತ್ರೌ ಘೃಣಿಶ್ಚೈವ ಮುನಿಶ್ಚೈವ ಮಹಾಬಲೌ ॥ ೭ ॥

ಪುತ್ರಾಣಾಮನುಕಾಮಾನಾಮನ್ಯೋನ್ಯಸ್ಯ ಪ್ರಭಕ್ಷಿಣೌ ।
ಭಕ್ಷಯಿತ್ವಾ ತಾವನ್ಯೋನ್ಯಂ ವಿನಾಶಂ ಸಮವಾಪ್ನುತಃ ॥ ೮ ॥

---

೪. ಪುಣ್ಯ ಕಥೆಗಳನ್ನು ಹೇಳುವುದರಲ್ಲಿ ಕುಶಲನಾದ ರೋಮಹರ್ಷಣ, ಮುನಿಯು ಈ ವಚನವನ್ನು ಆದಿಯಲ್ಲಿ ಹೇಳಿದನು. ನನ್ನ ಗುರುವಾದ ಮುನಿಯು ನನಗೆ ಉಪದೇಶಿಸಿದಂತೆ ನಾನು ಹೇಳುವುದನ್ನು ಕೇಳಿರಿ.

೫. ಅಗಾಧ ತೇಜೋರಾಶಿಯಿಂದ ಶೋಭಿಸುವ ರಾಜರ ಮತ್ತು ಅವರ ವಂಶದವರ ಸ್ಥಿತಿ-ಪ್ರಭಾವಗಳಿಂದ ಗರ್ಭಿತವಾದ ಚರಿತ್ರವನ್ನು ಕ್ರಮವಾಗಿ ನಿರೂಪಣ ಮಾಡುವ ನನ್ನ ವಚನವನ್ನು ಕೇಳಿರಿ.

೬. ವರುಣದೇವನಿಗೆ ಸ್ತುತಾದೇವಿ ಎಂಬ ದೇವ ಸುಂದರಿಯು ಪತ್ನಿಯಾಗಿದ್ದಳೆಂದು ಮುನಿಗಳಿಂದ ಉದಾಹರಿಸಲ್ಪಟ್ಟಿರುವಳು. ಅವಳಿಗೆ ಕಲಿ, ವೈದ್ಯ ಎಂಬ ಇಬ್ಬರು ಪುತ್ರರು ಇದ್ದರು.

೭. ಅವರಿಬ್ಬರಲ್ಲಿ ಕಲಿ ಎಂಬುವನಿಗೆ ಮಹಾವೀರ್ಯದಿಂದ ಕೂಡಿರುವ ಜಯ ವಿಜಯ ಎಂಬ ಇಬ್ಬರು ಪುತ್ರರೂ ವೈದ್ಯ ಎಂಬುವನಿಗೆ ಮಹಾಬಲಿಷ್ಠರಾದ ಘೃಣಿ, ಮುನಿ ಎಂಬ ಇಬ್ಬರು ಪುತ್ರರೂ ಇದ್ದರು.

೮. ಯುಗ್ಮ ರೂಪದಲ್ಲಿದ್ದ ಆ ಪುತ್ರರು ಪರಸ್ಪರವಾಗಿ ಕೊಡಲ್ಪಟ್ಟ ಕಾಮಾನು ಕಾಮ ವಿಷಯಗಳನ್ನು ಭಕ್ಷಿಸುತ್ತ ಹಾಗೆಯೆ ಒಬ್ಬರಿಂದೊಬ್ಬರು ನಾಶವನ್ನು ಹೊಂದುವರು.

ಕಲೀಃ ಸುರಾಯಾಃ ಸಂಜ್ಞೇಯಸ್ತಸ್ಯ ಪುತ್ರೋ ಮದಃ ಸ್ಮೃತಃ ।
ಸ್ಮೃತಾ ಹಿಂಸಾ ಕಲೇರ್ಭಾರ್ಯಾ ಶ್ರೇಷ್ಠಾ ಯಾ ನಿಕೃತಸ್ಮೃತಿಃ॥ ೯ ॥

ಪ್ರಸೂತಾನ್ಯೇ ಕಲೇಃ ಪುತ್ರಾಶ್ಚತ್ವಾರಃ ಪುರುಷಾದಕಾಃ ।
ನಾಕೋ ವಿಘ್ನಶ್ಚ ವಿಖ್ಯಾತೋ ಭದ್ರಮೋ ವಿಧಮಸ್ತಥಾ ॥ ೧೦ ॥

ಅಶರೀರಸ್ಕತಯಾ ವಿಘ್ನೋ ನಾಕಶ್ಚೈವಶರೀರವಾನ್ ।
ಭದ್ರಮಶ್ಚೈಕಹಸ್ತೋಽಭೂದ್ವಿಧಮಶ್ಚೈಕಪಾತ್ ಸ್ಮೃತಃ ॥ ೧೧ ॥

ಭದ್ರಮಸ್ಯ ತಥಾ ಪತ್ನೀ ತಾಮಸೀ ಪೂತನಾ ತಥಾ ।
ರೇವತೀ ವಿಧಮಸ್ಯಾಪಿ ತಯೋಃ ಪುತ್ರಾಃ ಸಹಸ್ರಶಃ ॥ ೧೨ ॥

ನಾಕಸ್ಯ ಶಕುನಿಃ ಪತ್ನೀ ವಿಘ್ನಸ್ಯ ಚ ಅಯೋಮುಖೀ ।
ರಾಕ್ಷಸಾಸ್ತು ಮಹಾವೀರ್ಯಾಃ ಸಂಧ್ಯಾದ್ವಯವಿಚಾರಿಣಃ ॥ ೧೩ ॥

---

೯ ಸ್ಮೃತಾ ದೇವಿಯಿಂದ ಜನ್ಮವೆತ್ತಿರುವ ಕಲಿ ಎಂಬುವನಿಗೆ ಪವಿತ್ರ ಸಂಸ್ಕಾರದಿಂದ ಹುಟ್ಟುವ ಸ್ಮೃತಿಯನ್ನು ನಾಶಮಾಡುವುದರಲ್ಲಿ ಉತ್ತಮಳಾದ ಹಿಂಸಾ ಎಂಬುವಳು ಪತ್ನಿಯಾಗಿದ್ದಳು. ಅವಳಲ್ಲಿ ಮದ ಎಂಬುವನು ಪುತ್ರನಾಗಿ ಜನಿಸಿದನು. ಎಂದು ಸ್ಮರಿಸಲ್ಪಟ್ಟಿದೆ.

೧೦. ಮತ್ತು ಆ ಕಲಿರಾಯನಿಗೆ ಪುರುಷರನ್ನು ಭಕ್ಷಿಸುವ ಶೀಲವುಳ್ಳ ನಾಲ್ಕು ಮಂದಿ ಪುತ್ರರು ಹುಟ್ಟಿದರು. ಅವರು ನಾಕ, ವಿಘ್ನ, ಭದ್ರಮ ಮತ್ತು ವಿಧಮ ಎಂದು ಸಂಜ್ಞೆಯಿಂದ ಪ್ರಸಿದ್ಧಿ ಹೊಂದಿದ್ದರು.

೧೧. ಆ ಪುತ್ರರು ವಿರೂಪಾಕೃತಿಯನ್ನು ಹೊಂದಿದ್ದರು. ವಿಘ್ನ ಎಂಬುವನು ಶಿರೋರಹಿತನೂ, ನಾಕ ಎಂಬುವನು ಶರೀರ ಶೂನ್ಯನೂ, ಭದ್ರಮ ಎಂಬುವನು ಒಂದು ಹಸ್ತವುಳ್ಳವನೂ, ಮತ್ತು ವಿಧಮ ಎಂಬುವನು ಒಂದು ಪಾದವುಳ್ಳವನೂ ಆಗಿದ್ದನು.

೧೨. ಇವರಲ್ಲಿ ಭದ್ರಮನಿಗೆ ತಮೋಗುಣದಿಂದ ಪರಿಪೂರ್ಣಳಾದ ಪೂತನಾ ಎಂಬುವಳು ಪತ್ನಿಯಾಗಿದ್ದಳು. ಹಾಗು ವಿಧಮನಿಗೆ ರೇವತಿ ಎಂಬಾಕೆಯು ಪತ್ನಿಯಾಗಿದ್ದಳು. ಇವರ ಸಂತತಿಯಲ್ಲಿ ಸಾವಿರಾರು ಮಂದಿ ಪುತ್ರರು ಜನಿಸಿದರು.

೧೩. ನಾಕನಿಗೆ ಶಕುನಿ ಎಂಬ ಪತ್ನಿಯೂ ವಿಘ್ನನಿಗೆ ಅಯೋಮುಖೀ ಎಂಬ ಪತ್ನಿಯೂ ಇದ್ದಳು. ಇವರ ಸಂತತಿಯಲ್ಲಿ ಎರಡು ಸಂಧ್ಯಾಕಾಲಗಳಲ್ಲಿ ಸಂಚರಿಸುವ ಶೀಲವುಳ್ಳ, ಅತಿಶಯವಾದ ವೀರ್ಯೋನ್ಮತ್ತರಾದ ರಾಕ್ಷಸರು ಜನಿಸಿದರು.

ರೇವತೀಪೂತನಾಪುತ್ರಾ ನೈರ್ಋತಾ ನಾಮತಃ ಸ್ಮೃತಾಃ ।
ಗ್ರಹಾಸ್ತೇ ರಾಕ್ಷಸಾಃ ಸರ್ವೇ ಬಾಲಾನಾಂ ತು ವಿಶೇಷತಃ ॥ ೧೪ ॥

ಸ್ಕಂದಸ್ತೇಷಾಮಧಿಪತಿರ್ಬ್ರಹ್ಮಣೋಽನುಮತಃ ಪ್ರಭುಃ ।
ಬೃಹಸ್ಪತೇರ್ಯಾ ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ ॥ ೧೫ ॥

ಯೋಗಸಿದ್ಧಾ ಜಗತ್ಕೃತ್ಸ್ನಮಸಕ್ತಾ ಚರತೇ ಸದಾ ।
ಪ್ರಭಾಸಸ್ಯ ತು ಸಾ ಭಾರ್ಯಾ ವಸೂನಾಮಷ್ಟಮಸ್ಯ ಚ ॥ ೧೬ ॥

ವಿಶ್ವಕರ್ಮಾ ಸುತಸ್ತಸ್ಯಾ ಜಾತಃ ಶಿಲ್ಪಿಪ್ರಜಾಪತಿಃ ।
ತ್ವಷ್ಟಾ ವಿರಾಜೋ ರೂಪಾಣಿ ಧರ್ಮಪೌತ್ರ ಉದಾರಧೀಃ ॥ ೧೭ ॥

ಕರ್ತಾ ಶಿಲ್ಪಸಹಸ್ರಾಣಾಂ ತ್ರಿದಶಾನಾಂ ತು ಯೋಗತಃ ।
ಯಃ ಸರ್ವೇಷಾಂ ವಿಮಾನಾನಿ ದೇವತಾನಾಂ ಚಕಾರ ಹ ॥ ೧೮ ॥

---

೧೪. ಹಿಂದೆ ಹೇಳಿದ ರೇವತೀ-ಪೂತನೆಯರಲ್ಲಿ ಹುಟ್ಟಿದ ಪ್ರಜೆಗಳು ನೈರ್ಋತ ಎಂಬ ನಾಮವುಳ್ಳವರೆಂದು ಸ್ಮರಿಸಲ್ಪಟ್ಟಿರುವರು. ಆ ರಾಕ್ಷಸರು ಮಾನವರಲ್ಲಿ ಗ್ರಹರೂಪದಿಂದ ಆವೇಶಹೊಂದುವವರೂ ವಿಶೇಷವಾಗಿ ಬಾಲಗ್ರಹರೂಪವುಳ್ಳವರೂ ಆಗಿರುವರು.

೧೫. ಬಾಲಗ್ರಹ ರೂಪರಾದ ಆ ರಾಕ್ಷಸರಿಗೆ ಬ್ರಹ್ಮದೇವನಿಂದ ಪ್ರಭುವೆಂದು ಸಮ್ಮತಿಸಲ್ಪಟ್ಟ ಸ್ಕಂದನು ಅಧಿಪತಿಯಾಗಿರುವನು. ಬೃಹಸ್ಪತಿಗೆ ಬ್ರಹ್ಮಚಾರಿಣಿಯೂ ಉತ್ತಮಾಂಗನೆಯೂ ಆದ ಒಬ್ಬಳು ಭಗಿನಿಯಿರುವಳು.

೧೬. ಅವಳು ಯೋಗಸಿದ್ಧಿಯನ್ನು ಹೊಂದಿ ಯಾವಾಗಲೂ ಅಸಂಗಸ್ವಭಾವದಿಂದ ಸಮಸ್ತ ಜಗತ್ತನ್ನು ಸಂಚರಿಸುತ್ತಿರುವಳು. ಅವಳು ಅಷ್ಟವಸುಗಳಲ್ಲಿ ಎಂಟನೆಯ ವಸುವಾದ ಪ್ರಭಾಸನಿಗೆ ಭಾರ್ಯೆಯಾದಳು.

೧೭. ಅವಳಲ್ಲಿ ಧರ್ಮಪ್ರಜಾಪತಿಯ ಪೌತ್ರನೂ ಉದಾರವಾದ ಬುದ್ಧಿ ಶಕ್ತಿ ಸಂಪನ್ನನೂ, ವಿಶ್ವರೂಪಗಳನ್ನು ನಿರ್ಮಿಸುವ ಶಿಲ್ಪಕಲಾ ನಿಪುಣನೂ ಮತ್ತು ಶಿಲ್ಪಿ ಪ್ರಜಾಪತಿಯೂ ಆದ ವಿಶ್ವಕರ್ಮ ಎಂಬ ಪುತ್ರನು ಜನಿಸಿದನು,

೧೮. ಅವನು ಯೋಗಶಕ್ತಿಯಿಂದ ದೇವತೆಗಳ ಉಪಯೋಗಾರ್ಥವಾದ ಸಾವಿರಾರು ಶಿಲ್ಪಗಳನ್ನು ನಿರ್ಮಿಸುವನು. ಮತ್ತು ಸಕಲ ದೇವತೆಗಳಿಗೆ ಸಂಚಾರ ಯೋಗ್ಯವಾದ ವಿಮಾನಗಳನ್ನು ನಿರ್ಮಾಣಮಾಡುವನು.

ಮಾನುಷಾಶ್ಚೋಪಜೀವಂತಿ ಯಸ್ಯ ಶಿಲ್ಪಂ ಮಹಾತ್ಮನಃ ।
ಪ್ರಹ್ರಾದೀ ವಿಶ್ರುತಾ ತಸ್ಯ ಪತ್ನೀ ತ್ವಷ್ಟುರ್ವಿರೋಚನಾ ॥ ೧೯ ॥

ವಿರೋಚನಸ್ಯ ಭಗಿನೀ ಮಾತಾ ತ್ರಿಶಿರಸಸ್ತಥಾ ।
ದೇವಾಚಾರ್ಯಸ್ಯ ಮಹತೋ ವಿಶ್ವರೂಪಸ್ಯ ಧೀಮತಃ ॥ ೨೦ ॥

ವಿಶ್ವಕರ್ಮಾತ್ಮಜಶ್ಚೈವ ವಿಶ್ವಕರ್ಮಾ ಮಯಃ ಸ್ಮೃತಃ ।
ಸುರೇಣುರಿತಿ ವಿಖ್ಯಾತಾ ಸ್ವಸಾ ತಸ್ಯ ಯವೀಯಸೀ ॥ ೨೧ ॥

ತ್ವಾಷ್ಟ್ರೀ ಯಾ ಸವಿತುರ್ಭಾರ್ಯಾ ಪುನಃ ಸಂಜ್ಞೇತಿ ವಿಶ್ರುತಾ ।
ಪ್ರಾಸೂತ ಸಾ ಮಹಾಭಾಗಂ ಮನುಂ ಜ್ಯೇಷ್ಠಂ ವಿವಸ್ವತಃ ॥ ೨೨ ॥

ಯಮೌ ಪ್ರಾಸೂತ ಚ ಪುನರ್ಯಮಂ ಚ ಯಮುನಾಂ ಚ ಹ ।
ಸಾ ತು ಗತ್ವಾ ಕುರೂನ್ ದೇವೀ ವಡವಾರೂಪಧಾರಿಣೀ ॥ ೨೩ ॥

---

೧೯. ಆ ಮಹಾತ್ಮನಿಂದ ಪ್ರಸಾರವಾದ ಶಿಲ್ಪಕರ್ಮವನ್ನು ಮಾನವರು ಉಪಜೀವಿಸಿಕೊಂಡಿರುವರು. ಆ ವಿಶ್ವಕರ್ಮ ಎಂಬ ಶಿಲ್ಪಿಗೆ ಪ್ರಹ್ರಾದೀ ಅಥವಾ ವಿರೋಚನಾ ಎಂಬ ನಾಮಾಂಕಿತಳಾದ ಪತ್ನಿಯು ಪ್ರಸಿದ್ಧಳಾಗಿದ್ದಳು.

೨೦. ಅವಳು ವಿರೋಚನ ಎಂಬುವನ ಭಗಿನಿಯೂ ಹಾಗು ವಿಶ್ವರೂಪನೂ, ಜ್ಞಾನಿಯೂ ಮತ್ತು ದೇವಾಚಾರ್ಯನೂ ಆದ ತ್ರಿಶಿರ ಎಂಬುವನ ಜನನಿಯೂ ಆಗಿದ್ದಳು.

೨೧. ಆ ವಿಶ್ವಕರ್ಮ ಪ್ರಜಾಪತಿಗೆ ಮಯ ವಿಶ್ವಕರ್ಮ ಎಂಬ ಪುತ್ರನು ಜನಿಸಿದನೆಂದು ಸ್ಮರಿಸಲ್ಪಟ್ಟಿರುವನು. ಅವನಿಗೆ ಸುರೇಣು ಎಂಬ ಪ್ರಸಿದ್ಧಿಯನ್ನು ಹೊಂದಿದ ಚಿಕ್ಕ ಭಗಿನಿಯು ಇದ್ದಳು.

೨೨. ಯಾವ ತ್ವಷ್ಟೃ ಪ್ರಜಾಪತಿಯ ಕನ್ಯೆಯು ಸೂರ್ಯನ ಭಾರ್ಯೆಯಾಗಿ ಸಂಜ್ಞಾ ಎಂಬ ಪವಿತ್ರನಾಮದಿಂದ ಪ್ರಸಿದ್ಧಳಾಗಿದ್ದಳೊ, ಅವಳು ಸೂರ್ಯನಿಂದ ಮಹಾತ್ಮನಾದ ಮನು ಎಂಬ ಜ್ಯೇಷ್ಠ ಪುತ್ರನನ್ನು ಪ್ರಸವಿಸಿದಳು.

೨೩. ಮತ್ತು ಆಕೆಯು ಯಮ-ಯಮುನಾ ಎಂಬ ಅವಳಿ ಪುತ್ರರನ್ನು ಪ್ರಸವಿಸಿದಳು. ಆ ಸಂಜ್ಞೆಯು ಕುರುಕ್ಷೇತ್ರ ದೇಶಕ್ಕೆ ಹೋಗಿ ಅಶ್ವರೂಪದಿಂದ ಸಂಚರಿಸಿದಳು.

ಸವಿತುಶ್ಚಾಶ್ವರೂಪಸ್ಯ ನಾಸಿಕಾಭ್ಯಾಂ ತು ತೌ ಸ್ಮೃತೌ ।
ಪ್ರಾಸೂತ ಸಾ ಮಹಾಭಾಗಾ ತ್ವಂತರಿಕ್ಷೇಽಶ್ವಿನೌ ಕಿಲ ॥ ೨೪ ॥

ನಾಸತ್ಯಂ ಚೈವ ದಸ್ರಂ ಚ ಮಾರ್ತಂಡಸ್ಯಾತ್ಮಜಾವುಭೌ ।

ಋಷಯ ಊಚುಃ :—

ಕಸ್ಮಾನ್ಮಾರ್ತಂಡ ಇತ್ಯೇಷ ವಿವಸ್ವಾನುದಿತೋ ಬುಧೈಃ ॥ ೨೫ ॥

ಕಿಮರ್ಥಂ ಸಾ ಸುರೂಪಾ ವೈ ನಾಸಿಕಾಭ್ಯಾಮಸೂಯತ ।
ಏತದ್ವೇದಿತುಮಿಚ್ಛಾಮೋ ಸರ್ವಂ ನೋ ಬ್ರೂಹಿ ಪೃಚ್ಛತಾಮ್॥ ೨೬ ॥

ಸೂತ ಉವಾಚ :—

ಚಿರೋತ್ಪನ್ನಮನಿರ್ಭಿನ್ನಮಂಡಂ ತ್ವಷ್ಟ್ರಾ ವಿದಾರಿತಮ್ ।
ದೃಷ್ಟ್ವಾ ಗರ್ಭವಧಂ ಭ್ರಾಂತಃ ಕಶ್ಯಪೋ ವಿದ್ರುತೋಽಭವತ್ ॥ ೨೭ ॥

---

೨೪, ಆಗ ಅಶ್ವರೂಪವನ್ನು ಧರಿಸಿದ ಪತಿಯಾದ ಸೂರ್ಯನ ಸಂಗದಿಂದ ಮಹಾಭಾಗ್ಯವತಿಯಾದ ಸಂಜ್ಞಾ ದೇವಿಯು ಆಕಾಶದಲ್ಲಿ ನಾಸಿಕೆಗಳಿಂದ ಅಶ್ವಿನೀ ದೇವತೆಗಳನ್ನು ಪ್ರಸವಿಸಿದಳು.

೨೫. ಹೀಗೆ ಮಾರ್ತಂಡ ಎಂಬ ಪ್ರಸಿದ್ಧ ನಾಮವುಳ್ಳ ಸೂರ್ಯನಿಗೆ ನಾಸತ್ಯ ದಸ್ರ ಎಂಬ ಅಶ್ವಿನೀದೇವತೆಗಳಿಬ್ಬರು ಪುತ್ರರಿದ್ದರು. ಆಗ ಮುನಿಗಳು ಈ ರೀತಿಯಾಗಿ ಪ್ರಶ್ನಿಸಿದರು ; ಸೂರ್ಯ ಪರಮಾತ್ಮನು ಮಾರ್ತಂಡನೆಂಬ ಸಂಜ್ಞೆಯಿಂದ ಜ್ಞಾನಿಗಳಿಂದ ಏಕೆ ಕರೆಯಲ್ಪಟ್ಟಿರುವನು ?

೨೬. ಮತ್ತು ಸುಂದರಿಯಾದ ಆ ಸಂಜ್ಞಾ ದೇವಿಯು ಏಕೆ ನಾಸಿಕೆಗಳಿಂದ ಪುತ್ರರನ್ನು ಪ್ರಸವಿಸಿದಳು ? ಇದನ್ನು ತಿಳಿಯಲು ಕುತೂಹಲವುಳ್ಳವರಾಗಿರುವೆವು. ಪ್ರಶ್ನಿಸುವ ನಮಗೆ ಎಲ್ಲವನ್ನೂ ಉಪದೇಶಮಾಡು.

೨೭. ಸೂತ ಮುನಿಯು ಇಂತೆಂದನು :—ಬಹುಕಾಲದಿಂದ ಹುಟ್ಟಿದ್ದು ಭೇದಿಸದೆ ಇರುವ ಒಂದು ಅಂಡವು ತ್ವಷ್ಟೃ ಪ್ರಜಾಪತಿಯಿಂದ ಭೇದಿಸಲ್ಪಟ್ಟಿತು. ಆಗ ಗರ್ಭವನ್ನು ವಧಿಸಿದಂತೆ ಭ್ರಾಂತಿಗೊಂಡ ಕಶ್ಯಪ ಮುನಿಯು ಬಹಳವಾಗಿ ಸೊರಗಿದನು.

ಅಂಡೇ ದ್ವಿಧಾಕೃತೇ ತ್ವಂಡಂ ದೃಷ್ಟ್ವಾ ತ್ವಷ್ಟೇದಮಬ್ರವೀತ್ ।
ನೈತನ್ನ್ಯೂನಮಭೂದಂಡಂ ಮಾರ್ತಂಡಸ್ತ್ವಂ ಭವಾನಘ ॥ ೨೮ ॥

ನ ಖಲ್ವಯಂ ಮೃತೋಽಂಡಸ್ಥ ಇತಿ ಸ್ನೇಹಾತ್ಪಿತಾಬ್ರವೀತ್ ।
ತಸ್ಯ ತದ್ವಚನಂ ಶ್ರುತ್ವಾ ನಾಮಾನ್ವರ್ಥಮುದಾಹರತ್ ॥ ೨೯ ॥

ಯಸ್ಮಾನ್ಮಾರ್ತಂಡೋ ಭವೇತ್ಯುಕ್ತಸ್ತ್ವಂಡಾತ್ಸೋಽಂಡೇ ದ್ವಿಧಾಕೃತೇ ।
ತಸ್ಮಾದ್ವಿವಸ್ವಾನ್ಮಾರ್ತಂಡಃ ಪುರಾಣಜ್ಞೈರ್ವಿಭಾವ್ಯತೇ ॥ ೩೦ ॥

ತತಃ ಪ್ರಜಾಃ ಪ್ರವಕ್ಷ್ಯಾಮಿ ಮಾರ್ತಂಡಸ್ಯ ವಿವಸ್ವತಃ ।
ವಿಜಜ್ಞೇ ಸವಿತುರ್ಭಾರ್ಯಾ ಸಂಜ್ಞಾ ಪುತ್ರಾಂಸ್ತು ತ್ರೀನ್ ಪುನಃ ॥ ೩೧ ॥

ಮನುಂ ಯಮೀಂ ಯಮಂ ಚೈವ ಛಾಯಾ ಸಾ ತಪತೀ ತಥಾ ।
ಶನೈಶ್ಚರಂ ತಥೈವೈತೇ ಮಾರ್ತಂಡಸ್ಯಾತ್ಮಜಾಃ ಸ್ಮೃತಾಃ ॥ ೩೨ ॥

---

೨೮. ಆದರೆ ಅಂಡವನ್ನು ಎರಡು ಭಾಗಮಾಡಿ ಆ ಅಂಡವನ್ನು ನೋಡುತ್ತ ತ್ವಷ್ಟೃ ಪ್ರಜಾಪತಿಯು ಹೀಗೆ ಹೇಳಿದನು. ನಿಷ್ಕಲಂಕನೆ! ನಿನ್ನ ಈ ಅಂಡವು ಸ್ವಲ್ಪವೂ ನ್ಯೂನತೆಯನ್ನು ಹೊಂದಲಿಲ್ಲ. ನೀನು ಮಾರ್ತಂಡ ಎಂಬ ಪ್ರಸಿದ್ಧಿಯುಳ್ಳವನಾಗು.

೨೯. ಆಗ ತಂದೆಯಾದ ಕಶ್ಯಪಮುನಿಯು ಅಂಡದಲ್ಲಿದ್ದ ಇವನು ಅಂಡವನ್ನು ಭೇದಿಸಿದಾಗ ಮೃತನಾಗಲಿಲ್ಲವೆಂದು ಪುತ್ರನನ್ನು ನೋಡಿ ವಾತ್ಸಲ್ಯದಿಂದ ಹೇಳಿದನು. ಆ ಮಾತನ್ನು ಕೇಳಿ ಮಾರ್ತಂಡ ಎಂಬ ಅನ್ವರ್ಥನಾಮದಿಂದ ಸೂರ್ಯನನ್ನು ಕರೆದರು.

೩೦. ಅಂಡವನ್ನು ಎರಡಾಗಿ ಭಾಗ ಮಾಡಲು ಅದರಿಂದ ಜನಿಸಿದ ಸೂರ್ಯನು "ಮಾರ್ತಂಡನಾಗು" ಎಂದು ಹೇಳಲ್ಪಟ್ಟಿರುವುದರಿಂದ ಸೂರ್ಯನು ಮಾರ್ತಂಡನೆಂಬ ನಾಮಾಂಕಿತನಾದನೆಂದು ಪುರಾಣಜ್ಞರಿಂದ ಹೇಳಲ್ಪಟ್ಟಿದೆ.

೩೧. ಮಾರ್ತಂಡನೆಂಬ ಸೂರ್ಯಪರಮಾತ್ಮನಿಂದ ಹುಟ್ಟಿದ ಪ್ರಜಾವರ್ಗವನ್ನು ಈಗ ಹೇಳುತ್ತೇನೆ. ಕೇಳಿರಿ, ಸೂರ್ಯನ ಭಾರ್ಯೆಯಾದ ಸಂಜ್ಞಾದೇವಿಯು ಮತ್ತೆ ಮೂರು ಮಂದಿ ಪುತ್ರರನ್ನು ಪ್ರಸವಿಸಿದಳು.

೩೨. ಮನು, ಯಮ ಮತ್ತು ಯಮಿ ಎಂಬುವರು ಸಂಜ್ಞೆಯಲ್ಲಿ ಹುಟ್ಟಿದ ಮೂರು ಮಂದಿ ಪುತ್ರರಾಗಿರುವರು, ತಪಿಸುತ್ತಿದ್ದ ಛಾಯಾ ಎಂಬ ಮತ್ತೊಬ್ಬ ಸೂರ್ಯ ಭಾರ್ಯೆಯು ಶನೈಶ್ಚರ ಎಂಬ ಪುತ್ರನನ್ನು ಪ್ರಸವಿಸಿದಳು. ಇವರೆಲ್ಲರೂ ಸೂರ್ಯನ ಪುತ್ರರೆಂದು ಸ್ಮರಿಸಲ್ಪಟ್ಟಿರುವರು.

ವಿವಸ್ವಾನ್ ಕಶ್ಯಪಾಜ್ಜಜ್ಞೇ ದಾಕ್ಷಾಯಣ್ಯಾಂ ಮಹಾಯಶಾಃ ।
ತಸ್ಯ ಸಂಜ್ಞಾ ಭವದ್ಭಾರ್ಯಾ ತ್ವಾಷ್ಟ್ರೀ ದೇವೀ ವಿವಸ್ವತಃ ॥ ೩೩ ॥

ಸುರೇಣುರಿತಿ ವಿಖ್ಯಾತಾ ಪುನಃ ಸಂಜ್ಞೇತಿ ವಿಶ್ರುತಾ ।
ಸಾ ತು ಭಾರ್ಯಾ ಭಗವತೋ ಮಾರ್ತಂಡಸ್ಯಾತಿತೇಜಸಃ ॥ ೩೪ ॥

ನ ಖಲ್ವಯಂ ಮೃತೋ ಹ್ಯಂಡೇ ಇತಿ ಸ್ನೇಹಾತ್ತ್ವಮಬ್ರವೀತ್ ।
ಅಜಾನನ್ ಕಶ್ಯಪಃ ಸ್ನೇಹಾನ್ಮಾರ್ತಂಡ ಇತಿ ಚೋಚ್ಯತೇ ॥ ೩೫ ॥

ತೇಜಸ್ತ್ವಭ್ಯಧಿಕಂ ತಸ್ಯ ನಿತ್ಯಮೇವ ವಿವಸ್ವತಃ ।
ಯೇನಾಪಿ ತಾಪಯಾಮಾಸ ತ್ರೀಂಲ್ಲೋಕಾನ್ ಕಶ್ಯಪಾತ್ಮಜಃ ॥ ೩೬ ॥

ತ್ರೀಣ್ಯಪತ್ಯಾನಿ ಸಂಜ್ಞಾಯಾಂ ಜನಯಾಮಾಸ ವೈ ರವಿಃ ।
ದ್ವೌ ಸುತೌ ತು ಮಹಾವೀರ್ಯೌ ಕನ್ಯೈಕಾ ವಿದಿತೈವ ಚ ॥ ೩೭ ॥

---

೩೩. ಮಹಾಯಶಸ್ವಿಯಾದ ಸೂರ್ಯದೇವನು ಕಶ್ಯಪ ಪ್ರಜಾಪತಿಯ ಪತ್ನಿಯಾದ ದಕ್ಷಬ್ರಹ್ಮನ ಪುತ್ರಿಯಲ್ಲಿ ಹುಟ್ಟಿದವನಾಗಿದ್ದನು. ಆ ಸೂರ್ಯನಿಗೆ ತ್ವಷ್ಟೃಪ್ರಜಾಪತಿಯ ಕನ್ಯೆಯಾದ ಸಂಜ್ಞಾ ದೇವಿಯು ಪತ್ನಿಯಾದಳು.

೩೪. ಆಕೆಯು ಮೊದಲು ಸುರೇಣು ಎಂಬ ಹೆಸರಿನಿಂದ ಖ್ಯಾತಿಯನ್ನು ಹೊಂದಿ ಮತ್ತೆ ಸಂಜ್ಞೆ ಎಂದು ಪ್ರಸಿದ್ಧಿ ಹೊಂದಿದಳು. ಅವಳು ಪೂಜ್ಯನೂ-ಸಹಿಸಲಾಗದಷ್ಟು ಅತಿಶಯವಾದ ತೇಜೋಮಯನೂ ಆದ ಸೂರ್ಯನಿಗೆ ಪತ್ನಿಯಾದಳು.

೩೫. ಅಂಡದಲ್ಲಿದ್ದ ಈ ಪುತ್ರನು ಮರಣವನ್ನು ಹೊಂದಿಲ್ಲವಷ್ಟೇ ಎಂದು ಕಶ್ಯಪ ಮುನಿಯು ಅಜ್ಞಾನಾವೃತನಾಗಿ ಪ್ರೀತಿಯಿಂದ ನುಡಿದನು. ಅದರಿಂದ ಮಾರ್ತಂಡ ಎಂದು ಅನ್ವರ್ಥನಾಮದಿಂದ ಸೂರ್ಯನು ಕರೆಯಲ್ಪಡುವನು.

೩೬. ಆ ಸೂರ್ಯನಿಗೆ ಯಾವಾಗಲೂ ತೇಜಸ್ಸು ಸಹಿಸಲಾಗದಷ್ಟು ಅಪಾರವಾಗಿರುವುದು. ಅಂತಹ ತೇಜಸ್ಸಿನಿಂದ ಕಶ್ಯಪ ಪುತ್ರನಾದ ಸೂರ್ಯನು ಮೂರು ಲೋಕಗಳನ್ನು ತಪಿಸುತ್ತಿರುವನು.

೩೭. ಅಂತಹ ಸೂರ್ಯದೇವನು ಸಂಜ್ಞಾದೇವಿಯಲ್ಲಿ ಮೂರು ಮಂದಿ ಪುತ್ರರನ್ನು ಹೊಂದಿದನು. ಅವರಲ್ಲಿ ಇಬ್ಬರು ಮಹಾವೀರ್ಯ ಸಂಪನ್ನರಾದ ಪುತ್ರರು, ಮತ್ತೊಬ್ಬಳು ಕನ್ಯೆಯು ಎಂದು ಪ್ರಸಿದ್ಧರಾಗಿರುವರು.

ಮನುರ್ವೈವಸ್ವತೋ ಜ್ಯೇಷ್ಠಃ ಶ್ರಾದ್ಧದೇವಃ ಪ್ರಜಾಪತಿಃ ।
ತತೋ ಯಮೋ ಯಮೀ ಚೈವ ಯಮಜೌ ಸಂಬಭೂವತುಃ ॥ ೩೮ ॥

ಅಸಹ್ಯತೇಜಸ್ತದ್ರೂಪಂ ದೃಷ್ಟ್ವಾ ಸಂಜ್ಞಾ ವಿವಸ್ವತಃ ।
ಅಸಹಂತೀ ಸ್ವಕಾಂ ಛಾಯಾಂ ಸವರ್ಣಾಂ ನಿರ್ಮಮೇ ಪುನಃ ॥ ೩೯ ॥

ಮಹಾಭಾಗಾ ತು ಸಾ ನಾರೀ ತಸ್ಯಾಶ್ಛಾಯಾಸಮುದ್ಗತಾ ।
ಪ್ರಾಂಜಲಿಃ ಪ್ರಯತಾ ಭೂತ್ವಾ ಪುನಃ ಸಂಜ್ಞಾಮಭಾಷತ ॥ ೪೦ ॥

ವದಸ್ವ ಕಿಂ ಮಯಾ ಕಾರ್ಯಂ ಸಾ ಸಂಜ್ಞಾ ತಾ ಮಥಾಬ್ರವೀತ್ ।
ಅಹಂ ಯಾಸ್ಯಾಮಿ ಭದ್ರಂ ತೇ ಸ್ವಮೇವ ಭವನಂ ಪಿತುಃ ॥ ೪೧ ॥

ತ್ವಯೇಹ ಭವನೇ ಮಹ್ಯಂ ವಸ್ತವ್ಯಂ ನಿರ್ವಿಶಂಕಯಾ ।
ಇಮೌ ಚ ಬಾಲಕೌ ಮಹ್ಯಂ ಕನ್ಯಾ ಚ ವರವರ್ಣಿನೀ ॥ ೪೨ ॥

---

೩೮. ಇವರಲ್ಲಿ ಶ್ರಾದ್ಧದೇವ, ಪ್ರಜಾಪತಿ ಮುಂತಾದ ಪವಿತ್ರನಾಮಗಳಿಂದ ಕರೆಯಲ್ಪಡುವ ವೈವಸ್ವತಮನುವು ಜ್ಯೇಷ್ಠಪುತ್ರನಾಗಿ ಜನಿಸಿದನು ತರುವಾಯ ಯಮ-ಯಮಿ ಎಂಬುವರು ಅವಳಿ ಪುತ್ರರಾಗಿ ಜನ್ಮವೆತ್ತಿದರು.

೩೯. ಸಂಜ್ಞಾದೇವಿಯು ಪತಿಯಾದ ಸೂರ್ಯನ ಸಹಿಸಲಾಗದ ಆ ತೇಜೋ ಮಂಡಲ ರೂಪವನ್ನು ನೋಡಿ ಸಹಿಸದೆ ತನಗೆ ಸಮಾನಳಾಗಿರುವ ತನ್ನ ಛಾಯೆ ಯನ್ನು ಸ್ತ್ರೀ ರೂಪದಿಂದ ನಿರ್ಮಿಸಿದಳು.

೪೦. ಮಹಾ ಭಾಗ್ಯವತಿಯೂ, ಸಂಜ್ಞಾದೇವಿಯ ಛಾಯೆಯಿಂದ ಜನಿಸಿದ ವಳೂ ಮತ್ತು ಪವಿತ್ರಳೂ ಆದ ಆ ನಾರಿಯು ಅಂಜಲಿಯನ್ನು ಕಟ್ಟಿ ನಿಂತು ಮತ್ತೆ ಸಂಜ್ಞಾದೇವಿಯನ್ನು ಕುರಿತು ಹೇಳಿದಳು.

೪೧. ದೇವಿಯೆ! ನಾನು ಏನು ಮಾಡಬೇಕಾಗಿದೆ? ಹೇಳು, ಹೀಗೆಂದು ಕೇಳಲು ಸಂಜ್ಞೆಯು ಅವಳಿಗೆ ಹೀಗೆಂದಳು, ನಿನಗೆ ಮಂಗಳವಾಗಲಿ, ನಾನು ನನ್ನ ತಂದೆಯ ಗೃಹಕ್ಕೆ ಹೋಗುತ್ತೇನೆ.

೪೨. ನೀನು ನನಗೋಸ್ಕರ ಈ ಗೃಹದಲ್ಲಿ ಸ್ವಲ್ಪವೂ ಶಂಕೆಯಿಲ್ಲದಂತೆ ವಾಸ ಮಾಡಬೇಕು, ಇವರಿಬ್ಬರು ಬಾಲಕರು ಮತ್ತು ಈ ಸುಂದರಿಯಾದ ಕನ್ಯೆಯು ನನ್ನ ಪುತ್ರರು.

ಭರ್ತರ್ನಾಖ್ಯಾ ನೈವಮಾಖ್ಯೇಯಮಿದಂ ಭಗವತೇ ತ್ವಯಾ ।
ಇಮೌ ಚ ಬಾಲಕೌ ಮಹ್ಯಂ ತಥೇತ್ಯುಕ್ತ್ವಾ ತಥಾ ಚ ಸಾ ॥ ೪೩ ॥

ತ್ವಷ್ಟುಃ ಸಮೀಪಮಗಮದ್ವ್ರೀಡಿತೇವ ತಪಸ್ವಿನೀ ।
ಪಿತಾ ತಾಮಾಗತಾಂ ದೃಷ್ಟ್ವಾ ಕ್ರುದ್ಧಃ ಸಂಜ್ಞಾಮಥಾಬ್ರವೀತ್॥ ೪೪ ॥

ಭರ್ತುಃ ಸಮೀಪಂ ಗಚ್ಛೇತಿ ನಿಯುಕ್ತಾ ಚ ಪುನಃ ಪುನಃ ।
ಅಗಮದ್ವಡವಾ ಭೂತ್ವಾಚ್ಛಾದ್ಯ ರೂಪಮನಿಂದಿತಾ ॥ ೪೫ ॥

ಉತ್ತರಾನ್ ಸಾ ಕುರೂನ್ ಗತ್ವಾ ತೃಣಾನ್ಯಥ ಚಚಾರ ಸಾ ।
ದ್ವಿತೀಯಾಯಾಂ ತು ಸಂಜ್ಞಾಯಾಂ ಸಂಜ್ಞೇಯಮಿತಿ ಚಿಂತ್ಯ ತಾಮ್॥ ೪೬ ॥

ಆದಿತ್ಯೋ ಜನಯಾಮಾಸ ಪುತ್ರಾವಾದಿತ್ಯವರ್ಚಸೌ ।
ಪೂರ್ವಜಸ್ಯ ಮನೋಸ್ತುಲ್ಯೌ ಸಾದೃಶ್ಯೇನ ತು ತೌ ಪ್ರಭೂ ॥ ೪೭ ॥

---

೪೩. ಈ ಪುತ್ರರನ್ನು ನೀನು ಸಲಹಬೇಕು, ಈ ವಿಷಯವನ್ನು ಪೂಜ್ಯನಾದ ಸೂರ್ಯದೇವನಿಗೆ ನೀನು ಹೇಳಲಾಗದು, ಇಗೋ ನನ್ನ ಈ ಬಾಲಕರು, ಈ ಕನ್ಯೆಯು; ಹೀಗೆಂದು ಒಪ್ಪಿಸಿ ದೇವಿಯು ಹಾಗೆ ಆಗಲೆಂದು ಛಾಯೆಯಿಂದ ಹೇಳಲ್ಪಟ್ಟವಳಾದಳು.

೪೪. ದೀನಳಾದ ಆ ಸಂಜ್ಞಾದೇವಿಯು ನಾಚಿಗೊಂಡವಳಂತೆ ತನ್ನ ತಂದೆಯಾದ ತ್ವಷ್ಟೃ ಪ್ರಜಾಪತಿಯ ಸಮೀಪಕ್ಕೆ ಹೋದಳು, ಆಗ ತಂದೆಯು ಸಂಜ್ಞಾದೇವಿಯು ಹೀಗೆ ಬಂದಿರುವುದನ್ನು ನೋಡಿ ಕೋಪಗೊಂಡು ಹೀಗೆಂದು ಹೇಳಿದನು.

೪೫. ನೀನು ನಿನ್ನ ಪತಿಯ ಸಮೀಪಕ್ಕೆ ಹೋಗು; ಹೀಗೆಂದು ಹೇಳಲ್ಪಟ್ಟ ಮತ್ತೆ ಮತ್ತೆ ನಿರ್ಬಂಧಿಸಲ್ಪಟ್ಟ ಆ ಸಂಜ್ಞಾದೇವಿಯು ನಿಂದ್ಯಳಾಗದೆ ತನ್ನ ರೂಪವನ್ನು ಮರೆಮಾಚಿಕೊಂಡು ಅಶ್ವರೂಪವನ್ನು ಧರಿಸಿ ಅಲ್ಲಿಂದ ಹೊರಟಳು.

೪೬. ಆ ಅಶ್ವಾಂಗನೆಯು ಉತ್ತರಕುರುದೇಶಕ್ಕೆ ಹೋಗಿ ಅಲ್ಲಿ ಹುಲ್ಲನ್ನು ಭಕ್ಷಿಸುತ್ತ ಸಂಚರಿಸಿತು, ಸೂರ್ಯನು ಆ ಛಾಯಾ ದೇವಿಯನ್ನು ಸಂಜ್ಞಾದೇವಿಯೆಂದು ಭಾವಿಸಿಕೊಂಡಿದ್ದನು.

೪೭. ಹೀಗಿರಲು ಸೂರ್ಯನಿಗೆ ಆ ಛಾಯಾ ದೇವಿಯಲ್ಲಿ ತನಗೆ ಸಮಾನವಾದ ವರ್ಚಸ್ಸಿನಿಂದ ಕೂಡಿದವರೂ ಜ್ಯೇಷ್ಠಪುತ್ರನಾದ ಮನುವಿಗೆ ಸಮಾನರಾದವರೂ ಮತ್ತು ಪ್ರಭುಶಕ್ತಿ ಸಂಪನ್ನರೂ ಆದ ಮತ್ತಿಬ್ಬರು ಪುತ್ರರು ಜನಿಸಿದರು.

ಶ್ರುತಶ್ರವಂ ತು ಧರ್ಮಜ್ಞಂ ಶ್ರುತಕರ್ಮಾಣಮೇವ ಚ ।
ಶ್ರುತಶ್ರವಾ ಮನುಸ್ತಾಭ್ಯಾಂ ಸಾವರ್ಣಿರ್ವೈ ಭವಿಷ್ಯತಿ || ೪೮ ||

ಶ್ರುತಕರ್ಮಾ ತು ವಿಜ್ಞೇಯೋ ಗ್ರಹೋ ವೈ ಯಃ ಶನೈಶ್ಚರಃ ।
ಮನುರೇವಾಭವತ್ಸೋಽಪಿ ಸಾವರ್ಣಿರಿತಿ ಚೋಚ್ಯತೇ || ೪೯ ||

ಸಂಜ್ಞಾ ತು ಪಾರ್ಥಿವೀ ಸಾ ವೈ ಸ್ವಸ್ಯ ಪುತ್ರಸ್ಯ ವೈ ತದಾ ।
ಚಕಾರಾಭ್ಯಧಿಕಂ ಸ್ನೇಹಂ ನ ತಥಾ ಪೂರ್ವಜೇಷು ವೈ || ೫೦ ||

ಮನುಸ್ತಚ್ಚಾಕ್ಷಮತ್ಸರ್ವಂ ಯಮಸ್ತದ್ವೈ ನ ಚಾಕ್ಷಮತ್ ।
ಬಹುಶೋ ಜಲ್ಪಮಾನಸ್ತು ಸಾಪತ್ನ್ಯಾದತಿದುಃಖಿತಃ || ೫೧ ||

ತಾಂ ವೈ ರೋಷಾಚ್ಚ ಬಾಲ್ಯಾಚ್ಚ ಭಾವಿನೋಽರ್ಥಸ್ಯ ವೈ ಬಲಾತ್ ।
ಯದಾ ಸಂತರ್ಜಯಾಮಾಸ ಛಾಯಾಂ ವೈವಸ್ವತೋ ಯಮಃ|| ೫೨ ||

---

೪೮. ಧರ್ಮವನ್ನು ಅರಿತ ಆ ಇಬ್ಬರು ಪುತ್ರರು ಶ್ರುತಶ್ರವ ಮತ್ತು ಶ್ರುತ ಕರ್ಮ ಎಂದು ಪ್ರಸಿದ್ಧರಾಗಿದ್ದರು, ಅವರಲ್ಲಿ ಶ್ರುತಶ್ರವ ಎಂಬುವನು ಮುಂದೆ ಸಾವರ್ಣಿಮನು ಎಂಬ ಪ್ರಖ್ಯಾತಿಯನ್ನು ಹೊಂದುವನು.

೪೯. ಶ್ರುತಕರ್ಮ ಎಂಬುವನು ಶನೈಶ್ಚರನೆಂಬ ಗ್ರಹರೂಪದಿಂದ ಇರುವನೆಂದು ತಿಳಿಯಬೇಕು. ಅವನೂ ಕೂಡ ಮನುಪದವಿಯನ್ನೇ ಹೊಂದಿ ಸಾವರ್ಣಿ ಮನು ವೆಂದು ಕರೆಯಲ್ಪಡುತ್ತಾನೆ.

೫೦. ಪಟ್ಟದ ರಾಣಿಯಾದ ಛಾಯಾದೇವಿಯು ತನ್ನ ಪುತ್ರರಲ್ಲಿ ಮಾತ್ರ ಅತಿಶಯವಾದ ಸ್ನೇಹವನ್ನು ತೋರಿಸಿದಳು, ಅಂತಹ ಅಧಿಕವಾದ ಪ್ರೇಮವನ್ನು ಅಗ್ರಜರಾದ ಪುತ್ರರಲ್ಲಿ ತೋರಿಸಲಿಲ್ಲ.

೫೧. ಆದರೆ ಮನುವು ಆ ಎಲ್ಲ ಪ್ರೀತಿ ಭೇದವನ್ನು ಕ್ಷಮಿಸಿದರೂ ಯಮನು ಅದನ್ನು ಸಹಿಸಲಿಲ್ಲ, ಸಪತ್ನೀ ಮಾತ್ಸರ್ಯ ದೋಷದಿಂದ ಉಂಟಾದ ಈ ಬಗೆಯ ಪ್ರೀತಿ ಭೇದದಿಂದ ದುಃಖಗೊಂಡು ಅತಿಯಾಗಿ ಹೇಳಿಕೊಳ್ಳುತ್ತಲಿದ್ದನು.

೫೨. ಮತ್ತು ವೈವಸ್ವತಯಮನು ತನ್ನ ಬಾಲ್ಯದ ಅಜ್ಞಾನದಿಂದಲೂ ಮುಂದಿನ ಅರ್ಥದ ಅವಶ್ಯಭವಿತವ್ಯತೆಯಿಂದಲೂ ಮತ್ತು ಅತಿಯಾದ ಕೋಪದಿಂದಲೂ ಆ ಛಾಯಾ ದೇವಿಯನ್ನು ಗದರಿಸಿದನು.

ಸಾ ಶಶಾಪ ತತಃ ಕ್ರೋಧಾತ್ ಸಾವರ್ಣಿಜನನೀ ಯಮಮ್ ।
ಯದಾ ತರ್ಜಯಸೇಽಕಸ್ಮಾತ್ ಪಿತೃಭಾರ್ಯಾಂ ಯಶಸ್ವಿನೀಮ್ ॥ ೫೩ ॥

ತಸ್ಮಾತ್ತವೈಷ ಚರಣಃ ಪತಿಷ್ಯತಿ ನ ಸಂಶಯಃ ।
ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ॥ ೫೪ ॥

ಮನುನಾ ಸಹ ಧರ್ಮಾತ್ಮಾ ಪಿತುಃ ಸರ್ವಂ ನ್ಯವೇದಯತ್ ।
ಭೃಶಂ ಶಾಪಭಯೋದ್ವಿಗ್ನಃ ಸಂಜ್ಞಾವಾಕ್ಯೈರ್ವಿನಿರ್ಜಿತಃ ॥ ೫೫ ॥

ತಸ್ಯಾಂ ಮಯೋದ್ಯತಃ ಪಾದೋ ನ ತು ದೇಹೇ ನಿಪಾತಿತಃ ।
ಬಾಲ್ಯಾದ್ವಾ ಯದಿ ವಾ ಮೋಹಾತ್ತದ್ಭವಾನ್ ಕ್ಷಂತುಮರ್ಹತಿ ॥ ೫೬ ॥

ಶಪ್ತೋಽಹಮಸ್ಮಿ ಲೋಕೇಶ ಜನನ್ಯಾ ತಪತಾಂ ವರ ।
ತವ ಪ್ರಸಾದೋ ನಸ್ತ್ರಾತು ಮೇತಸ್ಮಾನ್ಮಹತೋ ಭಯಾತ್ ॥ ೫೭ ॥

---

೫೩. ಆಗ ಸಾವರ್ಣಿಪುತ್ರರ ಜನನಿಯಾದ ಛಾಯಾದೇವಿಯು ಕೋಪದಿಂದ ಯಮನನ್ನು ಶಪಿಸಿದಳು. ಅನಿಂದ್ಯಳಾಗಿ ಕೀರ್ತಿಯಿಂದ ಕೂಡಿದ ಪಿತೃಭಾರ್ಯೆಯನ್ನು ನಿಷ್ಕಾರಣವಾಗಿ ನೀನು ಗದರಿಸುತ್ತೀಯೆ.

೫೪. ಆದ್ದರಿಂದ ನಿನ್ನ ಈ ಪಾದವು ಬಿದ್ದುಹೋಗಲಿ, ಇದರಲ್ಲಿ ಏನೂ ಸಂಶಯವಿಲ್ಲ. ಹೀಗೆಂದು ಶಾಪಕೊಟ್ಟಳು. ಯಮನು ಆ ಶಾಪದಿಂದ ಹೆಚ್ಚಾಗಿ ದುಃಖಗೊಂಡ ಮಾನಸವುಳ್ಳವನಾದನು.

೫೫. ಧರ್ಮರೂಪಿಯಾದ ಯಮನು ಮನುವಿನೊಡನೆ ತಂದೆಗೆ ಎಲ್ಲ ವೃತ್ತಾಂತವನ್ನು ತಿಳಿಸಿದನು, ಜನಕನೆ! ನಾನು ಶಾಪದ ಭೀತಿಯಿಂದ ಕಳವಳಗೊಂಡವನೂ ಸಂಜ್ಞಾದೇವಿಯ ವಾಕ್ಯಗಳಿಂದ ತಿರಸ್ಕರಿಸಲ್ಪಟ್ಟವನೂ ಆಗಿರುವೆನು.

೫೬. ಜನನಿಯಲ್ಲಿ ನಾನು ಪಾದವನ್ನು ಎತ್ತಿ ಬೆದರಿಸಿದೆನು. ಆದರೆ ಪಾದದಿಂದ ತುಳಿಯಲಿಲ್ಲ. ನನ್ನ ಬಾಲ್ಯಾವಸ್ಥೆಯ ಅಜ್ಞಾನದಿಂದ ನಡೆದಿರುವ ಈ ಅಪರಾಧವನ್ನು ನೀನು ಕ್ಷಮಿಸಲು ಅರ್ಹನಾಗಿದ್ದೀ.

೫೭. ಲೋಕಗಳಿಗೆ ಪ್ರಭುವೆ! ತಪಿಸುವವರಲ್ಲಿ ಉತ್ತಮನೆ! ನಾನು ಜನನಿಯಿಂದ ಶಪಿಸಲ್ಪಟ್ಟಿರುವೆನು. ನಿನ್ನ ಅನುಗ್ರಹವು ನಮಗುಂಟಾಗಿರುವ ಮಹಾಭಯದಿಂದ ನಮ್ಮನ್ನು ರಕ್ಷಿಸಲಿ.

ವಿವಸ್ವಾನೇವಮುಕ್ತಸ್ತು ಯಮಂ ಪ್ರೋವಾಚ ವೈ ಪ್ರಭುಃ ।
ಅಸಂಶಯಂ ಪುತ್ರ ಮಹದ್ಭವಿಷ್ಯತ್ಯತ್ರ ಕಾರಣಮ್ ॥ ೫೮ ॥

ಯೇನ ತ್ವಾಮಾವಿಶತ್ಕ್ರೋಧೋ ಧರ್ಮಜ್ಞಂ ಸತ್ಯವಾದಿನಮ್ ।
ನ ಶಕ್ಯಮೇತನ್ಮಿಥ್ಯಾ ತು ಕರ್ತುಂ ಮಾತುರ್ವಚಸ್ತವ ॥ ೫೯ ॥

ಕ್ರಿಮಯೋ ಮಾಂಸಮಾದಾಯ ಯಾಸ್ಯಂತಿ ಚ ಮಹೀಂ ತವ ।
ತತಃ ಪಾದಂ ಮಹಾಪ್ರಾಜ್ಞ ಪುನಃ ಸಂಪ್ರಾಪ್ಸ್ಯಸೇ ಸುಖಮ್ ॥ ೬೦ ॥

ಕೃತಮೇವಂ ವಚಃ ಸತ್ಯಂ ಮಾತುಸ್ತವ ಭವಿಷ್ಯತಿ ।
ಶಾಪಸ್ಯ ಪರಿಹಾರೇಣ ತ್ವಂ ಚ ತ್ರಾತೋ ಭವಿಷ್ಯಸಿ ॥ ೬೧ ॥

ಆದಿತ್ಯಸ್ತ್ವಬ್ರವೀತ್ ಸಂಜ್ಞಾಂ ಕಿಮರ್ಥಂ ತನಯೇಷು ತು ।
ತುಲ್ಯೇಷ್ವಭ್ಯಧಿಕಸ್ನೇಹ ಏಕಸ್ಮಿನ್ ಕ್ರಿಯತೇ ತ್ವಯಾ ॥ ೬೨ ॥

---

೫೮. ಈ ರೀತಿಯಾಗಿ ಹೇಳಲ್ಪಟ್ಟ ಪ್ರಭುವಾದ ಸೂರ್ಯನು ಯಮನಿಗೆ ಈ ರೀತಿಯಾಗಿ ಹೇಳಿದನು. ಪುತ್ರನೆ! ಹೀಗೆ ಎಲ್ಲ ನಡೆದಿರುವುದರಲ್ಲಿ ಮಹತ್ತಾದ ಕಾರಣವು ಇರುವುದು. ಸಂಶಯವಿಲ್ಲ.

೫೯. ಅದರಿಂದ ಧರ್ಮವನ್ನು ಅರಿತವನೂ ಸತ್ಯವಾದಿಯೂ ಆದ ನಿನಗೆ ಕೋಪಾವೇಶವುಂಟಾಯಿತು. ಆದರೆ ನಿನ್ನ ಜನನಿಯ ವಚನವನ್ನು ಅನೃತವನ್ನಾಗಿ ಮಾಡಲು ಶಕ್ಯವಾಗುವುದಿಲ್ಲ.

೬೦. ಕ್ರಿಮಿಗಳು ನಿನ್ನ ಮಾಂಸವನ್ನು ತೆಗೆದುಕೊಂಡು ಭೂಮಿಗೆ ಇಳಿದು ಹೋಗುತ್ತವೆ. ಪ್ರಜ್ಞಾವಂತನೆ! ಅನಂತರದಲ್ಲಿ ಮತ್ತೆ ಸುಖವಾಗಿ ನಿನ್ನ ಪಾದವನ್ನು ನೀನು ಹೊಂದುತ್ತೀಯೆ.

೬೧. ಹೀಗೆ ಆದರೆ ನಿನ್ನ ಜನನಿಯ ವಚನವು ಸತ್ಯಭೂತವಾಗುವುದು. ಶಾಪವು ಪರಿಹಾರವಾಗಿ ನೀನು ಕೂಡ ಸುರಕ್ಷಿತನಾಗುತ್ತೀಯೆ.

೬೨. ಆಗ ಆದಿತ್ಯನು ಛಾಯೆನ್ನು ಕುರಿತು "ತುಲ್ಯರಾಗಿರುವ ಈ ಎಲ್ಲ ಪುತ್ರರ ಪೈಕಿ ಒಬ್ಬ ಪುತ್ರನಲ್ಲಿ ಮಾತ್ರ ಅಧಿಕವಾದ ಪ್ರೇಮವನ್ನು ನೀನು ಏಕೆ ತೋರಿಸುತ್ತೀಯೆ" ಹೀಗೆಂದು ಕೇಳಿದನು.

**ಸಾ ತತ್ಪರಿಹರಂತೀ ವೈ ನಾಚಚಕ್ಷೇ ವಿವಸ್ವತಃ ।**
**ಆತ್ಮಾನಂ ಸ ಸಮಾಧಾಯ ಯೋಗಾತ್ತತ್ತ್ವಮುಪಶ್ಯತ ॥ ೬೩ ॥**

**ತಾಂ ಶಪ್ತುಕಾಮೋ ಭಗವಾನ್ ನಾಶಾಯ ಕುಪಿತಃ ಪ್ರಭುಃ ।**
**ಸಾ ತತ್ಸರ್ವಂ ಯಥಾತತ್ತ್ವಮಾಚಚಕ್ಷೇ ವಿವಸ್ವತಃ ॥ ೬೪ ॥**

**ವಿವಸ್ವಾಂಸ್ತು ಯಥಾ ಶ್ರುತ್ವಾ ಕ್ರುದ್ಧಸ್ತ್ವಷ್ಟಾರಮಭ್ಯಯಾತ್ ।**
**ತ್ವಷ್ಟಾ ತು ತಂ ಯಥಾನ್ಯಾಯಮರ್ಚಯಿತ್ವಾ ವಿಭಾವಸುಮ್ ॥ ೬೫ ॥**

**ನಿರ್ದಗ್ಧುಕಾಮಂ ರೋಷೇಣ ಸಾಂತ್ವಯಾಮಾಸ ವೈ ಶನೈಃ ।**
**ತವಾತಿತೇಜಸಾ ಯುಕ್ತಮಿದಂ ರೂಪಂ ನ ಶೋಭತೇ ॥ ೬೬ ॥**

**ಅಸಹಂತೀ ತು ತತ್ಸಂಜ್ಞಾ ವನೇ ಚರತಿ ಶಾದ್ವಲೇ ।**
**ದ್ರಕ್ಷ್ಯತೇ ತಾಂ ಭವಾನದ್ಯ ಸ್ವಾಂ ಭಾರ್ಯಾಂ ಶುಭಚಾರಿಣೀಮ್**
**॥ ೬೭ ॥**

---

೬೩. ಆಗ ಛಾಯೆಯು ಆ ವಚನವನ್ನು ಹಾಗೆಯೆ ನಿಷೇಧಿಸಿದಳು. ಆದರೆ ಸೂರ್ಯನಿಗೆ ತತ್ತ್ವವಿಷಯವನ್ನು ಹೇಳಲಿಲ್ಲ. ಆಗ ಸೂರ್ಯನು ಯೋಗಾಭ್ಯಾಸದಿಂದ ಚಿತ್ತವನ್ನು ಶಾಂತಿಯಲ್ಲಿರಿಸಿ ಪ್ರತ್ಯಗ್ದೃಷ್ಟಿಯುಳ್ಳವನಾಗಿ ತಾನಾಗಿಯೆ ಎಲ್ಲ ಪರಮಾರ್ಥವನ್ನು ತಿಳಿದುಕೊಂಡನು.

೬೪. ಪೂಜ್ಯನೂ ಪ್ರಭುವೂ ಆದ ಸೂರ್ಯನು ಕೋಪಗೊಂಡವನಾಗಿ ಅವಳನ್ನು ನಾಶಮಾಡುವಂತೆ ಶಾಪಕೊಡಲು ಇಷ್ಟವುಳ್ಳವನಾದನು. ಆಗ ಅವಳು ನಡೆದಿರುವ ಎಲ್ಲ ತಾತ್ತ್ವಿಕ ವಿಷಯುಗಳನ್ನು ಸೂರ್ಯನಿಗೆ ತಿಳಿಸಿದಳು.

೬೫. ಸೂರ್ಯದೇವನು ನಡೆದಂತೆ ಎಲ್ಲವನ್ನೂ ಕೇಳಿ ಕುಪಿತನಾಗಿ ತ್ವಷ್ಟೃಪ್ರಜಾಪತಿಯ ಬಳಿಗೆ ಬಂದನು. ತ್ವಷ್ಟೃ ಬ್ರಹ್ಮನು ಆ ಸೂರ್ಯನನ್ನು ಯೋಗ್ಯವಾದ ರೀತಿಯಿಂದ ಸನ್ಮಾನ ಮಾಡಿದನು.

೬೬. ಕೋಪದಿಂದ ಎಲ್ಲವನ್ನೂ ಸುಟ್ಟುಹಾಕಬೇಕೆಂಬ ಆವೇಶವುಳ್ಳ ಸೂರ್ಯನನ್ನು ಮೆಲ್ಲಗೆ ತ್ವಷ್ಟೃ ಬ್ರಹ್ಮನು ಸಮಾಧಾನಮಾಡಿದನು. ಅತಿಯಾದ ತೇಜಸ್ಸಿನಿಂದ ಕೂಡಿದ ಈ ರೂಪವು ನಿನಗೆ ಶೋಭಿಸುವುದಿಲ್ಲ.

೬೭. ಅದನ್ನು ಸಹಿಸಲಾರದೆ ಸಂಜ್ಞಾದೇವಿಯು ತೃಣ ಪರಿಪೂರ್ಣವಾದ ವನದಲ್ಲಿ ಸಂಚರಿಸುತ್ತಿರುವಳು. ನೀನು ಅಂತಹ ಶುಭ ಚರಿತ್ರವುಳ್ಳ ಭಾರ್ಯೆಯನ್ನು ಈ ದಿನ ನೋಡುತ್ತೀಯೆ.

ಶ್ಲಾಘ್ಯಯೌವನಸಂಪನ್ನಾಂ ಯೋಗಮಾಸ್ಥಾಯ ಗೋಪತೇ ।
ಅನುಕೂಲಂ ಭವೇದೇವಂ ಯದಿ ಸ್ಯಾತ್ಸಮಯೋ ಮತಃ ॥ ೧೮ ॥

ರೂಪಂ ನಿವರ್ತಯೇಯಂ ತೇ ಹ್ಯಾದ್ಯಂ ಶ್ರೇಷ್ಠಮರಿಂದಮ ।
ರೂಪಂ ವಿವಸ್ವತಸ್ತ್ವಾಸೀತ್ತಿರ್ಯಗೂರ್ಧ್ವಮಧಸ್ತಥಾ ॥ ೧೯ ॥

ತೇನಾಸೌ ಪೀಡಿತಾ ದೇವೀ ರೂಪೇಣ ತು ದಿವಸ್ಪತೇಃ ।
ತಸ್ಮಾತ್ತ್ರವ ಸಚಕ್ರಂ ತು ವರ್ತತೇ ರೂಪಮದ್ಭುತಮ್ ॥ ೨೦ ॥

ಅನುಜ್ಞಾತಸ್ತತಸ್ತ್ವಷ್ಟ್ರಾ ರೂಪನಿರ್ವರ್ತನಾಯ ವೈ ।
ತತೋಽಭ್ಯುಪಾಗಮತ್ತ್ವಷ್ಟಾ ಮಾರ್ತಂಡಸ್ಯ ವಿವಸ್ವತಃ ॥ ೨೧ ॥

ಭ್ರಮಿಮಾರೋಪ್ಯ ತತ್ತೇಜಃ ಶಾತಯಾಮಾಸ ತಸ್ಯ ವೈ ।
ತಂ ನಿರ್ಮೂಲಿತತೇಜಸ್ಕಂ ತೇಜಸಾಪಹೃತೇನ ತು ॥ ೨೨ ॥

---

೧೮. ರಶ್ಮಿಗಳ ಅಧಿಪತಿಯಾದ ಸೂರ್ಯನೆ! ಶ್ಲಾಘ್ಯವಾದ ಯೌವನದಿಂದ ಕೂಡಿದ ಸತಿಯನ್ನು ಒಂದು ಯುಕ್ತಿಯ ಅವಲಂಬನದಿಂದ ಈಗ ನೋಡುತ್ತೀಯೆ, ಆದರೆ ಒಂದು ಸಮಯವನ್ನು ನೀನು ಅಂಗೀಕರಿಸಬೇಕು, ಇದರಿಂದ ಎಲ್ಲವೂ ಅನುಕೂಲವಾಗುವುದು.

೧೯. ಶತ್ರುಂಜಯನಾದ ಸೂರ್ಯನೆ! ನೈಸರ್ಗಿಕವಾದ ನಿನ್ನ ಈ ಶ್ರೇಷ್ಠ ರೂಪವನ್ನು ಪರಿವರ್ತಿಸುವೆನು. ಸೂರ್ಯನ ನೈಸರ್ಗಿಕವಾದ ರೂಪವು ಮೇಲೆ, ಕೆಳಗೆ, ಮತ್ತು ಅಡ್ಡಲಾಗಿ ಎಲ್ಲ ಕಡೆಗಳಲ್ಲಿಯೂ ಪ್ರಸರಿಸುತ್ತಿದ್ದ ತೇಜೋಮಯ ವಾಗಿತ್ತು.

೨೦. ದ್ಯುಲೋಕಪತಿಯಾದ ನಿನ್ನ ಅಂತಹ ರೂಪದಿಂದ ಸಂಜ್ಞಾದೇವಿಯು ಪೀಡಿತಳಾದಳು. ಆದ್ದರಿಂದ ನಿನ್ನ ಅದ್ಭುತವಾದ ರೂಪವು ಚಕ್ರಾಕಾರವಾಗಿ ಸಹಿಸಲಾರದಷ್ಟು ಅಗಾಧವಾಗಿದೆ.

೨೧. ತರುವಾಯ ಸೂರ್ಯನು ತನ್ನ ರೂಪವನ್ನು ಪರಿವರ್ತನಮಾಡಿ ಕೊಳ್ಳಲು ತ್ವಷ್ಟೃ ಬ್ರಹ್ಮನಿಂದ ಅನುಜ್ಞೆಯನ್ನು ಹೊಂದಿದನು. ಆಗ ತ್ವಷ್ಟೃ ಬ್ರಹ್ಮನು ಮಾರ್ತಂಡನಾಮಾಂಕಿತನಾದ ಸೂರ್ಯನ ಸಮೀಪಕ್ಕೆ ಬಂದನು.

೨೨. ಆ ಸೂರ್ಯ ಮಂಡಲವನ್ನು ತಿರುಗುತ್ತಿರುವ ಚಕ್ರದಲ್ಲಿಟ್ಟು ಅದರ ತೇಜಸ್ಸನ್ನು ನ್ಯೂನಗೊಳಿಸಿದನು. ಹೀಗೆ ತೇಜೋಭಾಗವು ಕಳೆದುಹೋಗಿ ಸೂರ್ಯನು ಕಳೆಗುಂದಿದ ತೇಜೋರಾಶಿಯುಳ್ಳವನಾದನು.

ಕಾಂತಾಂ ಪ್ರಭಾಕರೋ ದ್ರಷ್ಟುಮಿಯೇಷ ಶುಭದರ್ಶನಃ ।
ದದರ್ಶ ಯೋಗಮಾಸ್ಥಾಯ ಸ್ವಾಂ ಭಾರ್ಯಾಂ ವಡವಾಂ ತಥಾ ॥ ೭೩ ॥

ಅದೃಶ್ಯಾಂ ಸರ್ವಭೂತಾನಾಂ ತೇಜಸಾ ನಿಯಮೇನ ಚ ।
ಅಶ್ವರೂಪೇಣ ಮಾರ್ತಂಡಸ್ತಾಂ ಮುಖೇ ಸಮಭಾವಯತ್ ॥ ೭೪ ॥

ಮೈಥುನಾಂತನಿವಿಷ್ಟಾ ಚ ಪರಪುಂಸೋಽಭಿಶಂಕಯಾ ।
ಸಾ ತಂ ನಿಸ್ಸಾರಯಾಮಾಸ ನೋಭ್ಯಾಂ ಶುಕ್ರಂ ವಿವಸ್ವತಃ ॥ ೭೫ ॥

ದೇವೌ ತಸ್ಮಾದಜಾಯೇತಾಮಶ್ವಿನೌ ಭಿಷಜಾಂ ವರೌ ।
ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾದಶಮೂರ್ತಿತಃ ॥ ೭೬ ॥

ಮಾರ್ತಂಡಸ್ಯ ಸುತಾವೇತಾವಷ್ಟಮಸ್ಯ ಪ್ರಜಾಪತೇಃ ।
ತಾಂ ತು ರೂಪೇಣ ಕಾಂತೇನ ದರ್ಶಯಾಮಾಸ ಭಾರ್ಗವಃ ॥ ೭೭ ॥

---

೭೩. ಆಗ ಸೌಮ್ಯವಾದ ದರ್ಶನವುಳ್ಳ ಸೂರ್ಯನು ತನ್ನ ಕಾಂತೆಯನ್ನು ನೋಡಲು ಇಷ್ಟವುಳ್ಳವನಾದನು, ಮತ್ತು ಯೋಗದೃಷ್ಟಿಯನ್ನು ಅವಲಂಬಿಸಿ ಅಶ್ವಾಂಗನಾರೂಪದಿಂದ ಇರುವ ತನ್ನ ಭಾರ್ಯೆನನ್ನು ಕಂಡನು.

೭೪. ಸರ್ವ ಪ್ರಾಣಿಗಳಿಗೆ ಅದೃಶ್ಯವಾದ ನಿಜರೂಪವುಳ್ಳವಳೂ ತೇಜಸ್ಸು ಮತ್ತು ನಿಯಮದಿಂದ ಕೂಡಿದವಳೂ ಆದ ಕಾಂತೆಯನ್ನು ಅಶ್ವರೂಪವನ್ನು ಧರಿಸಿದ ಸೂರ್ಯನು ಸಂಮುಖಕ್ಕೆ ಬಂದು ರಮಿಸಿದನು.

೭೫. ರತಿ ಸುಖವನ್ನು ಅನುಭವಿಸಿದ ತರುವಾಯ ಆ ಅಶ್ವಾಂಗನೆಯು ತನ್ನಲ್ಲಿ ಪತಿತವಾದ ಸೂರ್ಯನ ವೀರ್ಯವನ್ನು ಪರಪುರುಷನೆಂಬ ಶಂಕೆಯಿಂದ ನಾಸಿಕೆಯಿಂದ ಹೊರಕ್ಕೆ ಬಿಟ್ಟಿತು.

೭೬. ದ್ವಾದಶ ಮೂರ್ತಿಯಾದ ಸೂರ್ಯನ ಆ ವೀರ್ಯದಿಂದ ನಾಸತ್ಯ, ದಸ್ರ ಎಂದು ಸ್ಮರಿಸಲ್ಪಟ್ಟ, ವೈದ್ಯರಲ್ಲಿ ಶ್ಲಾಘ್ಯರಾದ ಅಶ್ವಿನೀದೇವತೆಗಳು ಜನಿಸಿದರು.

೭೭. ಹೀಗೆ ಅಷ್ಟಮ ಪ್ರಜಾಪತಿಯೆಂದು ಗಣಿಸಲ್ಪಟ್ಟಿರುವ ಮಾರ್ತಂಡನ ಪುತ್ರರಾಗಿ ಅಶ್ವನೀದೇವತೆಗಳು ಆವಿರ್ಭವಿಸಿರುವರು. ತರುವಾಯ ಸೂರ್ಯನು ತನ್ನ ಸೌಮ್ಯವಾದ ರೂಪವುಳ್ಳ ಆಕೃತಿಯನ್ನು ಅವಳಿಗೆ ತೋರಿಸಿದನು.

ಸ ತಾಂ ದೃಷ್ಟ್ವಾ ತದಾ ಭಾರ್ಯಾಂ ತುತೋಷೈತಾಮುವಾಚ ಹ ।
ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ॥ ೭೮ ॥

ಧರ್ಮೇಣ ರಂಜಯಾಮಾಸ ಧರ್ಮರಾಜಸ್ತತಸ್ತು ಸಃ ।
ಸೋಽಲಭತ್ಕರ್ಮಣಾ ತೇನ ಶುಭೇನ ಪರಮಾಂ ದ್ಯುತಿಮ್ ॥ ೭೯ ॥

ಪಿತೄಣಾಮಾಧಿಪತ್ಯಂ ಚ ಲೋಕಪಾಲತ್ವಮೇವ ಚ ।
ಮನುಃ ಪ್ರಜಾಪತಿಸ್ತ್ವೇಷ ಸಾವರ್ಣಿಃ ಸ ಮಹಾಯಶಾಃ ॥ ೮೦ ॥

ಭಾವ್ಯಃ ಸೋಽನಾಗತೇ ತಸ್ಮಿನ್ಮನುಃ ಸಾವರ್ಣಿಕೇಽಂತರೇ ।
ಮೇರುಪೃಷ್ಠೇ ತಪೋ ಘೋರಮದ್ಯಾಪಿ ಚರತೇ ಪ್ರಭುಃ ॥ ೮೧ ॥

ಭ್ರಾತಾ ಶನೈಶ್ಚರಸ್ತತ್ರ ಗ್ರಹತ್ವಂ ಸ ತು ಲಬ್ಧವಾನ್ ।
ತ್ವಷ್ಟಾ ತು ತೇನ ರೂಪೇಣ ವಿಷ್ಣೋಶ್ಚಕ್ರಮಕಲ್ಪಯತ್ ॥ ೮೨ ॥

---

೭೮. ಆಗ ಸೂರ್ಯನು ಆ ಭಾರ್ಯೆಯನ್ನು ನೋಡಿ ಅತಿಯಾಗಿ ಸಂತೋಷಪಟ್ಟನು. ಮತ್ತು ನಡೆದ ಸಂಗತಿಯನ್ನು ಕುರಿತು ಅವಳಿಗೆ ಹೇಳಿದನು. ಯಮನು ಆ ಶಾಪದಿಂದ ಹೆಚ್ಚಾಗಿ ದುಃಖಗೊಂಡ ಮಾನಸವುಳ್ಳವನಾದನು.

೭೯. ಅವನು ಧರ್ಮದಿಂದ ಸಮಸ್ತ ಪ್ರಜೆಗಳನ್ನು ರಂಜನಮಾಡಿದ್ದರಿಂದ ಧರ್ಮರಾಜನೆಂದು ಸ್ಮರಿಸಲ್ಪಟ್ಟಿರುವನು. ಆ ಶುಭಕರ್ಮದಿಂದ ಅವನು ಅತಿಶಯವಾದ ಕಾಂತಿಯನ್ನು ಹೊಂದಿದನು.

೮೦. ಮತ್ತು ಯಮನು ಪಿತೃಗಳ ಪ್ರಭುತ್ವವನ್ನೂ ಲೋಕಪಾಲಕಾಧಿಕಾರವನ್ನೂ ಹೊಂದಿದನು. ಮಹಾ ಯಶಸ್ವಿಯಾದ, ಮತ್ತು ಪ್ರಜಾನಾಥನಾದ ಮನುವು ಸಾವರ್ಣಿಮನು ಪದವಿಯನ್ನು ಮುಂದೆ ಹೊಂದುವನು.

೮೧. ಮುಂದೆ ಬರುವ ಸಾವರ್ಣಿಕವೆಂಬ ಒಂದು ಮನ್ವಂತರದಲ್ಲಿ ಮನುವಿಗೆ ಸಾವರ್ಣಿ ಮನುಪದವಿಯು ಲಭಿಸುವುದು. ಆ ಪ್ರಭುವು ಈಗಲೂ ಮೇರುಪರ್ವತದ ಊರ್ಧ್ವಭಾಗದಲ್ಲಿ ಘೋರವಾದ ತಪಸ್ಸನ್ನು ಆಚರಿಸುತ್ತಿರುವನು.

೮೨. ಭ್ರಾತೃವಾಗಿ ಜನಿಸಿದ ಶನೈಶ್ಚರನು ನವಗ್ರಹಗಳಲ್ಲಿ ಒಂದಾದ ಗ್ರಹರೂಪವನ್ನು ಹೊಂದಿದನು ತ್ವಷ್ಟೃ ಪ್ರಜಾಪತಿಯು ಸೂರ್ಯನಿಂದ ತೆಗೆದ ತೇಜೋರಾಶಿಯಿಂದ ವಿಷ್ಣುವಿಗೆ ಚಕ್ರಾಯುಧವನ್ನು ನಿರ್ಮಿಸಿದನು.

2

ಮಹಾಮೋಹೋऽ ಪ್ರತಿಹತಂ ದಾನವಾನ್ ಪ್ರತಿವಾರಣಮ್ ।
ಯವೀಯಸೀ ತಯೋರ್ಯಾ ತು ಯಮುನಾ ಚ ಯಶಸ್ವಿನೀ॥ ೮೩ ॥

ಅಭವತ್ ಸಾ ಸರಿಚ್ಛ್ರೇಷ್ಠಾ ಯಮುನಾ ಲೋಕಪಾವನೀ ।
ಯಸ್ತು ಜ್ಯೇಷ್ಠೋ ಮಹಾತೇಜಾಃ ಸರ್ಗೋ ಯಸ್ಯೇತಿ ಸಾಂಪ್ರತಮ್ ॥ ೮೪ ॥

ವಿಸ್ತರಂ ತಸ್ಯ ವಕ್ಷ್ಯಾಮಿ ಮನೋರ್ವೈವಸ್ವತಸ್ಯ ಹ ।
ಇದಂ ತು ಜನ್ಮ ದೇವಾನಾಂ ಶೃಣುಯಾದ್ವಾ ಪಠೇಚ್ಚ ವಾ ॥ ೮೫ ॥

ವೈವಸ್ವತಸ್ಯ ಪುತ್ರಾಣಾಂ ಸಪ್ತಾನಾಂ ತು ಮಹೌಜಸಾಮ್ ।
ಆಪದಂ ಪ್ರಾಪ್ಯ ಮುಚ್ಯೇತ ಪ್ರಾಪ್ನುಯಾಚ್ಚ ಮಹದ್ಯಶಃ ॥ ೮೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕೋನ
ಷಷ್ಟಿತಮೋऽಧ್ಯಾಯಃ.

---

೮೩. ಆ ಚಕ್ರಾಯುಧವು ದಾನವರನ್ನು ತಡೆಗಟ್ಟುವ, ಅಕುಂಠಿತವಾದ ಮಹಾಮೋಹರೂಪವಾಗಿ ಪರಿಣಮಿಸಿತು. ಮನು ಮತ್ತು ಯಮರಿಗೆ ಕಿರಿಯ ಭಗಿನಿಯಾದ ಯಮುನಾ ಎಂಬುವಳು ಯಶಸ್ವಿನಿಯಾಗಿದ್ದಳು.

೮೪ ಆ ಯಮುನೆಯು ಲೋಕಗಳನ್ನು ಪಾವನಮಾಡುವ ಪವಿತ್ರವಾದ ನದೀರೂಪವನ್ನು ಹೊಂದಿದಳು. ಇವರಲ್ಲಿ ಮಹಾ ತೇಜಸ್ವಿಯಾಗಿರುವ ಜ್ಯೇಷ್ಠ ಪುತ್ರನಾದ ಮನುವಿನ ಸೃಷ್ಟಿಯು ಈಗ ಅಪಾರವಾಗಿ ಬೆಳೆದಿರುವುದು.

೮೫. ಅಂತಹ ವೈವಸ್ವತಮನುವಿನ ಸರ್ಗ ವಿಸ್ತಾರವನ್ನು ಈಗ ಹೇಳುವೆನು. ಹೀಗೆ ದೇವತೆಗಳ ಸಂಬಂಧವಾದ ಈ ಜನ್ಮ ವೃತ್ತಾಂತವನ್ನು ಶ್ರವಣಮಾಡಬೇಕು. ಮತ್ತು ಪಠನ ಮಾಡಬೇಕು.

೮೬. ವೈವಸ್ವತಮನುವಿನ ಮಹಾತೇಜಸ್ವಿಗಳಾದ ಏಳು ಮಂದಿ ಪುತ್ರರ ಚರಿತ್ರವನ್ನು ಶ್ರವಣ ಅಥವಾ ಪಠನ ಮಾಡಿದ ಮಾನವನು ಪ್ರಾಪ್ತವಾದ ಆಪತ್ತಿನಿಂದ ಮುಕ್ತನಾಗುವನು, ಹಾಗು ಮಹಾ ಕೀರ್ತಿಯನ್ನು ಆರ್ಜಿಸುವನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

## ಷಷ್ಠಿ ತಮೋಽಧ್ಯಾಯಃ

**ಸೂತ ಉವಾಚ :—**

ತತೋ ಮನ್ವಂತರೇಽತೀತೇ ಚಾಕ್ಷುಷೇ ದೈವತೈಃ ಸಹ ।
ವೈವಸ್ವತಾಯ ಮಹತೇ ಪೃಥಿವೀರಾಜ್ಯಮಾದಿಶತ್ ॥ ೧ ॥

ತಸ್ಮಾದ್ವೈವಸ್ವತಾತ್ಪುತ್ರಾ ಜಜ್ಞಿರೇ ದಶ ತತ್ಸಮಾಃ ।
ಇಕ್ಷ್ವಾಕುಶ್ಚ ನೃಗಶ್ಚೈವ ಧೃಷ್ಟಃ ಶರ್ಯಾತಿರೇವ ಚ ॥ ೨ ॥

ನರಿಷ್ಯಂತಸ್ತಥಾ ಪ್ರಾಂಶುರ್ನಾಭಾಗೋ ದಿಷ್ಟ ಏವ ಚ ।
ಕರೂಷಶ್ಚ ಪೃಷಧ್ರಶ್ಚ ನವೈತೇ ಮಾನವಾಃ ಸ್ಮೃತಾಃ ॥ ೩ ॥

ಬ್ರಹ್ಮಣಾ ತು ಮನುಃ ಪೂರ್ವಂ ಚೋದಿತಸ್ತು ಪ್ರಬೋಧಿತಮ್ ।
ಯಷ್ಟುಂ ಪ್ರಚಕ್ರಮೇ ಕಾಮಂ ಹಯಮೇಧೇನ ಭೂಪತಿಃ ॥ ೪ ॥

---

೧. ಸೂತಮುನಿಯು ಇಂತೆಂದನು :—ತರುವಾಯ ಹಿಂದೆ ನಡೆದಿರುವ ಚಾಕ್ಷುಷವೆಂಬ ಮನ್ವಂತರವು ಆ ಸಮಯದ ಅಭಿಮಾನಿ ದೇವತೆಗಳೊಡನೆ ಕಳೆದು ಹೋಗಲು ಮಹಾತ್ಮನಾದ ವೈವಸ್ವತ ಮನುವಿಗೆ ಬ್ರಹ್ಮ ದೇವನು ಸಮಸ್ತ ಬ್ರಹ್ಮಾಂಡ ರಾಜ್ಯವನ್ನು ವಹಿಸಿದನು.

೨. ಸೂರ್ಯ ಪುತ್ರನಾದ ಆ ಮನುರಾಜನಿಂದ ಅವನಿಗೆ ಸಮಾನರಾದ ಹತ್ತು ಮಂದಿ ಪುತ್ರರು ಜನಿಸಿದರು, ಅವರಲ್ಲಿ ಇಕ್ಷ್ವಾಕು, ನೃಗ, ಧೃಷ್ಟ ಮತ್ತು ಶರ್ಯಾತಿ ಎಂಬುವರು ಸೇರಿದವರಾಗಿದ್ದಾರೆ.

೩. ಹಾಗು ನರಿಷ್ಯಂತ, ಪ್ರಾಂಶು, ನಾಭಾಗ, ದಿಷ್ಟ, ಕರೂಷ ಮತ್ತು ಪೃಷಧ್ರ ಎಂಬುವರು ಸೇರಿ ಒಟ್ಟು ಈ ಹತ್ತು ಮಂದಿಯು ಮನುರಾಜನಿಗೆ ಹುಟ್ಟಿದ ಪುತ್ರರೆಂದು ಪ್ರಾಜ್ಞರಿಂದ ಸ್ಮರಿಸಲ್ಪಟ್ಟಿರುವರು.

೪. ಮೊದಲು ಭೂಪತಿಯಾದ ಮನುವು ಬ್ರಹ್ಮದೇವನಿಂದ ಯಾಗ ಮಾಡಲು ಪ್ರೇರೇಪಿಸಲ್ಪಟ್ಟವನಾಗಿ ಅವನಿಂದ ಉಪದಿಷ್ಟವಾದ ಅಶ್ವಮೇಧ ಯಾಗವನ್ನು ಆಚರಿಸಲು ತನ್ನ ಇಷ್ಟಾನುಸಾರವಾಗಿ ಆರಂಭಿಸಿದನು.

ಅಥಾಕರೋತ್ಪುತ್ರಕಾಮಃ ಪರಾಮಿಷ್ಟಿಂ ಪ್ರಜಾಪತಿಃ ।
ಮಿತ್ರಾವರುಣಯೋರಂಶೇ ಅನಲಾಹುತಿಮೇವ ಯತ್ ॥ ೫ ॥

ತತ್ರ ದಿವ್ಯಾಂಬರಧರಾ ದಿವ್ಯಾಭರಣಭೂಷಿತಾ ।
ದಿವ್ಯಸಂಹನನಾ ಚೈವ ಇಲಾ ಜಜ್ಞ ಇತಿ ಶ್ರುತಮ್ ॥ ೬ ॥

ತಾಮಿಲೇತ್ಯಥ ಹೋವಾಚ ಮನುರ್ದಂಡಧರಸ್ತತಃ ।
ಅನುಗಚ್ಛಸ್ವ ಭದ್ರಂ ತೇ ತಮಿಲಾ ಪ್ರತ್ಯುವಾಚ ಚ ॥ ೭ ॥

ಧರ್ಮಯುಕ್ತಮಿದಂ ವಾಕ್ಯಂ ಪುತ್ರಕಾಮಂ ಪ್ರಜಾಪತಿಮ್ ।
ಮಿತ್ರಾವರುಣಯೋರಂಶೇ ಜಾತಾಸ್ಮಿ ವದತಾಂ ವರ ॥ ೮ ॥

ತಯೋಃ ಸಕಾಶಂ ಯಾಸ್ಯಾಮಿ ಮಾತೋ ಧರ್ಮೋ ಹತೋವಧೀತ್ ।
ಏವಮುಕ್ತ್ವಾ ಪುನರ್ದೇವೀ ತಯೋರಂತಿಕಮಾಗಮತ್ ॥ ೯ ॥

---

೫. ತರುವಾಯ ಪುತ್ರಕಾಮನಾದ ಮನು ಪ್ರಜಾಪತಿಯು ಮಿತ್ರಾವರುಣರೆಂಬ ದೇವತೆಗಳ ಉದ್ದೇಶದಿಂದ ಅಗ್ನಿಯಲ್ಲಿ ಹವಿಸ್ಸನ್ನು ಆಹುತಿಯಾಗಿ ಒಪ್ಪಿಸಿ ಶ್ರೇಷ್ಠವಾದ ಪುತ್ರಕಾಮೇಷ್ಟಿಯನ್ನು ಆಚರಿಸಿದನು.

೬. ಆ ಅಗ್ನಿ ಕುಂಡದಲ್ಲಿ ದಿವ್ಯವಾದ ವಸ್ತ್ರಗಳನ್ನು ಉಟ್ಟುಕೊಂಡಿರುವಳೂ ದಿವ್ಯವಾದ ಆಭರಣಗಳಿಂದ ಶೋಭಿಸಲ್ಪಟ್ಟವಳೂ ಮತ್ತು ದಿವ್ಯವಾದ ದೇಹವುಳ್ಳವಳೂ ಆದ ಇಳಾ ಎಂಬುವಳು ಜನಿಸಿದಳೆಂದು ಕಥಾನಕವು ಶ್ರುತವಾಗಿರುವುದು.

೭. ತರುವಾಯ ದಂಡಧರನಾದ ಮನುವು ಆಕೆಯನ್ನು ನೋಡಿ ಇಲಾ ಎಂಬ ಹೆಸರಿನಿಂದ ಸಂಬೋಧಿಸಿ "ಇಲೆಯೆ, ನಿನಗೆ ಕಲ್ಯಾಣವಾಗಲಿ, ನನ್ನನ್ನು ಹಿಂಬಾಲಿಸಿ ಬಾ" ಎಂದು ಹೇಳಿದನು, ಆಗ ಇಳೆಯು ಅವನನ್ನು ಕುರಿತು ಪ್ರತಿ ವಚನವನ್ನು ಕೊಟ್ಟಳು.

೮. ಪುತ್ರಕಾಮನಾದ ಮನು ಪ್ರಜಾಪತಿಯನ್ನು ಕುರಿತು ಇಳೆಯು ಧರ್ಮಯುಕ್ತವಾದ ಈ ವಚನವನ್ನು ಹೇಳಿದಳು. ವಾಗ್ಮಿಶ್ರೇಷ್ಠನೆ! ನಾನು ಮಿತ್ರಾವರುಣ ದೇವರ ಹವಿರ್ಭಾಗಾಂಶದಿಂದ ಹುಟ್ಟಿದವಳಾಗಿರುವೆನು.

೯. ಆದುದರಿಂದ ನಾನು ಆ ದೇವತೆಗಳ ಸನ್ನಿಧಿಗೆ ಹೋಗುವೆನು, ಇದರಿಂದ ಧರ್ಮಕ್ಕೆ ಬಾಧವುಂಟಾಗಿ ಅದು ನಮ್ಮನ್ನು ಪೀಡಿಸುವಂತೆ ಆಗುವುದಿಲ್ಲ ಹೀಗೆಂದು ಆ ಇಳಾದೇವಿಯು ಹೇಳಿ ಮಿತ್ರಾವರುಣ ದೇವತೆಗಳ ಸಮೀಪಕ್ಕೆ ತೆರಳಿದಳು.

ಗತ್ವಾಂತಿಕಂ ವರಾರೋಹಾ ಪ್ರಾಂಜಲಿರ್ವಾಕ್ಯಮಬ್ರವೀತ್ ।
ಅಂಶೇಽಸ್ಮಿನ್ ಯುವಯೋರ್ಜಾತಾ ದೇವೌ ಕಿಂ ಕರವಾಣಿ ವಾಮ್ ॥ ೧೦ ॥

ಮನುನೈವಾಹಮುಕ್ತಾಸ್ಮಿ ಅನುಗಚ್ಛಸ್ವ ಮಾಮಿತಿ ।
ತಥಾ ತು ಬ್ರುವತೀಂ ಸಾಧ್ವೀಮಿಡಾಮಾಶ್ರಿತ್ಯ ತಾವುಭೌ ॥ ೧೧ ॥

ದೇವೌ ಚ ಮಿತ್ರಾವರುಣಾವಿದಂ ವಚನಮೂಚತುಃ ।
ಅನೇನ ತವ ಧರ್ಮಜ್ಞೇ ಪ್ರಶ್ರಯೇಣ ದಮೇನ ಚ ॥ ೧೨ ॥

ಸತ್ಯೇನ ಚೈವ ಸುಶ್ರೋಣಿ ಪ್ರೀತೌ ಸ್ವೋ ವರವರ್ಣಿನಿ ।
ಆವಯೋಸ್ತ್ವಂ ಮಹಾಭಾಗೇ ಖ್ಯಾತಿಂ ಕನ್ಯೇ ಪ್ರಯಾಸ್ಯಸಿ ॥ ೧೩ ॥

ಸುದ್ಯುಮ್ನ ಇತಿ ವಿಖ್ಯಾತಸ್ತ್ರಿಷು ಲೋಕೇಷು ಪೂಜಿತಃ ।
ಜಗತ್ಪ್ರಿಯೋ ಧರ್ಮಶೀಲೋ ಮನೋರ್ವಂಶವಿವರ್ಧನಃ ॥ ೧೪ ॥

---

೧೦. ಉತ್ತಮಾಂಗನೆಯಾದ ಆ ಇಳಾದೇವಿಯು ಅವರ ಸನ್ನಿಧಿಗೆ ಹೋಗಿ ಅಂಜಲಿಬದ್ಧಳಾಗಿ ಈ ವಚನವನ್ನು ಹೇಳಿದಳು. ಮಿತ್ರಾವರುಣ ದೇವತೆಗಳೆ! ನಿಮ್ಮ ಅಂಶನಿಮಿತ್ತದಿಂದ ನಾನು ಜನಿಸಿರುವೆನು, ನಿಮ್ಮ ಯಾವ ಇಷ್ಟವನ್ನು ನೆರವೇರಿಸಿಕೊಡಲಿ.

೧೧. ಆದರೆ ಮನುವಿನಿಂದ ನನ್ನನ್ನು ಹಿಂಬಾಲಿಸಿ ಬಾ ಎಂದು ಹೇಳಲ್ಪಟ್ಟಿರುವೆನು, ಈ ರೀತಿಯಾಗಿ ಹೇಳುತ್ತಿರುವ ಪತಿವ್ರತೆಯಾದ ಇಡಾದೇವಿಯನ್ನು ಆ ಮಿತ್ರಾವರುಣದೇವರಿಬ್ಬರು ನೋಡಿದರು.

೧೨. ಆ ಮಿತ್ರಾವರುಣ ದೇವರು ಈ ವಚನವನ್ನು ಇಡಾದೇವಿಗೆ ಹೇಳಿದರು, ಧರ್ಮವನ್ನು ಅರಿತ ನಾರಿಯೆ ! ಈ ನಿನ್ನ ವಿನಯ, ಇಂದ್ರಿಯನಿಗ್ರಹಗಳಿಂದ ನಾವು ತೃಪ್ತರಾಗಿದ್ದೇವೆ.

೧೩. ಸುಂದರವಾದ ಜಘನಭಾಗವುಳ್ಳ ಸುಂದರಿಯೆ! ನಿನ್ನ ಸತ್ಯವಚನದಿಂದಲೂ ನಾವು ವಿಶೇಷವಾಗಿ ತೃಪ್ತರಾಗಿರುವೆವು. ಮಹಾಭಾಗ್ಯವತಿಯಾದ ಕನ್ಯೆಯೆ! ನೀನು ನಮ್ಮ ಅಂಶದಿಂದ ವಿಶೇಷ ಖ್ಯಾತಿಯನ್ನು ಹೊಂದುವವಳಾಗಿದ್ದೀಯೆ.

೧೪. ಮನುರಾಜನ ವಂಶವನ್ನು ವೃದ್ಧಿಗೊಳಿಸುವವನೂ, ಧರ್ಮಾಚರಣೆಯ ಶೀಲವುಳ್ಳವನೂ, ಜಗತ್ತಿಗೆ ಪ್ರೀತಿ ವಿಷಯನೂ ಮತ್ತು ಮೂರು ಲೋಕಗಳಲ್ಲಿ ಪೂಜೆಗೆ ಯೋಗ್ಯನೂ ಆದ ಸುದ್ಯುಮ್ನನೆಂದು ಖ್ಯಾತಿಯನ್ನು ಹೊಂದುತ್ತೀಯೆ.

ಮಾನವಃ ಸ ತು ಸುದ್ಯುಮ್ನಃ ಸ್ತ್ರೀಭಾವಮುಗಮತ್ಪ್ರಭುಃ ।
ಸಾ ತು ದೇವೀ ವರಂ ಲಬ್ಧ್ವಾ ನಿವೃತ್ತಾ ಪಿತರಂ ಪ್ರತಿ ॥ ೧೫ ॥

ಬುಧೇನೋತ್ತರಮಾಸಾದ್ಯ ನೈಥುನಾಯೋಪಮಂತ್ರಿತಾ ।
ಸೋಮಪುತ್ರಾದ್ಬುಧಾಚ್ಚಾಸ್ಯಾನ್ಯೈಲೋ ಜಜ್ಞೇ ಪುರೂರವಾಃ ॥ ೧೬ ॥

ಬುಧಾತ್ಸಾ ಜನಯಿತ್ವಾ ತು ಸುದ್ಯುಮ್ನತ್ವಂ ಪುನರ್ಗತಾ ।
ಸುದ್ಯುಮ್ನಸ್ಯ ತು ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ॥ ೧೭ ॥

ಉತ್ಕಲಶ್ಚ ಗಯಶ್ಚೈವ ವಿನತಶ್ಚ ತಥೈವ ಚ
ಉತ್ಕಲಶ್ಚೋತ್ಕಲಂ ರಾಷ್ಟ್ರಂ ವಿನತಸ್ಯಾಪಿ ಪಶ್ಚಿಮಾ ॥ ೧೮ ॥

ದಿಕ್ಪೂರ್ವಾ ತಸ್ಯ ರಾಜರ್ಷೇರ್ಗಯಸ್ಯ ತು ಗಯಾ ಪುರೀ ।
ಪ್ರವಿಷ್ಟೇ ತು ಮನೌ ತಸ್ಮಿನ್ ಪ್ರಜಾಃ ಸೃಷ್ಟ್ವಾ ದಿವಾಕರಮ್ ॥ ೧೯ ॥

---

೧೫. ಮನುಪುತ್ರನಾಗಿ ಜನಿಸಿದ ಪ್ರಭುವಾದ ಆ ಸುದ್ಯುಮ್ನನು ಸ್ತ್ರೀ ರೂಪವನ್ನು ಹೊಂದಿದನು, ಹೀಗೆ ಮಿತ್ರಾವರುಣ ದೇವತೆಗಳಿಂದ ವರವನ್ನು ಹೊಂದಿದ ಇಳಾದೇವಿಯು ತಂದೆಯ ಬಳಿಗೆ ಬಂದು ಸೇರಿದಳು.

೧೬. ಸುದ್ಯುಮ್ನನಿಗೆ ಸ್ತ್ರೀ ಭಾವವು ಬಂದ ತರುವಾಯ ಅವಳು ಬುಧದೇವನಿಂದ ರತಿಕ್ರಿಡೆಗೆ ರಹಸ್ಯದಲ್ಲಿ ಸೇರಿದವಳಾದಳು, ಆಗ ಸೋಮಪುತ್ರನಾದ ಬುಧನಿಂದ ಇಳಾಪುತ್ರನಾದ ಪುರೂರವರಾಜನು ಜನಿಸಿದನು.

೧೭. ಬುಧನ ಸಂಗದಿಂದ ಸಂತತಿಯನ್ನು ಹೊಂದಿ ಅವಳು ಮತ್ತೆ ಸುದ್ಯುಮ್ನ ರೂಪವನ್ನು ಹೊಂದಿದಳು, ಸುದ್ಯುಮ್ನನಿಗೆ ಪರಮ ಧಾರ್ಮಿಕರಾದ ಮೂರು ಮಂದಿ ದಾಯಾದರು ಇದ್ದರು.

೧೮. ಆ ಮೂರು ಮಂದಿ ಸಹೋದರರು ಉತ್ಕಲ, ಗಯ ಮತ್ತು ವಿನತ ಎಂಬ ನಾಮಾಂಕನವನ್ನು ಹೊಂದಿದ್ದರು, ಇವರಲ್ಲಿ ಉತ್ಕಲನಿಗೆ ಉತ್ಕಲ ರಾಜ್ಯವೂ ವಿನತನಿಗೆ ಪಶ್ಚಿಮ ದಿಕ್ಕಿನ ರಾಜ್ಯವೂ ಅಧೀನವಾಗಿತ್ತು.

೧೯. ರಾಜರ್ಷಿಯಾದ ಗಯರಾಜನಿಗೆ ಪೂರ್ವದಿಕ್ಕಿನಲ್ಲಿರುವ ಗಯಾ ಎಂಬ ನಗರಿಯು ಅಧೀನವಾಗಿತ್ತು, ಆ ಮನುವು ಪ್ರಜೆಗಳನ್ನು ಸೃಷ್ಟಿಮಾಡಿ ಜನಕನಾದ ಸೂರ್ಯದೇವನನ್ನು ಪ್ರವೇಶಮಾಡಿದನು.

ದಶಧಾ ತ್ವದಧಾತ್ಕ್ಷತ್ರಮಕರೋತ್ ಪೃಥಿವೀಮಿಮಾಮ್ ।
ಇಕ್ಷ್ವಾಕುರೇವ ದಾಯಾದೋ ಭಾಗಂ ದಶಮಮಾಪ್ತವಾನ್ ॥ ೨೦ ॥

ಕನ್ಯಾಭಾವಾತ್ತು ಸುದ್ಯುಮ್ನೋ ನೈವ ಭಾಗಮವಾಪ್ತವಾನ್ ।
ವಸಿಷ್ಠವಚನಾಚ್ಚಾಸೀತ್ ಪ್ರತಿಷ್ಠಾನೇ ಮಹಾದ್ಯುತಿಃ ॥ ೨೧ ॥

ಪ್ರತಿಷ್ಠಾಂ ಧರ್ಮರಾಜಸ್ಯ ಸುದ್ಯುಮ್ನಸ್ಯ ಮಹಾತ್ಮನಃ ।
ಏತಚ್ಛ್ರುತ್ವಾ ತು ಋಷಯಃ ಪಪ್ರಚ್ಛುಃ ಸೂತಜಂ ಪ್ರತಿ
ಮಾನವಃ ಸ ತು ಸುದ್ಯುಮ್ನಃ ಸ್ತ್ರೀಭಾವಮಗಮತ್ ಕಥಮ್ ॥ ೨೨ ॥

ಸೂತ ಉವಾಚ :—

ಪುರಾ ಮಹೇಶ್ವರಂ ದ್ರಷ್ಟುಂ ಕುಮಾರಾಃ ಸನಕಾದಯಃ ।
ಇಲಾವೃತಂ ಸಮಾಜಗ್ಮುರ್ದದೃಶುರ್ವೃಷಭಧ್ವಜಮ್ ॥ ೨೩ ॥

ಉಮಯಾ ರಮಮಾಣಂ ತಂ ವಿಲೋಕ್ಯ ಪಿಹಿತೇ ಸ್ಥಲೇ ।
ಪ್ರತಿಜಗ್ಮುಸ್ತತಃ ಸರ್ವೇ ವ್ರೀಡಿತಾಭೂಚ್ಚಿವಾಪ್ಯಥ ॥ ೨೪ ॥

---

೨೦. ಆಗ ಹತ್ತು ಭಾಗವಾಗಿರುವ ಆ ಕ್ಷತ್ರ ಜಾತಿಯು ಈ ಸಂಪೂರ್ಣಪೃಥಿವಿಯನ್ನು ಧರಿಸಿತು, ಇಕ್ಷ್ವಾಕುವೆಂಬ ದಾಯಾದನು ಹತ್ತನೆಯ ಭಾಗವನ್ನು ಹೊಂದಿದನು.

೨೧. ಆದರೆ ಸುದ್ಯುಮ್ನನು ಕನ್ಯಾರೂಪವನ್ನು ಹೊಂದಿರುವುದರಿಂದ ಭಾಗವನ್ನು ಹೊಂದಲಿಲ್ಲ, ವಸಿಷ್ಠ ಮುನಿಯ ಆದೇಶದಂತೆ ಮಹಾ ತೇಜಸ್ವಿಯಾದ ಆ ಸುದ್ಯುಮ್ನನು ಪ್ರತಿಷ್ಠಾನವೆಂಬ ನಗರದಲ್ಲಿದ್ದನು.

೨೨. ಧರ್ಮರಾಜನೂ ಮಹಾತ್ಮನೂ ಆದ ಸುದ್ಯುಮ್ನನಿಗೆ ಪ್ರತಿಷ್ಠಾನ ನಗರಿಯು ಆಶ್ರಯವಾಗಿತ್ತು. ಈ ಆಖ್ಯಾನವನ್ನು ಕೇಳಿ ಮಹರ್ಷಿಗಳು "ಮನುಪುತ್ರನಾಗಿ ಹುಟ್ಟಿದ ಸುದ್ಯುಮ್ನನು ಸ್ತ್ರೀ ರೂಪವನ್ನು ಹೇಗೆ ಹೊಂದಿದನು?" ಎಂಬುದಾಗಿ ಲೋಮಹರ್ಷಣ ಮುನಿಯನ್ನು ಪ್ರಶ್ನಿಸಿದರು.

೨೩. ಸೂತಮುನಿಯು ಹೀಗೆ ಪ್ರತ್ಯುತ್ತರವಿತ್ತನು. :—ಪೂರ್ವದಲ್ಲಿ ಪರಮೇಶ್ವರನನ್ನು ಸಂದರ್ಶಿಸಲು ಸನಕ ಮುಂತಾದ ಮುನಿಕುಮಾರರು ಇಲಾವೃತವೆಂಬ ವರ್ಷಕ್ಕೆ ಬಂದು ವೃಷಭವೆಂಬ ಧ್ವಜಾಂಕಿತನಾದ ಪರಮೇಶ್ವರನನ್ನು ಸಂದರ್ಶಿಸಿದರು.

೨೪. ಆಗ ನಿರ್ಜನವಾಗಿದ್ದ ರಹಃಸ್ಥಳದಲ್ಲಿ ಪಾರ್ವತಿಯೊಡನೆ ಶಂಕರನು ರಮಿಸುತ್ತಿದ್ದುದನ್ನು ಕಂಡು ಆ ಎಲ್ಲ ಮುನಿಕುಮಾರರು ಹಿಂತಿರುಗಿ ಬಂದರು. ಆಗ ಪಾರ್ವತಿಯು ನಾಚಿಕೆಗೊಂಡವಳಾದಳು.

ಪ್ರೋವಾಚ ವಚನಂ ದೇವೀ ಪ್ರಿಯಹೇತೋಃ ಪ್ರಿಯಂ ಪ್ರಿಯಾ ।
ಇಮಂ ಮಮಾಶ್ರಮಂ ದೇವ ಯಃ ಪುಮಾನ್ ಸಂಪ್ರವೇಕ್ಷ್ಯತಿ॥ ೨೫ ॥

ಭವಿಷ್ಯತಿ ಧ್ರುವಂ ನಾರೀ ಸತುಲ್ಯಾಪ್ಸರಸಾಂ ಶುಭಾ ।
ತತ್ರ ಸರ್ವಾಣಿ ಭೂತಾನಿ ಪಿಶಾಚಾಃ ಪಶವಶ್ಚ ಯೇ ॥ ೨೬ ॥

ಸ್ತ್ರೀಭೂತಾಃ ಸಹ ರುದ್ರೇಣ ಕ್ರೀಡಂತ್ಯಪ್ಸರಸೋ ಯಥಾ ।
ಉಮಾವನಂ ಪ್ರವಿಷ್ಟಸ್ತು ಸ ರಾಜಾ ಮೃಗಯಾಂ ಗತಃ ॥ ೨೭ ॥

ಪಿಶಾಚೈಃ ಸಹ ಭೂತೈಸ್ತು ರುದ್ರೇ ಸ್ತ್ರೀಭಾವಮಾಸ್ಥಿತೇ ।
ತಸ್ಮಾತ್ ಸ ರಾಜಾ ಸುದ್ಯುಮ್ನಃ ಸ್ತ್ರೀಭಾವಂ ಲಬ್ಧವಾನ್ ಪುನಃ
ಮಹಾದೇವಪ್ರಸಾದಾಚ್ಚ ಮಾನವತ್ವಮವಾಪ್ತವಾನ್ ॥ ೨೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಷಷ್ಟಿತಮೋಽಧ್ಯಾಯಃ

---

೨೫. ಮತ್ತು ಪ್ರಿಯೆಯಾದ ಪಾರ್ವತಿದೇವಿಯು ಪ್ರಾಣಪ್ರಿಯನನ್ನು ಕುರಿತು ತಮ್ಮ ಪ್ರೀತಿಗೋಸ್ಕರ ಈ ವಚನವನ್ನು ಹೇಳಿದಳು. ಪತಿದೇವನೆ! ಯಾವ ಪುರುಷನೂ ಈ ಆಶ್ರಮವನ್ನು ಪ್ರವೇಶಮಾಡಲಾಗದು.

೨೬. ಹಾಗೆ ಪ್ರವೇಶಮಾಡಿದ ಪುರುಷನು ಅಪ್ಸರಸ್ತ್ರೀಯರಂತೊಪ್ಪುವ ಮಂಗಳಕರಳಾದ ನಾರಿಯಾಗುವಳು. ಅಲ್ಲಿದ್ದ ಪಿಶಾಚ, ಪಶು ಅಥವಾ ಸಮಸ್ತ ಪ್ರಾಣಿಗಳು ಸ್ತ್ರೀರೂಪರಾಗಿರುವರು.

೨೭. ಆ ಸಮಸ್ತ ಪ್ರಾಣಿಗಳು ಸ್ತ್ರೀರೂಪರಾಗಿ ಅಪ್ಸರಸ್ತ್ರೀಯರಂತೆ ರುದ್ರನೊಡನೆ ಕ್ರೀಡಿಸುತ್ತಿರುವರು. ಆ ಸುದ್ಯುಮ್ನರಾಜನು ಬೇಟೆಗೆ ಹೋದವನು ಅಂತಹ ಉಮಾದೇವಿಯ ವನವನ್ನು ಪ್ರವೇಶಮಾಡಿದನು.

೨೮. ಆಗ ರುದ್ರನು ಸ್ತ್ರೀಭಾವವನ್ನು ಹೊಂದಿದ ಪಿಶಾಚಾದಿಗಳೊಡನೆ ವಿಹರಿಸುತ್ತಿದ್ದನು. ಆದಕಾರಣ ಆ ಸುದ್ಯುಮ್ನರಾಜನು ಸ್ತ್ರೀ ಸ್ವರೂಪವನ್ನು ಹೊಂದಿದನು. ಆದರೆ ಮತ್ತೆ ಆ ಮಹಾದೇವನ ಅನುಗ್ರಹದಿಂದ ಸುದ್ಯುಮ್ನನು ನಿಜರೂಪವನ್ನು ಹೊಂದಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತನೆಯ
ಅಧ್ಯಾಯವು ಸಮಾಪ್ತವು.

# ಏಕಷಷ್ಟಿತಮೋಽಧ್ಯಾಯಃ

**ಸೂತ ಉವಾಚ :—**

**ವಿಸರ್ಗಂ ಮನುಪುತ್ರಾಣಾಂ ವಿಸ್ತರೇಣ ನಿಬೋಧತ ।**
**ಪೃಷಧ್ರೋ ಹಿಂಸಯಿತ್ವಾ ತು ಗುರೋರ್ಗಾಂ ನಿಶಿ ತತ್ಕ್ಷಯೇ ॥ ೧ ॥**

**ಶಾಪಾಚ್ಛೂದ್ರತ್ವಮಾಪನ್ನಶ್ಚ್ಯವನಸ್ಯ ಮಹಾತ್ಮನಃ ।**
**ಕರೂಷಸ್ಯ ತು ಕಾರೂಷಾಃ ಕ್ಷತ್ರಿಯಾ ಯುದ್ಧದುರ್ಮದಾಃ ॥ ೨ ॥**

**ಸಹಸ್ರಂ ಕ್ಷತ್ರಿಯಗಣೋ ವಿಕ್ರಾಂತಃ ಸಂಬಭೂವ ಹ ।**
**ನಾಭಾಗೋ ದಿಷ್ಟಪುತ್ರಸ್ತು ವಿದ್ವಾನಾಸೀದ್ಭಲಂದನಃ ॥ ೩ ॥**

**ಭಲಂದನಸ್ಯ ಪುತ್ರೋಽಭೂತ್ ಪ್ರಾಂಶುರ್ನಾಮ ಮಹಾಬಲಃ ।**
**ಪ್ರಾಂಶೋರೇಕೋಽಭವತ್ಪುತ್ರಃ ಪ್ರಜಾಪತಿಸಮೋ ನೃಪಃ ॥ ೪ ॥**

---

೧. ಸೂತಮುನಿಯು ಮುಂದುವರಿಸಿದನು :—ಮನುರಾಜರ ಪುತ್ರರ ಸೃಷ್ಟಿ ಸಂತತಿಯನ್ನು ವಿಸ್ತಾರವಾಗಿ ಕೇಳಿರಿ, ಪೃಷಧ್ರನೆಂಬುವನು ಗುರುವಿನ ಹಸುವನ್ನು ಹಿಂಸೆಮಾಡಿದುದರಿಂದ ಆ ಧೇನುವು ನಾಶಹೊಂದಿತು.

೨. ಆಗ ಮಹಾತ್ಮನಾದ ಚ್ಯವನ ಮುನಿಯ ಶಾಪದಿಂದ ಆ ಪೃಷಧ್ರನು ಶೂದ್ರ ಜಾತಿಯನ್ನು ಹೊಂದಿದನು. ಕರೂಷನೆಂಬುವನಿಗೆ ಯುದ್ಧದಲ್ಲಿ ಮತ್ತರಾದ ಅನೇಕ ಕ್ಷತ್ರಿಯರು ಕಾರೂಷ ಎಂಬ ನಾಮಾಂಕಿತರಾದ ಪುತ್ರರಾಗಿ ಜನಿಸಿದರು.

೩. ನಾಭಾಗ ಎಂಬುವನಿಗೆ ಸಾವಿರಾರು ಸಂಖ್ಯೆಯಿಂದ ಕೂಡಿದ ಮತ್ತು ವಿಕ್ರಮಶಾಲಿಯಾದ ಕ್ಷತ್ರಿಯ ಪುತ್ರರ ಗಣವು ಹುಟ್ಟಿತು. ದಿಷ್ಟ ಎಂಬುವನಿಗೆ ಜ್ಞಾನಿ ಯಾದ ಭಲಂದನ ಎಂಬುವನು ಪುತ್ರನಾಗಿದ್ದನು.

೪. ಭಲಂದನನಿಗೆ ಪ್ರಾಂಶು ಎಂಬ ಮಹಾಬಲಶಾಲಿಯಾದ ಪುತ್ರನಿದ್ದನು. ಆ ಪ್ರಾಂಶುವಿಗೆ ಪ್ರಜಾಪತಿಗೆ ತುಲ್ಯನಾದ ರಾಜನು ಏಕಪುತ್ರನಾಗಿದ್ದನು.

ಸಂವರ್ತೇನ ದಿವಂ ನೀತಃ ಸಸುಹೃತ್ ಸಹಬಾಂಧವಃ ।
ವಿವಾದೋऽತ್ರ ಮಹಾನಾಸೀತ್ಸಂವರ್ತಸ್ಯ ಬೃಹಸ್ಪತೇಃ ॥ ೫ ॥

ಋದ್ಧಿಂ ದೃಷ್ಟ್ವಾ ತು ಯಜ್ಞಸ್ಯ ಕ್ರುದ್ಧಸ್ತಸ್ಯ ಬೃಹಸ್ಪತಿಃ ।
ಸಂವರ್ತೇನ ತತೇ ಯಜ್ಞೇ ಚುಕೋಪ ಸ ಭೃಶಂ ತದಾ ॥ ೬ ॥

ಲೋಕಾನಾಂ ಸ ಹಿ ನಾಶಾಯ ದೈವತೈರ್ಹಿ ಪ್ರಸಾದಿತಃ ।
ಮರುತ್ತಶ್ಚಕ್ರವರ್ತೀ ಸ ನರಿಷ್ಯಂತಮವಾಪ್ತವಾನ್ ॥ ೭ ॥

ನರಿಷ್ಯಂತಸ್ಯ ದಾಯಾದೋ ರಾಜಾ ದಂಡಧರೋ ದಮಃ ।
ತಸ್ಯ ಪುತ್ರಸ್ತು ವಿಜ್ಞಾತೋ ರಾಜಾಸೀದ್ರಾಷ್ಟ್ರವರ್ಧನಃ ॥ ೮ ॥

ಸುಧೃತಿಸ್ತಸ್ಯ ಪುತ್ರಸ್ತು ನರಃ ಸುಸ್ಮೃತಿತಃ ಪುನಃ ।
ಕೇವಲಸ್ತಸ್ಯ ಪುತ್ರಸ್ತು ಬಂಧುಮಾನ್ ಕೇವಲಾತ್ಮಜಃ ॥ ೯ ॥

---

೫. ಪ್ರಾಂಶು ಪುತ್ರನಾದ ಸಂವರ್ತನೆಂಬ ಆ ರಾಜನು ಸುಹೃತ್—ಬಂಧು ಜನರ ಸಂಗಡ ದ್ಯುಲೋಕಕ್ಕೆ ಒಯ್ಯಲ್ಪಟ್ಟವನಾದನು. ಆಗ ಅಲ್ಲಿ ಆ ಸಂವರ್ತನಿಗೂ ಬೃಹಸ್ಪತಿಗೂ ವಿವಾದವುಂಟಾಯಿತು.

೬. ಬೃಹಸ್ಪತಿಯು ಆ ಸಂವರ್ತರಾಜನ ಯಜ್ಞಸಮೃದ್ಧಿಯನ್ನು ಕಂಡನು. ಸಂವರ್ತನು ಉದಾರವಾಗಿ ಆಚರಿಸಿರುವ ಯಜ್ಞಕರ್ಮನಿಮಿತ್ತವಾಗಿ ಬೃಹಸ್ಪತಿಯು ಅತಿಶಯವಾಗಿ ಕೋಪಗಂಡನು.

೭. ಬೃಹಸ್ಪತಿಯು ಲೋಕವಿನಾಶವಾಗುವಂತೆ ಉಗ್ರವಾಗಿ ಕೋಪಿಸಿಕೊಳ್ಳಲು ದೇವತೆಗಳಿಂದ ಸಂತೈಸಲ್ಪಟ್ಟನು. ಆ ಮರುತ್ತನೆಂಬ ಚಕ್ರವರ್ತಿಯು ನರಿಷ್ಯಂತ ನೆಂಬ ಪುತ್ರನನ್ನು ಹೊಂದಿದನು.

೮. ನರಿಷ್ಯಂತನಿಗೆ ದಂಡಧಾರಿಯಾದ ದಮ ಎಂಬ ರಾಜನು ಪುತ್ರನಾಗಿದ್ದನು. ಆ ದಮರಾಜನಿಗೆ ಲೋಕ ಪ್ರಸಿದ್ಧನಾದ ರಾಷ್ಟ್ರವರ್ಧನ ಎಂಬ ರಾಜನು ಪುತ್ರನಾಗಿ ಜನಿಸಿದನು.

೯. ಹೀಗೆ ಮುಂದೆ ನಡೆದ ವಂಶಾವಳಿಯಲ್ಲಿ ರಾಷ್ಟ್ರವರ್ಧನನಿಗೆ ಸುಧೃತಿ ಎಂಬ ಪುತ್ರನೂ, ಅವನಿಗೆ ನರನೆಂಬ ಪುತ್ರನೂ, ಅವನಿಗೆ ಕೇವಲ ನೆಂಬ ಪುತ್ರನೂ ಮತ್ತು ಅವನಿಗೆ ಬಂಧುಮಾನ್ ಎಂಬ ಪುತ್ರನೂ ಜನಿಸಿದರು.

**ಅಥ ಬಂಧುಮತಃ ಪುತ್ರೋ ಧರ್ಮಾತ್ಮಾ ವೇಗವಾನ್ ನೃಪ ।**
**ಬುಧೋ ವೇಗವತಃ ಪುತ್ರಸ್ತೃಣಬಿಂದುರ್ಬುಧಾತ್ಮಜಃ ॥ ೧೦ ॥**

**ತ್ರೇತಾಯುಗಮುಖೇ ರಾಜಾ ತೃತೀಯೇ ಸಂಬಭೂವ ಹ ।**
**ಕನ್ಯಾ ತು ತಸ್ಯೇಡವಿಡಾ ಮಾತಾ ವಿಶ್ರವಸೋ ಹಿ ಸಾ ॥ ೧೧ ॥**

**ಪುತ್ರೋ ಯೋಽಸ್ಯ ವಿಶಾಲೋಽಭೂದ್ರಾಜಾ ಪರಮಧಾರ್ಮಿಕಃ ।**
**ದಾಶ್ವಾನ್ ಪ್ರಖ್ಯಾತವೀರ್ಯೌಜಾ ವಿಶಾಲಾ ಯೇನ ನಿರ್ಮಿತಾ॥ ೧೨ ॥**

**ವಿಶಾಲಸ್ಯ ಸುತೋ ರಾಜಾ ಹೇಮಚಂದ್ರೋ ಮಹಾಬಲಃ ।**
**ಸುಚಂದ್ರ ಇತಿ ವಿಖ್ಯಾತೋ ಹೇಮಚಂದ್ರಾದನಂತರಃ ॥ ೧೩ ॥**

**ಸುಚಂದ್ರತನಯೋ ರಾಜಾ ಧೂಮ್ರಾಶ್ವ ಇತಿ ವಿಶ್ರುತಃ ।**
**ಧೂಮ್ರಾಶ್ವತನಯೋ ವಿದ್ವಾನ್ ಸೃಂಜಯಃ ಸಮಪದ್ಯತ ॥ ೧೪ ॥**

---

೧೦. ತರುವಾಯ ಬಂಧುಮಂತನಿಗೆ ಧರ್ಮಾತ್ಮನಾದ ವೇಗವಾನ್ ಎಂಬ ರಾಜನು ಪುತ್ರನಾಗಿ ಜನಿಸಿದನು, ಆ ವೇಗವಂತನಿಗೆ ಬುಧನೆಂಬ ಪುತ್ರನೂ ಬುಧನಿಗೆ ತೃಣಬಿಂದು ಎಂಬ ಪುತ್ರನೂ ಜನಿಸಿದರು.

೧೧. ತೃಣಬಿಂದು ರಾಜನು ಮೂರನೆಯ ಪರ್ಯಾಯದ ತ್ರೇತಾಯುಗದ ಆದಿಯಲ್ಲಿ ಜನಿಸಿದನು. ಅವನಿಗೆ ಇಡವಿಡಾ ಎಂಬ ಒಬ್ಬಳು ಕನ್ಯೆಯು ಇದ್ದಳು. ಆವಳು ವಿಶ್ರವ ಎಂಬುವನ ಜನನಿಯು.

೧೨. ಮತ್ತು ಪರಮ ಧರ್ಮಿಷ್ಠನಾದ ವಿಶಾಲ ಎಂಬ ನಾಮಾಂಕಿತನಾದ ರಾಜನು ತೃಣಬಿಂದುವಿಗೆ ಪುತ್ರನಾಗಿದ್ದನು. ಅವನು ವಿಶಾಲಾ ಎಂಬ ನಗರಿಯನ್ನು ನಿರ್ಮಿಸಿದವನೂ, ಪ್ರಸಿದ್ಧನಾದ ವೀರ್ಯ–ಕಾಂತಿಗಳುಳ್ಳವನೂ ಮತ್ತು ಉದಾರ ಶೀಲನೂ ಆಗಿದ್ದನು.

೧೩. ಆ ವಿಶಾಲರಾಜನಿಗೆ ಮಹಾ ಬಲಶಾಲಿಯಾದ ಹೇಮಚಂದ್ರನೆಂಬ ರಾಜನು ಪುತ್ರನಾಗಿದ್ದನು. ಹೇಮಚಂದ್ರನಿಗೆ ಸುಚಂದ್ರನೆಂಬ ಖ್ಯಾತಿಯುಳ್ಳ ರಾಜನು ಪುತ್ರನಾಗಿ ಜನಿಸಿದನು.

೧೪. ಸುಚಂದ್ರನಿಗೆ ಪುತ್ರನಾಗಿರುವ ರಾಜನು ಧೂಮ್ರಾಶ್ವನೆಂಬ ಸಂಜ್ಞೆಯಿಂದ ಪ್ರಸಿದ್ಧನಾಗಿರುವನು, ಧೂಮ್ರಾಶ್ವನಿಗೆ ಜ್ಞಾನಿಯಾದ ಸೃಂಜಯನೆಂಬುವನು ಪುತ್ರನಾಗಿ ಜನಿಸಿದನು.

ಸೃಂಜಯಸ್ಯ ಸುತಃ ಶ್ರೀಮಾನ್ ಸಹದೇವಃ ಪ್ರತಾಪವಾನ್ ।
ಕೃಶಾಶ್ವಃ ಸಹದೇವಸ್ಯ ಪುತ್ರಃ ಪರಮಧಾರ್ಮಿಕಃ ॥ ೧೫ ॥

ಕೃಶಾಶ್ವಸ್ಯ ಮಹಾತೇಜಾಃ ಸೋಮದತ್ತಃ ಪ್ರತಾಪವಾನ್ ।
ಸೋಮದತ್ತಸ್ಯ ರಾಜರ್ಷೇಃ ಸುತೋಽಭೂಜ್ಜನಮೇಜಯಃ ॥ ೧೬ ॥

ಜನಮೇಜಯಾತ್ಮಜಶ್ಚೈವ ಪ್ರಮತಿರ್ನಾಮ ವಿಶ್ರುತಃ ।
ತೃಣಬಿಂದುಪ್ರಭಾವೇಣ ಸರ್ವೇ ವೈಶಾಲಕಾ ನೃಪಾಃ ॥ ೧೭ ॥

ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತಃ ಸುಧಾರ್ಮಿಕಾಃ।
ಶರ್ಯಾತೇರ್ಮಿಥುನಂ ತ್ವಾಸೀದಾನರ್ತೋ ನಾಮ ವಿಶ್ರುತಃ ॥ ೧೮ ॥

ಪುತ್ರಃ ಸುಕನ್ಯಾ ಕನ್ಯಾ ಚ ಭಾರ್ಯಾ ಯಾ ಚ್ಯವನಸ್ಯ ಚ ।
ಆನರ್ತಸ್ಯ ತು ದಾಯಾದೋ ರೇವೋ ನಾಮ ಸುವೀರ್ಯವಾನ್ ॥ ೧೯ ॥

---

೧೫. ಪ್ರತಾಪಶಾಲಿಯೂ, ಕಾಂತಿಯುಕ್ತನೂ ಆದ ಸಹದೇವನು ಸೃಂಜಯನ ಪುತ್ರನಾಗಿ ಹುಟ್ಟಿದನು, ಆ ಸಹದೇವನಿಗೆ ಪರಮಧಾರ್ಮಿಕನಾದ ಕೃಶಾಶ್ವನೆಂಬುವನು ಪುತ್ರನಾಗಿದ್ದನು.

೧೬. ಕೃಶಾಶ್ವನಿಗೆ ಮಹಾ ತೇಜಸ್ವಿಯೂ ಮತ್ತು ಪ್ರತಾಪಶಾಲಿಯೂ ಆದ ಸೋಮದತ್ತನೆಂಬ ಪುತ್ರನಿದ್ದನು, ಸೋಮದತ್ತನೆಂಬ ರಾಜರ್ಷಿಗೆ ಜನಮೇಜಯನೆಂಬ ಸುತನು ಜನಿಸಿದನು.

೧೭. ಜಯಮೇಜಯನ ಪುತ್ರನು ಪ್ರಮತಿ ಎಂಬ ನಾಮಧೇಯದಿಂದ ಪ್ರಸಿದ್ಧಿ ಹೊಂದಿದನು, ಹೀಗೆ ವಿಶಾಲರಾಜನ ವಂಶದಲ್ಲಿ ಹುಟ್ಟಿದ ಎಲ್ಲ ರಾಜರು ತೃಣಬಿಂದುವಿನ ಪ್ರಭಾವದಿಂದ ರಾಜಿಸುತ್ತಿದ್ದರು.

೧೮. ಮತ್ತು ದೀರ್ಘಾಯುಸ್ಯವುಳ್ಳವರೂ, ಮಹಾತ್ಮರೂ, ವೀರ್ಯವಂತರೂ ಹಾಗು ಪರಮ ಧಾರ್ಮಿಕರೂ ಆಗಿದ್ದರು, ಶರ್ಯಾತಿ ಎಂಬುವನಿಗೆ ಪುತ್ರೀ ಮತ್ತು ಪುತ್ರರ ಯುಗ್ಮವು ಇತ್ತು. ಅವರಲ್ಲಿ ಪುತ್ರನು ಆನತನೆಂದು ಖ್ಯಾತಿಯನ್ನು ಹೊಂದಿಕೊಂಡಿದ್ದನು.

೧೯. ಕನ್ಯೆಯು ಸುಕನ್ಯಾ ಎಂದು ಪ್ರಸಿದ್ಧಳಾಗಿದ್ದಳು. ಅವಳು ಚ್ಯವನ ಮುನಿಯ ಭಾರ್ಯೆಯಾದಳು, ಆನರ್ತನೆಂಬುವನಿಗೆ ವೀರ್ಯಶಾಲಿಯಾದ ರೇವ ಎಂಬ ಪುತ್ರನಿದ್ದನು.

ಆನರ್ತವಿಷಯೋ ಯಸ್ಯ ಪುರೀ ಚಾಪಿ ಕುಶಸ್ಥಲೀ ।
ರೇವಸ್ಯ ರೈವತಃ ಪುತ್ರಃ ಕಕುದ್ಮೀ ನಾಮ ಧಾರ್ಮಿಕಃ ॥ ೨೦ ॥

ಜ್ಯೇಷ್ಠೋ ಭ್ರಾತೃಶತಸ್ಯಾಸೀದ್ರಾಜ್ಯಂ ಪ್ರಾಪ್ಯ ಕುಶಸ್ಥಲೀಮ್ ।
ಕನ್ಯಯಾ ಸಹ ಶ್ರುತ್ವಾ ಚ ಗಾಂಧರ್ವಂ ಬ್ರಹ್ಮಣೋಽಂತಿಕೇ ॥ ೨೧ ॥

ಮುಹೂರ್ತಂ ದೇವದೇವಸ್ಯ ಮಾರ್ತ್ಯಂ ಬಹುಯುಗಂ ವಿಭೋಃ ।
ಆಜಗಾಮ ಯುವಾ ಚೈವ ಸ್ವಾಂ ಪುರೀಂ ಯಾದವೈರ್ವೃತಾಮ್ ॥ ೨೨ ॥

ಕೃತಾಂ ದ್ವಾರವತೀಂ ನಾಮ ಬಹುದ್ವಾರಾಂ ಮನೋರಮಾಮ್ ।
ಭೋಜವೃಷ್ಣ್ಯಂಧಕೈರ್ಗುಪ್ತಾಂ ವಸುದೇವಪುರೋಗಮೈಃ ॥ ೨೩ ॥

ತಾಂ ಕಥಾಂ ರೇವತಃ ಶ್ರುತ್ವಾ ಯಥಾತತ್ತ್ವಮರಿಂದಮಃ ।
ಕನ್ಯಾಂ ತು ಬಲದೇವಾಯ ಸುವ್ರತಾಂ ನಾಮ ರೇವತೀಮ್ ।
ದತ್ವಾ ಜಗಾಮ ಶಿಖರಂ ಮೇರೋಸ್ತಪಸಿ ಸಂಸ್ಥಿತಃ ॥ ೨೪ ॥

---

೨೦. ಆ ರೇವನೆಂಬುವನಿಗೆ ಆನರ್ತವೆಂಬ ದೇಶವೂ ಕುಶಸ್ಥಲೀ ಎಂಬ ನಗರಿಯೂ ಅಧೀನಗಳಾಗಿದ್ದುವು, ಆ ರೇವನಿಗೆ ಕಕುದ್ಮೀ ಅಥವಾ ರೈವತ ಎಂಬ ಅತ್ಯಂತ ಧಾರ್ಮಿಕನಾದ ಪುತ್ರನು ಜನಿಸಿದನು.

೨೧. ರೈವತನು ನೂರು ಮಂದಿ ಸಹೋದರರಲ್ಲಿ ಜ್ಯೇಷ್ಠನಾಗಿದ್ದನು, ಅವನು ಕುಶಸ್ಥಲೀ ಎಂಬ ರಾಜ್ಯವನ್ನು ಹೊಂದಿ ಆಳಿದನು. ಅವನು ತನ್ನ ಕನ್ಯೆಯೊಡನೆ ಬ್ರಹ್ಮದೇವನ ಸಮೀಪದಲ್ಲಿ ಗಾಂಧರ್ವ ವಿದ್ಯೆ (ಸಂಗೀತ) ಯನ್ನು ಶ್ರವಣಮಾಡಿದನು.

೨೨. ಪ್ರಭುವೇ! ಆಗ ದೇವೋತ್ತಮನಾದ ಬ್ರಹ್ಮನ ಮಾನದಲ್ಲಿ ಒಂದು ಮುಹೂರ್ತಕಾಲವೂ ಮನುಷ್ಯಮಾನದಲ್ಲಿ ಬಹು ಯುಗಗಳ ಕಾಲವೂ ಕಳೆಯಿತು, ಆಗ ಯಾದವರಿಂದ ಆವರಿಸಲ್ಪಟ್ಟಿದ್ದ ತನ್ನ ನಗರಕ್ಕೆ ಯುವಕನಾಗಿಯೇ ಬಂದು ಸೇರಿದನು.

೨೩. ಆಗ ಆ ನಗರವು ಅನೇಕ ದ್ವಾರಗಳಿಂದ ಸುಂದರವಾಗಿ ಶೋಭಿಸುತ್ತಲೂ ಭೋಜ, ವೃಷ್ಣಿ, ಅಂಧಕ ಎಂಬ ಯಾದವ ಜನಾಂಗಕ್ಕೆ ಸೇರಿದ ವಸುದೇವ ಮುಂತಾದವರಿಂದ ರಕ್ಷಿಸಲ್ಪಡುತ್ತಲೂ ಮತ್ತು ದ್ವಾರವತಿಯೆಂದು ನಾಮಾಂಕಿತವೂ ಆಗಿತ್ತು.

೨೪. ಶತ್ರುನಿಗ್ರಹಪರನಾದ ರೇವತನು ಆ ಕಥೆಯನ್ನು ತಾತ್ವಿಕವಾಗಿ ಕೇಳಿ ಸುವ್ರತಾ ಎಂಬ ನಾಮಾಂಕಿತಳಾದ ಆ ರೇವತಿ ಕನ್ಯೆಯನ್ನು ಬಲರಾಮನಿಗೆ ಕೊಟ್ಟು ಮೇರುಪರ್ವತದ ಶಿಖರಕ್ಕೆ ಹೋಗಿ ಅಲ್ಲಿ ತಪಶ್ಚರ್ಯೆಯಲ್ಲಿ ಆಸಕ್ತನಾದನು.

ರೇಮೇ ರಾಮಶ್ಚ ಧರ್ಮಾತ್ಮಾ ರೇವತ್ಯಾ ಸಹಿತಃ ಕಿಲ ।
ತಾಂ ಕಥಾಮೃಷಯಃ ಶ್ರುತ್ವಾ ಪಪ್ರಚ್ಛುಸ್ತದನಂತರಮ್ ॥ ೨೫ ॥

ಋಷಯ ಊಚುಃ :–

ಕಥಂ ಬಹುತಿಥೇ ಕಾಲೇ ಸಮತೀತೇ ಮಹಾಮತೇ ।
ನ ಜರಾ ರೇವತೀಂ ಪ್ರಾಪ್ತಾ ರೇವತಂ ವಾ ಕಕುದ್ಮಿನಮ್ ।
ಏತಚ್ಛುಶ್ರೂಷಮಾಣಾನ್ನೋ ಗಾಂಧರ್ವಂ ವದ ಚೈವ ಹಿ ॥ ೨೬ ॥

ಸೂತ ಉವಾಚ :—

ನ ಜರಾ ಕ್ಷುತ್ಪಿಪಾಸೇ ವಾ ನ ಚ ಮೃತ್ಯುಭಯಂ ತತಃ ।
ನ ಚ ರೋಗಃ ಪ್ರಭವತಿ ಬ್ರಹ್ಮಲೋಕಂ ಗತಸ್ಯ ಹ ॥ ೨೭ ॥

ಗಾಂಧರ್ವಂ ಪ್ರತಿ ಯಚ್ಚಾಪಿ ಪೃಷ್ಟಸ್ತು ಮುನಿಸತ್ತಮಾಃ ।
ತತೋಽಹಂ ಸಂಪ್ರವಕ್ಷ್ಯಾಮಿ ಯಾಥಾತಥ್ಯೇನ ಸುವ್ರತಾಃ ॥ ೨೮ ॥

---

೨೫. ಧರ್ಮಾತ್ಮನಾದ ಬಲರಾಮನು ರೇವತಿಯೆಂಬ ಆ ಸತಿಯೊಡನೆ ಪ್ರೀತಿಯಿಂದ ರಮಿಸಿದನು. ಈ ಕಥೆಯನ್ನು ಕೇಳಿದ ತರುವಾಯ ಮಹರ್ಷಿಗಳು ಮತ್ತೆ ಜಿಜ್ಞಾಸೆಯಿಂದ ಪ್ರಶ್ನೆ ಮಾಡಿದರು.

೨೬. ಋಷಿಗಳು ಇಂತೆಂದರು :—ಮಹಾ ಪ್ರಜ್ಞಾಶಾಲಿಯೆ! ಅನೇಕ ಯುಗಗಳ ಕಾಲವು ಕಳೆದು ಹೋದರೂ ಕೂಡ ರೈವತನಾದ ಕಕುದ್ಮಿ ರಾಜನಿಗಾಗಲಿ ರೇವತೀ ಕನ್ಯೆಗಾಗಲಿ ವಾರ್ಧಕವು ಏಕೆ ಉಂಟಾಗಲಿಲ್ಲ? ಎಂಬುದನ್ನು ಕೇಳಬೇಕೆಂದಿರುವ ನನಗೆ ವಿವರಿಸಿ ಮುಂದೆ ಗಾಂಧರ್ವ ವಿದ್ಯೆಯ ವಿಧಾನವನ್ನು ಉಪದೇಶಿಸು.

೨೭. ಎಂದು ಋಷಿಗಳು ಪ್ರಶ್ನಿಸಲು ಸೂತಮುನಿಯು ಪ್ರತ್ಯುತ್ತರವನ್ನಿತ್ತನು :—ಬ್ರಹ್ಮ ಲೋಕವನ್ನು ಹೊಂದಿದ ಮಾನವನಿಗೆ ವಾರ್ಧಕ, ಹಸಿವು, ನೀರಡಿಕೆ, ಮರಣ, ಭಯ, ಮತ್ತು ರೋಗ ಇವುಗಳು ಯಾವುವೂ ಬಾಧಿಸಲು ಶಕ್ತವಾಗಿಲ್ಲ.

೨೮. ಮುನಿಶ್ರೇಷ್ಠರೆ! ಗಾಂಧರ್ವ ವಿದ್ಯೆಯನ್ನು ವಿವರಿಸಲು ನಿಮ್ಮಿಂದ ನಾನು ಪ್ರಶ್ನಿಸಲ್ಪಟ್ಟಿರುವೆನು, ವ್ರತಾನುಷ್ಠಾನಪರರಾದ ಮಹರ್ಷಿಗಳೆ! ಆದುದರಿಂದ ಆ ವಿಷಯವನ್ನು ಯಥಾವತ್ತಾಗಿ ಉಪದೇಶಿಸುತ್ತೇನೆ.

ಸಪ್ತ ಸ್ವರಾಸ್ತ್ರಯೋ ಗ್ರಾಮಾ ಮೂರ್ಛನಾಸ್ತ್ವೇಕವಿಂಶತಿಃ ।
ತಾನಾಶ್ಚೈಕೋನಪಂಚಾಶದಿತ್ಯೇತತ್ಸ್ವರಮಂಡಲಮ್ ॥ ೨೯ ॥

ಷಡ್ಜರ್ಷಭೌ ಚ ಗಾಂಧಾರೋ ಮಧ್ಯಮಃ ಪಂಚಮಸ್ತಥಾ ।
ಧೈವತಶ್ಚಾಪಿ ವಿಜ್ಞೇಯಸ್ತಥಾ ಚಾಪಿ ನಿಷಾದಕಃ ॥ ೩೦ ॥

ಸೌವೀರಾ ಮಧ್ಯಮಾ ಗ್ರಾಮಾ ಹರಿಣಾಶ್ವಾ ತಥೈವ ಚ ॥ ೩೧ ॥

ತಸ್ಯಾಃ ಕಾಲೋಪನೋಪೇತಾ ಚತುರ್ಥೀ ಶುದ್ಧಮಧ್ಯಮಾ ।
ಮಾರ್ಗೀ ಚ ಪೌಷಾ ವೈ ದೇವ ದೃಷ್ಟ್ವಾ ಕಾಂ ಚ ಯಥಾಕ್ರಮಃ॥ ೩೨ ॥

---

೨೯. ಗಾಂಧರ್ವ ವಿದ್ಯೆಯಲ್ಲಿ ಸ್ವರ, ಗ್ರಾಮ, ಮೂರ್ಛನಾ ಮತ್ತು ತಾನವೆಂದು ನಾಲ್ಕು ವಿಭಾಗಗಳಿರುವುವು. ಇವುಗಳಲ್ಲಿ ಸ್ವರಗಳು ಏಳು, ಗ್ರಾಮಗಳು ಮೂರು, ಮೂರ್ಛನೆಗಳು ಇಪ್ಪತ್ತೊಂದು, ಹಾಗು ತಾನಗಳು ನಲವತ್ತೊಂಭತ್ತು ಸಂಖ್ಯೆಯಿಂದ ಇವೆ.

೩೦. ಇವುಗಳಲ್ಲಿ ಸಪ್ತಸ್ವರಗಳು ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ಮತ್ತು ನಿಷಾದ ಎಂಬ ಸಂಕೇತವನ್ನು ಹೊಂದಿರುವುವು.

೩೧. ಮೂರ್ಛನಾದಿಗಳಿಗೆ ಆಶ್ರಯವಾದ ಸರ್ವಸಮೂಹಕ್ಕೆ ಗ್ರಾಮವೆಂದು ಹೆಸರು. ಗ್ರಾಮವು ಷಡ್ಜಗ್ರಾಮ, ಮಧ್ಯಮಗ್ರಾಮ ಮತ್ತು ಗಾಂಧಾರ ಗ್ರಾಮವೆಂದು ಮೂರು ಬಗೆಯಾಗಿರುವುದು. ಒಂದೊಂದು ಗ್ರಾಮದಲ್ಲಿ ಏಳು ವಿಧವಾದ ಮೂರ್ಛನೆಯು ಇರುವುದರಿಂದ ಮೂರ್ಛನೆಗಳು ಇಪ್ಪತ್ತೊಂದು ಬಗೆಯಾಗುವುವು. ಮಧ್ಯಮ ಗ್ರಾಮದಲ್ಲಿ ಸೌವೀರೀ, ಹರಿಣಾಶ್ವಾ, ಎಂಬ ಎರಡು ಮೂರ್ಛನೆಗಳು ಮೊದಲನೆಯವುಗಳಾಗಿವೆ.

೩೨. ಮತ್ತು ಕಲೋಪನತಾ, ಶುದ್ಧ ಮಧ್ಯಮಾ, ಮಾರ್ಗವೀ, ಪೌರವೀ, ಹಾಗು ಹೃಷ್ಯಕಾ ಎಂಬು ಸೇರಿ ಮಧ್ಯಮ ಗ್ರಾಮದಲ್ಲಿ ಏಳು ಮೂರ್ಛನೆಗಳು ಇರುವುವು. ಮೂರ್ಛನೆಯೆಂದರೆ ಕ್ರಮವಾಗಿ ಸ್ವರಗಳ ಆರೋಹಣ, ಅವರೋಹಣಗಳೆಂದು ತಿಳಿಯಬೇಕು.

ಮಧ್ಯಮಗ್ರಾಮಿಕಾಖ್ಯಾತಾ ಷಡ್ಜಗ್ರಾಮಾಂ ನಿಬೋಧತ ।
ಉತ್ತರ ಮಂದ್ರಾ ರಜನೀ ತಥಾ ವಾಚೋಽನ್ನರಾಯತಾಃ ॥ ೩೩ ॥

ಮಧ್ಯಷಡ್ಜಾ ತಥಾ ಚೈವ ತಥಾನ್ಯಾ ಚಾಭಿಮುದ್ಗತಾ ।
ಗಾಂಧಾರಗ್ರಾಮಿಕಾ ಶ್ಯಾಮಾ ಕೀರ್ತಮಾನಾ ನಿಬೋಧತ ॥ ೩೪ ॥

ಅಗ್ನಿಷ್ಟೋಮಂ ತು ಮಾದ್ಯಂ ತು ದ್ವಿತೀಯಂ ವಾಜಪೇಯಿಕಮ್ ।
ಯವರಾತವಸೂಯಸ್ತು ಷಷ್ಠವತ್ತು ಸುವರ್ಣಕಮ್ ॥ ೩೫ ॥

ಸಪ್ತ ಗೌಸವನಾ ನಾಮ ಮಹಾವೃಷ್ಟಿಕತಾಷ್ಟಮಾಮ್ ।
ಬ್ರಹ್ಮದಾನಂ ಚ ನವಮಂ ಪ್ರಜಾಪತ್ಯಮನಂತರಮ್ ।
ನಾಗಯಕ್ಷಾಶ್ರಯಂ ವಿದ್ವಾನ್ ತದ್ಗೋತ್ತರ ತಥೈವ ಚ ॥ ೩೬ ॥

---

೩೩. ಹೀಗೆ ಮಧ್ಯಮಗ್ರಾಮಕ್ಕೆ ಸಂಬಂಧಿಸಿದ ಏಳು ಮೂರ್ಛನೆಗಳು ಹೇಳಲ್ಪಟ್ಟಿವೆ. ಮುಂದೆ ಹೇಳುವ ಷಡ್ಜಗ್ರಾಮದ ಮೂರ್ಛನೆಗಳನ್ನು ಕೇಳಿರಿ. ಉತ್ತರ ಮಂದ್ರಾ, ರಜನೀ ಮತ್ತು ಉತ್ತರಾಯತಾ ಎಂಬುವು ಇವುಗಳಲ್ಲಿ ಮೊದಲನೆಯ ಮೂರು ಮೂರ್ಛನೆಗಳು.

೩೪. ಹಾಗು ಶುದ್ಧ ಷಡ್ಜಾ, ಮತ್ಸರೀಕೃತ್. ಅಶ್ವಕ್ರಾಂತಾ, ಮತ್ತು ಅಭಿರುದ್ಗತಾ ಎಂಬುವು ಸೇರಿ ಏಳು ಷಡ್ಜ ಗ್ರಾಮದ ಮೂರ್ಛನೆಗಳೆಂದು ಅರಿಯಬೇಕು. ಮುಂದೆ ಗಾಂಧಾರ ಗ್ರಾಮದಲ್ಲಿಯೂ ನಂದಾ, ವಿಶಾಲಾ, ಸುಮುಖೀ, ಚಿತ್ರಾ, ಚಿತ್ರಾವತೀ, ಸುಖಾ, ಮತ್ತು ಆಲಾಪಾ ಎಂಬ ಏಳು ಮೂರ್ಛನೆಗಳು ಇವೆಯೆಂದು ತಿಳಿಯಬೇಕು.

೩೫. ಹಿಂದೆ ನಲವತ್ತೊಂಭತ್ತು ತಾನಗಳು ಇವೆಯೆಂದು ಹೇಳಿದೆ. ಮೂರ್ಛನೆಗಳಲ್ಲಿ ಏಕಸ್ವರ, ದ್ವಿಸ್ವರಲೋಪಗಳಿಂದ ಆಗುವ ಪ್ರಭೇದವನ್ನು ತಾನ ಎಂದು ಹೇಳುವರು. ಆ ಶುದ್ಧ ತಾನಗಳಿಗೆ ಈ ರೀತಿಯಾಗಿ ಸಂಕೇತವನ್ನು ಅರಿಯಬೇಕು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ವಾಜಪೇಯ, ಷೋಡಶಿ, ಪುಂಡರೀಕ, ಅಶ್ವಮೇಧ, ಮತ್ತು ರಾಜಸೂಯವೆಂಬುವು ಷಡ್ಜಸ್ವರದಿಂದ ಹೀನವಾದ ಶುದ್ಧ ತಾನಗಳ ಹೆಸರು.

೩೬. ಸ್ವಿಷ್ಟಕೃತ್, ಬಹುಸೌವರ್ಣ, ಗೋಸವ, ಮಹಾವ್ರತ, ವಿಶ್ವಜಿತ್, ಬ್ರಹ್ಮಯಜ್ಞ ಮತ್ತು ಪ್ರಾಜಾಪತ್ಯವೆಂಬುವು ಏಳು ಋಷಭಸ್ವರದಿಂದ ಹೀನವಾದ ಶುದ್ಧ ತಾನಗಳೆಂದು ತಿಳಿಯುವುದು.

ದಪಕ್ರಾಂತಮ್ಮೃಗಕ್ರಾಂತಂ ವಿಷ್ಣುಕ್ರಾಂತಮನೋಹರಾ ।
ಸೂರ್ಯಕಾಂತಧರೇಣ್ಯೈವ ಸಂತಕೋಕಿಲವಿಶ್ರುತಃ　　　　　|| ೩೭ ||

ತೇನವಾನಿತ್ಯಪವಶಪಿಶಾಚಾಂತೀವನಹ್ಯಪಿ ।
ಸಾವಿತ್ರಮರ್ಧಸಾವಿತ್ರಂ ಸರ್ವತೋ ಭದ್ರಮೇವ ಚ　　　　　|| ೩೮ ||

ಮನೋಹರಮಧಾತ್ರ್ಯಂ ಚ ಗಂಧರ್ವಾನುಪತಶ್ಚ ಯಃ ।
ಅಂಬುಷೇಸೇಷ್ಟಮಥೋ ವಿಷ್ಣುವೈಣವರಾವುಭೌ　　　　　|| ೩೯ ||

ಸಾಗರಾಜವಿಜಯಂ ಚೈವ ಸರ್ವಭೂತಮನೋಹರಃ ।
ಹತೋತ್ಸೃಷ್ಟೋ ವಿಜಾನೀತ ಸ್ಕಂಧಂ ತು ಪ್ರಿಯಮೇವ ಚ　|| ೪೦ ||

ಮನೋಹರಮಧಾತ್ರ್ಯಂ ಚ ಗಂಧರ್ವಾನುಪತಶ್ಚ ಯಃ ।
ಅಲಂಬುಸೇಷ್ಟಸ್ಯ ತಥಾ ನಾರದಪ್ರಿಯ ಏವ ಚ　　　　　|| ೪೧ ||

---

೩೭. ಅಶ್ವಕ್ರಾಂತ, ರಥಕ್ರಾಂತ, ವಿಷ್ಣುಕ್ರಾಂತ, ಸೂರ್ಯಕ್ರಾಂತ, ರಥಕ್ರಾಂತ, ಬಲಭಿತ್ ಮತ್ತು ನಾಗಪಕ್ಷಕವೆಂಬುವು ಏಳು ಪಂಚಮಸ್ವರದಿಂದ ಹೀನವಾದ ಶುದ್ಧತಾನಗಳ ಸಂಜ್ಞೆಗಳಾಗಿವೆ.

೩೮. ಸಾವಿತ್ರೀ, ಅರ್ಧಸಾವಿತ್ರೀ, ಸರ್ವತೋಭದ್ರ, ಆದಿತ್ಯಾನಾಮಯನ, ಗವಾಮಯನ, ಸರ್ಪಾಣಾಮಯನ, ಮತ್ತು ಕೌಂಡಪಾಯನವೆಂಬುವು ಷಡ್ಜಸ್ವರ ಹೀನವಾದ ಶುದ್ಧ ತಾನಗಳು.

೩೯. ಹಿಂದೆ ಹೇಳಿರುವ ಮೂರ್ಛನೆಗಳು ನಾಮಾಂತರಗಳಿಂದ ಕೀರ್ತಿಸಲ್ಪಟ್ಟಿವೆ. ಮನೋಹರ, ಅಧಾತ್ರ್ಯ, ಗಂಧರ್ವಾನುಪತ, ಅಲಂಬುಸೇಷ್ಟ, ವಿಷ್ಣು ಮತ್ತು ವೈಣವರವೆಂಬುದಾಗಿ ಕೆಲವು ಮೂರ್ಛನೆಗಳು ಸಂಕೇತವನ್ನು ಹೊಂದಿಕೊಂಡಿವೆ.

೪೦. ಮತ್ತು ಸಾಗರಾವಿಜಯ, ಸರ್ವಭೂತ ಮನೋಹರ, ಹತೋತ್ಸೃಷ್ಟ ಮತ್ತು ಪ್ರಿಯಸ್ಕಂಧ ಎಂಬುವು ಮತ್ತೆ ಕೆಲವು ಮೂರ್ಛನೆಗಳ ಸಂಕೇತವೆಂದು ಅರಿಯಬೇಕು.

೪೧. ಮನೋಹರ, ಅಧಾತ್ರ್ಯ, ಗಂಧರ್ವಾನುಪತ, ಮತ್ತು ಅಲಂಬುಸೇಷ್ಟ ಎಂಬುವುಗಳ ಜೊತೆಯಲ್ಲಿ " ನಾರದ ಪ್ರಿಯ " ವೆಂಬ ಸಂಕೇತವುಳ್ಳ ಮೂರ್ಛನೆಯು ಭೀಮಸೇನನಿಂದ ಪಠಿಸಲ್ಪಟ್ಟಿದೆ.

3

ಕಥಿತೋ ಭೀಮಸೇನೇನ ನಗರಾತಾನಯಪ್ರಿಯಃ ।
ವಿಕಲೋಪನೀತವಿನತಾ ಶ್ರೀರಾಷ್ಯೋ ಭಾರ್ಗವಪ್ರಿಯಃ ॥ ೪೨ ॥

ಚತುರ್ದಶ ತಥಾ ಪಂಚದಶೇಚ್ಛಂತೀಹ ನಾರದಃ ।
ಸಸೌವಿರಾಂ ಸಸೋವೀರಾ ಬ್ರಹ್ಮಣೋ ಹ್ಯುಪಗೀಯತೇ ॥ ೪೩ ॥

ಉತ್ತರಾದಿಸ್ವರಶ್ಚೈವ ಬ್ರಹ್ಮಾ ವೈ ದೇವತಾಸ್ತ್ರಯಃ ।
ಹರಿದೇಶಸಮುತ್ಪನ್ನಾ ಹರಿಣಾಶ್ವಾ ವ್ಯಜಾಯತ ॥ ೪೪ ॥

ಮೂರ್ಛನಾ ಹರಿಣಾ ತೇ ವೈ ಚಂದ್ರಸ್ಯಾಸ್ಯಾಧಿದೈವತಮ್ ।
ಕರೋಪನೀತಾ ವಿವೃತಾವನುದ್ರಿಃ ಸ್ವರಮಂಡಲೇ ॥ ೪೫ ॥

ಸಾಕಲೋಪನತಾ ತಸ್ಯಾಸ್ಮನುತಸ್ಯಾನ್ನದೇವತಃ ।
ಮನುದೇಶಾಸಮುತ್ಪನ್ನಾ ಮೂರ್ಛನಾ ಶುದ್ಧಮಾತ್ಮನಾ ॥ ೪೬ ॥

---

೪೨. ಮತ್ತು ನಗರಾತನಯಪ್ರಿಯ, ವಿಕಲೋನಪತ, ವಿನತಾ, ಶ್ರೀರಾಷ್ಯ, ಹಾಗು ಭಾರ್ಗವಪ್ರಿಯ–ಎಂಬುವು ಮತ್ತೆ ಕೆಲವು ಮೂರ್ಛನೆಗಳ ಹೆಸರುಗಳಾಗಿವೆ.

೪೩. ಹಿಂದೆ ಹೇಳಿದ ರೀತಿಯಲ್ಲಿ ಮತ ಭೇದದಿಂದ ಹದಿನಾಲ್ಕು ಮೂರ್ಛನೆಗಳು ಇರುವುವು. ಆದರೆ ನಾರದ ಮುನಿಯು ಹದಿನೈದನೆಯ ಮೂರ್ಛನೆಯನ್ನು ಅಂಗೀಕರಿಸುವನು. ಸೌವೀರೀ ಎಂಬ ಮೂರ್ಛನೆಗೆ ಬ್ರಹ್ಮನು ದೇವತೆಯೆಂದು ಹೇಳಲ್ಪಟ್ಟಿದೆ.

೪೪. ಮುಂದಿನ ಎಲ್ಲ ಮೂರ್ಛನೆಗಳಿಗೆ ಬ್ರಹ್ಮ-ಇಂದ್ರ, ವಾಯು, ಗಂಧರ್ವ ಮುಂತಾದ ದೇವತೆಗಳೆಂದು ತಿಳಿಯಬೇಕು. ಹರಿಣಾಶ್ವಾ ಎಂಬ ಮೂರ್ಛನೆಯು ಹರಿದೇಶದಲ್ಲಿ ಹುಟ್ಟಿದುದರಿಂದ ಆ ಸಂಕೇತವನ್ನು ಹೊಂದಿದೆ.

೪೫. ಅಂತಹ ಹರಿಣಾಶ್ವಾ ಎಂಬ ಮೂರ್ಛನೆಗೆ ಇಂದ್ರನು ಅಧಿದೇವತೆಯಾಗಿರುವನು. ವಾಯುದೇವನಿಂದ ಸ್ವರ ಮಂಡಲದಲ್ಲಿ ಕಲೋಪನತಾ ಎಂಬ ಮೂರ್ಛನೆಯು ಸೇರಿಸಲ್ಪಟ್ಟಿರುವುದು.

೪೬. ಆದುದರಿಂದ ಆ ಕಲೋಪನತಾ ಎಂಬ ಮೂರ್ಛನೆಗೆ ವಾಯುವು ದೇವತೆಯಾಗಿರುವನು. ಶುದ್ಧ ಮಧ್ಯಮಾ ಎಂಬ ಮೂರ್ಛನೆಯು ಮಧ್ಯ ದೇಶದಲ್ಲಿ ಜನಿಸಿದುದರಿಂದ ಅಂತಹ ಅನ್ವರ್ಥವಾದ ಹೆಸರನ್ನು ಹೊಂದಿಕೊಂಡಿರುವುದು.

ತಸ್ಮಾತ್ತಸ್ಮಾನ್ಮೃಗಾ ಮಾರ್ಗೀ ಮೃಗೇಂದ್ರೋಽಸ್ಯಾಧಿದೇವತಾ ।
ಸಾವಾಶ್ರಮುಸಮಾದ್ಯುವ್ನಾ ಅನೇಕಾಪೌರುಷಾನಖಾನ್ ॥ ೪೭ ॥

ಮೂರ್ಛನಾ ಯೋಜನಾ ಹ್ಯೇಷಾ ರಜಸಾ ರಜನೀ ತತಃ ।
ತಾನಿ ಉತ್ತರಮಂದ್ರಾಂ ಸ ಷಡ್ಗ ದೈವತಕಂ ವಿದುಃ ॥ ೪೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕಷಷ್ಟಿತಮೋಽಧ್ಯಾಯಃ

---

೪೭. ಮೃಗ ಜಾತಿಯಿಂದ ಹುಟ್ಟಿರುವ ಮೂರ್ಛನೆಯು ಮಾರ್ಗೀ ಎಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿದೆ. ಅದಕ್ಕೆ ಸಿಂಹವು ಅಧಿ ದೇವತೆಯು, ಅನೇಕ ಮಂದಿ ಪುರುಷ ಸಮೂಹದಿಂದ ಹುಟ್ಟಿರುವ ಮೂರ್ಛನೆಯು ಪೌರವೀ ಎಂಬುದಾಗಿ ಸಂಕೇತವನ್ನು ಹೊಂದಿದೆ.

೪೮. ರಜೋಗುಣದಿಂದ ಯೋಜನೆಯುಳ್ಳ ಮೂರ್ಛನೆಯು ರಜನೀ ಎಂಬ ಯಥಾರ್ಥನಾಮಧೇಯವನ್ನು ಹೊಂದಿರುವುದು, ಉತ್ತರ ಮಂದ್ರಾ ಎಂಬ ಷಡ್ಜ ಗ್ರಾಮದ ಮೂರ್ಛನೆಯು ಯಕ್ಷದೇವತೆಯಿಂದ ಕೂಡಿದೆ ಎಂದು ಹೇಳುವರು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೊಂದನೆಯ ಅಧ್ಯಾಯವು ಮುಗಿದುದು.

---

# ದ್ವಿಷಷ್ಟಿತಮೋಽಧ್ಯಾಯಃ

**ಸೂತ ಉವಾಚ :—**

ಕಕುದ್ಮಿನಸ್ತು ತಂ ಲೋಕಂ ರೈವತಸ್ಯ ಗತಸ್ಯ ಹ ।
ಹೃತಾ ಪುಣ್ಯಜನೈಃ ಸರ್ವಾ ರಾಕ್ಷಸೈಃ ಸಾ ಕುಶಸ್ಥಲೀ ॥ ೧ ॥

ತದ್ವೈ ಭ್ರಾತೃಶತಂ ತಸ್ಯ ಧಾರ್ಮಿಕಸ್ಯ ಮಹಾತ್ಮನಃ ।
ನಿಬಧ್ಯಮಾನಂ ನಾರಾಚೈರ್ವಿದಿಶಃ ಪ್ರಾದ್ರವದ್ಭಯಾತ್ ॥ ೨ ॥

ತೇಷಾಂ ತು ತದ್ಭಯಕ್ರಾಂತಕ್ಷತ್ರಿಯಾಣಾಂ ಚ ವಿದ್ರುತಾಮ್ ।
ಅನ್ವವಾಯಸ್ತು ಸುಮಹಾನ್ ತತ್ರ ತತ್ರ ದ್ವಿಜೋತ್ತಮಾಃ ॥ ೩ ॥

ಶಾರ್ಯಾತಾ ಇತಿ ವಿಖ್ಯಾತಾ ದಿಕ್ಷು ಸರ್ವಾಸು ಧಾರ್ಮಿಕಾಃ ।
ಧೃಷ್ಟಸ್ಯ ಧಾರ್ಷ್ಟಿಕಂ ಸರ್ವಂ ರಣಧೃಷ್ಟಂ ಬಭೂವ ಹ ॥ ೪ ॥

---

೧. ಸೂತಮುನಿಯು ಇಂತೆಂದನು :—ರೇವ ಪುತ್ರನಾದ ರೈವತ ಅಥವಾ ಕಕುದ್ಮಿ ಎಂಬುವನು ಬ್ರಹ್ಮಲೋಕಕ್ಕೆ ಹೋಗಿರುವ ಸಮಯದಲ್ಲಿ ಅವನ ಕುಶಸ್ಥಲಿ ಎಂಬ ನಗರಿಯು ಪೂರ್ಣವಾಗಿ ಯಕ್ಷ ಮತ್ತು ರಾಕ್ಷಸರಿಂದ ಅಪಹರಿಸಲ್ಪಟ್ಟಿತು.

೨. ಧಾರ್ಮಿಕನೂ ಮಹಾತ್ಮನೂ ಆದ ಆ ಕಕುದ್ಮಿಯ ನೂರಾರು ಮಂದಿ ಸಹೋದರರ ಗುಂಪು ರಾಕ್ಷಸರ ಬಾಣಗಳಿಂದ ಹೊಡೆಯಲ್ಪಡುತ್ತ ಸಹಿಸಲಾರದೇ ಭಯದಿಂದ ದಿಗಂತಗಳಿಗೆ ಪಲಾಯನ ಮಾಡಿತು.

೩. ದ್ವಿಜೋತ್ತಮರೇ! ಹೀಗೆ ಆ ಭಯದಿಂದ ಆವಿಷ್ಟರಾಗಿ ದಿಗಂತಗಳಿಗೆ ಓಡಿ ಹೋಗಿದ್ದ ಕ್ಷತ್ರಿಯರಿಂದ ಅವರು ನೆಲೆಸಿಕೊಂಡಿದ್ದ ಆಯಾಯ ಸ್ಥಳಗಳಲ್ಲಿ ದೊಡ್ಡ ವಂಶವು ಬೆಳೆಯಿತು.

೪. ಆ ಕ್ಷತ್ರಿಯ ರಾಜರು ಪರಮ ಧಾರ್ಮಿಕರೆನಿಸಿದವರಾಗಿ ಸರ್ವ ದಿಕ್ಕುಗಳಲ್ಲಿಯೂ ಶಾರ್ಯಾತರು ಎಂದು ಪ್ರಸಿದ್ಧಿಯನ್ನು ಹೊಂದಿದರು. ದಿಟ್ಟತನವೆಂಬ ಗುಣಸಂಬಂಧದಿಂದ ಕೂಡಿದ ಆ ಸಮೂಹವು ಯುದ್ಧದಲ್ಲಿ ಬಹು ಧೀರವಾಯಿತು.

ತ್ರಿಸಾಹಸ್ರಂ ತು ಸ ಗಣಃ ಕ್ಷತ್ರಿಯಾಣಾಂ ಮಹಾತ್ಮನಾಮ್ ।
ನಭಗಸ್ಯ ಚ ದಾಯಾದೋ ನಾಭಾಗೋ ನಾಮ ವೀರ್ಯವಾನ್ ॥ ೫ ॥

ಅಂಬರೀಷಸ್ತು ನಾಭಾಗಿರ್ವಿರೂಪಸ್ತಸ್ಯ ಚಾತ್ಮಜಃ ।
ಪೃಷದಶ್ವೋ ವಿರೂಪಸ್ಯ ತಸ್ಯ ಪುತ್ರೋ ರಥೀತರಃ ॥ ೬ ॥

ಏತೇ ಕ್ಷತ್ರಪ್ರಸೂತಾ ವೈ ಪುನಶ್ಚಾಂಗಿರಸಃ ಸ್ಮೃತಾಃ ।
ರಥೀತರಾಣಾಂ ಪ್ರವರಾಃ ಕ್ಷೇತ್ರೋಪೇತಾ ದ್ವಿಜಾತಯಃ ॥ ೭ ॥

ಕ್ಷುವತಸ್ತು ಮನೋಃ ಪೂರ್ವಮಿಕ್ಷ್ವಾಕುರಭಿನಿಃಸೃತಃ ।
ತಸ್ಯ ಪುತ್ರಶತಂ ತ್ವಾಸೀದಿಕ್ಷ್ವಾಕೋರ್ಭೂರಿದಕ್ಷಿಣಮ್ ॥ ೮ ॥

ತೇಷಾಂ ಶ್ರೇಷ್ಠೋ ವಿಕುಕ್ಷಿಸ್ತು ನಿಮಿರ್ದಂಡಶ್ಚ ತೇ ತ್ರಯಃ ।
ಶಕುನಿಪ್ರಮುಖಾಸ್ತಸ್ಯ ಪುತ್ರಾಃ ಪಂಚಾಶತಸ್ತು ತೇ ॥ ೯ ॥

---

೫. ಅಂತಹ ಮಹಾತ್ಮರಾದ ಕ್ಷತ್ರಿಯರಾಜರ ತಂಡವು ಮೂರು ಸಹಸ್ರ ಸಂಖ್ಯೆಯಷ್ಟು ಹೆಚ್ಚಿತು. ನಭಗ ಎಂಬ ರಾಜನಿಗೆ ವೀರ್ಯವಂತನಾದ ನಾಭಾಗನೆಂಬುವನು ಪುತ್ರನಾಗಿ ಜನಿಸಿದನು.

೬. ನಾಭಾಗನಿಗೆ ಅಂಬರೀಷ ಎಂಬುವನೂ, ಅಂಬರೀಷನಿಗೆ ವಿರೂಪ ಎಂಬುವನೂ, ವಿರೂಪನಿಗೆ ಪೃಷದಶ್ವ ಎಂಬುವನೂ ಮತ್ತು ಪೃಷದಶ್ವ ಎಂಬುವನಿಗೆ ರಥೀತರ ಎಂಬ ಪುತ್ರನೂ ಜನಿಸಿದರು.

೭. ಹೀಗೆ ಈ ಸಂತತಿಯ ಪ್ರಜೆಗಳು ಕ್ಷತ್ರಜಾತಿಯಿಂದ ಜನಿಸಿದವರಾಗಿಯೂ ಆಂಗೀರಸರೆಂಬುವರಾಗಿಯೂ ಸ್ಮರಿಸಲ್ಪಟ್ಟಿರುವರು. ಹಾಗೆ ರಥೀತರ ಎಂಬ ವಂಶನಾಮದಿಂದ ಪ್ರಸಿದ್ಧರಾಗಿ ಕ್ಷಾತ್ರಬಲದಿಂದ ಕೂಡಿದ ದ್ವಿಜಾತಿಗಳಾಗಿದ್ದರು.

೮. ಪೂರ್ವದಲ್ಲಿ ಮನುರಾಜನು ಕ್ಷುತ (ಸೀನು) ವುಳ್ಳವನಾಗಲು ಅವನ ಮುಖದಿಂದ ಇಕ್ಷ್ವಾಕು ಎಂಬ ರಾಜನು ಜನಿಸಿದನು. ಆ ಇಕ್ಷ್ವಾಕು ರಾಜನಿಂದ ಅನೇಕ ಯಾಗ–ದಕ್ಷಿಣಾ ದಾನವನ್ನು ಆಚರಿಸುವ ನೂರು ಮಂದಿ ಪುತ್ರರು ಜನಿಸಿದರು.

೯. ಆ ನೂರು ಮಂದಿ ಪುತ್ರರಲ್ಲಿ ವಿಕುಕ್ಷಿ, ನಿಮಿ ಮತ್ತು ದಂಡ ಎಂಬುವರು ಮೂರು ಮಂದಿ ಪುತ್ರರು ಜ್ಯೇಷ್ಠರಾಗಿದ್ದರು. ವಿಕುಕ್ಷಿ ಎಂಬುವನಿಗೆ ಶಕುನಿ ಮುಂತಾದ ಐವತ್ತು ಮಂದಿ ಪುತ್ರರು ಜನಿಸಿದರು.

ಉತ್ತರಾಪಥದೇಶಸ್ಯ ರಕ್ಷಿತಾರೋ ಮಹೀಕ್ಷಿತಃ ।
ಚತ್ವಾರಿಂಶತ್ತಥಾಷ್ಟೌ ಚ ದಕ್ಷಿಣಸ್ಯಾಂ ತು ವೈ ದಿಶಿ ॥ ೧೦ ॥

ವಿರಾಟಪ್ರಮುಖಾಸ್ತೇ ಚ ದಕ್ಷಿಣಾಪಥರಕ್ಷಿಣಃ ।
ಇಕ್ಷ್ವಾಕುಸ್ತು ವಿಕುಕ್ಷಿಂ ವೈ ಅಷ್ಟಕಾಯಾಮಥಾದಿಶತ್ ॥ ೧೧ ॥

ರಾಜೋವಾಚ :—
ಮಾಂಸಮಾನಯ ಶ್ರಾದ್ಧೇ ತ್ವಂ ಮೃಗಾನ್ ಹತ್ವಾ ಮಹಾಬಲ ।
ಶ್ರಾದ್ಧಂ ಮಮ ತು ಕರ್ತವ್ಯಮಷ್ಟಕಾನಾಂ ನ ಸಂಶಯಃ ॥ ೧೨ ॥

ಸ ಗತೋ ಮೃಗಯಾಂ ಚೈವ ವಚನಾತ್ತಸ್ಯ ಧೀಮತಃ ।
ಮೃಗಾನ್ ಸಹಸ್ರಕಾನ್ ಹತ್ವಾ ಪರಿಶ್ರಾಂತಶ್ಚ ವೀರ್ಯವಾನ್ ॥ ೧೩ ॥

ಭಕ್ಷಯಚ್ಛಶಕಂ ತತ್ರ ವಿಕುಕ್ಷಿರ್ಮೃಗಯಾಂ ಗತಃ ।
ಆಗತೇ ಹಿ ವಿಕುಕ್ಷೌ ತು ಸಮಾಂಸೇ ಸಹಸೈನಿಕೇ ॥ ೧೪ ॥

---

೧೦. ಶಕುನಿ ಮುಂತಾದ ಪುತ್ರರು ಭೂಮಿಯ ಉತ್ತರ ಭಾಗದ ದೇಶವನ್ನು ರಕ್ಷಿಸುವ ರಾಜರಾಗಿದ್ದರು. ಮತ್ತು ಬೇರೆ ನಲವತ್ತೆಂಟು ಮಂದಿ ಪುತ್ರರು ದಕ್ಷಿಣ ದಿಕ್ಕಿನಲ್ಲಿರುವ ದೇಶಗಳ ರಕ್ಷಕರಾದರು.

೧೧. ವಿರಾಟ ಮುಂತಾದ ಆ ನಲವನ್ನೆಂಟು ಮಂದಿಯು ದಕ್ಷಿಣಾಪಥಭಾಗಕ್ಕೆ ರಕ್ಷಕರಾದ ರಾಜರಾಗಿದ್ದರು, ಇಕ್ಷ್ವಾಕು ರಾಜನು ವಿಕುಕ್ಷಿ ಎಂಬ ಪುತ್ರನನ್ನು ಪಿತೃ ದೇವತೆಗಳನ್ನುದ್ದೇಶಿಸಿ ಮಾಡಬೇಕಾದ ಅಷ್ಟಕಾಶ್ರಾದ್ಧದ ಹವಿಸ್ಸನ್ನು ಸಂಪಾದಿಸು ವಂತೆ ಆಜ್ಞಾಪಿಸಿದನು.

೧೨. ರಾಜನು ಈ ರೀತಿಯಾಗಿ ಹೇಳಿದನು : —ಮಹಾಬಲಿಷ್ಠನಾದ ಪುತ್ರನೆ! ನೀನು ಮೃಗಗಳನ್ನು ಕೊಂದು ಅಷ್ಟಕಾಶ್ರಾದ್ಧಾರ್ಹವಾದ ಮಾಂಸವನ್ನು ತೆಗೆದು ಕೊಂಡು ಬಾ, ಆ ಮಾಂಸದಿಂದ ನನ್ನ ಶ್ರಾದ್ಧ ಕರ್ಮವನ್ನು ಪೂರ್ತಿಗೊಳಿಸಬೇಕು. ಇದರಲ್ಲಿ ಸಂದೇಹ ಪಡಬಾರದು.

೧೩. ಆ ವಿಕುಕ್ಷಿಯು ಜ್ಞಾನಿಯಾದ ಇಕ್ಷ್ವಾಕು ರಾಜನ ಆದೇಶದಂತೆ ಬೇಟೆ ಯಾಡುತ್ತ ಸಾವಿರಾರು ಮೃಗಗಳನ್ನು ಕೊಂದನು. ಮತ್ತು ಮೃಗ ಬೇಟೆಯಿಂದ ಸ್ವಲ್ಪ ಆಯಾಸಗೊಂಡವನಾದನು.

೧೪. ಮೃಗಬೇಟೆಗೆ ಹೋಗಿದ್ದ ವಿಕುಕ್ಷಿಯು ತನ್ನ ಆಯಾಸದ ಶಾಂತಿಗೆ ಒಂದು ಮೊಲ ಪ್ರಾಣಿಯನ್ನು ತಿಂದನು. ತರುವಾಯ ಸೈನಿಕರೊಡನೆ ಮಾಂಸವನ್ನು ತೆಗೆದುಕೊಂಡು ಹಿಂತಿರುಗಿ ಬಂದನು.

ವಸಿಷ್ಠಂ ಚೋದಯಾಮಾಸ ಮಾಂಸಂ ಪ್ರೋಕ್ಷಯತಾಮಿತಿ ।
ತಥೇತಿ ಚೋದಿತೋ ರಾಜ್ಞಾ ವಿಧಿವತ್ತದುಪಸ್ಥಿತಮ್ ॥ ೧೫ ॥

ಸ ದೃಷ್ಟ್ವೋಪಹತಂ ಮಾಂಸಂ ಕ್ರುದ್ಧೋ ರಾಜಾನಮಬ್ರವೀತ್ ।
ಅನೇನೋಪಹತಂ ಮಾಂಸಂ ಪುತ್ರೇಣ ತವ ಪಾರ್ಥಿವ ॥ ೧೬ ॥

ಶಶಭಕ್ಷಾದದುಷ್ಟಂ ವೈ ನೈವ ಮಾಂಸಂ ಮಹಾದ್ಯುತೇ ।
ಶಶೋ ದುರಾತ್ಮನಾ ಪೂರ್ವಮಮುನಾ ಭಕ್ಷಿತೋಽನಘ ॥ ೧೭ ॥

ತೇನ ಮಾಂಸಮಿದಂ ದುಷ್ಟಂ ಪಿತೄಣಾಂ ನೃಪಸತ್ತಮ ।
ಇಕ್ಷ್ವಾಕುಸ್ತು ತತಃ ಕ್ರುದ್ಧೋ ವಿಕುಕ್ಷಿಮಿದಮಬ್ರವೀತ್ ॥ ೧೮ ॥

ಪಿತೃಕರ್ಮಣಿ ನಿರ್ದಿಷ್ಟೋ ಮಯಾ ಚ ಮೃಗಯಾಂ ಗತಃ ।
ಶಶಂ ಭಕ್ಷಯಸೇಽರಣ್ಯೇ ನಿರ್ಘೃಣಃ ಪೂರ್ವಮದ್ಯ ತು ॥ ೧೯ ॥

---

೧೫. ಆಗ ರಾಜನು ವಸಿಷ್ಠ ಮುನಿಯನ್ನು ಕುರಿತು ಈ ಮಾಂಸವನ್ನು ಪ್ರೋಕ್ಷಣ ಮಾಡಬೇಕೆಂದು ಪ್ರೇರೇಪಿಸಿದನು. ರಾಜನಿಂದ ಪ್ರೇರೇಪಿಸಲ್ಪಟ್ಟ ಆ ಮುನಿಯು ಹಾಗೆ ಆಗಲಿ ಎಂದು ಹೇಳಿ ವಿಧಿಪೂರ್ವಕವಾಗಿ ಇರಿಸಿದ ಮಾಂಸವನ್ನು ನೋಡಿದನು.

೧೬. ಸ್ವಲ್ಪ ಭಾಗ ತಿಂದು ಮಿಕ್ಕಿರುವ ಆ ಮಾಂಸವು ದುಷ್ಟವಾದುದನ್ನು ಮುನಿಯು ಕಂಡು ಕೋಪಗೊಂಡವನಾಗಿ ರಾಜನನ್ನು ಕುರಿತು ಹೀಗೆ ಹೇಳಿದನು, ರಾಜನೆ! ಈ ನಿನ್ನ ಪುತ್ರನಿಂದ ಮಾಂಸವು ಕೆಡಿಸಲ್ಪಟ್ಟಿರುವುದು.

೧೭. ಮಹಾಕಾಂತಿಯುಳ್ಳವನೂ ನಿಷ್ಕಲಂಕನೂ ಆದ ರಾಜನೆ! ಈ ಮಾಂಸದಲ್ಲಿ ಒಂದು ಮೊಲದ ಮಾಂಸದ ಭಾಗವನ್ನು ಉಪಯೋಗಿಸಿದುದರಿಂದ ಈ ಮಾಂಸವು ನಿರ್ದುಷ್ಟವಾಗಿಲ್ಲ, ದುರುಳನಾದ ವಿಕುಕ್ಷಿಯಿಂದ ಮೊದಲು ಮೊಲವು ಭಕ್ಷಿಸಲ್ಪಟ್ಟಿದೆ.

೧೮. ರಾಜಶ್ರೇಷ್ಠನೆ! ಆದುದರಿಂದ ಈ ಮಾಂಸವು ಪಿತೃಗಳಿಗೆ ನಿವೇದನ ಮಾಡಲು ಅರ್ಹವಾಗದೆ ದುಷ್ಟವಾಗಿರುವುದು. ಆಗ ಇಕ್ಷ್ವಾಕುರಾಜನು ಕೋಪಗೊಂಡವನಾಗಿ ವಿಕುಕ್ಷಿಯನ್ನು ಕುರಿತು ಹೀಗೆ ಹೇಳಿದನು.

೧೯. ನನ್ನಿಂದ ಆಜ್ಞಪ್ತನಾಗಿರುವ ನೀನು ಅರಣ್ಯಕ್ಕೆ ಹೋಗಿ ಮೃಗಬೇಟೆಯನ್ನು ಆಡಿ ನಿರ್ಘೃಣತೆಯಿಂದ ಆ ಮಾಂಸರಾಶಿಯಲ್ಲಿ ಈಗ ಮೊದಲು ಮೊಲವನ್ನು ಭಕ್ಷಣಮಾಡಿರುತ್ತೀ.

**ತಸ್ಮಾತ್ಪರಿತ್ಯಜಾಮಿ ತ್ವಾಂ ಗಚ್ಛ ತ್ವಂ ಸ್ವೇನ ಕರ್ಮಣಾ ।**
**ಏವಮಿಕ್ಷ್ವಾಕುಣಾ ತ್ಯಕ್ತೋ ವಸಿಷ್ಠವಚನಾತ್ ಸುತಃ ॥ ೨೦ ॥**

**ಇಕ್ಷ್ವಾಕೌ ಸಂಸ್ಥಿತೇ ತಸ್ಮಿನ್ ಶಶಾದಃ ಪೃಥಿವೀಮಿಮಾಮ್ ।**
**ಪ್ರಾಪ್ತಃ ಪರಮಧರ್ಮಾತ್ಮಾ ಸ ಚಾಯೋಧ್ಯಾಧಿಪೋಽಭವತ್ ॥ ೨೧ ॥**

**ತದಾಕರೋತ್ ಸ ರಾಜ್ಯಂ ವೈ ವಸಿಷ್ಠಪರಿನೋದಿತಃ ।**
**ತತಸ್ತೇನೈನಸಾ ಪೂರ್ಣೋ ರಾಜ್ಯಾವಸ್ಥೋ ಮಹೀಪತಿಃ ॥ ೨೨ ॥**

**ಕಾಲೇನ ಗತವಾನ್ ಸೋಽಥ ಶಕೃನ್ಮೂತ್ರತರಂಗಿತಮ್ ।**
**ಜ್ಞಾತ್ವೈವಮೇತದಾಖ್ಯಾನಂ ನಾವಿಧಿರ್ಭಕ್ಷಯೇದ್ಬುಧಃ ॥ ೨೩ ॥**

**ಮಾಂ ಸ ಭಕ್ಷಯಿತಾಮುತ್ರ ಯಸ್ಯ ಮಾಂಸಮಿಹಾದ್ಮ್ಯಹಮ್ ।**
**ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ ॥ ೨೪ ॥**

---

೨೦. ಆದ್ದರಿಂದ ನಿನ್ನ ಈ ದುಷ್ಕರ್ಮದಿಂದ ನಿನ್ನನ್ನು ತ್ಯಜಿಸಿದ್ದೇನೆ. ನೀನು ಹೊರಟುಹೋಗು. ಹೀಗೆಂದು ಹೇಳಿ ವಸಿಷ್ಠಮುನಿಯು ವಚನದಂತೆ ರಾಜನಿಂದ ತನ್ನ ಪುತ್ರನಾದ ವಿಕುಕ್ಷಿಯು ತ್ಯಜಿಸಲ್ಪಟ್ಟನು.

೨೧. ಆದರೆ ಆ ಇಕ್ಷ್ವಾಕುರಾಜನು ಮರಣಹೊಂದಲು ಶಶಾದನಾದ ವಿಕುಕ್ಷಿ ರಾಜನು ಮತ್ತೆ ಈ ಪೃಥಿವಿಯನ್ನು ಹೊಂದಿ ಪರಮ ಧಾರ್ಮಿಕನಾಗಿ ಅಯೋಧ್ಯಾ ನಗರಕ್ಕೆ ಅಧಿಪತಿಯಾದನು.

೨೨. ಆಗ ವಸಿಷ್ಠಮುನಿಯಿಂದ ಪ್ರೇರೇಪಿಸಲ್ಪಟ್ಟವನಾಗಿ ಆ ರಾಜನು ರಾಜ್ಯವನ್ನು ಆಳಿದನು. ತರುವಾಯ ಆ ಪಾತಕದಿಂದ ಪೂರ್ಣನಾದ ರಾಜನು ರಾಜ್ಯಶಾಸನಾಧಿಕಾರವನ್ನು ಹೊಂದಿದನು.

೨೩. ಹೀಗೆ ಕೆಲವುಕಾಲ ಕಳೆದುಹೋಗಲು ಆ ರಾಜನು ಪಾಪಕರ್ಮಪರಿಣಾಮದಿಂದ ಮೂತ್ರ-ಪುರೀಷಗಳ ರಾಶಿಯ ಅವಸ್ಥೆಯನ್ನು ಹೊಂದಿದನು. ಆದ್ದರಿಂದ ಈ ಆಖ್ಯಾನವನ್ನು ತಿಳಿದು ಜ್ಞಾನಿಯಾದ ಮಾನವನು ಮಾಂಸವನ್ನು ಭಕ್ಷಿಸಬಾರದು.

೨೪. ವಿದ್ವಾಂಸರು ಮಾಂಸಶಬ್ದದ ವಿವರಣೆಯಿಂದ ಅದರ ಭಕ್ಷಣವು ಪಾತಕವೆಂದು ಹೇಳಿರುವರು. ಮಾಂಸ ಶಬ್ದದಲ್ಲಿ 'ಮಾಂ-ಸ' ಎಂದು ಎರಡು ಅಂಶಗಳಿವೆ, ಯಾವ ಪ್ರಾಣಿಯ ಮಾಂಸವನ್ನು ಈಗ ನಾನು ತಿನ್ನುತ್ತಿರುವೆನೋ, ಆ ಪ್ರಾಣಿಯು ಪರಲೋಕದಲ್ಲಿ ನನ್ನನ್ನು ತಿನ್ನುವುದು ಎಂಬುದು ಆ ಪದಗಳ ಅರ್ಥವು.

ಶಶಾದಸ್ಯತು ದಾಯಾದಃ ಕಕುತ್ಸ್ಥೋ ನಾಮ ವೀರ್ಯವಾನ್ ।
ಇಂದ್ರಸ್ಯ ವೃಷಭೂತಸ್ಯ ಕಕುತ್ಸ್ಥೋ ಜಯತೇ ಪುರಾ ॥ ೨೫ ॥

ಪೂರ್ವಮಾಡೀಬಕೇ ಯುದ್ಧೇ ಕಕುತ್ಸ್ಥಸ್ತೇನ ಸ ಸ್ಮೃತಃ ।
ಅನೇನಾಸ್ತು ಕಕುತ್ಸ್ಥಸ್ಯ ಪೃಥುಶ್ಚಾನೇನಸಃ ಸ್ಮೃತಃ ॥ ೨೬ ॥

ದೃಷದಶ್ವಃ ಪೃಥೋಃ ಪುತ್ರಸ್ತಸ್ಮಾದಂಧ್ರಸ್ತು ವೀರ್ಯವಾನ್ ।
ಅಂಧ್ರಾತ್ತು ಯುವನಾಶ್ವಸ್ತು ಶ್ರಾವಸ್ತಸ್ತಸ್ಯ ಚಾತ್ಮಜಃ ॥ ೨೭ ॥

ಜಜ್ಞೇ ಶ್ರಾವಸ್ತಕೋ ರಾಜಾ ಶ್ರಾವಸ್ತೀ ಯೇನ ನಿರ್ಮಿತಾ ।
ಶ್ರಾವಸ್ತಸ್ಯ ತು ದಾಯಾದೋ ಬೃಹದಶ್ವೋ ಮಹಾಯಶಾಃ ॥ ೨೮ ॥

ಬೃಹದಶ್ವಸುತಶ್ಚಾಪಿ ಕುವಲಾಶ್ವ ಇತಿ ಶ್ರುತಃ ।
ಯಸ್ತು ಧುಂಧುವಧಾದ್ರಾಜಾ ಧುಂಧುಮಾರತ್ವಮಾಗತಃ ॥ ೨೯ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಿಷಷ್ಟಿತಮೋಽಧ್ಯಾಯಃ

---

೨೫. ಶಶಾದನಿಗೆ ಕಕುತ್ಸ್ಥನೆಂಬುವನು ವೀರ್ಯಶಾಲಿಯಾದ ಪುತ್ರನಾಗಿ ನಾಗಿದ್ದನು. ಅವನು ಪೂರ್ವದಲ್ಲಿ ಎತ್ತಿನ ರೂಪವಾಗಿ ಬಂದ ಇಂದ್ರನ ಭುಜದಲ್ಲಿ ಕುಳಿತು ಜಯಶಾಲಿಯಾಗಿದ್ದನು.

೨೬. ಹಿಂದೆ ನಡೆದ ಆಡೀಬಕವೆಂಬ ಯುದ್ಧದಲ್ಲಿ ಎತ್ತಿನ ಭುಜದಲ್ಲಿ ಕುಳಿತು ಜಯಹೊಂದಿದ್ದರಿಂದ ಕುಕುತ್ಸ್ಥ ಎಂಬ ಅನ್ವರ್ಥನಾಮಾಂಕಿತನಾಗಿರುವನು. ಕಕುತ್ಸ್ಥರಾಜನಿಗೆ ಅನೇನಾ ಎಂಬ ಪುತ್ರನೂ ಅನೇನ ಎಂಬುವನಿಗೆ ಪೃಥು ಎಂಬ ಪುತ್ರನೂ ಇದ್ದರು.

೨೭. ಪೃಥುರಾಜನಿಗೆ ದೃಷದಶ್ವ ಎಂಬುವನೂ, ದೃಷದಶ್ವನಿಗೆ ಅಂಧ್ರ ಎಂಬುವನೂ, ಅಂಧ್ರರಾಜನಿಗೆ ಯುವನಾಶ್ವ ಎಂಬುವನೂ ಮತ್ತು ಯುವನಾಶ್ವನಿಗೆ ಶ್ರಾವಸ್ತ ಎಂಬುವನೂ ಪುತ್ರನಾಗಿದ್ದರು.

೨೮. ಶ್ರಾವಸ್ತ ಎಂಬುವನು ಶ್ರಾವಸ್ತಿ ಎಂಬ ನಗರಿಯನ್ನು ನಿರ್ಮಿಸಿ ರಾಜನಾಗಿ ಆಳಿದನು. ಆ ಶ್ರಾವಸ್ತನಿಗೆ ಮಹಾಕೀರ್ತಿಶಾಲಿಯಾದ ಬೃಹದಶ್ವನೆಂಬ ಪುತ್ರನಿದ್ದನು.

೨೯. ಬೃಹದಶ್ವರಾಜನಿಗೆ ಕುವಲಾಶ್ವ ಎಂಬ ಪುತ್ರನು ಪ್ರಸಿದ್ಧನಾಗಿದ್ದನು. ಆ ಕುವಲಾಶ್ವರಾಜನು ಧುಂಧು ಎಂಬ ರಾಕ್ಷಸನನ್ನು ವಧಿಸಿದ್ದರಿಂದ ಧುಂಧುಮಾರ ಎಂಬ ಸಂಜ್ಞೆಯನ್ನು ಹೊಂದಿದನು.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೆರಡನೆಯ ಅಧ್ಯಾಯವು ಸಮಾಪ್ತವು.

# ತ್ರಿಷಷ್ಟಿತಮೋಽಧ್ಯಾಯಃ

ಋಷಯ ಊಚುಃ :—

ಧುಂಧೋರ್ವಧಂ ಮಹಾಪ್ರಾಜ್ಞ ಶ್ರೋತುಮಿಚ್ಛಾಮಿ ವಿಸ್ತರಾತ್ ।
ಯದರ್ಥಂ ಕುವಲಾಶ್ವಸ್ಯ ಧುಂಧುಮಾರತ್ವಮಾಗತಮ್ ॥ ೧ ॥

ಸೂತ ಉವಾಚ :—

ಕುವಲಾಶ್ವಸ್ಯ ಪುತ್ರಾಣಾಂ ಸಹಸ್ರಾಣ್ಯೇಕವಿಂಶತಿಃ ।
ಸರ್ವೇ ವಿದ್ಯಾಸು ನಿಷ್ಣಾತಾ ಬಲವಂತೋ ದುರಾಸದಾಃ ॥ ೨ ॥

ಬಭೂವುರ್ಧಾರ್ಮಿಕಾಃ ಸರ್ವೇ ಯಜ್ವಾನೋ ಭೂರಿದಕ್ಷಿಣಾಃ ।
ಕುವಲಾಶ್ವಂ ಮಹಾವೀರ್ಯಂ ಶೂರಮುತ್ತಮಧಾರ್ಮಿಕಮ್ ॥ ೩ ॥

ಬೃಹದಶ್ವೋ ಹ್ಯಭ್ಯಷಿಂಚತ್ತಸ್ಮಿನ್ ರಾಜ್ಯೇ ನರಾಧಿಪಃ ।
ಪುತ್ರಸಂಕ್ರಾಮಿತಶ್ರೀಸ್ತು ವನಂ ರಾಜಾ ವಿವೇಶ ಹ ॥ ೪ ॥

---

೧. ಋಷಿಗಳು ಇಂತೆಂದರು :—ಮಹಾ ಪ್ರಾಜ್ಞನಾದ ಸೂತಮುನಿಯೆ ! ಧುಂಧು ರಾಕ್ಷಸನ ವಧದ ಚರಿತ್ರೆಯನ್ನು ವಿಸ್ತಾರವಾಗಿ ಕೇಳಲು ಕುತೂಹಲಪಡುತ್ತೇವೆ. ಕುವಲಾಶ್ವನಿಗೆ ಆ ರಾಕ್ಷಸನ ವಧದಿಂದ ಧುಂಧುಮಾರ ಸಂಜ್ಞೆಯು ಬಂದಿರುದಲ್ಲವೆ.

೨. ಸೂತಮುನಿಯು ಇಂತೆಂದನು :—ಕುವಲಾಶ್ವನಿಗೆ ಇಪ್ಪತ್ತೊಂದು ಸಹಸ್ರ ಮಂದಿ ಪುತ್ರರಿದ್ದರು, ಅವರೆಲ್ಲರೂ ವಿದ್ಯೆಗಳಲ್ಲಿ ನಿಷ್ಣಾತರೂ ಮಹಾ ಬುದ್ಧಿಶಾಲಿಗಳೂ ಮತ್ತು ಪರರಿಂದ ಜಯಿಸಲಾಗದವರೂ ಆಗಿದ್ದರು.

೩. ಮತ್ತು ಸಮಸ್ತ ಪುತ್ರರು ಅತಿ ಧಾರ್ಮಿಕರೂ, ಯಜ್ಞಕರ್ಮಾನುಷ್ಠಾನವಂತರೂ ಮತ್ತು ಅತಿಶಯವಾದ ದಕ್ಷಿಣಾದಾನಮಾಡುವವರೂ ಆಗಿದ್ದರು. ಕುವಲಾಶ್ವರಾಜನು ಮಹಾ ವೀರ್ಯವಂತನೂ, ಶೂರನೂ, ಮತ್ತು ಧಾರ್ಮಿಕೋತ್ತಮನೂ ಆಗಿದ್ದನು.

೪. ತಂದೆಯಾದ ಬೃಹದಶ್ವರಾಜನು ಇಂತಹ ಗುಣಶಾಲಿಯಾದ ಕುವಲಾಶ್ವನನ್ನು ಆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ಇರಿಸಿದನು. ಮತ್ತು ಬೃಹದಶ್ವನು ತನ್ನ ರಾಜ್ಯಲಕ್ಷ್ಮಿಯನ್ನು ಪುತ್ರನಲ್ಲಿ ಇರಿಸಿ ತಾನು ವನಕ್ಕೆ ತೆರಳಿದನು.

ಬೃಹದಶ್ವಂ ಮಹಾರಾಜಂ ಶೂರಮುತ್ತಮಧಾರ್ಮಿಕಮ್ ।
ಪ್ರಯಾಸ್ಯಂತಮುತಂಕಸ್ತು ಬ್ರಹ್ಮರ್ಷಿಃ ಪ್ರತ್ಯವಾರಯತ್ ॥ ೫ ॥

ಉತ್ತಂಕ ಉವಾಚ :—

ಭವತಾ ರಕ್ಷಣಂ ಕಾರ್ಯಂ ತತ್ತಾವತ್ಕರ್ತುಮರ್ಹತಿ ।
ನಿರುದ್ವಿಗ್ನಸ್ತಪಶ್ಚರ್ತುಂ ನ ಹಿ ಶಕ್ನೋಷಿ ಪಾರ್ಥಿವ ॥ ೬ ॥

ಮಮಾಶ್ರಮಸಮೀಪೇಷು ಮೇರೋರ್ಹಿ ಪರಿತಸ್ತು ವೈ ।
ಸಮುದ್ರೋ ವಾಲುಕಾಪೂರ್ಣ ಸ್ತತ್ರ ತಿಷ್ಠತಿ ಭೂಪತೇ ॥ ೭ ॥

ದೇವತಾನಾಮವಧ್ಯಸ್ತು ಮಹಾಕಾಯೋ ಮಹಾಬಲಃ ।
ಅಂತರ್ಭೂಮಿಗತಸ್ತತ್ರವಾಲುಕಾಂತರ್ಹಿತೋ ಮಹಾನ್ ॥ ೮ ॥

ರಾಕ್ಷಸಸ್ಯ ಮಧೋಃ ಪುತ್ರೋ ಧುಂಧುರ್ನಾಮಮಹಾಸುರಃ ।
ಶೇತೇ ಲೋಕವಿನಾಶಾಯ ತಪ ಆಸ್ಥಾಯ ದಾರುಣಮ್ ॥ ೯ ॥

---

೫. ಹೀಗೆ ಶೂರನೂ, ಧಾರ್ಮಿಕೋತ್ತಮನೂ ಆದ ಬೃಹದಶ್ವಮಹಾರಾಜನು ವನಕ್ಕೆ ತೆರಳುವುದನ್ನು ಉತಂಕನೆಂಬ ಬ್ರಹ್ಮರ್ಷಿಯು ನಿವಾರಣ ಮಾಡುತ್ತ ಹೇಳಿದನು.

೬. ಉತ್ತಂಕನು ಇಂತೆಂದನು :—ರಾಜನೇ ! ನಿನ್ನಿಂದ ಸ್ವಧರ್ಮವಾದ ಭೂಮಿ ರಕ್ಷಣೆಯು ಕರ್ತವ್ಯವಾಗಿರುವುದು, ಅದನ್ನು ಮಾಡಲು ನೀನು ಅರ್ಹನಾಗಿದ್ದೀ. ಮನೋವ್ಯಾಕುಲತೆಯಿಲ್ಲದೆ ತಪಸ್ಸನ್ನು ಆಚರಿಸಲು ನೀನು ಶಕ್ತನಾಗಿಲ್ಲ.

೭. ರಾಜನೆ ! ಮೇರುಪರ್ವತದ ಸುತ್ತಲೂ ನನ್ನ ಆಶ್ರಮದ ಪ್ರಾಂತ ದೇಶದಲ್ಲಿ ಸಮುದ್ರವು ಮಳಲಿನಿಂದ ಪೂರ್ಣವಾಗಿರುವುದು.

೮. ಅಲ್ಲಿ ದೇವತೆಗಳಿಂದಲೂ ವಧಿಸಲಾಗದವನೂ, ಮಹಾಕಾಯನೂ, ಮಹಾಬಲಿಷ್ಠನೂ, ಆದ ಒಬ್ಬ ಮಹಾ ರಾಕ್ಷಸನು ಭೂಮಿಯ ಒಳಭಾಗದಲ್ಲಿ ಮಳಲಿನ ರಾಶಿಯಿಂದ ಅವಿತುಕೊಂಡಿರುವನು.

೯. ಆ ಮಹಾಸುರನು ಮಧು ಎಂಬ ರಾಕ್ಷಸನ ಪುತ್ರನೂ, ಧುಂಧು ಎಂಬ ನಾಮಾಂಕಿತನೂ ಆಗಿದ್ದಾನೆ, ಅವನು ಸಮಸ್ತ ಲೋಕವನ್ನು ಧ್ವಂಸಮಾಡಲು ಉಗ್ರವಾದ ತಪವನ್ನು ಆಚರಿಸುತ್ತಿರುವನು.

ಸಂವತ್ಸರಸ್ಯ ಪರ್ಯಂತೇ ಸ ನಿಶ್ವಾಸಂ ವಿಮುಂಚತಿ ।
ಯದಾ ಯದಾ ಮಹೀ ತತ್ರ ಚಲತಿ ಸ್ಮ ಸಕಾನನಾ ॥ ೧೦ ॥

ತಸ್ಯ ನಿಶ್ವಾಸವಾತೇನ ರಜ ಉದ್ಧೂಯತೇ ಮಹತ್ ।
ಆದಿತ್ಯಪಥಮಾವೃತ್ಯ ಸಪ್ತಾಹಂ ಭೂಮಿಕಂಪನಮ್ ॥ ೧೧ ॥

ಸವಿಸ್ಫುಲಿಂಗಂ ಸಜ್ವಾಲಂ ಸಧೂಮಮತಿದಾರುಣಮ್ ।
ತೇನ ರಾಜನ್ನ ಶಕ್ನೋಮಿ ತಸ್ಮಿನ್ ಸ್ಥಾತುಂ ಸ್ವ ಆಶ್ರಮೇ ॥ ೧೨ ॥

ತಂ ವಾರಯ ಮಹಾಬಾಹೋ ಲೋಕಾನಾಂ ಹಿತಕಾಮ್ಯಯಾ ।
ತೇಜಸ್ತೇ ಸುಮಹದ್ವಿಷ್ಣುಸ್ತೇಜಸಾಪ್ಯಾಯಯಿಷ್ಯತಿ ॥ ೧೩ ॥

ಲೋಕಾಃ ಸ್ವಸ್ಥಾ ಭವಂತ್ವದ್ಯ ತಸ್ಮಿನ್ ವಿನಿಹತೇಽಸುರೇ ।
ತ್ವಂ ಹಿ ತಸ್ಯ ವಧಾರ್ಥಾಯ ಸಮರ್ಥಃ ಪೃಥಿವೀಪತೇ ॥ ೧೪ ॥

---

೧೦. ಅವನು ಒಂದು ಸಂವತ್ಸರವು ಪೂರ್ಣವಾದಾಗ ಒಂದುಸಲ ಶ್ವಾಸವನ್ನು ಬಿಡುವನು. ಆಗ ಅನೇಕ ಅರಣ್ಯಗಳಿಂದ ಕೂಡಿದ ಭೂಮಿಯೆಲ್ಲವೂ ಆ ಶ್ವಾಸದಿಂದ ನಡುಗುವುದು.

೧೧. ಮತ್ತು ಆ ರಾಕ್ಷಸನ ಶ್ವಾಸವಾಯುವಿನಿಂದ ಹೆಚ್ಚಾಗಿ ಧೂಳಿರಾಶಿಯು ಮೇಲಕ್ಕೆ ಏಳುವುದು, ಆಗ ಸೂರ್ಯರಶ್ಮಿಯ ಮಾರ್ಗವು ಮುಚ್ಚಿ ಹೋಗಿ ಏಳು ದಿನಗಳವರೆಗೆ ಭೂಮಿಯು ಕಂಪಿಸುವುದು.

೧೨. ರಾಜನೆ! ಆಗ ಬೆಂಕಿಯ ಕಿಡಿಗಳು, ಜ್ವಾಲೆಗಳು, ಮತ್ತು ಹೊಗೆ ಇವುಗಳ ಜೊತೆಯಲ್ಲಿ ಅತಿ ಭಯಂಕರವಾಗಿ ಭೂಮಿಯು ಕಂಪಿಸುವುದರಿಂದ ನಾನು ಆ ನನ್ನ ಆಶ್ರಮದಲ್ಲಿ ಇರಲು ಆಗುವುದಿಲ್ಲ.

೧೩. ಮಹಾಬಾಹು ಬಲದಿಂದ ಪ್ರಕಾಶಿಸುವ ರಾಜನೆ! ಲೋಕಕ್ಕೆ ಹಿತವನ್ನು ಉಂಟುಮಾಡಬೇಕೆಂಬ ದೃಷ್ಟಿಯಿಂದ ಆ ರಾಕ್ಷಸನನ್ನು ನಿವಾರಣಮಾಡು, ಮಹಾವಿಷ್ಣುವು ವೈಷ್ಣವ ತೇಜಸ್ಸಿನಿಂದ ನಿನ್ನ ತೇಜಸ್ಸನ್ನು ವೃದ್ಧಿಗೊಳಿಸುವನು.

೧೪. ರಾಜನೆ! ಆ ಅಸುರನು ಸಂಹರಿಸಲ್ಪಟ್ಟವನಾಗಿ ಈಗ ಎಲ್ಲ ಲೋಕಗಳಿಗೂ ಸ್ವಸ್ಥತೆಯು ಉಂಟಾಗಲಿ. ಅಂತಹ ಮಹಾಸುರನನ್ನು ಸಂಹರಿಸಲು ನೀನು ಸಮರ್ಥನಾಗಿದ್ದೀಯೆ.

ವಿಷ್ಣುನಾ ಚ ವರೋ ದತ್ತೋ ಮಮ ಪೂರ್ವಂ ಯತೋಽನಘ ।
ನ ಹಿ ಧುಂಧುರ್ಮಹಾವೀರ್ಯಸ್ತೇಜಸಾಲ್ಪೇನ ಶಕ್ಯತೇ ॥ ೧೫ ॥

ನಿರ್ದಗ್ಧುಂ ಪೃಥಿವೀಪಾಲೈರಪಿವರ್ಷಶತೈರಪಿ ।
ವೀರ್ಯಂ ಹಿ ಸುಮಹತ್ತಸ್ಯದೇವೈರಪಿ ದುರಾಸದಮ್ ॥ ೧೬ ॥

ಏವಮುಕ್ತಸ್ತು ರಾಜರ್ಷಿರುತ್ತಂಕೇನ ಮಹಾತ್ಮನಾ ।
ಕುವಲಾಶ್ವಂ ತು ತಂ ಪ್ರಾದಾತ್ತಸ್ಮಿನ್ ಧುಂಧುನಿವಾರಣೇ ॥ ೧೭ ॥

ಭಗವನ್ನ್ಯಸ್ತಶಸ್ತ್ರೋಽಹ ಮಯಂ ತು ತನಯೋ ಮಮ ।
ಭವಿಷ್ಯತಿ ದ್ವಿಜಶ್ರೇಷ್ಠ ಧುಂಧುಮಾರೋ ನ ಸಂಶಯಃ ॥ ೧೮ ॥

ಸ ತಮಾದಿಶ್ಯ ತನಯಂ ಧುಂಧುಮಾರಣಮುಚ್ಯುತಮ್ ।
ಜಗಾಮ ಸ ವನಾಯೈವ ತಪಸೇ ಶಂಸಿತವ್ರತಃ ॥ ೧೯ ॥

---

೧೫. ನಿಷ್ಕಲಂಕನಾದ ರಾಜನೆ! ಮಹಾ ವಿಷ್ಣುವಿನಿಂದ ಪೂರ್ವದಲ್ಲಿ ನನಗೆ ಈ ವರವು ಕೊಡಲ್ಪಟ್ಟಿದೆ. ಮಹಾ ವೀರ್ಯಮತ್ತನಾದ ಧುಂಧುರಾಕ್ಷಸನು ಅಲ್ಪವಾದ ಬಲದಿಂದ ಜಯಿಸಲ್ಪಡುವುದಿಲ್ಲ.

೧೬. ಅನೇಕ ರಾಜಾಧಿ ರಾಜರು ನೂರಾರು ವರ್ಷಗಳವರೆಗೆ ಯತ್ನಿಸಿದರೂ ಈ ಅಸುರನನ್ನು ಸಂಹರಿಸಲಾರರು. ಆ ಅಸುರನ ವೀರ್ಯವು ದೇವತೆಗಳಿಂದಲೂ ಉಲ್ಲಂಘಿಸಲಾರದಷ್ಟು ಮಹತ್ತಾಗಿರುವುದು.

೧೭. ಮಹಾತ್ಮನಾದ ಉತ್ತಂಕ ಋಷಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ಬೃಹದಶ್ವ ರಾಜರ್ಷಿಯು ಧಂಧುರಾಕ್ಷಸನನ್ನು ನಿವಾರಿಸುವ ಕರ್ತವ್ಯದಲ್ಲಿ ತನ್ನ ಪುತ್ರನಾದ ಕುವಲಾಶ್ವನನ್ನು ನಿಯೋಜನಮಾಡಿದನು.

೧೮. ಪೂಜ್ಯನೆ! ನಾನು ಶಸ್ತ್ರ ಸನ್ನ್ಯಾಸವನ್ನು ಮಾಡಿರುವೆನು ಬ್ರಾಹ್ಮಣೋತ್ತಮನೆ! ನನ್ನ ಪುತ್ರನಾದ ಕುವಲಾಶ್ವನು ಧುಂಧುರಾಕ್ಷಸನ ಮಾರಕನಾಗುವನು, ಇದರಲ್ಲಿ ಸಂದೇಹವಿಲ್ಲ.

೧೯. ನಿಸ್ಸಂಶಯವಾಗಿ ಧುಂಧುರಾಕ್ಷಸನನ್ನು ಸಂಹರಿಸಲು ದಕ್ಷನಾದ ತನ್ನ ಪುತ್ರನನ್ನು ರಾಕ್ಷಸವಧ ಕರ್ಮದಲ್ಲಿ ಆಜ್ಞಾಪಿಸಿ ಶ್ಲಾಘ್ಯವಾದ ವ್ರತಾಚರಣೆಯುಳ್ಳ ಜನಕನು ತಪಶ್ಚರ್ಯೆಗೆ ವನಕ್ಕೆ ಹೊರಟು ಹೋದನು.

ಕುವಲಾಶ್ವಸ್ತು ಧರ್ಮಾತ್ಮಾ ಪಿತುರ್ವಚನಮಾಶ್ರಿತಃ ।
ಸಹಸ್ರೈರೇಕವಿಂಶತ್ಯಾ ಪುತ್ರಾಣಾಂ ಸಹಪಾರ್ಥಿವಃ ॥ ೨೦ ॥

ಪ್ರಾಯಾದುತ್ತಂಕಸಹಿತೋ ಧುಂಧೋಸ್ತಸ್ಯ ನಿವಾರಣೇ ।
ತಮಾವಿಶತ್ತತೋ ವಿಷ್ಣುರ್ಭಗವಾನ್ ಸ್ವೇನ ತೇಜಸಾ ॥ ೨೧ ॥

ಉತ್ತಂಕಸ್ಯ ನಿಯೋಗಾತ್ತು ಲೋಕಾನಾಂ ಹಿತಕಾಮ್ಯಯಾ ।
ತಸ್ಮಿನ್ ಪ್ರಯಾತೇ ದುರ್ಧರ್ಷೇ ದಿವಿ ಶಬ್ದೋ ಮಹಾನಭೂತ್ ॥ ೨೨ ॥

ಅದ್ಯ ಪ್ರಭೃತ್ಯೇಷ ನೃಪೋ ಧುಂಧುಮಾರೋ ಭವಿಷ್ಯತಿ ।
ದಿವ್ಯೈಃ ಪುಷ್ಪೈಶ್ಚ ತಂ ದೇವಾಃ ಸಮಂತಾತ್ ಸಮವಾಕಿರನ್ ॥ ೨೩ ॥

ದೇವದುಂದುಭಯಶ್ಚೈವ ಪ್ರಣೇದುರ್ಹಿ ತದಾ ಭೃಶಮ್ ।
ಸ ಗತ್ವಾ ಪುರುಷವ್ಯಾಘ್ರಸ್ತನಯೈಃ ಸಹ ವೀರ್ಯವಾನ್ ॥ ೨೪ ॥

---

೨೦. ಧರ್ಮಾತ್ಮನಾದ ಕುವಲಾಶ್ವರಾಜನು ತಂದೆಯ ವಚನವನ್ನು ಅಂಗೀಕರಿಸಿ ಇಪ್ಪತ್ತೊಂದು ಸಹಸ್ರ ಪುತ್ರರಿಂದ ಕೂಡಿ ಆ ರಾಕ್ಷಸನನ್ನು ಸಂಹರಿಸಲು ಯತ್ನ ಮಾಡಿದನು.

೨೧. ಕುವಲಾಶ್ವನು ಆ ಧುಂಧುರಾಕ್ಷಸನನ್ನು ನಿರ್ಮೂಲಮಾಡಲು ಉತ್ತಂಕ ವಿಪ್ರನ ಸಂಗಡ ಪ್ರಯಾಣ ಮಾಡಿದನು, ಆಗ ಪೂಜ್ಯನಾದ ವಿಷ್ಣುಪರಮಾತ್ಮನು ತನ್ನ ತೇಜಸ್ಸಿನಿಂದ ಕುವಲಾಶ್ವನನ್ನು ಪ್ರವೇಶ ಮಾಡಿದನು.

೨೨. ಆ ಕುವಲಾಶ್ವರಾಜನು ಉತ್ತಂಕ ಮುನಿಯ ಆದೇಶದಿಂದಲೂ ಲೋಕಗಳಿಗೆ ಹಿತವನ್ನು ಉಂಟುಮಾಡಬೇಕೆಂಬ ಕುತೂಹಲದಿಂದಲೂ ಸಮರಕ್ಕೆ ಹೊರಟು ಹೋಗಲಾಗಿ ಆಕಾಶದಲ್ಲಿ ಮಹತ್ತಾದ ಶಬ್ದವು ಉಂಟಾಯಿತು.

೨೩. ಈ ದಿನದ ಮೊದಲುಗೊಂಡು ಈ ಕುವಲಾಶ್ವರಾಜನು ಧುಂಧುರಾಕ್ಷಸನನ್ನು ಕೊಂದು ತನ್ಮೂಲಕವಾಗಿ ಧುಂಧುಮಾರನೆಂಬ ಪ್ರಶಸ್ತಿಯನ್ನು ಹೊಂದುವನು. ಆಗ ದೇವತೆಗಳು ದಿವ್ಯವಾದ ಪುಷ್ಪರಾಶಿಯಿಂದ ರಾಜನ ಮೇಲೆ ಪುಷ್ಪವೃಷ್ಟಿಯನ್ನು ಕರೆದರು.

೨೪. ಮತ್ತು ಆಗ ದೇವಲೋಕದ ದುಂದುಭಿವಾದ್ಯಗಳು ಹೆಚ್ಚಾಗಿ ಭೋರ್ಗರೆದುವು. ಇಂತಹ ಸಮಯದಲ್ಲಿ ತನ್ನ ಪುತ್ರರೊಡನೆ ವೀರ್ಯಶಾಲಿಯಾದ ಕುವಲಾಶ್ವ ರಾಜನು ಅಸುರ ವಿಜಯಕ್ಕೆ ತೆರಳಿದನು.

ಸಮುದ್ರಂ ಖಾನಯಾಮಾಸ ವಾಲುಕಾಪೂರ್ಣಮವ್ಯಯಮ್ ।
ತಸ್ಯ ಪುತ್ರೈಃ ಖನದ್ಭಿಶ್ಚ ವಾಲುಕಾಂತರ್ಹಿತಸ್ತದಾ ॥ ೨೫ ॥

ಧುಂಧುರಾಸಾದಿತಸ್ತತ್ರ ದಿಶಮಾಶ್ರಿತ್ಯ ಪಶ್ಚಿಮಾಮ್ ।
ಮುಖಜೇನಾಗ್ನಿನಾ ಕ್ರುದ್ಧೋ ಲೋಕಾನುದ್ವರ್ತಯನ್ನಿವ ॥ ೨೬ ॥

ವಾರಿ ಸುಸ್ರಾವ ಯೋಗೇನ ಮಹೋದಧಿರಿವೋದಯೇ ।
ಸೋಮಸ್ಯ ಸೋಽಸುರಶ್ರೇಷ್ಠೋ ಧರೋರ್ಮಿಕಲಿಲೋ ಮಹಾನ್ ॥ ೨೭ ॥

ತಸ್ಯ ಪುತ್ರಾಸ್ತು ನಿರ್ದಗ್ಧಾಸ್ತ್ರಯ ಉರ್ವರಿತಾ ಮೃಧೇ ।
ತತಃ ಸ ರಾಜಾತಿಬಲೋ ರಾಕ್ಷಸಂ ತಂ ಮಹಾಬಲಮ್ ॥ ೨೮ ॥

ಆಸಸಾದ ಮಹಾತೇಜಾ ಧುಂಧುಂ ಬಂಧುನಿಬರ್ಹಣಮ್ ।
ತಸ್ಯ ವಾರಿಮಯಂ ವೇಗಮಪಿ ವತ್ಸನರಾಧಿಪಃ ॥ ೨೯ ॥

---

೨೫. ಸಮುದ್ರ ಪ್ರದೇಶಕ್ಕೆ ಹೋಗಿ ಮಳಲಿನಿಂದ ಮುಚ್ಚಿ ಹೋದ ಅಪಾರವಾದ ಸಮುದ್ರವನ್ನು ಅಗೆಸಿದನು, ಮಳಲಿನ ರಾಶಿಯಲ್ಲಿ ಅವಿತುಕೊಂಡಿರುವ ರಾಕ್ಷಸನು ಸಿಕ್ಕುವವರೆಗೆ ಆ ರಾಜನ ಪುತ್ರರು ಸಮುದ್ರವನ್ನು ಅಗೆದರು.

೨೬. ಅಲ್ಲಿ ಪಶ್ಚಿಮ ದಿಗ್ಭಾಗವನ್ನು ಆಶ್ರಯಿಸಿಕೊಂಡಿದ್ದ ಧುಂಧುರಾಕ್ಷಸನು ಸಿಕ್ಕಿದನು. ಕೋಪಗೊಂಡು ದಾರುಣರೂಪದಿಂದ ಇರುವ ಆ ಅಸುರನು ಮುಖದಲ್ಲಿ ಜ್ವಲಿಸುವ ಅಗ್ನಿಯಿಂದ ಲೋಕಗಳನ್ನು ಪರಿವರ್ತಿಸುವವನಂತೆ ಕಂಡನು.

೨೭. ಆಗ ಅಸುರನು ತನ್ನ ಯೋಗಬಲದಿಂದ ಚಂದ್ರನ ಉದಯ ಕಾಲದಲ್ಲಿ ಸಮುದ್ರವು ಉಕ್ಕಿ ಬಂದು ನೀರನ್ನು ಸುರಿಸುವಂತೆ ಹೆಚ್ಚಾದ ಜಲಧಾರೆಗಳನ್ನು ಸುರಿಸಿದನು. ಆಗ ಆ ದಾನವೋತ್ತಮನಾದ ಧುಂಧುವು ಧಾರಾಮಯವಾದ ಅಲೆಗಳಿಂದ ವ್ಯಾಪ್ತನಾದನು.

೨೮. ಆ ಯುದ್ಧದಲ್ಲಿ ರಾಜನ ಮೂರು ಮಂದಿ ಕುಮಾರರು ಹೊರತು ಮಿಕ್ಕ ಎಲ್ಲ ಪುತ್ರರು ಅಪಜಿತರಾಗಿ ದಗ್ಧರಾದರು, ತರುವಾಯ ಅತಿಬಲಶಾಲಿಯಾದ ರಾಜನು ಮಹಾಬಲಿಷ್ಠನಾದ ರಾಕ್ಷಸನನ್ನು ಎದುರಿಸುತ್ತ ಬಂದನು.

೨೯. ಬಂಧು ಜನರನ್ನು ಸಂಹರಿಸಿದ ಆ ಧುಂಧುರಾಕ್ಷಸನ ಬಳಿಗೆ ತೇಜಸ್ವಿಯಾದ ರಾಜನು ಬಂದನು, ಮತ್ತು ಕುವಲಾಶ್ವರಾಜನು ರಾಕ್ಷಸನ ಜಲಮಯವಾದ ವೇಗವನ್ನು ತಡೆಗಟ್ಟಿದನು.

ಯೋಗೀ ಯೋಗೇನ ವಹ್ನಿಂ ಚ ಶಮಯಾಮಾಸ ವಾರಿಣಾ ।
ನಿರಸ್ಯಂತಂ ಮಹಾಕಾಯಂ ಬಲೇನೋದಕರಾಕ್ಷಸಮ್ ॥ ೩೦ ॥

ಉತ್ತಕಂ ದರ್ಶಯಾಮಾಸ ಕೃತಕರ್ಮಾ ನರಾಧಿಪಃ
ಉತ್ತಂಕಶ್ಚ ವರಂ ಪ್ರಾದಾತ್ತಸ್ಮೈ ರಾಜ್ಞೇ ಮಹಾತ್ಮನೇ ॥ ೩೧ ॥

ದದತಶ್ಚಾಕ್ಷಯಂ ವಿತ್ತಂ ಶತ್ರುಭಿಶ್ಚಾಪ್ಯಧೃಷ್ಯತಾಮ್ ।
ಧರ್ಮೇ ರತಿಂ ಚ ಸತತಂ ಸ್ವರ್ಗೇ ವಾಸಂ ತಥಾಕ್ಷಯಮ್ ॥ ೩೨ ॥

ಪುತ್ರಾಣಾಂ ಚಾಕ್ಷಯಾಂಲ್ಲೋಕಾನ್ ಸ್ವರ್ಗೇ ಯೇ ರಕ್ಷಸಾ ಹತಾಃ ।
ತಸ್ಯ ಪುತ್ರಾಸ್ತ್ರಯಃ ಶಿಷ್ಟಾ ದೃಢಾಶ್ವೋ ಜ್ಯೇಷ್ಠ ಉಚ್ಯತೇ ॥ ೩೩ ॥

ಭದ್ರಾಶ್ವಃ ಕಪಿಲಾಶ್ವಶ್ಚ ಕನೀಯಾಂಸೌ ತು ತೌ ಸ್ಮೃತೌ ।
ಧೌಂಧುಮಾರೇರ್ದೃಢಾಶ್ವಸ್ಯ ಹರ್ಯಶ್ವಸ್ತಸ್ಯ ಚಾತ್ಮಜಃ ॥ ೩೪ ॥

---

೩೦. ಯೋಗಿಯಾದ ರಾಜನು ಜಲವೇಗವನ್ನು ಯೋಗಬಲದಿಂದ ತಡೆದು ಜಲದಿಂದ ಅವನ ಅಗ್ನಿಜ್ವಾಲಾಕರಾಳರೂಪವನ್ನು ಶಮನಮಾಡಿದನು, ಹೀಗೆ ತನ್ನ ಬಲದಿಂದ ಮಹಾಕಾಯನಾದ ಆ ಜಲಚರರಾಕ್ಷಸನನ್ನು ರಾಜನು ಸಂಹರಿಸಿದನು.

೩೧. ಕುವಲಾಶ್ವಮಹಾರಾಜನು ಕರ್ತವ್ಯಕರ್ಮವನ್ನು ಪೂರ್ತಿಗೊಳಿಸಿ ಅಸುರ ಸಂಹಾರವಾದುದನ್ನು ಉತ್ತಂಕನಿಗೆ ತೋರಿಸಿದನು. ಆಗ ಮಹಾತ್ಮನಾದ ಆ ರಾಜನಿಗೆ ಉತ್ತಂಕನು ವರಗಳನ್ನು ನೀಡಿದನು.

೩೨. ಉತ್ತಂಕನು ಅಕ್ಷಯವಾದ ಧನಸಮೃದ್ಧಿ, ಶತ್ರುಗಳಿಂದ ಯಾವಾಗಲೂ ಅಜಯ್ಯತೆ, ಸಂತತವಾದ ಧರ್ಮಾಚರಣೆಯಲ್ಲಿ ಅಭಿರುಚಿ ಮತ್ತು ಅಂತ್ಯದಲ್ಲಿ ಶಾಶ್ವತವಾದ ಸ್ವರ್ಗಲೋಕದಲ್ಲಿ ವಾಸ ಮುಂತಾದ ಉತ್ತಮ ವರಗಳನ್ನು ರಾಜನಿಗೆ ಅನುಗ್ರಹಿಸಿದನು.

೩೩. ರಾಕ್ಷಸನಿಂದ ಸಂಹರಿಸಲ್ಪಟ್ಟ ಅವನ ಸಮಸ್ತ ಪುತ್ರರಿಗೆ ಅಕ್ಷಯವಾದ ಪುಣ್ಯಲೋಕಪ್ರಾಪ್ತಿಯನ್ನು ಅನುಗ್ರಹಿಸಿದನು. ರಾಜನ ಪುತ್ರಗಣದಲ್ಲಿ ಮೂರುಮಂದಿ ಮಾತ್ರ ಮಿಕ್ಕಿದ್ದರು, ಆ ಮೂವರಲ್ಲಿ ದೃಢಾಶ್ವ ಎಂಬುವನು ಜೇಷ್ಠನೆಂದು ಹೇಳಲ್ಪಡುವನು.

೩೪. ಮತ್ತು ಭದ್ರಾಶ್ವ, ಕಪಿಲಾಶ್ವ ಎಂಬ ಇಬ್ಬರು ಕುಮಾರರು ಕಿರಿಯುವರೆಂದು ಸ್ಮರಿಸಲ್ಪಟ್ಟಿರುವರು. ಧುಂಧುಮಾರನ ಜ್ಯೇಷ್ಠಪುತ್ರನಾದ ದೃಢಾಶ್ವನಿಗೆ ಹರ್ಯಶ್ವ ಎಂಬ ಪುತ್ರನು ಜನಿಸಿದನು.

ಹರ್ಯಕ್ಷಸ್ಯ ನಿಕುಂಭೋಽಭೂತ್ ಕ್ಷಾತ್ರಧರ್ಮರತಃ ಸದಾ ।
ಸಂಹತಾಶ್ವೋ ನಿಕುಂಭಸ್ಯ ಸುತೋ ರಣವಿಶಾರದಃ ॥ ೩೫ ॥

ಕೃಶಾಶ್ವಶ್ಚಾಕೃತಾಶ್ವಶ್ಚ ಸಂಹತಾಶ್ವಸುತಾವುಭೌ ।
ತಸ್ಯ ಪತ್ನೀ ಹೈಮವತೀ ಸತೀ ಮಾತಾ ದೃಷದ್ವತೀ ॥ ೩೬ ॥

ವಿಖ್ಯಾತಾ ತ್ರಿಷು ಲೋಕೇಷು ಪುತ್ರಶ್ಚಾಸ್ಯ ಪ್ರಸೇನಜಿತ್ ।
ಯುವನಾಶ್ವಃ ಸುತಸ್ತಸ್ಯ ತ್ರಿಷು ಲೋಕೇಷು ವಿಶ್ರುತಃ ॥ ೩೭ ॥

ಅತ್ಯಂತಧಾರ್ಮಿಕಾ ಗೌರೀ ತಸ್ಯ ಪತ್ನೀ ಪತಿವ್ರತಾ ।
ಅಭಿಶಸ್ತಾ ತು ಸಾ ಭರ್ತ್ರಾ ನದೀ ಸಾ ಬಾಹುದಾಕೃತಾ ॥ ೩೮ ॥

ತಸ್ಯಾಸ್ತು ಗೌರಿಕಃ ಪುತ್ರಶ್ಚಕ್ರವರ್ತೀ ಬಭೂವ ಹ ।
ಮಾಂಧಾತಾ ಯೌವನಾಶ್ವೋ ವೈ ತ್ರೈಲೋಕ್ಯವಿಜಯೀ ನೃಪಃ॥ ೩೯ ॥

---

೩೫. ಹರ್ಯಕ್ಷನಿಗೆ ಯಾವಾಗಲೂ ಕ್ಷಾತ್ರಧರ್ಮದಲ್ಲಿ ಆಸಕ್ತಿಯುಳ್ಳ ನಿಕುಂಭನೆಂಬ ಪುತ್ರನು ಇದ್ದನು. ಆ ನಿಕುಂಭನಿಗೆ ಸಂಹತಾಶ್ವನೆಂಬ ರಣಕರ್ಮದಲ್ಲಿ ವಿಶಾರದನಾದ ಪುತ್ರನಿದ್ದನು.

೩೬. ಸಂಹತಾಶ್ವನಿಗೆ ಕೃತಾಶ್ವ ಮತ್ತು ಅಕೃತಾಶ್ವ ಎಂಬ ಇಬ್ಬರು ಪುತ್ರರಿದ್ದರು. ಅವರಲ್ಲಿ ಕೃತಾಶ್ವನಿಗೆ ಹಿಮವಂತನ ಪುತ್ರಿಯೂ ಜಗನ್ಮಾತೆಯೂ ಮತ್ತು ಪತಿವ್ರತೆಯೂ ಆದ ದೃಷದ್ವತಿಯು ಪತ್ನಿಯಾಗಿದ್ದಳು.

೩೭ ಆ ದೃಷದ್ವತಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಹೊಂದಿದ್ದಳು. ಆ ಪತ್ನಿಯಲ್ಲಿ ಕೃತಾಶ್ವನಿಗೆ ಪ್ರಸೇನಜಿತ್ ಎಂಬ ಪುತ್ರನಿದ್ದನು. ಪ್ರಸೇನಜಿತನಿಗೆ ಮೂರು ಲೋಕಗಳಲ್ಲಿ ವಿಖ್ಯಾತನಾದ ಯುವನಾಶ್ವನೆಂಬ ಪುತ್ರನಿದ್ದನು.

೩೮. ಯುವನಾಶ್ವನಿಗೆ ಅತ್ಯಂತ ಧಾರ್ಮಿಕಳೂ ಪತಿವ್ರತೆಯೂ ಆದ ಗೌರೀ ಎಂಬುವಳು ಭಾರ್ಯೆಯಾಗಿದ್ದಳು, ಆಕೆಯು ಪತಿಯಿಂದ ಶಪ್ತಳಾಗಿ ಬಾಹುದಾ ಎಂಬ ನದೀ ರೂಪವನ್ನು ಹೊಂದಿದಳು.

೩೯. ಯುವನಾಶ್ವನ ಪತ್ನಿಯಾದ ಗೌರಿಯಲ್ಲಿ ಗೌರಿಕ ಎಂಬ ಪುತ್ರನು ಜನಿಸಿದನು. ಅವನು ಯುವನಾಶ್ವ ಪುತ್ರನಾದ ಮಾಂಧಾತಾ ಎಂಬ ಪ್ರಸಿದ್ಧಿಯನ್ನು ಗಳಿಸಿದವನೂ ತ್ರಿಲೋಕಗಳನ್ನು ಜಯಿಸಿದವನೂ ಆದ ಚಕ್ರವರ್ತಿಯಾದನು.

ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾ ದ್ವಿಜಾಃ ।
ಯಾವತ್ಸೂರ್ಯ ಉದಯತೇ ಯಾವಚ್ಚ ಪ್ರತಿತಿಷ್ಠತಿ ॥ ೪೦ ॥

ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ।
ತಸ್ಯ ಚೈತ್ರರಥೀ ಭಾರ್ಯಾ ಶಶಬಿಂದೋಃ ಸುತಾಭವತ್ ॥ ೪೧ ॥

ಸಾಧ್ವೀ ಬಿಂದುಮತೀ ನಾಮ ರೂಪೇಣಾಪ್ರತಿಮಾ ಭುವಿ ।
ಪತಿವ್ರತಾ ಚ ಜ್ಯೇಷ್ಠಾ ಚ ಭ್ರಾತೄಣಾಮಯುತಸ್ಯ ಸಾ ॥ ೪೨ ॥

ತಸ್ಯಾಮುತ್ಪಾದಯಾಮಾಸ ಮಾಂಧಾತಾ ತ್ರೀನ್ ಸುತಾನ್ ಪ್ರಭುಃ ।
ಪುರುಕುತ್ಸಮಂಬರೀಷಂ ಮುಚುಕುಂದಂ ಚ ವಿಶ್ರುತಮ್ ॥ ೪೩ ॥

ಅಂಬರೀಷಸ್ಯ ದಾಯಾದೋ ಯುವನಾಶ್ವೋಽಪರಃ ಸ್ಮೃತಃ ।
ನರ್ಮದಾಯಾಂ ಸಮುತ್ಪನ್ನಃ ಸಂಭೂತಸ್ತಸ್ಯ ಚಾತ್ಮಜಃ ॥ ೪೪ ॥

---

೪೦. ಮಾಂಧಾತೃ ರಾಜನ ಮಹಿಮಾತಿಶಯವನ್ನು ಕುರಿತು ಪುರಾಣಜ್ಞರು ಒಂದು ಪದ್ಯವನ್ನು ಉದಾಹರಿಸುವರು. ಎದುವರೆಗೆ ಸೂರ್ಯನು ಉದಯ ಮತ್ತು ಪ್ರತಿಷ್ಠೆಯನ್ನು ಹೊಂದುವನೊ ಅಂತಹ ಸೂರ್ಯನ ಉದಯ-ಪ್ರತಿಷ್ಠಾ ವ್ಯಾಪ್ತಿಯು ಮಾಂಧಾತೃರಾಜನ ಮಹಿಮೆಯ ಅವಧಿಯು.

೪೧. ಆ ಅವಧಿಯು ಯುವನಾಶ್ವರಾಜನ ಪುತ್ರನಾದ ಮಾಂಧಾತೃವಿನ ಕ್ಷೇತ್ರವು. ಹೀಗೆಂದು ಪದ್ಯದಿಂದ ಪ್ರಶಂಸೆ ಮಾಡುತ್ತಾರೆ. ಅವನಿಗೆ ಶಶಬಿಂದುರಾಜನ ಪುತ್ರಿಯಾದ ಚೈತ್ರರಥಿಯು ಪತ್ನಿಯಾಗಿದ್ದಳು.

೪೨. ಪತಿವ್ರತೆಯಾದ ಆಕೆಯು ಬಿಂದುಮತಿ ಎಂಬ ನಾಮಾಂಕನವುಳ್ಳವಳೂ ರೂಪದಲ್ಲಿ ನಿರುಪಮೆಯೂ ಆಗಿದ್ದಳು. ಮತ್ತು ಭೂಮಿಯಲ್ಲಿ ಪತಿವ್ರತಾಶಿರೋಮಣಿಯೂ ಅಯುತ ಸಂಖ್ಯೆಯ ಸಹೋದರರಿಗೆ ಜ್ಯೇಷ್ಠಳಾದವಳೂ ಆಗಿದ್ದಳು.

೪೩. ಪ್ರಭುವಾದ ಮಾಂಧಾತೃರಾಜನು ಆ ಧರ್ಮಪತ್ನಿಯಲ್ಲಿ ಮೂರುಮಂದಿ ಪುತ್ರರನ್ನು ಹೊಂದಿದನು, ಆ ಕುಮಾರರು ಪುರುಕುತ್ಸ, ಅಂಬರೀಷ ಮತ್ತು ಮುಚುಕುಂದ ಎಂಬ ಪವಿತ್ರ ನಾಮಗಳಿಂದ ಪ್ರಸಿದ್ಧರಾಗಿದ್ದರು.

೪೪. ಅಂಬರೀಷನಿಗೆ ಮತ್ತೊಬ್ಬ ಯುವನಾಶ್ವನೆಂಬ ಪುತ್ರನು ಇದ್ದನೆಂದು ಸ್ಮರಿಸಲ್ಪಡುವನು, ಆ ಯುವನಾಶ್ವನಿಗೆ ನರ್ಮದಾ ಎಂಬ ಪತ್ನಿಯಲ್ಲಿ ಸಂಭೂತ ಎಂಬ ನಾಮಾಂಕಿತನಾದ ಪುತ್ರನು ಜನಿಸಿದನು.

ಸಂಭೂತಸ್ಯಾತ್ಮಜಃ ಪುತ್ರೋ ಹ್ಯನರಣ್ಯಃ ಪ್ರತಾಪವಾನ್ ।
ರಾವಣೇನ ಹತೋ ಯೇನ ತ್ರೈಲೋಕ್ಯಂ ವಿಜಿತಂ ಪುರಾ ॥ ೪೫ ॥

ತೇನ ದೃಶ್ಯೋಽನರಣ್ಯಸ್ಯ ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಾತ್ತು ದೃಷದ್ವತ್ಯಾಂ ಜಜ್ಞೇ ಚ ಸುಮತಿರ್ನೃಪಃ ॥ ೪೬ ॥

ತಸ್ಯ ಪುತ್ರೋಽಭವದ್ರಾಜಾ ತ್ರಿಧನ್ವಾ ನಾಮ ಧಾರ್ಮಿಕಃ ।
ಆಸೀತ್ತ್ರಿಧನ್ವನಶ್ಚಾಪಿ ವಿದ್ವಾಂಸ್ತ್ರಯ್ಯಾರುಣಿಃ ಪ್ರಭುಃ ॥ ೪೭ ॥

ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ ।
ತೇನ ಭಾರ್ಯಾ ವಿದರ್ಭಸ್ಯ ಹೃತಾ ಹತ್ವಾ ದಿವೌಕಸಃ ॥ ೪೮ ॥

ಪಾಣಿಗ್ರಹಣಮಂತ್ರೇಷು ನಿಷ್ಠಾಂ ನ ಪ್ರಾಪಿತೇಷ್ವಿಹ ।
ಕಾಮಾದ್ಬಲಾಚ್ಚ ಮೋಹಾಚ್ಚ ಸಂಹರ್ಷೇಣ ಬಲೇನ ಚ ॥ ೪೯ ॥

---

೪೫. ಸಂಭೂತನಿಗೆ ಪ್ರತಾಪಶಾಲಿಯಾದ ಅನರಣ್ಯ ನೆಂಬ ಪುತ್ರನು ಜನಿಸಿದನು. ಅವನು ಪೂರ್ವದಲ್ಲಿ ತ್ರಿಲೋಕಗಳನ್ನು ಪ್ರತಾಪದಿಂದ ಜಯಿಸಿದ್ದನು, ಕಡೆಯಲ್ಲಿ ಅವನು ರಾವಣಾಸುರನಿಂದ ಸಂಹರಿಸಲ್ಪಟ್ಟನು.

೪೬. ಅನರಣ್ಯನಿಗೆ ದೃಶ್ಯ ಎಂಬ ಪುತ್ರನೂ, ಅವನಿಗೆ ಹರ್ಯಶ್ವ ಎಂಬ ಕುಮಾರನೂ ಇದ್ದರು. ಹರ್ಯಶ್ವನಿಗೆ ದೃಷದ್ವತೀ ಎಂಬ ಭಾರ್ಯೆಯಲ್ಲಿ ಸುಮತಿ ಎಂಬ ರಾಜನು ಪುತ್ರನಾಗಿ ಜನಿಸಿದನು.

೪೭. ಸುಮತಿ ರಾಜನಿಗೆ ಪರಮ ಧಾರ್ಮಿಕನಾದ ತ್ರಿಧನ್ವಾ ಎಂಬ ರಾಜನು, ಪುತ್ರನಾಗಿದ್ದನು, ಆ ತ್ರಿಧನ್ವನಿಗೆ ವಿದ್ವಾಂಸನೂ, ಪ್ರಭುವೂ ಆದ ತ್ರಯ್ಯಾರುಣಿ ಎಂಬ ಪುತ್ರನಿದ್ದನು.

೪೮. ತ್ರಯ್ಯಾರುಣಿ ಎಂಬುವನಿಗೆ ಸತ್ಯವ್ರತ ಎಂಬ ಮಹಾಬಲಶಾಲಿಯಾದ ಕುಮಾರನಿದ್ದನು. ಆ ಸತ್ಯವ್ರತನಿಂದ ದೇವತೆಗಳನ್ನು ಗೆದ್ದು ವಿದರ್ಭರಾಜನ ಭಾರ್ಯೆಯು ಅಪಹರಿಸಲ್ಪಟ್ಟಳು.

೪೯. ಪಾಣಿಗ್ರಹಣಕಾಲದಲ್ಲಿ ಪಠಿಸಬೇಕಾದ ಮಂತ್ರಗಳನ್ನು ಪೂರ್ತಿಯಾಗಿ ಉಚ್ಚರಿಸುವುದರೊಳಗೆ ಕಾಮ, ಬಲ, ಮೋಹ ಮತ್ತು ದರ್ಪ ಬಲಗಳಿಂದ ಈ ಕಾರ್ಯವನ್ನು ಸತ್ಯವ್ರತನು ಆಚರಿಸಿದನು.

ಭಾವಿನೋಽರ್ಥಸ್ಯ ಚ ಬಲಾತ್ತತ್ಕೃತಂ ತೇನ ಧೀಮತಾ ।
ತಮಧರ್ಮೇಣ ಸಂಯುಕ್ತಂ ಪಿತಾ ತ್ರಯ್ಯಾರುಣೋಽತ್ಯಜತ್॥ ೫೦ ॥

ಅಪಧ್ವಂಸೇತಿ ಬಹುಶೋ ವದನ್ ಕ್ರೋಧಸಮನ್ವಿತಃ ।
ಪಿತರಂ ಸೋಽಬ್ರವೀದೇಕಃ ಕ್ವ ಗಚ್ಛಾಮೀತಿ ವೈ ಮುಹುಃ ॥ ೫೧ ॥

ಪಿತಾ ಚೈನಮಥೋವಾಚ ಶ್ವಪಾಕೈಃ ಸಹ ವರ್ತಯ ।
ನಾಹಂ ಪುತ್ರೇಣ ಪುತ್ರಾರ್ಥೀ ತ್ವಯಾದ್ಯ ಕುಲಪಾಂಸನ ॥ ೫೨ ॥

ಇತ್ಯುಕ್ತಃ ಸ ನಿರಾಕ್ರಾಮನ್ನಗರಾದ್ವಚನಾದ್ವಿಭೋಃ ।
ನಚೈನಂ ವಾರಯಾಮಾಸ ವಸಿಷ್ಠೋ ಭಗವಾನೃಷಿಃ ॥ ೫೩ ॥

ಸ ತು ಸತ್ಯವ್ರತೋ ಧೀಮಾನ್ ಶ್ವಪಾಕಾವಸಥಾಂತಿಕೇ ।
ಪಿತ್ರಾ ತ್ಯಕ್ತೋಽವಸದ್ಧೀರಃ ಪಿತಾ ಚಾಸ್ಯ ವನಂ ಯಯೌ ॥ ೫೪ ॥

---

೫೦. ಮತ್ತು ಜ್ಞಾನಿಯಾದ ಸತ್ಯವ್ರತನು ಮುಂದಾಗುವ ಅರ್ಥದ ಭವಿತವ್ಯತೆಯಿಂದ ಈ ಅಧರ್ಮದಲ್ಲಿ ಪ್ರವೇಶಿಸಿದನು, ಆಗ ತ್ರಯ್ಯಾರುಣಿಯೆಂಬ ಜನಕನು ಅಧರ್ಮಮಾಡಿದ ಆ ಪುತ್ರನನ್ನು ತ್ಯಾಗಮಾಡಿದನು.

೫೧. ಆಗ ಪುತ್ರನು ಕೋಪಗೊಂಡ ತಂದೆಯಿಂದ ಹಾಳಾಗು ಎಂದು ಮತ್ತೆ ಮತ್ತೆ ಎನ್ನಲ್ಪಡುತ್ತ ತಂದೆಯನ್ನು ಕುರಿತು ನಾನು ಏಕಾಕಿಯಾಗಿ ಎಲ್ಲಿಗೆ ಹೋಗಲಿ ಎಂದು ಮತ್ತೆ ಮತ್ತೆ ಹೇಳಿದನು.

೫೨. ಆಗ ತಂದೆಯು ಚಂಡಾಲರೊಡನೆ ಸೇರಿಕೊಂಡಿರು, ಕುಲವನ್ನು ಕೆಡಿಸಿದವನೆ! ನಿನ್ನಂತಹ ಪುತ್ರರನ್ನು ನಾನು ಆಕಾಂಕ್ಷಿಸಿ ಪುತ್ರಾರ್ಥಿಯಾಗಿರಲಾರೆ ಎಂದು ಗದರಿಸಿ ಹೇಳಿದನು.

೫೩. ಹೀಗೆಂದು ತಂದೆಯು ಹೇಳಿದ ವಚನದಿಂದ ಪುತ್ರನು ಹೊರಕ್ಕೆ ಹೊರಟು ಹೋದನು, ಆಗ ತ್ರಿಕಾಲಜ್ಞನಾದ ವಸಿಷ್ಠ ಮುನಿಯು ಹೋಗುತ್ತಿದ್ದ ರಾಜಪುತ್ರನನ್ನು ತಡೆಯಲಿಲ್ಲ.

೫೪. ಬುದ್ಧಿಶಾಲಿಯಾದ ಆ ಸತ್ಯವ್ರತ ಕುಮಾರನು ತಂದೆಯಿಂದ ತ್ಯಜಿಸಲ್ಪಟ್ಟವನಾಗಿ ಧೀರನಾಗಿ ಚಂಡಾಲರ ಗೃಹಸಮೀಪದಲ್ಲಿ ವಾಸಮಾಡಿದನು, ಅವನ ತಂದೆಯು ವನಕ್ಕೆ ತೆರಳಿದನು.

ತಸ್ಮಿಂಸ್ತು ವಿಷಯೇ ತಸ್ಯ ನಾವರ್ಷತ್ಪಾಕಶಾಸನಃ ।
ಸಮಾ ದ್ವಾದಶ ಸಂಪೂರ್ಣಾಸ್ತೇನಾಧರ್ಮೇಣ ವೈ ತದಾ ।　　|| ೫೫ ||

ದಾರಾಂಸ್ತು ತಸ್ಯ ವಿಷಯೇ ವಿಶ್ವಾಮಿತ್ರೋ ಮಹಾತಪಾಃ ।
ಸನ್ನ್ಯಸ್ಯ ಸಾಗರಾನೂಪೇ ಚಚಾರ ವಿಪುಲಂ ತಪಃ　　|| ೫೬ ||

ತಸ್ಯ ಪತ್ನೀ ಗಲೇ ಬದ್ಧ್ವಾ ಮಧ್ಯಮಂ ಪುತ್ರಮೌರಸಮ್ ।
ಶಿಷ್ಟಾನಾಂ ಭರಣಾರ್ಥಾಯ ವ್ಯಕ್ರೀಣಾದ್ಗೋಶತೇನ ವೈ　　|| ೫೭ ||

ತಂ ತು ಬದ್ಧಂ ಗಲೇ ದೃಷ್ಟ್ವಾ ವಿಕ್ರಯಾರ್ಥಂ ನರೋತ್ತಮಃ ।
ಮಹರ್ಷಿಪುತ್ರಂ ಧರ್ಮಾತ್ಮಾ ಮೋಕ್ಷಯಾಮಾಸ ಸುವ್ರತಃ　|| ೫೮ ||

ಸತ್ಯವ್ರತೋ ಮಹಾಬುದ್ಧಿರ್ಭರಣಂ ತಸ್ಯ ಚಾಕರೋತ್ ।
ವಿಶ್ವಾಮಿತ್ರಸ್ಯ ತುಷ್ಟ್ಯರ್ಥಮನುಕಂಪಾರ್ಥಮೇವ ಚ　　|| ೫೯ ||

---

೫೫. ಆಗ ಅವನ ದೇಶದಲ್ಲಿ ಬಲವಾದ ಅಧರ್ಮದ ಪರಿಣಾಮದಿಂದ ಇಂದ್ರನು ಹನ್ನೆರಡು ವರ್ಷಗಳು ಪೂರ್ತಿಯಾಗಿ ಮಳೆಯನ್ನು ಸುರಿಸಲಿಲ್ಲ.

೫೬. ಮಹಾತಪಸ್ವಿಯಾದ ವಿಶ್ವಾಮಿತ್ರ ಮುನಿಯು ತನ್ನ ಭಾರ್ಯೆಯನ್ನು ಆ ದೇಶದಲ್ಲಿ ಸನ್ಯಾಸಮಾಡಿ ಸಾಗರದ ಪ್ರಾಂತ ಪ್ರದೇಶದಲ್ಲಿ ಮಹತ್ತಾದ ತಪಸ್ಸನ್ನು ಆಚರಿಸಿದನು.

೫೭. ಅವನ ಪತ್ನಿಯು ಮಧ್ಯಮನಾದ ತನ್ನ ಔರಸಪುತ್ರನನ್ನು ಕಂಠದಲ್ಲಿ ಕಟ್ಟಿಕೊಂಡು ಸಂಚರಿಸುತ್ತ ಮಿಕ್ಕ ಪುತ್ರರನ್ನು ರಕ್ಷಿಸುವುದಕ್ಕೆ ಒಂದುನೂರು ಗೋಮೂಲ್ಯವನ್ನು ತೆಗೆದುಕೊಂಡು ವಿಕ್ರಯಿಸಿದಳು.

೫೮. ರಾಜಶ್ರೇಷ್ಠನೂ ಧಾರ್ಮಿಕನೂ ಆದ ಸುವ್ರತನು ಕತ್ತಿನಲ್ಲಿ ಕಟ್ಟಿ ವಿಕ್ರಯಕ್ಕೆ ತಂದಿರುವ ಆ ಮಹರ್ಷಿಯ ಪುತ್ರನನ್ನು ಬಿಡಿಸಿದನು.

೫೯. ಮಹಾ ಜ್ಞಾನಶಾಲಿಯಾದ ಸತ್ಯವ್ರತ ರಾಜನು ವಿಶ್ವಾಮಿತ್ರನ ಸಂತೋಷಕ್ಕೂ ಮತ್ತು ದಯಾಮಯ ದೃಷ್ಟಿಯಿಂದಲೂ ಆ ಮುನಿ ಪುತ್ರನನ್ನು ಬಿಡಿಸಿದನು.

ಸೋऽಭವದ್ಗಾಲವೋ ನಾಮ ಗಲೇ ಬದ್ಧೋ ಮಹಾತಪಾಃ ।
ಮಹರ್ಷಿಃ ಕೌಶಿಕಸ್ತಾತ ತೇನ ವೀರೇಣ ಮೋಕ್ಷಿತಃ ॥ ೬೦ ॥

ತಸ್ಯ ವ್ರತೇನ ಭಕ್ತ್ಯಾ ಚ ಕೃಪಯಾ ಚ ಪ್ರತಿಜ್ಞಯಾ ।
ವಿಶ್ವಾಮಿತ್ರಕಲತ್ರಂ ಚ ಬಭಾರ ವಿನಯೇ ಸ್ಥಿತಃ ॥ ೬೧ ॥

ಹತ್ವಾ ಮೃಗಾನ್ ವರಾಹಾಂಶ್ಚ ಮಹಿಷಾಂಶ್ಚ ಜಲೇಚರಾನ್ ।
ವಿಶ್ವಾಮಿತ್ರಾಶ್ರಮಾಭ್ಯಾಶೇ ತನ್ಮಾಂಸಮನಯತ್ತತಃ ॥ ೬೨ ॥

ಉಪಾಂಶುವ್ರತಮಾಸ್ಥಾಯ ದೀಕ್ಷಾಂ ದ್ವಾದಶವಾರ್ಷಿಕೀಮ್ ।
ಪಿತುರ್ನಿಯೋಗಾದಭಜನ್ನೃಪೇ ತು ವನಮಾಸ್ಥಿತೇ ॥ ೬೩ ॥

ಅಯೋಧ್ಯಾಂ ಚೈವ ರಾಷ್ಟ್ರಂ ಚ ತಥೈವಾಂತಃಪುರಂ ಮುನಿಃ ।
ಯಾಜ್ಯೋಪಾಧ್ಯಾಯಸಂಯೋಗಾದ್ವಸಿಷ್ಠಃ ಪರ್ಯರಕ್ಷತ ॥ ೬೪ ॥

---

೬೦. ಕತ್ತಿನಲ್ಲಿ ಕಟ್ಟಲ್ಪಟ್ಟಿರುವ್ರವರಿಂದ ಆ ಮಹಾ ತಪಸ್ವಿಯು ಗಾಲವನೆಂದು ಪ್ರಸಿದ್ಧನಾದನು, ಹೀಗೆ ಕೌಶಿಕ ಪುತ್ರನಾದ ಮುನಿಯು ಆ ವೀರರಾಜನಿಂದ ಬಿಡಿಸಲ್ಪಟ್ಟವನಾದನು.

೬೧. ಮತ್ತು ಆ ಸತ್ಯವ್ರತ ರಾಜನು ತನ್ನ ನಿಯಮದಿಂದಲೂ, ಭಕ್ತಿಯಿಂದಲೂ ಕೃಪೆಯಿಂದಲೂ ಮತ್ತು ಪ್ರತಿಜ್ಞಾವಿಶೇಷದಿಂದಲೂ ವಿಶ್ವಾಮಿತ್ರ ಮುನಿಯ ಕುಟುಂಬವನ್ನು ವಿನಯದಿಂದ ಇದ್ದು ಪಾಲಿಸಿದನು.

೬೨. ಅವನು ಮೃಗ, ವರಾಹ, ಮಹಿಷ, ಮತ್ತು ಜಲಚರ ಪ್ರಾಣಿಗಳನ್ನು ಕೊಂದು ವಿಶ್ವಾಮಿತ್ರಮುನಿಯ ಆಶ್ರಮದ ಸಮೀಪದಲ್ಲಿ ಆ ಪ್ರಾಣಿಗಳ ಮಾಂಸವನ್ನು ತರುತ್ತಿದ್ದನು.

೬೩. ಪುತ್ರನನ್ನು ಹೊರಕ್ಕೆ ತಳ್ಳಿ ತಂದೆಯು ವನಕ್ಕೆ ತೆರಳಿ ಹೋಗಲಾಗಿ ತ್ರಯ್ಯಾರುಣಿಯ ಆಜ್ಞೆಯಂತೆ ವಸಿಷ್ಠ ಮುನಿಯು ಉಪಾಂಶುವ್ರತದ ಅನುಷ್ಠಾನಕ್ಕೆ ಹನ್ನೆರಡು ವರ್ಷಗಳ ದೀಕ್ಷಾ ವಿಧಿಯನ್ನು ಕೈಕೊಂಡನು.

೬೪. ಆಗ ವಸಿಷ್ಠ ಮುನಿಯು ತನ್ನ ಯಾಜ್ಯನಲ್ಲಿ ಪಾತಕ ಸಂಸರ್ಗಬಲದಿಂದ ರಾಜ್ಯವು ಅರಾಜಕವಾಗಲು ಅಯೋಧ್ಯಾ ನಗರಿಯನ್ನೂ, ರಾಷ್ಟ್ರವನ್ನೂ ಮತ್ತು ಅಂತಃಪುರವನ್ನೂ ರಕ್ಷಿಸಿದನು.

ಸತ್ಯವ್ರತಃ ಸುಬಾಲ್ಯಾತ್ತು ಭಾವಿನೋಽರ್ಥಸ್ಯ ವೈ ಬಲಾತ್ ।
ವಸಿಷ್ಠೋಽಭ್ಯಧಿಕಂ ಮನ್ಯುಂ ಧಾರಯಾಮಾಸ ಮನ್ಯುನಾ ॥ ೬೫ ॥

ಪಿತ್ರಾ ತು ತಂ ತದಾ ರಾಷ್ಟ್ರಾತ್ಪರಿತ್ಯಕ್ತಂ ಸ್ವಮಾತ್ಮಜಮ್ ।
ನ ವಾರಯಾಮಾಸ ಮುನಿರ್ವಸಿಷ್ಠಃ ಕಾರಣೇನ ವೈ ॥ ೬೬ ॥

ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ಸಪ್ತಮೇ ಪದೇ ।
ಏವಂ ಸತ್ಯವ್ರತಸ್ತಾಂ ವೈ ಹೃತವಾನ್ ಸಪ್ತಮೇ ಪದೇ ॥ ೬೭ ॥

ಜಾನನ್ ಧರ್ಮಾನ್ ವಸಿಷ್ಠಸ್ತು ನವಮಂತ್ರಾನಿಹೇಚ್ಛತಿ ।
ಇತಿ ಸತ್ಯವ್ರತೋ ರೋಷಂ ವಸಿಷ್ಠೇ ಮನಸಾಕರೋತ್ ॥ ೬೮ ॥

ಗುಣಬುದ್ಧ್ಯಾ ತು ಭಗವಾನ್ ವಸಿಷ್ಠಃ ಕೃತವಾಂಸ್ತಪಃ ।
ನ ತು ಸತ್ಯವ್ರತೋಽಬುದ್ಧ್ಯದುಪಾಂಶುವ್ರತಮಸ್ಯ ವೈ ॥ ೬೯ ॥

---

೬೫. ಸತ್ಯವ್ರತನು ಬಾಲ್ಯಾವಸ್ಥೆಯಿಂದಲೂ, ಮುಂದಾಗುವ ಅರ್ಥದ ಅವಶ್ಯ ಭವಿತವ್ಯತೆಯಿಂದಲೂ ಶೋಕಪಡುತ್ತ ವಸಿಷ್ಠ ಮುನಿಯಲ್ಲಿ ಅಧಿಕವಾದ ಕೋಪವನ್ನು ಹೊಂದಿದನು.

೬೬. ತಂದೆಯಿಂದ ಪುತ್ರನಾದ ಸತ್ಯವ್ರತನು ರಾಜ್ಯದಿಂದ ಹೊರಗೆ ಕಳುಹಿಸಲ್ಪಡುವ ಸಮಯದಲ್ಲಿ ವಸಿಷ್ಠ ಮುನಿಯು ಒಂದು ಕಾರಣ ವಿಶೇಷದಿಂದ ನಿವಾರಿಸದೇ ಸುಮ್ಮನಿದ್ದನು.

೬೭. ಪಾಣಿಗ್ರಹಣ ಮಂತ್ರಗಳ ಪಾಠಕ್ಕೆ ಸಪ್ತಪದಿಯಲ್ಲಿ ಸಪ್ತಮ ಪದನ್ಯಾಸದಲ್ಲಿ ಮುಖ್ಯವಾದ ನಿಷ್ಠೆಯು ಇರುವುದು. ಹೀಗಿರಲು ಸಪ್ತಮ ಪದದಲ್ಲಿ ವಿದರ್ಭರಾಜನ ಭಾರ್ಯೆಯನ್ನು ಸತ್ಯವ್ರತನು ಅಪಹರಿಸಿದನು.

೬೮. ವಸಿಷ್ಠ ಮುನಿಯು ಧರ್ಮಜ್ಞನಾಗಿದ್ದರೂ ಕೂಡ ನವೀನವಾದ ಮಂತ್ರ ಮಾಹಾತ್ಮ್ಯವನ್ನು ಚಿಂತಿಸುತ್ತಾನೆ ಹೀಗೆಂದು ಸತ್ಯವ್ರತನು ಮನಸ್ಸಿನಲ್ಲಿ ವಸಿಷ್ಠ ಮುನಿಯು ವಿಷಯದಲ್ಲಿ ಕೋಪವುಳ್ಳವನಾದನು.

೬೯. ತ್ರಿಕಾಲಜ್ಞನಾದ ವಸಿಷ್ಠ ಮುನಿಯು ಒಳ್ಳೆಯ ಶ್ರೇಯೋಭಾವನೆ ಸಂಪ ವ್ರತರೂಪವಾದ ತಪವನ್ನು ಆಚರಿಸಿದನು, ಆದರೆ ಸತ್ಯವ್ರತನು ಇವನ ಉಪಾಂಶು ವ್ರತದ ಧ್ಯೇಯವನ್ನು ತಿಳಿಯಲಿಲ್ಲ.

ತಸ್ಮಿಂಸ್ತು ಪರಮೋ ರೋಷಃ ಪಿತುರಾಸೀನ್ಮಹಾತ್ಮನಃ ।
ತೇನ ದ್ವಾದಶ ವರ್ಷಾಣಿ ನಾವರ್ಷತ್ಪಾಕಶಾಸನಃ ॥ ೭೦ ॥

ತೇನ ತ್ವಿದಾನೀಂ ವಹತಾ ದೀಕ್ಷಾಂ ತಾಂ ದುರ್ವಹಾಂ ಭುವಿ ।
ಕುಲಸ್ಯ ನಿಷ್ಕೃತಿಃ ಸ್ವಸ್ಯ ಕೃತೇಯಂ ಚ ಭವೇದಿತಿ ॥ ೭೧ ॥

ತತೋ ವಸಿಷ್ಠೋ ಭಗವಾನ್ ಪಿತ್ರಾ ತ್ಯಕ್ತಂ ನ ವಾರಯತ್ ।
ಅಭಿಷೇಕ್ಷ್ಯಾಮ್ಯಹಂ ನಷ್ಟೇ ಪಶ್ಚಾದೇನಮಿತಿ ಪ್ರಭುಃ ॥ ೭೨ ॥

ಸ ತು ದ್ವಾದಶವರ್ಷಾಣಿ ದೀಕ್ಷಾಂ ತಾಮುದ್ವಹನ್ ಬಲೀ ।
ಅವಿದ್ಯಮಾನೇ ಮಾಂಸೇ ತು ವಸಿಷ್ಠಸ್ಯ ಮಹಾತ್ಮನಃ ॥ ೭೩ ॥

ಸರ್ವಕಾಮದುಘಾಂ ಧೇನುಂ ಸ ದದರ್ಶ ನೃಪಾತ್ಮಜಃ ।
ತಾಂ ವೈ ಕ್ರೋಧಾಚ್ಚ ಮೋಹಾಚ್ಚ ಶ್ರಮಾಚ್ಚೈವ ಕ್ಷುಧಾನ್ವಿತಃ॥ ೭೪ ॥

---

೭೦. ಮಹಾತ್ಮನಾದ ಜನಕನಿಗೆ ಆ ಪುತ್ರನಲ್ಲಿ ಅತಿಶಯವಾದ ರೋಷವು ಇತ್ತು. ಹಾಗೆ ರೋಷಪಾತ್ರನಾದ್ದರಿಂದ ಹನ್ನೆರಡು ವರ್ಷಗಳವರೆಗೆ ಇಂದ್ರನು ಆ ರಾಷ್ಟ್ರದಲ್ಲಿ ವೃಷ್ಟಿಯನ್ನು ಸುರಿಸಲಿಲ್ಲ,

೭೧. ಆಗ ಸತ್ಯವ್ರತನು ಭೂಮಿಯಲ್ಲಿ ಇತರರಿಂದ ಧರಿಸಲಾಗದ ಕಠಿನ ದೀಕ್ಷೆಯನ್ನು ಧರಿಸಿರುವುದರಿಂದ ತನ್ನ ವಂಶಕ್ಕೆ ಉಂಟಾದ ದೋಷದ ಪರಿಹಾರವು ಮಾಡಲ್ಪಟ್ಟಂತೆ ಭಾವಿಸಿದನು.

೭೨. ಪ್ರಭುವೂ ತ್ರಿಕಾಲಜ್ಞನೂ ಆದ ವಸಿಷ್ಠ ಮುನಿಯು ಪಾತಕವು ನಷ್ಟವಾದ ಮೇಲೆ ಈ ಸತ್ಯವ್ರತನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವೆನೆಂದು ಭಾವಿಸಿ ಪಿತನು ಪರಿತ್ಯಾಗ ಮಾಡುವಾಗ ಅವನ್ನು ತಡೆಯಲಿಲ್ಲ.

೭೩. ಆ ವಸಿಷ್ಠಮುನಿಯು ಪ್ರತಿಜ್ಞೆಯನ್ನು ನೆರವೇರಿಸುವ ಅಪಾರ ಶಕ್ತಿಯುಳ್ಳವನಾಗಿ ಹನ್ನೆರಡು ವರ್ಷಗಳವರೆಗೆ ಆ ದೀಕ್ಷೆಯನ್ನು ಧರಿಸಿದನು, ಹೀಗಿರಲು ಒಂದು ಸಲ ಮಾಂಸವು ಲಭಿಸದಿರಲಾಗಿ ಸತ್ಯವ್ರತನು ಮಹಾತ್ಮನಾದ ವಸಿಷ್ಠ ಗುರುವಿನ ಸ್ವತ್ತನ್ನು ಕಂಡನು.

೭೪. ಆ ರಾಜಪುತ್ರನು ವಸಿಷ್ಠ ಮಹಾಮುನಿಯ ಸಂಬಂಧವಾದ ಸರ್ವ ಕಾಮಗಳನ್ನು ಕೊಡುವ ಕಾಮಧೇನುವನ್ನು ಕಂಡನು. ತರುವಾಯ ಕ್ರೋಧ, ಮೋಹ ಮತ್ತು ಆಯಾಸಗಳೆಂಬ ಅನೇಕ ಭಾವಾವೇಶದಿಂದಲೂ ಒಂದು ಕಡೆ ಹಸಿವಿನ ಪೀಡೆಯಿಂದಲೂ ಆ ಧೇನುವನ್ನು ಕೊಲ್ಲುವ ಸಂಕಲ್ಪವುಳ್ಳವನಾದನು.

ದಸ್ಯುಧರ್ಮಗತೋ ದೃಷ್ಟ್ವಾ ಜಘಾನ ಬಲಿನಾಂ ವರಃ ।
ಸ ತು ಮಾಂಸಂ ಸ್ವಯಂ ಚೈವ ವಿಶ್ವಾಮಿತ್ರಸ್ಯ ಚಾತ್ಮಜಾನ್ ॥ ೭೫ ॥

ಭೋಜಯಾಮಾಸ ತಚ್ಛ್ರುತ್ವಾ ವಸಿಷ್ಠಸ್ತಂ ತದಾತ್ಯಜತ್ ।
ಪ್ರೋವಾಚ ಚೈವ ಭಗವಾನ್ ವಸಿಷ್ಠಸ್ತಂ ನೃಪಾತ್ಮಜಮ್ ॥ ೭೬ ॥

ಪಾತಯೇಯಮಹಂ ಕ್ರೂರ ತವ ಶಂಕುಮಪೋಹ್ಯ ವೈ ।
ಯದಿ ತೇ ತ್ರೀಣಿ ಶಂಕೂನಿ ನ ಸ್ಯುರ್ಹಿ ಪುರುಷಾಧಮ ॥ ೭೭ ॥

ಪಿತುಶ್ಚಾಪರಿತೋಷೇಣ ಗುರೋರ್ದೋಗ್ಧ್ರೀವಧೇನ ಚ ।
ಅಪ್ರೋಕ್ಷಿತೋಪಯೋಗಾಚ್ಚ ತ್ರಿವಿಧಸ್ತೇ ವ್ಯತಿಕ್ರಮಃ ॥ ೭೮ ॥

ಏವಂ ಸ ತ್ರೀಣಿ ಶಂಕೂನಿ ದೃಷ್ಟ್ವಾ ತಸ್ಯ ಮಹಾತಪಾಃ ।
ತ್ರಿಶಂಕುರಿತಿ ಹೋವಾಚ ತ್ರಿಶಂಕುಸ್ತೇನ ಸ ಸ್ಮೃತಃ ॥ ೭೯ ॥

---

೭೫. ಆಗ ಬಲಿಷ್ಠರಲ್ಲಿ ಗಣ್ಯನಾದ ರಾಜಪುತ್ರನು ಆ ಹಸುವನ್ನು ಕಳ್ಳಕಾಕರ ಧರ್ಮವನ್ನು ಅನುಸರಿಸಿ ಕೊಂದನು. 'ಮತ್ತು ಅದರ ಮಾಂಸವನ್ನು ತಾನು ಭುಂಜಿಸಿದುದಲ್ಲದೆ ವಿಶ್ವಾಮಿತ್ರ ಮುನಿಯ ಪುತ್ರರಿಗೆ ಕೂಡ ಭೋಜನ ಮಾಡಿಸಿದನು.

೭೬. ಆದನ್ನು ಕೇಳಿ ವಸಿಷ್ಠ ಮಹಾ ಮುನಿಯು ಆ ರಾಜಪುತ್ರನನ್ನು ಪರಿತ್ಯಾಗಮಾಡಿದನು, ಮತ್ತು ಆ ಪೂಜ್ಯನಾದ ವಸಿಷ್ಠ ಮುನಿಯು ಆ ರಾಜಪುತ್ರನನ್ನು ಕುರಿತು ಮಾತನಾಡಿದನು.

೭೭. ಕ್ರೂರನಾದ ರಾಜಪುತ್ರನೆ ! ನಿನ್ನ ಪಾತಕವೆಂಬ ಶಂಕುವನ್ನು ಉದ್ಧಾರ ಮಾಡಿ ನಿನ್ನನ್ನು ರಕ್ಷಿಸುತ್ತಿದ್ದೆನು. ಆದರೆ ಪುರುಷಾಧಮನೆ! ನಿನ್ನಲ್ಲಿ ಮೂರು ವಿಧವಾದ ಪಾತಕಗಳು ಕೀಲುಗಳಂತೆ ದೃಢವಾಗಿವೆ. ಹಾಗೆ ಮೂರು ಶಂಕುಗಳಿಲ್ಲದಿದ್ದರೆ ನಿನ್ನನ್ನು ಸಲಹುತ್ತಿದ್ದೆನು.

೭೮. ತಂದೆಯ ಅಪ್ರೀತಿಗೆ ನೀನು ಪಾತ್ರನಾಗಿರುವುದರಿಂದಲೂ, ಗುರುವಿನ ಕಾಮಧೇನುವನ್ನು ವಧಿಸಿರುವುದರಿಂದಲೂ ಮತ್ತು ಯಜ್ಞದಲ್ಲಿ ವಿಹಿತವಾದ ಪ್ರೋಕ್ಷಣ ಸಂಸ್ಕಾರ ಶೂನ್ಯವಾದ ಮಾಂಸವನ್ನು ಉಪಯೋಗಿಸಿದ್ದರಿಂದಲೂ ನಿನ್ನಲ್ಲಿ ಮೂರು ಪಾತಕಗಳು ಶಂಕುವಿನಂತೆ ಇರುವುವು.

೭೯. ಮಹಾತಪಸ್ವಿಯಾದ ವಸಿಷ್ಠ ಮುನಿಯು ರಾಜಪುತ್ರನಲ್ಲಿ ಈ ಮೂರು ಶಂಕುಗಳನ್ನು ಕಂಡು ಅವನನ್ನು ತ್ರಿಶಂಕು ಎಂದು ಅನ್ವರ್ಥನಾಮದಿಂದ ವ್ಯವಹರಿಸಿದನು. ಆದುದರಿಂದ ಅವನು ತ್ರಿಶಂಕು ಎಂದು ಸ್ಮರಿಸಲ್ಪಟ್ಟವನಾದನು.

ವಿಶ್ವಾಮಿತ್ರಸ್ತು ದಾರಾಣಾಮಾಗತೋ ಭರಣೇ ಕೃತೇ ।
ತತಸ್ತಸ್ಮೈ ವರಂ ಪ್ರಾದಾತ್ತದಾ ಪ್ರೀತಸ್ತ್ರಿಶಂಕವೇ ॥ ೮೦ ॥

ಛಂದ್ಯಮಾನೋ ವರೇಣಾಥ ಗುರುಂ ವವ್ರೇ ನೃಪಾತ್ಮಜಃ ।
ಸಶರೀರೋ ವ್ರಜೇ ಸ್ವರ್ಗಮಿತ್ಯೇವಂ ಯಾಚಿತೋ ವರಃ ॥ ೮೧ ॥

ಅನಾವೃಷ್ಟಿಭಯೇ ತಸ್ಮಿನ್ ಜಾತೇ ದ್ವಾದಶವಾರ್ಷಿಕೇ ।
ಅಭಿಷಿಚ್ಯ ರಾಜ್ಯೇ ಪಿತ್ರ್ಯೇ ವೈ ಯೋಜಯಾಮಾಸ ತಂ ಮುನಿಃ ॥ ೮೨ ॥

ಮಿಷತಾಂ ದೇವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ।
ಸಶರೀರಂ ತದಾ ತಂ ವೈ ದಿವಮಾರೋಪಯತ್ಪ್ರಭುಃ ॥ ೮೩ ॥

ಮಿಷತಸ್ತು ವಸಿಷ್ಠಸ್ಯ ತದದ್ಭುತಮಿವಾಭವತ್ ।
ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾ ಜನಾಃ ॥ ೮೪ ॥

---

೮೦. ಆಗ ವಿಶ್ವಾಮಿತ್ರ ಮಹರ್ಷಿಯು ಬಂದು ಸತ್ಯವ್ರತನೆಂಬ ರಾಜಕುಮಾರನು ತನ್ನ ಕುಟುಂಬವನ್ನು ಪೋಷಣ ಮಾಡಿರುವುದರಿಂದ ಆಗ ಅವನಲ್ಲಿ ಪ್ರೀತಿಗೊಂಡವನಾಗಿ ಆ ತ್ರಿಶಂಕುವಿಗೆ ವರವನ್ನು ಕೊಟ್ಟನು.

೮೧. ವರಪ್ರದಾನದಿಂದ ಲಾಲಿಸಲ್ಪಟ್ಟಿರುವ ರಾಜಪುತ್ರನು ಗುರುವನ್ನು ಕುರಿತು ತನಗೆ ಇಷ್ಟವಾದ ವರವನ್ನು ಕೇಳಿಕೊಂಡನು, ತಾನು ತನ್ನ ದೇಹದಿಂದ ಸಹಿತನಾಗಿ ಸ್ವರ್ಗಲೋಕಕ್ಕೆ ಸೇರಬೇಕೆಂದು ಮಹತ್ತಾದ ವರವು ಅವನಿಂದ ಕೇಳಲ್ಪಟ್ಟಿತು.

೮೨. ಆಗ ವಿಶ್ವಾಮಿತ್ರ ಮುನಿಯು ಹನ್ನೆರಡು ವರ್ಷಗಳ ದೀರ್ಘಕಾಲ ಅನಾವೃಷ್ಟಿಯ ಭಯವು ಒದಗಿರಲು ಆ ರಾಜಪುತ್ರನನ್ನು ತಂದೆಯ ರಾಜ್ಯದಲ್ಲಿ ಇರಿಸಿ ಪಟ್ಟಾಭಿಷೇಕ ಮಾಡಿದನು.

೮೩. ಮತ್ತು ಅನೇಕ ದೇವತೆಗಳು, ಮತ್ತು ವಸಿಷ್ಠ ಮಹಾಮುನಿಯು ನೋಡುತ್ತಿರುವ ಹಾಗೆಯೇ ಸರ್ವ ಸಮರ್ಥನಾದ ವಿಶ್ವಾಮಿತ್ರ ಮುನಿಯು ಆ ತ್ರಿಶಂಕು ರಾಜನನ್ನು ಶರೀರ ಸಹಿತವಾಗಿ ಸ್ವರ್ಗಲೋಕಕ್ಕೆ ಕಳುಹಿಸಿದನು.

೮೪. ಸಶರೀರನಾದ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸುತ್ತಿರುವುದನ್ನು ನೋಡುತ್ತಲಿದ್ದ ವಸಿಷ್ಠ ಮುನಿಗೆ ಅದು ಅದ್ಭುತದಂತೆ ಭಾಸವಾಯಿತು, ಈ ವಿಷಯದಲ್ಲಿ ಪುರಾಣಜ್ಞರಾದ ಜನರು ಪದ್ಯರೂಪವಾದ ಉಕ್ತಿಯಿಂದ ಆ ಅದ್ಭುತದ ಮಹಿಮೆಯನ್ನು ಉದಾಹರಿಸುತ್ತಾರೆ.

ವಿಶ್ವಾಮಿತ್ರಪ್ರಸಾದೇನ ತ್ರಿಶಂಕುರ್ದಿವಿ ರಾಜತೇ ।
ದೇವೈಃ ಸಾರ್ಧಂ ಮಹಾತೇಜಾನುಗ್ರಹಾತ್ತಸ್ಯ ಧೀಮತಃ ॥ ೮೫ ॥

ತಸ್ಯ ಸತ್ಯರತಾ ನಾಮ ಭಾರ್ಯಾ ಕೈಕಯವಂಶಜಾ ।
ಕುಮಾರಂ ಜನಯಾಮಾಸ ಹರಿಶ್ಚಂದ್ರಮಕಲ್ಮಷಮ್ ॥ ೮೬ ॥

ಸ ತು ರಾಜಾ ಹರಿಶ್ಚಂದ್ರಸ್ತ್ರೈಶಂಕವ ಇತಿ ಶ್ರುತಃ ।
ಆಹರ್ತಾ ರಾಜಸೂಯಸ್ಯ ಸಮ್ರಾಡಿತಿ ಪರಿಶ್ರುತಃ ॥ ೮೭ ॥

ಹರಿಶ್ಚಂದ್ರಸ್ಯ ಚ ಸುತೋ ರೋಹಿತೋ ನಾಮ ವೀರ್ಯವಾನ್ ।
ಹರಿತೋ ರೋಹಿತಸ್ಯಾಥ ಚಂಚುರ್ಹಾರೀತ ಉಚ್ಯತೇ ॥ ೮೮ ॥

ವಿನಯಶ್ಚ ಸುದೇವಶ್ಚ ಚಂಚುಪುತ್ರೌ ಬಭೂವತುಃ ।
ಜೇತಾ ಸರ್ವಸ್ಯ ಕ್ಷತ್ರಸ್ಯ ವಿಜಯಸ್ತೇನ ಸ ಸ್ಮೃತಃ ॥ ೮೯ ॥

---

೮೫. ಹೀಗೆ ಜ್ಞಾನಿಯಾದ ಆ ವಿಶ್ವಾಮಿತ್ರ ಮುನಿಯ ಪ್ರಸಾದಾತಿಶಯದಿಂದ ಮಹಾ ತೇಜಸ್ವಿಯಾದ ಆ ತ್ರಿಶಂಕು ರಾಜನು ದೇವತೆಗಳೊಡನೆ ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಿರುವನು.

೮೬. ಆ ತ್ರಿಶಂಕು ರಾಜನ ಭಾರ್ಯೆಯಾದ, ಕೈಕಯ ವಂಶದಲ್ಲಿ ಜನಿಸಿದ ಸತ್ಯರತೆ ಎಂಬುವಳು ಪಾಪಕಳಂಕದಿಂದ ನಿರ್ಮುಕ್ತನಾದ ಹರಿಶ್ಚಂದ್ರ ಕುಮಾರನನ್ನು ಪ್ರಸವಿಸಿದಳು

೮೭. ಹರಿಶ್ಚಂದ್ರರಾಜನು ತ್ರಿಶಂಕು ಪುತ್ರನಾದ್ದರಿಂದ ತ್ರೈಶಂಕವನೆಂದು ಪ್ರಸಿದ್ಧನಾದನು, ಅವನು ರಾಜಸೂಯವೆಂಬ ಮಹಾ ಯಾಗವನ್ನು ಅನುಷ್ಠಾನ ಮಾಡಿದವನೂ, ಮತ್ತು ಸಾಮ್ರಾಜ್ಯವನ್ನಾಳುವ ಸಾರ್ವಭೌಮನೂ ಆಗಿ ಪ್ರಸಿದ್ಧಿ ಹೊಂದಿದನು.

೮೮. ಹರಿಶ್ಚಂದ್ರನಿಗೆ ವಿಕ್ರಮಶಾಲಿಯಾದ ರೋಹಿತನೆಂಬ ಪುತ್ರನಿದ್ದನು, ಆ ರೋಹಿತನಿಗೆ ಹರಿತನೆಂಬ ಪುತ್ರನಿದ್ದನು, ಆ ಹರಿತನಿಗೆ ಚಂಚು ಎಂಬ ಪುತ್ರನಿದ್ದನು.

೮೯. ಆ ಚಂಚುರಾಜನಿಗೆ ವಿಜಯ ಮತ್ತು ಸುದೇವ ಎಂಬ ಇಬ್ಬರು ಪುತ್ರರು ಜನಿಸಿದರು. ಅವರಲ್ಲಿ ವಿಜಯನೆಂಬುವನು ಸಮಸ್ತ ಕ್ಷತ್ರಿಯರನ್ನು ಜಯಿಸುವ ಅಪಾರ ಶಕ್ತಿಸಂಪನ್ನನಾದುದರಿಂದ ಅನ್ವರ್ಥವಾದ ಸಂಜ್ಞೆಯಿಂದ ವಿಜಯನೆಂದು ಸ್ಮರಿಸಲ್ಪಟ್ಟನು.

ರುರುಕಸ್ತನಯಸ್ತಸ್ಯ ರಾಜಾ ಧರ್ಮಾರ್ಥಕೋವಿದಃ ।
ರುರುಕಾತ್ತು ವೃಕಃ ಪುತ್ರಸ್ತಸ್ಮಾದ್ಬಾಹುರ್ವಿಜಜ್ಞಿವಾನ್ ॥ ೯೦ ॥

ಹೈಹಯೈಸ್ತಾಲಜಂಘೈಶ್ಚ ನಿರಸ್ತೋ ವ್ಯಸನೀ ನೃಪಃ ।
ಶಕೈರ್ಯವನಕಾಂಭೋಜೈಃ ಪಾರದೈಃ ಪಹ್ಲವೈಸ್ತಥಾ ॥ ೯೧ ॥

ನಾತ್ಯರ್ಥಂ ಧಾರ್ಮಿಕೋಽಭೂತ್ ಸ ಧರ್ಮ್ಯೇ ಸತಿ ಯುಗೇ ತಥಾ ।
ಸಗರಸ್ತು ಸುತೋ ಬಾಹೋರ್ಜಜ್ಞೇ ಸಹ ಗರೇಣ ವೈ ॥ ೯೨ ॥

ಭೃಗೋರಾಶ್ರಮಮಾಸಾದ್ಯ ಹ್ಯೌರ್ವೇಣ ಪರಿರಕ್ಷಿತಃ ।
ಆಗ್ನೇಯಮಸ್ತ್ರಂ ಲಬ್ಧ್ವಾ ತು ಭಾರ್ಗವಾತ್ಸಗರೋ ನೃಪಃ ॥ ೯೩ ॥

ಜಘಾನ ಪೃಥಿವೀಂ ಗತ್ವಾ ತಾಲಜಂಘಾನ್ ಸಹೈಹಯಾನ್ ।
ಶಕಾನಾಂ ಪಾರದಾನಾಂ ಚ ಧರ್ಮಂ ನಿರಸದಚ್ಯುತಃ ॥ ೯೪ ॥

---

೯೦. ಆ ವಿಜಯನೆಂಬುವನಿಗೆ ಧರ್ಮ ಮತ್ತು ಅರ್ಥ ಶಾಸ್ತ್ರಗಳಲ್ಲಿ ನಿಪುಣನಾದ ರುರುಕನೆಂಬ ರಾಜನು ಪುತ್ರನಾಗಿದ್ದನು, ರುರುಕನಿಂದ ವೃಕನೆಂಬುವನೂ ವೃಕನಿಂದ ಬಾಹು ಎಂಬುವನೂ ಪುತ್ರರಾಗಿ ಜನಿಸಿದರು.

೯೧. ಹೀಗಿರಲು ವ್ಯಸನಲಂಪಟನಾದ ಆ ಬಾಹುರಾಜನು ಹೈಹಯ, ತಾಲಜಂಘ, ಶಕ, ಯವನ, ಕಾಂಭೋಜ, ಪಾರದ, ಮತ್ತು ಪಹ್ಲವ ಎಂಬ ನೀಚ ಜನಾಂಗದವರಿಂದ ರಾಜ್ಯದಿಂದ ಚ್ಯುತನಾದನು.

೯೨. ಆ ರಾಜನು ಧರ್ಮಮಯವಾದ ಯುಗವು ನಡೆಯುತ್ತಲಿದ್ದರೂ ಹೆಚ್ಚು ಧರ್ಮದಲ್ಲಿ ಆಸಕ್ತಿಯನ್ನು ಇಟ್ಟವನಾಗಿರಲಿಲ್ಲ, ಅಂತಹ ಬಾಹು ಎಂಬುವನಿಗೆ ಸಗರ ಎಂಬ ಅನ್ವರ್ಥನಾಮಾಂಕಿತನಾದ ಪುತ್ರನು ವಿಷದಿಂದ ಸಹಿತನಾಗಿ ಜನ್ಮವೆತ್ತಿದನು.

೯೩. ಭೃಗುಮುನಿಯ ಆಶ್ರಮಕ್ಕೆ ಬಂದು ಆ ಸಗರ ರಾಜನು ಔರ್ವಮುನಿಯಿಂದ ರಕ್ಷಿಸಲ್ಪಟ್ಟನು, ಮತ್ತು ಭಾರ್ಗವ ಮುನಿಯಿಂದ ಆ ಸಗರ ರಾಜನು ಆಗ್ನೇಯಾಸ್ತ್ರವನ್ನು ಸಂಗ್ರಹಿಸಿದನು.

೯೪. ತರುವಾಯ ಜಯಾರ್ಥಿಯಾಗಿ ಭೂಮಿಯಲ್ಲಿ ಸಂಚರಿಸಿ ಹೈಹಯ, ತಾಲಜಂಘರನ್ನು ಸಂಹರಿಸಿದನು. ಮತ್ತು ಶಕ, ಪಹ್ಲವ ಮೊದಲಾದವರನ್ನು ಧರ್ಮಚ್ಯುತರನ್ನಾಗಿ ಮಾಡಿ ತಾನು ಯಾವ ಅಂಶದಲ್ಲಿಯೂ ಚ್ಯುತಿಯಿಲ್ಲದೆ ನಿರಂಕುಶನಾದನು.

ಕ್ಷತ್ರಿಯಾಣಾಂ ತಥಾ ತೇಷಾಂ ಪಾರದಾನಾಂ ಚ ಧರ್ಮವಿತ್ ।
ಋಷಯ ಊಚುಃ:—
ಕಥಂ ಸ ಸಗರೋ ರಾಜಾ ಗರೇಣ ಸಹ ಜಜ್ಞಿವಾನ್ । ॥ ೯೫ ॥

ಕಿಮರ್ಥಂ ವಾ ಶಕಾದೀನಾಂ ಕ್ಷತ್ರಿಯಾಣಾಂ ಮಹೌಜಸಾಮ್।
ಧರ್ಮಾನ್ ಕುಲೋಚಿತಾನ್ ಕ್ರುದ್ಧೋ ರಾಜಾ ನಿರಸದಚ್ಯುತಃ ॥೯೬ ॥
ಸೂತ ಉವಾಚ :—
ಬಾಹೋರ್ವ್ಯಸನಿನಸ್ತಸ್ಯ ಹೃತಂ ರಾಜ್ಯಂ ಪುರಾ ಕಿಲ ।
ಹೈಹಯೈಸ್ತಾಲಜಂಘೈಶ್ಚ ಶಕೈಃ ಸಾರ್ಧಂ ಸಮಾಗತೈಃ ॥ ೯೭ ॥

ಯವನಾಃ ಪಾರದಾಶ್ಚೈವ ಕಾಂಭೋಜಾಃ ಪಹ್ಲವಾಸ್ತಥಾ ।
ಹೈಹಯಾರ್ಥಂ ಪರಾಕ್ರಾಂತಾ ಏತೇ ಪಂಚ ಗಣಾಸ್ತದಾ ॥ ೯೮ ॥

ಹೃತರಾಜ್ಯಸ್ತದಾ ಬಾಹುಃ ಸನ್ನ್ಯಸ್ಯ ಸ ತದಾ ಗೃಹಮ್ ।
ವನಂ ಪ್ರವಿಶ್ಯ ಧರ್ಮಾತ್ಮಾ ಸಹ ಪತ್ನ್ಯಾ ತಪೋಽಚರತ್ ॥ ೯೯ ॥

---

೯೫. ಹಾಗು ಕ್ಷತ್ರಿಯ, ಪಾರದ ಜನರ ಧರ್ಮವಿಶೇಷಗಳನ್ನು ತಿಳಿದವನಾಗಿ ಇದ್ದನು, ಈ ಕಥೆಯನ್ನು ಕೇಳಿದ ಮಹರ್ಷಿಗಳು ಪ್ರಶ್ನೆಮಾಡಿದರು :— ಸಗರನೆಂಬ ರಾಜನು ವಿಷದ ಸಂಗಡ ಜನ್ಮವನ್ನೆತ್ತಿರುವುದು ಹೇಗೆ ?

೯೬. ಮತ್ತು ಮಹಾತೇಜಸ್ವಿಗಳಾದ ಶಕ ಮುಂತಾದ ಕ್ಷತ್ರಿಯರ ವಿಷಯದಲ್ಲಿ ಸಗರ ರಾಜನು ಕೋಪಗೊಂಡವನೂ ಅಕುಂಠಿತವಾದ ಬಲವುಳ್ಳವನೂ ಆಗಿ ಅವರ ಕುಲೋಚಿತವಾದ ಧರ್ಮವನ್ನು ಪರಿತ್ಯಾಗಮಾಡಿಸಲು ಕಾರಣವೇನು ?

೯೭. ಸೂತಮುನಿಯು ಇಂತಹ ಪ್ರಶ್ನೆಗಳಿಗೆ ಸಮಾಧಾನವನ್ನಿತ್ತನು :— ಪೂರ್ವದಲ್ಲಿ ವ್ಯಸನಲಂಪಟನಾದ ಬಾಹುರಾಜನ ರಾಜ್ಯವು ಹೈಹಯ, ತಾಲಜಂಘ, ಮತ್ತು ಶಕ ಎಂಬ ಗುಂಪಾಗಿ ಬಂದಿರುವ ಕ್ಷತ್ರಿಯರಿಂದ ಅಪಹರಿಸಲ್ಪಟ್ಟಿತು.

೯೮. ಯವನ, ಪಾರದ, ಕಾಂಭೋಜ, ಪಹ್ಲವ ಮತ್ತು ಶಕ ಎಂಬ ಐದು ಪಂಗಡದ ಕ್ಷತ್ರಿಯ ಜನಾಂಗದವರ ಗುಂಪುಗಳು ಹೈಹಯ ರಾಜರ ಸಹಾಯಾರ್ಥವಾಗಿ ಈ ಪರಾಕ್ರಮದ ಕಾರ್ಯಕ್ಕೆ ಸಿದ್ಧರಾದರು.

೯೯. ಇವರಿಂದ ಅಪಹರಿಸಲ್ಪಟ್ಟ ರಾಜ್ಯವುಳ್ಳ ಬಾಹುರಾಜನು ಆಗ ಗೃಹ ಮುಂತಾದ ಭೋಗ್ಯವಸ್ತುವನ್ನು ಸನ್ಯಾಸಮಾಡಿ ಪತ್ನಿಯೊಡನೆ ವನವನ್ನು ಪ್ರವೇಶಿಸಿ ಧರ್ಮಾತ್ಮನಾಗಿ ತಪಸ್ಸನ್ನು ಆಚರಿಸಿದನು.

ಕದಾಚಿದಪ್ಯಕಲ್ಪಃ ಸ ತೋಯಾರ್ಥಂ ಪ್ರಸ್ಥಿತೋ ನೃಪಃ ।
ವೃದ್ಧತ್ವಾದ್ದುರ್ಬಲತ್ವಾಚ್ಚ ಹ್ಯಂತರಾ ಸ ಮಮಾರ ಚ ॥ ೧೦೦ ॥

ಪತ್ನೀ ತು ಯಾದವೀ ತಸ್ಯ ಸಗರ್ಭಾ ಪೃಷ್ಠತೋಽಪ್ಯಗಾತ್ ।
ಸಪತ್ನ್ಯಾ ತು ಗರಸ್ತಸ್ಯೈ ದತ್ತೋ ಗರ್ಭಜಿಘಾಂಸಯಾ ॥ ೧೦೧ ॥

ಸಾ ತು ಭರ್ತುಶ್ಚಿತಾಂ ಕೃತ್ವಾ ವಹ್ನಿಂ ತಂ ಸಮರೋಹಯತ್ ।
ಔರ್ವಸ್ತಾಂ ಭಾರ್ಗವೋ ದೃಷ್ಟ್ವಾ ಕಾರುಣ್ಯಾದ್ಧಿ ನ್ಯವರ್ತಯತ್ ॥ ೧೦೨ ॥

ತಸ್ಯಾಶ್ರಮೇ ತು ಗರ್ಭಂ ಸಾ ಗರೇಣ ಚ ತದಾ ಸಹ ।
ವ್ಯಜಾಯತ ಮಹಾಬಾಹುಂ ಸಗರಂ ನಾಮ ಧಾರ್ಮಿಕಂ ॥ ೧೦೩ ॥

ಔರ್ವಸ್ತು ಜಾತಕರ್ಮಾದೀನ್ ಕೃತ್ವಾ ತಸ್ಯ ಮಹಾತ್ಮನಃ ।
ಅಧ್ಯಾಪ್ಯ ವೇದಾಞ್ಛಾಸ್ತ್ರಾಣಿ ತತೋಽಸ್ತ್ರಂ ಪ್ರತ್ಯಪಾದಯತ್ ॥ ೧೦೪ ॥

---

೧೦೦. ಹೀಗಿರಲು ಒಂದು ಸಮಯದಲ್ಲಿ ಅಶಕ್ತನಾದ ಆ ರಾಜನು ನೀರಿಗೋಸ್ಕರ ಹೊರಟವನಾಗಿ ವೃದ್ಧನೂ ಮತ್ತು ಮುಪ್ಪಿನಿಂದ ಬಲಹೀನನೂ ಆಗಿರುವುದರಿಂದ ಮಧ್ಯಮಾರ್ಗದಲ್ಲಿ ಮರಣವನ್ನು ಹೊಂದಿದನು.

೧೦೧. ಆಗ ಯದುವಂಶದಲ್ಲಿ ಹುಟ್ಟಿದ ಅವನ ಪತ್ನಿಯು ಗರ್ಭವತಿಯಾಗಿದ್ದರೂ ಪತಿಯನ್ನು ಹಿಂಬಾಲಿಸಿದಳು. ಅವಳ ಸವತಿಯು ಅವಳ ಗರ್ಭವನ್ನು ನಾಶಮಾಡಬೇಕೆಂಬ ಇಷ್ಟದಿಂದ ಅವಳಿಗೆ ವಿಷವನ್ನು ಕೊಟ್ಟಳು.

೧೦೨. ಅವಳು ಪತಿಗೆ ಚಿತೆಯನ್ನು ಮಾಡಿ ಚಿತೆಯಲ್ಲಿ ಪತಿ ದೇಹವನ್ನು ಇಟ್ಟಳು. ಮತ್ತು ತಾನು ಆ ಚಿತೆಯಲ್ಲಿ ಪ್ರವೇಶ ಮಾಡಲು ಇಷ್ಟವುಳ್ಳವಳಾಗಲು ಭೃಗುವಂಶ ಪೂಜ್ಯನಾದ ಔರ್ವಮುನಿಯು ಕರುಣೆಯಿಂದ ಅವಳನ್ನು ಹಿಂದಕ್ಕೆ ತಿರುಗಿಸಿದನು.

೧೦೩. ಅವಳು ಆ ಔರ್ವಮುನಿಯ ಆಶ್ರಮದಲ್ಲಿ ವಿಷದಿಂದ ಸಹಿತವಾದ ಗರ್ಭದಿಂದ ಮಹಾಬಾಹು ಬಲಶಾಲಿಯೂ, ಪರಮ ಧಾರ್ಮಿಕನೂ ಆದ ಸಗರ ರಾಜನನ್ನು ಪ್ರಸುವಿಸಿದಳು.

೧೦೪. ಔರ್ವಮುನಿಯು ಆ ಶಿಶುವಿಗೆ ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ನೆರವೇರಿಸಿ ಕ್ರಮವಾಗಿ ಆ ಮಹಾತ್ಮ ರಾಜನು ಅಭಿವೃದ್ಧಿಗೆ ಬಂದ ತರುವಾಯ ವೇದ-ಶಾಸ್ತ್ರಗಳನ್ನು ಉಪದೇಶಕೊಟ್ಟು ಅಸ್ತ್ರವಿದ್ಯೆಯನ್ನು ಉಪದೇಶಿಸಿದನು.

ತತಃ ಶಕಾನ್ ಸಯವನಾನ್ ಕಾಂಭೋಜಾನ್ ಪಾರದಾಂಸ್ತಥಾ ।
ಪಹ್ಲವಾಂಶ್ಚೈವ ನಿಶ್ಶೇಷಾನ್ ಕರ್ತುಂ ವ್ಯವಸಿತೋ ನೃಪಃ ॥ ೧೦೫ ॥

ತೇ ಹನ್ಯಮಾನಾ ವೀರೇಣ ಸಗರೇಣ ಮಹಾತ್ಮನಾ ।
ವಸಿಷ್ಠಂ ಶರಣಂ ಸರ್ವೇ ಸಂಪ್ರಾಪ್ತಾಃ ಶರಣೈಷಿಣಃ ॥ ೧೦೬ ॥

ವಸಿಷ್ಠೋ ವೀಕ್ಷ್ಯ ತಾನ್ ಯುಕ್ತಾನ್ ವಿನಯೇನ ಮಹಾಮುನಿಃ ।
ಸಗರಂ ವಾರಯಾಮಾಸ ತೇಷಾಂ ದತ್ವಾ್ತಭಯಂ ತಥಾ ॥ ೧೦೭ ॥

ಸಗರಃ ಸ್ವಾಂ ಪ್ರತಿಜ್ಞಾಂ ಚ ಗುರೋರ್ವಾಕ್ಯಂ ನಿಶಮ್ಯ ಚ ।
ಜಘಾನ ಧರ್ಮಂ ವೈ ತೇಷಾಂ ವೇಷಾನ್ಯತ್ವಂ ಚಕಾರ ಹ ॥ ೧೦೮ ॥

ಅರ್ಧಂ ಶಕಾನಾಂ ಶಿರಸೋ ಮುಂಡಯಿತ್ವಾ ವ್ಯಸರ್ಜಯತ್ ।
ಯವನಾನಾಂ ಶಿರಃ ಸರ್ವಂ ಕಾಂಭೋಜಾನಾಂ ತಥೈವ ಚ ॥ ೧೦೯ ॥

---

೧೦೫. ತರುವಾಯ ಆ ಸಗರ ರಾಜನು ಶಕ, ಯವನ, ಕಾಂಭೋಜ, ಪಾರದ, ಮತ್ತು ಪಹ್ಲವ ರಾಜರನ್ನು ನಿರ್ಮೂಲವಮಾಡಬೇಕೆಂಬ ದ್ವೇಷಭಾವದಿಂದ ಯತ್ನವನ್ನು ಮಾಡಿದನು.

೧೦೬. ವೀರಾಗ್ರೇಸರನೂ ಮಹಾತ್ಮನೂ ಆದ ಸಗರರಾಜನಿಂದ ಸಂಹರಿಸಲ್ಪಡುತ್ತಲಿದ್ದ ಶಕ ಮೊದಲಾದ ಆ ರಾಜರು ಎಲ್ಲರೂ ಶರಣಾರ್ಥಿಗಳಾಗಿ ವಸಿಷ್ಠ ಮುನಿಯನ್ನು ಶರಣು ಹೊಂದಿದರು.

೧೦೭. ವಸಿಷ್ಠ ಮುನಿಯು ವಿನಯದಿಂದ ಕೂಡಿ ಬಂದಿರುವ ಆ ರಾಜರೆಲ್ಲರನ್ನೂ ನೋಡಿ ಮೊದಲು ಶರಣಾಗತರಾಗಿರುವ ಆ ರಾಜರಿಗೆ ಅಭಯವನ್ನು ಕೊಟ್ಟು ಅವರ ಸಂಹಾರ ಕರ್ಮದಿಂದ ಸಗರನನ್ನು ನಿವಾರಿಸಿದನು.

೧೦೮. ಆಗ ಸಗರ ರಾಜನು ತನ್ನ ಪ್ರತಿಜ್ಞೆಯನ್ನು ಪರ್ಯಾಲೋಚಿಸಿ ಗುರುವಿನ ಆಜ್ಞಾವಚನವನ್ನು ಕೇಳಿ ಆ ರಾಜರ ಸ್ವಧರ್ಮವನ್ನು ತ್ಯಾಗಮಾಡಿಸಿ ಅವರಿಗೆ ವಿರೂಪವನ್ನು ಮಾಡಿ ಧರ್ಮ ಬಾಹ್ಯರನ್ನಾಗಿ ಮಾಡಿದನು.

೧೦೯. ಶಕ ರಾಜರಿಗೆ ಅರ್ಧಭಾಗ ಶಿರೋಮುಂಡನದಿಂದ ವಿರೂಪವನ್ನು ಮಾಡಿ ಅವರನ್ನು ಬಿಟ್ಟನು. ಯವನ, ಕಾಂಭೋಜರಿಗೆ ಸಂಪೂರ್ಣ ಶಿರಸ್ಸನ್ನು ಮುಂಡನ ಮಾಡಿಸಿ ವೈರೂಪ್ಯವನ್ನುಂಟುಮಾಡಿದನು.

ಪಾರದಾ ಮುಕ್ತಕೇಶಾಶ್ಚ ಪಹ್ಲವಾಃ ಶ್ಮಶ್ರುಧಾರಿಣಃ ।
ನಿಃಸ್ವಾಧ್ಯಾಯವಷಟ್ಕಾರಾಃ ಕೃತಾಸ್ತೇನ ಮಹಾತ್ಮನಾ ॥ ೧೧೦ ॥

ಶಕಾ ಯವನಕಾಂಭೋಜಾಃ ಪಹ್ಲವಾಃ ಪಾರದೈಃ ಸಹ ।
ಕಲಿಸ್ಪರ್ಶಾ ಮಾಹಿಷಿಕಾ ದಾರ್ವಾಶ್ಚೋಲಾಃ ಖಶಾಸ್ತಥಾ ॥ ೧೧೧ ॥

ಸರ್ವೇ ತೇ ಕ್ಷತ್ರಿಯಗಣಾ ಧರ್ಮಸ್ತೇಷಾಂ ನಿರಾಕೃತಃ ।
ವಸಿಷ್ಠವಚನಾತ್ಪೂರ್ವಂ ಸಗರೇಣ ಮಹಾತ್ಮನಾ ॥ ೧೧೨ ॥

ಸ ಧರ್ಮವಿಜಯೀ ರಾಜಾ ವಿಜಿತ್ಯೇಮಾಂ ವಸುಂಧರಾಮ್ ।
ಅಶ್ವಂ ವೈ ಚಾರಯಾಮಾಸ ವಾಜಿಮೇಧಾಯ ದೀಕ್ಷಿತಃ ॥ ೧೧೩ ॥

ತಸ್ಯ ಚಾರಯತಃ ಸೋಽಶ್ವಃ ಸಮುದ್ರೇ ಪೂರ್ವದಕ್ಷಿಣೇ ।
ವೇಲಾಸಮೀಪೇಽಪಹೃತೋ ಭೂಮಿಂ ಚೈವ ಪ್ರವೇಶಿತಃ ॥ ೧೧೪ ॥

---

೧೧೦ ಪಾರದರು ಸಂಪೂರ್ಣ ಕೇಶಗಳನ್ನು ಬಿಟ್ಟಿರುವಂತೆಯೂ ಪಹ್ಲವರು ಶ್ಮಶ್ರುವನ್ನು ಮಾತ್ರ ಧರಿಸಿರುವಂತೆಯೂ ಮಾಡಿದನು. ಹೀಗೆ ಎಲ್ಲರನ್ನೂ ವಿರೂಪಾವಸ್ಥೆಯಲ್ಲಿಟ್ಟು ಮಹಾತ್ಮನಾದ ಸಗರರಾಜನು ಅಧ್ಯಯನ–ಯಜನಾದಿ ಧರ್ಮಾನುಷ್ಠಾನ ಶೂನ್ಯರನ್ನಾಗಿ ಮಾಡಿದನು.

೧೧೧. ಹೀಗೆ ಶಕ, ಯವನ, ಕಾಂಭೋಜ, ಪಹ್ಲವ, ಮತ್ತು ಪಾರದರೆಂಬ ಅಧಾರ್ಮಿಕ ರಾಜರಸಂಗಡ ಮತ್ತೆ ಕೆಲವು ಕಲಿಸ್ಪರ್ಶ, ಮಾಹಿಷಿಕ, ದಾರ್ವ, ಚೋಲ ಮತ್ತು ಖಶ ಎಂಬ ಮ್ಲೇಚ್ಛರಾಜಗಣವು ಬೆಳೆಯಿತು.

೧೧೨ ಹೀಗೆ ಈ ಎಲ್ಲ ಜನಾಂಗದವರು ಮೂಲಕ್ಷತ್ರಿಯ ವಂಶದಲ್ಲಿ ಹುಟ್ಟಿದವರು. ಆದರೆ ಪೂರ್ವದಲ್ಲಿ ವಸಿಷ್ಠಮುನಿಯ ವಚನದಂತೆ ಮಹಾತ್ಮನಾದ ಸಗರರಾಜನಿಂದ ಧರ್ಮಬಾಹ್ಯರಾಗಿ ಮಾಡಲ್ಪಟ್ಟಿರುವರು.

೧೧೩. ಧರ್ಮದಿಂದ ಜಯಿಸುವ ಶೀಲವುಳ್ಳ ಸಗರರಾಜನು ಈ ಭೂಮಂಡಲವನ್ನು ಗೆದ್ದು ಅಶ್ವಮೇಧಯಾಗವನ್ನು ಮಾಡಲು ದೀಕ್ಷೆಯನ್ನು ಕೈಗೊಂಡು ಅದಕ್ಕೋಸ್ಕರ ಅಶ್ವವನ್ನು ಭೂಮಿಯಲ್ಲಿ ಸಂಚಾರಮಾಡಿಸಿದನು.

೧೧೪ ಹೀಗೆ ಅಶ್ವವನ್ನು ಸಂಚಾರಮಾಡಿಸುವ ಆ ರಾಜನ ಅಶ್ವವು ಪೂರ್ವದಕ್ಷಿಣಭಾಗದ ಸಮುದ್ರದ ಸಮೀಪದ ತೀರಭೂಮಿಯಲ್ಲಿ ಸಂಚರಿಸುತ್ತಿದ್ದಾಗ ಅಪಹರಿಸಲ್ಪಟ್ಟು ಭೂಮಿಯ ಒಳಭಾಗಕ್ಕೆ ಒಯ್ಯಲ್ಪಟ್ಟಿತು.

ಸ ತಂ ದೇಶಂ ಸುತೈಃ ಸರ್ವೈಃ ಖಾನಯಾಮಾಸ ಪಾರ್ಥಿವಃ ।
ಆಸೇದುಶ್ಚ ತತಸ್ತಸ್ಮಿನ್ ಖನಂತಸ್ತೇ ಮಹಾರ್ಣವೇ ॥ ೧೧೫ ॥

ತಮಾದಿಪುರುಷಂ ದೇವಂ ಹರಿಂ ಕೃಷ್ಣಂ ಪ್ರಜಾಪತಿಮ್ ।
ವಿಷ್ಣುಂ ಕಪಿಲರೂಪೇಣ ಹಂಸಂ ನಾರಾಯಣಂ ಪ್ರಭುಮ್ ॥ ೧೧೬ ॥

ತಸ್ಯ ಚಕ್ಷುಃ ಸಮಾಸಾದ್ಯ ತೇಜಸ್ತತ್ಪ್ರತಿಪದ್ಯತೇ ।
ದಗ್ಧಾಃ ಪುತ್ರಾಸ್ತದಾ ಸರ್ವೇ ಚತ್ವಾರಸ್ತ್ವವಶೇಷಿತಾಃ ॥ ೧೧೭ ॥

ಬರ್ಹಿಕೇತುಃ ಸುಕೇತುಶ್ಚ ತಥಾ ಧರ್ಮರಥಶ್ಚ ಯಃ ।
ಶೂರಃ ಪಂಚಜನಶ್ಚೈವ ತಸ್ಯ ವಂಶಕರಾಃ ಪ್ರಭೋಃ ॥ ೧೧೮ ॥

ಪ್ರಾದಾಚ್ಚ ತಸ್ಯ ಭಗವಾನ್ ಹರಿರ್ನಾರಾಯಣೋ ವರಾನ್ ।
ಅಕ್ಷಯತ್ವಂ ಸ್ವವಂಶಸ್ಯ ವಾಜಿಮೇಧಶತಂ ತಥಾ ॥ ೧೧೯ ॥

---

೧೧೫. ಆಗ ಆ ರಾಜನು ತನ್ನ ಸಮಸ್ತ ಪುತ್ರರಿಂದ ಆ ಸಮುದ್ರ ತೀರಪ್ರದೇಶ ವನ್ನು ಅಗೆಯಿಸಿದನು, ಮಹಾ ಸಮುದ್ರದಲ್ಲಿ ನೆಲವನ್ನು ಅಗೆಯುತ್ತಿದ್ದ ರಾಜ ಪುತ್ರರು ಕಡೆಯಲ್ಲಿ ಅಶ್ವವನ್ನು ಹೊಂದಿದರು.

೧೧೬. ಮತ್ತು ಅಶ್ವವನ್ನು ಕಂಡ ಸ್ಥಳದಲ್ಲಿ ಆದಿಪುರುಷನೂ, ಜ್ಯೋತಿ ರೂಪನೂ, ಭಕ್ತರ ಪಾಪವನ್ನು ಅಪಹರಿಸುವವನೂ, ಅನರ್ಥಗಳನ್ನು ಸೆಳೆಯುವ ವನೂ, ಪ್ರಜಾಪಾಲಕನೂ, ವ್ಯಾಪಕನೂ, ಸ್ವಮಹಿಮೆಯಲ್ಲಿ ವಿಶ್ರಾಂತನೂ, ಪ್ರಭುವೂ ಆದ ಶ್ರೀಮನ್ನಾರಾಯಣನು ಕಪಿಲಮುನಿ ರೂಪದಿಂದ ಇರುವುದನ್ನು ಕಂಡರು.

೧೧೭. ಆ ಸಗರ ಪುತ್ರರು ಕಪಿಲ ಮಹಾಮುನಿಯ ನೇತ್ರಾಗ್ನಿಯ ತೇಜಸ್ಸಿಗೆ ವಿಷಯರಾದರು. ಆಗ ಆ ರಾಜಪುತ್ರರೆಲ್ಲರೂ ಅಗ್ನಿಯಿಂದ ದಹಿಸಲ್ಪಟ್ಟರು ಅವರಲ್ಲಿ ನಾಲ್ಕು ಮಂದಿಯು ಮಾತ್ರ ಅವಶಿಷ್ಟರಾದರು.

೧೧೮. ಆಗ ಸಗರ ರಾಜನ ಪುತ್ರರೆಲ್ಲರೂ ದಗ್ಧರಾಗಿ ಬರ್ಹಿಕೇತು, ಸುಕೇತು, ಧರ್ಮರಥ ಮತ್ತು ಶೂರನಾದ ಪಂಚಜನ–ಎಂಬ ನಾಲ್ಕು ಮಂದಿಯು ಮಾತ್ರ ಉಳಿದು ಇವರು ಪ್ರಭುವಾದ ರಾಜನ ವಂಶವನ್ನು ಶಾಶ್ವತವಾಗಿ ಪ್ರತಿಷ್ಠೆಗೊಳಿಸಿದರು.

೧೧೯. ಪೂಜ್ಯನೂ ಸಂಕಷ್ಟಗಳ ನಿವಾರಕನೂ ಆದ ಶ್ರೀಮನ್ನಾರಾಯಣನು ಆ ರಾಜನಿಗೆ ವಂಶವು ಅಕ್ಷಯವಾಗಿರುವಂತೆಯೂ ಮತ್ತು ಒಂದು ನೂರು ಅಶ್ವಮೇಧ ಯಜ್ಞಗಳು ನಡೆಯುವಂತೆಯೂ ವರಗಳನ್ನು ಅನುಗ್ರಹಿಸಿದನು.

ವಿಭುಃ ಪುತ್ರಂ ಸಮುದ್ರಂ ಚ ಸ್ವರ್ಗೇ ವಾಸಂ ತಥಾಕ್ಷಯಮ್ ।
ತಂ ಸಮುದ್ರೋಽಶ್ವಮಾದಾಯ ವವಂದೇ ಸರಿತಾಂ ಪತಿಃ ॥ ೧೨೦ ॥

ಸಾಗರತ್ವಂ ಚ ಲೇಭೇ ಸ ಕರ್ಮಣಾ ತೇನ ತಸ್ಯ ವೈ ।
ತಂ ಚಾಶ್ವಮೇಧಿಕಂ ಸೋಽಶ್ವಂ ಸಮುದ್ರಾತ್ ಪ್ರಾಪ್ಯ ಪಾರ್ಥಿವಃ
॥ ೧೨೧ ॥

ಆಜಹಾರಾಶ್ವಮೇಧಾನಾಂ ಶತಂ ಚೈವ ಪುನಃ ಪುನಃ ।
ಷಷ್ಟಿಂ ಪುತ್ರಸಹಸ್ರಾಣಿ ದಗ್ಧಾನ್ಯಸ್ಯ ರುಷಾ ವಿಭೋಃ ॥ ೧೨೨ ॥

ತೇಷಾಂ ನಾರಾಯಣಂ ತೇಜಃ ಪ್ರವಿಷ್ಟಾನಿ ಮಹಾತ್ಮನಾಮ್ ।
ಪುತ್ರಾಣಾಂ ತು ಸಹಸ್ರಾಣಿ ಷಷ್ಟಿಸ್ತು ಇತಿ ನಃ ಶ್ರುತಮ್ ॥ ೧೨೩ ॥

ಋಷಯ ಊಚುಃ :—

ಸಗರಸ್ಯಾತ್ಮಜಾ ನಾನಾ ಕಥಂ ಜಾತಾ ಮಹಾಬಲಾಃ ।
ವಿಕ್ರಾಂತಾಃ ಷಷ್ಟಿಸಾಹಸ್ರಾ ವಿಧಿನಾ ಕೇನ ವಾ ವದ ॥ ೧೨೪ ॥

---

೧೨೦. ಮತ್ತು ಪ್ರಭುವಾದ ವಿಷ್ಣುವು ಸಮುದ್ರವನ್ನು ಪುತ್ರನನ್ನಾಗಿ ಕಲ್ಪಿಸಿದನು. ಹಾಗು ಅಕ್ಷಯವಾದ ಸ್ವರ್ಗವಾಸ ಸುಖವನ್ನು ಅನುಗ್ರಹಿಸಿದನು. ನದಿಗಳ ಪತಿಯಾದ ಸಮುದ್ರರಾಜನು ಅಶ್ವವನ್ನು ತಂದುಕೊಟ್ಟು ನಮಸ್ಕರಿಸಿದನು.

೧೨೧. ಹೀಗೆ ಸಮುದ್ರರಾಜನು ಆಚರಿಸಿದ ಕರ್ಮದಿಂದ ಸಮುದ್ರರಾಜನು "ಸಾಗರ" ಎಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿದನು. ತರುವಾಯ ಆ ರಾಜನು ಸಮುದ್ರನಿಂದ ತನ್ನ ಅಶ್ವಮೇಧಯಜ್ಞದ ಅಶ್ವವನ್ನು ಹೊಂದಿದನು.

೧೨೨. ಆ ಮೇಲೆ ಒಂದು ನೂರು ಅಶ್ವಮೇಧ ಯಾಗಗಳನ್ನು ಒಂದಾದ ಮೇಲೊಂದು ಕ್ರಮವಾಗಿ ಆಚರಿಸಿದನು. ಸರ್ವ ನಿಯಾಮಕನಾದ ವಿಷ್ಣು ಪರಮಾತ್ಮನ ಕೋಪದಿಂದ ಈ ರಾಜನ ಅರವತ್ತು ಸಹಸ್ರ ಮಂದಿ ಪುತ್ರರು ದಗ್ಧರಾದರು.

೧೨೩. ಆ ಮಹಾತ್ಮರಾದ ಸಗರ ಪುತ್ರರು ಅರವತ್ತು ಸಹಸ್ರಮಂದಿಯೂ ಕೂಡ ಈ ಪ್ರಸಂಗದಿಂದ ಶ್ರೀಮನ್ನಾರಾಯಣನ ಪರಮ ತೇಜಃ ಪುಂಜವನ್ನು ಪ್ರವೇಶಿಸಿದರು, ಎಂದು ನಾವು ಪರಂಪರೆಯಿಂದ ಕೇಳುತ್ತೇವೆ.

೧೨೪. ಈ ಕಥಾನಕವನ್ನು ಕೇಳಿದ ಮುನಿಗಳು ಪ್ರಶ್ನೆಮಾಡಿದರು :—ಸಗರರಾಜನ ಪುತ್ರರು ಹೀಗೆ ಮಹಾ ಬಲಿಷ್ಠರೂ ಮತ್ತು ವಿಕ್ರಮಶಾಲಿಗಳೂ ಆಗಿ ಅರವತ್ತು ಸಹಸ್ರ ಸಂಖ್ಯೆಯಿಂದ ಅಷ್ಟೊಂದು ಹೆಚ್ಚುಮಂದಿಯು ಯಾವ ವಿಧಾನದಿಂದ ಹುಟ್ಟಿದರು? ಅದನ್ನು ಹೇಳು.

ಸೂತ ಉವಾಚ :—

ದ್ವೇ ಪತ್ನ್ಯೌ ಸಗರಸ್ಯಾಸ್ತಾಂ ತಪಸಾ ದಗ್ಧಕಿಲ್ಬಿಷೇ ।
ಜ್ಯೇಷ್ಠಾ ವಿದರ್ಭದುಹಿತಾ ಕೇಶಿನೀ ನಾಮ ನಾಮತಃ ॥ ೧೨೫ ॥

ಕನೀಯಸೀ ತು ಯಾ ತಸ್ಯ ಪತ್ನೀ ಪರಮಧರ್ಮಿಣೀ ।
ಅರಿಷ್ಟನೇಮಿದುಹಿತಾ ರೂಪೇಣಾಪ್ರತಿಮಾ ಭುವಿ ॥ ೧೨೬ ॥

ಔರ್ವಸ್ತಾಭ್ಯಾಂ ವರಂ ಪ್ರಾದಾತ್ತಪಸಾರಾಧಿತಃ ಪ್ರಭುಃ ।
ಏಕಾ ಜನಿಷ್ಯತೇ ಪುತ್ರಂ ವಂಶಕರ್ತಾರಮೀಪ್ಸಿತಮ್ ॥ ೧೨೭ ॥

ಷಷ್ಟಿಂ ಪುತ್ರಸಹಸ್ರಾಣಿ ದ್ವಿತೀಯಾ ಜನಯಿಷ್ಯತಿ ।
ಮುನೇಸ್ತು ವಚನಂ ಶ್ರುತ್ವಾ ಕೇಶಿನೀ ಪುತ್ರಮೇಕಕಮ್ ॥ ೧೨೮ ॥

ವಂಶಸ್ಯ ಕಾರಣಂ ಜ್ಯೇಷ್ಠಂ ಜಗ್ರಾಹ ನೃಪಸಂಸದಿ ।
ಷಷ್ಟಿಂ ಪುತ್ರಸಹಸ್ರಾಣಿ ಸುಪರ್ಣಭಗಿನೀ ತಥಾ ॥ ೧೨೯ ॥

---

೧೨೫. ಸೂತಮುನಿಯು ಇಂತೆಂದನು :—ಸಗರರಾಜನಿಗೆ ತಪಶ್ಚರ್ಯೆಯಿಂದ ಪಾತಕಗಳನ್ನು ಧ್ವಂಸಮಾಡಿರುವ ಇಬ್ಬರು ಭಾರ್ಯೆಯರಿದ್ದರು. ಅವರಲ್ಲಿ ಒಬ್ಬಳು ವಿದರ್ಭರಾಜನ ಮಗಳಾದ ಕೇಶಿನಿ ಎಂಬುವಳು. ಇವಳು ಜ್ಯೇಷ್ಠ ಪತ್ನಿಯಾಗಿದ್ದಳು.

೧೨೬. ಅವನ ಕನಿಷ್ಠ ಪತ್ನಿಯು ಪರಮಧಾರ್ಮಿಕಳಾಗಿಯೂ ಭೂಲೋಕದಲ್ಲಿ ರೂಪದಿಂದ ನಿರುಪಮಳಾಗಿಯೂ ಇದ್ದಳು. ಅವಳು ಅರಿಷ್ಟ ನೇಮಿ ಎಂಬ ರಾಜನ ಪುತ್ರಿಯು.

೧೨೭. ಸಂತತಿಗೋಸ್ಕರ ಇಬ್ಬರು ಸಗರ ರಾಜಪತ್ನಿಯರಿಂದ ಆರಾಧಿಸಲ್ಪಟ್ಟ ಪ್ರಭುವಾದ ಔರ್ವಮುನಿಯು ಅವರಿಗೆ ಸಂಪತಿಯ ವರವನ್ನು ಕೊಟ್ಟನು. ಒಬ್ಬಳು ವಂಶಪ್ರತಿಷ್ಠೆಗೆ ನಿಮಿತ್ತನಾದ ಮತ್ತು ಬಲು ಇಷ್ಟನಾದ ಒಬ್ಬ ಪುತ್ರನನ್ನು ಹೊಂದುವಳು.

೧೨೮. ಮತ್ತೊಬ್ಬಳು ಅರವತ್ತು ಸಹಸ್ರಮಂದಿ ಪುತ್ರರನ್ನು ಹೊಂದುವಳು. ಹೀಗೆಂದು ಇಬ್ಬರಿಗೆ ಮುನಿಯು ವರವನ್ನು ಕೊಟ್ಟನು. ಕೇಶಿನಿಯು ಮುನಿಯು ಹೇಳಿದ ವಚನವನ್ನು ಕೇಳಿ ಒಬ್ಬ ಪುತ್ರನನ್ನು ತಾನು ಅಂಗೀಕರಿಸಿದಳು.

೧೨೯. ರಾಜನೆ! ಕೇಶಿನಿಯು ಆ ಪ್ರಸಂಗದಲ್ಲಿ ವಂಶವನ್ನು ಶಾಶ್ವತಗೊಳಿಸುವ ಪುತ್ರನು ತನಗಿರಲೆಂದು ಭಾವಿಸಿದಳು. ಗರುಡನ ತಂಗಿಯಾದ ಮತ್ತೊಬ್ಬಳು ಅರವತ್ತು ಸಹಸ್ರಮಂದಿ ಪುತ್ರರನ್ನು ತಾನು ಹೊಂದಬೇಕೆಂದು ವರವನ್ನು ಅಂಗೀಕರಿಸಿದಳು.

ಮಹಾಭಾಗಾ ಪ್ರಮುದಿತಾ ಜಗ್ರಾಹ ಸುಮತಿಸ್ತಥಾ ।
ಅಥ ಕಾಲೇ ಗತೇ ಜ್ಯೇಷ್ಠಾ ಜ್ಯೇಷ್ಠಂ ಪುತ್ರಂ ವ್ಯಜಾಯತ ॥ ೧೩೦ ॥

ಅಸಮಂಜ ಇತಿ ಖ್ಯಾತಂ ಕಾಕುತ್ಸ್ಥಂ ಸಗರಾತ್ಮಜಮ್ ।
ಸುಮತಿಸ್ತ್ವಪಿ ಜಜ್ಞೇ ವೈ ಗರ್ಭತುಂಬಂ ಯಶಸ್ವಿನೀ ॥ ೧೩೧ ॥

ಷಷ್ಟಿಃ ಪುತ್ರಸಹಸ್ರಾಣಾಂ ತುಂಬಮಧ್ಯಾದ್ವಿನಿಃಸೃತಾ ।
ಘೃತಪೂರ್ಣೇಷು ಕುಂಭೇಷು ತಾನ್ ಗರ್ಭಾನದಧಾತ್ತತಃ ॥ ೧೩೨ ॥

ಧಾತ್ರೀಶ್ಚೈಕೈಕಶಃ ಪ್ರಾದಾತ್ತಾವತೀಃ ಪೋಷಣೇ ನೃಪಃ ।
ತತೋ ನವಸು ಮಾಸೇಷು ಸಮುತ್ತಸ್ಥುರ್ಯಥಾಸುಖಮ್ ॥ ೧೩೩ ॥

ಕುಮಾರಾಸ್ತೇ ಮಹಾಭಾಗಾಃ ಸಗರಪ್ರೀತಿವರ್ಧನಾಃ ।
ಕಾಲೇನ ಮಹತಾ ಚೈವ ಯೌವನಂ ಸಮುಪಾಶ್ರಿತಾಃ ॥ ೧೩೪ ॥

---

೧೩೦. ಆ ಸುಮತಿಯೆಂಬ ಮಹಾಭಾಗಳಾದ ಪತ್ನಿಯು ಹೆಚ್ಚುಮಂದಿ ಪುತ್ರರನ್ನು ಉತ್ತಮ ವರವೆಂದು ಭಾವಿಸಿ ಸಂತೋಷಗೊಂಡಳು. ತರುವಾಯ ಕೆಲವು ಕಾಲವು ಕಳೆದು ಹೋಗಲಾಗಿ ಜ್ಯೇಷ್ಠಪತ್ನಿಯಾದ ಕೇಶಿನಿಯು ಒಬ್ಬ ಪುತ್ರನನ್ನು ಪ್ರಸವಿಸಿದಳು.

೧೩೧. ಕಕುತ್ಸ್ಥ ರಾಜನೆಂಬ ಕೂಟಸ್ಥ ಪುರುಷನ ವಂಶದಲ್ಲಿ ಹುಟ್ಟಿದ ಸಗರ ರಾಜನ ಏಕಮಾತ್ರ ಪುತ್ರನು ಅಸಮಂಜ ಎಂಬ ಖ್ಯಾತಿಯನ್ನು ಹೊಂದುವವನಾವನು. ಕೀರ್ತಿ ಸಂಪನ್ನೆಯಾದ ಸುಮತಿಯು ಒಂದು ಗರ್ಭ ಪೂರ್ಣವಾದ ಮೊಟ್ಟೆಯನ್ನು ಪ್ರಸವಿಸಿದಳು.

೧೩೨. ಆ ಮೊಟ್ಟೆಯ ಒಳಭಾಗದಿಂದ ಅರವತ್ತು ಸಹಸ್ರಮಂದಿ ಪುತ್ರರ ಗರ್ಭಗಳು ಹುಟ್ಟಿದುವು. ತರುವಾಯ ಅವುಗಳನ್ನು ಘೃತದಿಂದ ಪೂರ್ಣವಾಗಿರುವ ಪ್ರತ್ಯೇಕವಾದ ಕುಂಭಗಳಲ್ಲಿ ಇಟ್ಟು ರಕ್ಷಿಸಿದರು.

೧೩೩. ರಾಜನು ಅವುಗಳ ರಕ್ಷಣೆಗಾಗಿ ಒಂದೊಂದು ಗರ್ಭಕ್ಕೂ ಪ್ರತ್ಯೇಕ ವಾಗಿ ಅಷ್ಟು ಮಂದಿ ದಾದಿಯರನ್ನು ಕಲ್ಪಿಸಿದನು. ಅನಂತರದಲ್ಲಿ ಒಂಭತ್ತು ಮಾಸ ಗಳು ಪೂರ್ತಿಯಾಗಿ ಕಳೆದು ಸುಖವಾಗಿ ಆ ಗರ್ಭಗಳಿಂದ ಪುತ್ರರು ಹುಟ್ಟಿ ಕಾಣಿಸಿ ಕೊಂಡರು.

೧೩೪. ಆ ಕುಮಾರರು ಕ್ರಮವಾಗಿ ಮಹಾಭಾಗ್ಯ ಸಂಪನ್ನರೂ ಪಿತನಾದ ಸಗರರಾಜನ ಪ್ರೀತಿಯನ್ನು ವೃದ್ಧಿಗೊಳಿಸುವವರೂ ಆಗಿ ಹೆಚ್ಚು ಕಾಲವು ಕಳೆಯು ಲಾಗಿ ತಾರುಣ್ಯ ವಯಸ್ಸನ್ನು ಹೊಂದಿದರು.

ಕೇಶಿನ್ಯಾಸ್ತನಯೋ ಯೋಽನ್ಯಃ ಸಗರಸ್ಯಾತ್ಮಸಂಭವಃ ।
ಅಸಮಂಜ ಇತಿ ಖ್ಯಾತೋ ಬರ್ಹಿಕೇತುರ್ಮಹಾಬಲಃ || ೧೩೫ ||

ಪೌರಾಣಾಮಹಿತೇ ಯುಕ್ತಃ ಪಿತ್ರಾ ನಿರ್ವಾಸಿತಃ ಪುರಾತ್ ।
ತಸ್ಯ ಪುತ್ರೋಽಂಶುಮಾನ್ನಾಮ ಅಸಮಂಜಸ್ಯ ವೀರ್ಯವಾನ್ || ೧೩೬ ||

ತಸ್ಯ ಪುತ್ರಸ್ತು ಧರ್ಮಾತ್ಮಾ ದಿಲೀಪ ಇತಿ ವಿಶ್ರುತಃ ।
ದಿಲೀಪಾತ್ತು ಮಹಾತೇಜಾ ವೀರೋ ಜಾತೋ ಭಗೀರಥಃ || ೧೩೭ ||

ಯೇನ ಗಂಗಾ ಸರಿಚ್ಛ್ರೇಷ್ಠಾ ವಿಮಾನೈರುಪಶೋಭಿತಾ ।
ಇಹಾನೀತಾ ಸುರೇಶಾದ್ವೈ ದುಹಿತೃತ್ವೇ ಚ ಕಲ್ಪಿತಾ || ೧೩೮ ||

ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾ ಜನಾಃ ।
ಭಗೀರಥಸ್ತು ತಾಂ ಗಂಗಾಮಾನಯಾಮಾಸ ಕರ್ಮಭಿಃ || ೧೩೯ ||

---

೧೩೫. ಸಗರರಾಜನ ಪುತ್ರರಲ್ಲಿ ಕೇಶಿನಿಯೆಂಬ ಭಾರ್ಯೆಯಲ್ಲಿ ಯಾವ ಪುತ್ರನು ಜನಿಸಿದ್ದನೋ ಅವನು ಮಹಾ ಬಲಿಷ್ಠನೂ ಮತ್ತು ಬರ್ಹಿಕೇತುವೆಂಬ ನಾಮಾಂಕಿತನೂ ಆಗಿದ್ದು ಅಸಮಂಜನೆಂಬ ನಾಮಾಂತರದಿಂದ ಪ್ರಸಿದ್ಧನಾದನು.

೧೩೬. ಅವನು ಪುರಜನರಿಗೆ ಅಹಿತವಾದ ಅನರ್ಥವ್ಯಾಪಾರದಲ್ಲಿ ನಿರತನಾಗಿದ್ದ ಕಾರಣದಿಂದ ತಂದೆಯಿಂದ ನಗರದಿಂದ ಹೊರಕ್ಕೆ ಕಳುಹಿಸಲ್ಪಟ್ಟನು, ಆ ಅಸಮಂಜನಿಗೆ ವೀರ್ಯಶಾಲಿಯಾದ ಅಂಶುಮಾನ್ ಎಂಬುವನು ಪುತ್ರನಾಗಿದ್ದನು.

೧೩೭. ಆ ಅಂಶುಮಂತನಿಗೆ ಧರ್ಮಾತ್ಮನಾದ ದಿಲೀಪನೆಂಬುವನು ಪುತ್ರನಾಗಿ ಪ್ರಸಿದ್ಧನಾಗಿದ್ದನು. ಆ ದಿಲೀಪನಿಗೆ ಮಹಾತೇಜಸ್ವಿಯೂ ವೀರನೂ ಆದ ಭಗೀರಥನು ಪುತ್ರನಾಗಿ ಜನಿಸಿದನು.

೧೩೮. ಆ ಭಗೀರಥನೆಂಬುವನು ಅನೇಕಾನೇಕ ವಿಮಾನಗಳಿಂದ ಶೋಭಿಸುತ್ತಿದ್ದ ನದಿಗಳಲ್ಲಿ ಪರಮಪಾವನವಾದ ಗಂಗಾನದಿಯನ್ನು ಪರಮೇಶ್ವರನ ಅನುಗ್ರಹದಿಂದ ಮರ್ತ್ಯಲೋಕಕ್ಕೆ ತಂದು ಆ ನದಿಯನ್ನು ತನ್ನ ಪುತ್ರಿಯೆಂದು ಕಲ್ಪಿಸಿಕೊಂಡನು.

೧೩೯. ಭಗೀರಥನ ಈ ಅದ್ಭುತ ಕರ್ಮವಿಷಯದಲ್ಲಿ ಪುರಾಣಜ್ಞರು ಒಂದು ಪದ್ಯವನ್ನು ಗಾನಮಾಡುತ್ತಾರೆ. ಅದು ಈ ರೀತಿಯಾಗಿ ಪ್ರಶಂಸೆಮಾಡುತ್ತಿದೆ. ಭಗೀರಥನು ಉದಾರವಾದ ತನ್ನ ಕರ್ಮಬಲದಿಂದ ಗಂಗಾನದಿಯನ್ನು ಇಲ್ಲಿಗೆ ತಂದಿರುವನು.

ತಸ್ಮಾದ್ಭಾಗೀರಥೀ ಗಂಗಾ ಕಥ್ಯತೇ ವಂಶವಿತ್ತಮೈಃ ।
ಭಗೀರಥಸುತಶ್ಚಾಪಿ ಶ್ರುತೋ ನಾಮ ಬಭೂವ ಹಿ ॥ ೧೪೦ ॥

ನಾಭಾಗ ಸ್ತಸ್ಯ ದಾಯಾದೋ ನಿತ್ಯಂ ಧರ್ಮಪರಾಯಣಃ ।
ಅಂಬರೀಷಃ ಸುತಸ್ತಸ್ಯ ಸಿಂಧುದ್ವೀಪಸ್ತತೋಽಭವತ್ ॥ ೧೪೧ ॥

ಪೂರ್ವೈ ವಂಶಪುರಾಣಜ್ಞಾ ಗಾಯಂತೀತಿ ಪರಿಶ್ರುತಮ್ ।
ನಾಭಾಗೇರಂಬರೀಷಸ್ಯ ಭುಜಾಭ್ಯಾಂ ಪರಿಪಾರಿಪಾಲಿತಾ ॥ ೧೪೨ ॥

ಬಭೂವ ವಸುಧಾತ್ಯರ್ಥಂ ತಾಪತ್ರಯವಿವರ್ಜಿತಾ ।
ಅಯುತಾಯುಃ ಸುತಸ್ತಸ್ಯ ಸಿಂಧುದ್ವೀಪಸ್ಯ ವೀರ್ಯವಾನ್ ॥ ೧೪೩ ॥

ಅಯುತಾಯೋಸ್ತು ದಾಯಾದ ಋತುಪರ್ಣೋ ಮಹಾಯಶಾಃ ।
ದಿವ್ಯಾಕ್ಷಹೃದಯಜ್ಞೋಽಸೌ ರಾಜಾ ನಲಸಖೋ ಬಲೀ ॥ ೧೪೪ ॥

---

೧೪೦. ಆದುದರಿಂದ ಈ ವಂಶ ಪಾರಂಪರ್ಯವನ್ನು ತಿಳಿದ ಮಹನೀಯರಿಂದ ಗಂಗೆಯು ಭಗೀರಥನ ಪುತ್ರಿಯಾದ್ದರಿಂದ ಭಾಗೀರಥಿ ಎಂಬ ಹೆಸರಿನಿಂದ ಕರೆಯಲ್ಪಡುವಳು, ಎಂಬುದು ಆ ಪದ್ಯದ ಅರ್ಥವು ಆ ಭಗೀರಥನಿಗೆ ಶ್ರುತ ಎಂಬುವನು ಪುತ್ರನಾಗಿದ್ದನು.

೧೪೧. ಆ ಶ್ರುತನೆಂಬುವನಿಗೆ ಯಾವಾಗಲೂ ಧರ್ಮಾಚರಣೆಯ ಶೀಲವುಳ್ಳ ನಾಭಾಗನೆಂಬುವನು ಪುತ್ರನಾಗಿ ಜನಿಸಿದನು, ನಾಭಾಗನಿಗೆ ಅಂಬರೀಷನೆಂಬುವನೂ ಅಂಬರೀಷನಿಗೆ ಸಿಂಧುದ್ವೀಪನೆಂಬುವನೂ ಪುತ್ರರಾದರು.

೧೪೨. ವಂಶ ಪಾರಂಪರ್ಯವನ್ನು ಅರಿತ ಪ್ರಾಚೀನ ಮುನಿಗಳು ಅಂಬರೀಷ ರಾಜನ ವಿಷಯದಲ್ಲಿ ಗಾನಮಾಡಿದ ಪದ್ಯವನ್ನು ನಾವು ಕೇಳುತ್ತಿದ್ದೇವೆ. ಸಮಸ್ತ ಭೂಮಿಯು ನಾಭಾಗ ಪುತ್ರನಾದ ಅಂಬರೀಷ ರಾಜನ ಭುಜಗಳ ಬಲದಿಂದ ಪಾಲಿಸಲ್ಪಟ್ಟಿದೆ.

೧೪೩. ಹೀಗೆ ಭೂಮಿಯು ಅಂಬರೀಷನ ಶಾಸನ ಬಲದಿಂದ ತಾಪತ್ರಯನಿರ್ಮುಕ್ತವಾಗಿ ಅತ್ಯಂತ ಸುಖಮಯವಾಗಿತ್ತು, ಎಂಬುದು ಆ ಪದ್ಯದ ಅರ್ಥವು. ಆ ಸಿಂಧುದ್ವೀಪನಿಗೆ ವೀರ್ಯಶಾಲಿಯಾದ ಅಯುತಾಯು ಎಂಬುವನು ಪುತ್ರನಾಗಿದ್ದನು.

೧೪೪. ಆ ಅಯುತಾಯು ಎಂಬುವನಿಗೆ ಮಹಾಕೀರ್ತಿ ಸಂಪನ್ನನಾದ ಋತುಪರ್ಣನೆಂಬುವನು ಪುತ್ರನಾಗಿ ಜನಿಸಿದನು. ಆ ಋತುಪರ್ಣನು ನಲಮಹಾರಾಜನ ಮಿತ್ರನೂ, ಮಹಾ ಬಲಿಷ್ಠನೂ ಮತ್ತು ಪಗಡೆ ಆಟದ ದಿವ್ಯ ರಹಸ್ಯವನ್ನು ಅರಿತವನೂ ಆಗಿದ್ದನು.

ನಲೌ ದ್ವಾವಿತಿ ವಿಖ್ಯಾತೌ ಪುರಾಣೇಷು ದೃಢವ್ರತೌ ।
ವೀರಸೇನಾತ್ಮಜಶ್ಚೈವ ಯಶ್ಚೇಕ್ಷ್ವಾಕುಕುಲೋದ್ವಹಃ ॥ ೧೭೫ ॥

ಋತುಪರ್ಣಸ್ಯ ಪುತ್ರೋಽಭೂತ್ ಸರ್ವಕಾಮೋ ಜನೇಶ್ವರಃ ।
ಸುದಾಸಸ್ತಸ್ಯ ತನಯೋ ರಾಜಾ ಇಂದ್ರಸಖೋಽಭವತ್ ॥ ೧೭೬ ॥

ಸುದಾಸಸ್ಯ ಸುತಃ ಪ್ರೋಕ್ತಃ ಸೌದಾಸೋ ನಾಮ ಪಾರ್ಥಿವಃ ।
ಖ್ಯಾತಃ ಕಲ್ಮಾಷಪಾದೋ ವೈ ನಾಮ್ನಾ ಮಿತ್ರಸಹಶ್ಚ ಸಃ ॥ ೧೭೭ ॥

ವಸಿಷ್ಠಸ್ತು ಮಹಾತೇಜಾಃ ಕ್ಷೇತ್ರೇ ಕಲ್ಮಾಷಪಾದಕೇ ।
ಅಶ್ಮಕಂ ಜನಯಾಮಾಸ ತ್ವಿಕ್ಷ್ವಾಕುಕುಲವೃದ್ಧಯೇ ॥ ೧೭೮ ॥

ಅಶ್ಮಕಸ್ಯೌರಸೋ ಯಸ್ತು ಮೂಲಕಸ್ತತ್ಸುತೋಽಭವತ್ ।
ಅತ್ರಾಪ್ಯುದಾಹರಂತೀಮಂ ಮೂಲಕಂ ವೈ ನೃಪಂ ಪ್ರತಿ ॥ ೧೭೯ ॥

---

೧೭೫. ಪುರಾಣಗಳಲ್ಲಿ ಸತ್ಯಸಂಕಲ್ಪರಾದ ನಳರಾಜರು ಇಬ್ಬರು ಇರುವರೆಂದು ಖ್ಯಾತಿಯನ್ನು ಹೊಂದಿರುವರು. ಒಬ್ಬನು ವೀರಸೇನ ರಾಜನ ಪುತ್ರನಾದ ನಳ ರಾಜನು, ಮತ್ತೊಬ್ಬನು ಇಕ್ಷ್ವಾಕು ರಾಜನ ವಂಶದಲ್ಲಿ ಜನಿಸಿದ ವಿಖ್ಯಾತನಾದ ನಳ ರಾಜನು.

೧೭೬. ಋತುಪರ್ಣ ರಾಜನಿಗೆ ಸರ್ವಕಾಮನೆಂಬ ಹೆಸರುಳ್ಳ ರಾಜನು ಪುತ್ರನಾಗಿ ಜನಿಸಿದನು. ಅವನಿಗೆ ಸುದಾಸನೆಂಬುವನು ಪುತ್ರನಾಗಿದ್ದನು. ಆ ಸುದಾಸನು ಇಂದ್ರನಿಗೆ ಮಿತ್ರನಾದ ರಾಜನಾಗಿದ್ದನು.

೧೭೭. ಆ ಸುದಾಸರಾಜನ ಪುತ್ರನು ಸೌದಾಸರಾಜನೆಂದು ಕರೆಯಲ್ಪಟ್ಟಿದ್ದನು. ಅವನು ತನ್ನ ಅಸದೃಶ ವಿಕ್ರಮ ಕರ್ಮದಿಂದ ಶತ್ರುಗಳನ್ನು ಸಹಿಸುವವನೂ ಮತ್ತು ಕಲ್ಮಾಷ ಪಾದ ಎಂಬ ಪ್ರಸಿದ್ಧಿಯುಳ್ಳವನೂ ಆಗಿದ್ದನು.

೧೭೮. ಮಹಾ ತೇಜಸ್ವಿಯಾದ ವಸಿಷ್ಠ ಮುನಿಯು ಕಲ್ಮಾಷಪಾದ ರಾಜನ ಭಾರ್ಯೆಯಲ್ಲಿ ಇಕ್ಷ್ವಾಕು ಮಹಾರಾಜನ ವಂಶವು ಅವಿಚ್ಛಿನ್ನವಾಗಿ ವೃದ್ಧಿಯಾಗ ಬೇಕೆಂಬ ಸಂಕಲ್ಪದಿಂದ ಅಶ್ಮಕನೆಂಬ ರಾಜನನ್ನು ಸೃಜಿಸಿದನು.

೧೭೯ ಅಂತಹ ಅಶ್ಮಕ ರಾಜನಿಗೆ ಔರಸ ಪುತ್ರನಾದ ಮೂಲಕನೆಂಬ ರಾಜನಿದ್ದನು. ಆ ಮೂಲಕ ರಾಜನ ಮಹಿಮೆಯ ವಿಷಯದಲ್ಲಿ ಪುರಾಣಜ್ಞರ ಒಂದು ಗಾಥಾ ಪದ್ಯವಿರುವುದು.

ಸ ಹಿ ರಾಮಭಯಾದ್ರಾಜಾ ಸ್ತ್ರೀಭಿಃ ಪರಿವೃತೋಽವಸತ್ ।
ವಿವಸ್ತ್ರಸ್ತ್ರಾಣಮಿಚ್ಛನ್ ವೈ ನಾರೀಕವಚ ಈಶ್ವರಃ ॥ ೧೫೦ ॥

ಮೂಲಕಸ್ಯಾಪಿ ಧರ್ಮಾತ್ಮಾ ರಾಜಾ ಶತರಥಃ ಸ್ಮೃತಃ ।
ತಸ್ಮಾಚ್ಛತರಥಾಜ್ಜಜ್ಞೇ ರಾಜಾ ತ್ವಿಡವಿಡೋ ಬಲೀ ॥ ೧೫೧ ॥

ಆಸೀತ್ತ್ವೈಡವಿಡಃ ಶ್ರೀಮಾನ್ ಕೃಶಶರ್ಮಾ ಪ್ರತಾಪವಾನ್ ।
ಪುತ್ರೋ ವಿಶ್ವಸಹಸ್ತಸ್ಯ ಪುತ್ರೀಕಸ್ಯಾಂ ವ್ಯಜಾಯತ ॥ ೧೫೨ ॥

ದಿಲೀಪಸ್ತಸ್ಯ ಪುತ್ರೋಽಭೂತ್ ಖಟ್ವಾಂಗ ಇತಿ ವಿಶ್ರುತಃ ।
ಯೇನ ಸ್ವರ್ಗಾದಿಹಾಗತ್ಯ ಮುಹೂರ್ತಂ ಪ್ರಾಪ್ಯ ಜೀವಿತಮ್॥ ೧೫೩ ॥

ತ್ರಯೋಽಭಿಸಂಹಿತಾ ಲೋಕಾಬುದ್ಧ್ಯಾ ಸತ್ಯೇನ ಚೈವ ಹಿ ।
ದೀರ್ಘಬಾಹುಃ ಸುತಸ್ತಸ್ಯ ರಘುಸ್ತಸ್ಮಾದಜಾಯತ ॥ ೧೫೪ ॥

---

೧೫೦. ಆ ಮೂಲಕನೆಂಬ ರಾಜನು ಭಾರ್ಗವರಾಮನ ಭೀತಿಯಿಂದ ದಿಗಂಬರನಾಗಿ ಸ್ತ್ರೀಯರಿಂದ ಸುತ್ತಲ್ಪಟ್ಟವನಾಗಿ ವಾಸಮಾಡುತ್ತಿದ್ದನು. ಆದ್ದರಿಂದ ರಾಮನಿಂದ ತನ್ನನ್ನು ರಕ್ಷಿಸಿಕೊಳ್ಳಲು ಆ ರಾಜನು ಸ್ತ್ರೀಯರ ಗುಂಪನ್ನು ಪ್ರವೇಶ ಮಾಡಿ ನಾರೀಕವಚನೆಂದು ಪ್ರಸಿದ್ಧನಾದನು.

೧೫೧. ಮೂಲಕ ರಾಜನಿಗೆ ಧರ್ಮಾತ್ಮನಾದ ಶತರಥನೆಂಬುವನು ಪುತ್ರನಾಗಿ ಸ್ಮರಿಸಲ್ಪಟ್ಟಿರುವನು, ಆ ಶತರಥನಿಂದ ಇಡವಿಡನೆಂಬ ಬಲಿಷ್ಠ ರಾಜನು ಪುತ್ರನಾಗಿ ಜನಿಸಿದನು.

೧೫೨. ಆ ಇಡವಿಡರಾಜನಿಗೆ ಪ್ರತಾಪಶಾಲಿಯಾದ ಕೃಶಶರ್ಮಾ ಎಂಬ ಪುತ್ರನಿದ್ದನು. ಅವನಿಗೆ ಪುತ್ರೀಕಾ ಎಂಬ ತನ್ನ ಪತ್ನಿಯಲ್ಲಿ ವಿಶ್ವಸಹ ಎಂಬ ನಾಮಾಂಕಿತನಾದ ಪುತ್ರನು ಜನಿಸಿದನು.

೧೫೩. ಅವನಿಗೆ ದಿಲೀಪನೆಂಬ ಪುತ್ರನು ಹುಟ್ಟಿದನು. ಅವನು ಖಟ್ವಾಂಗನೆಂದು ಪ್ರಸಿದ್ಧಿಯನ್ನು ಹೊಂದಿದ ರಾಜನಾಗಿದ್ದನು. ಆ ಖಟ್ವಾಂಗನು ಸ್ವರ್ಗಲೋಕದಿಂದ ಒಂದು ಮುಹೂರ್ತ ಕಾಲ ಮಾತ್ರ ಜೀವವನ್ನು ಧರಿಸಿ ಈ ಲೋಕಕ್ಕೆ ಬಂದನು.

೧೫೪. ಅವನ ಬುದ್ಧಿ ಮತ್ತು ಸತ್ಯ ಈ ಗುಣಗಳಿಂದ ಮೂರು ಲೋಕಗಳು ಜಯಿಸಲ್ಪಟ್ಟಿದ್ದುವು. ಅವನಿಗೆ ದೀರ್ಘಬಾಹುವೆಂಬ ಪುತ್ರನೂ ಅವನಿಗೆ ರಘು ಎಂಬ ಪುತ್ರನೂ ಜನಿಸಿದರು.

ಅಜಃ ಪುತ್ರೋ ರಘೋಶ್ಚಾಪಿ ತಸ್ಮಾಜ್ಜಜ್ಞೇ ಸ ವೀರ್ಯವಾನ್ ।
ರಾಜಾ ದಶರಥೋ ನಾಮ ಇಕ್ಷ್ವಾಕುಕುಲನಂದನಃ ॥ ೧೫೫ ॥

ರಾಮೋ ದಾಶರಥಿರ್ವೀರೋ ಧರ್ಮಜ್ಞೋ ಲೋಕವಿಶ್ರುತಃ ।
ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚ ಮಹಾಬಲಃ ॥ ೧೫೬ ॥

ಮಾಧವಂ ಲವಣಂ ಹತ್ವಾ ಗತ್ವಾ ಮಧುವನಂ ಚ ತತ್ ।
ಶತ್ರುಘ್ನೇನ ಪುರೀ ತತ್ರ ಮಥುರಾ ವಿನಿವೇಶಿತಾ ॥ ೧೫೭ ॥

ಸುಬಾಹುಃ ಶೂರಸೇನಶ್ಚ ಶತ್ರುಘ್ನಸ್ಯ ಸುತಾವುಭೌ ।
ಪಾಲಯಾಮಾಸತುಸ್ತೌ ತು ವೈದೇಹ್ಯಾ ಮಥುರಾಂ ಪುರೀಮ್ ॥ ೧೫೮ ॥

ಅಂಗದಶ್ಚಂದ್ರಕೇತುಶ್ಚ ಲಕ್ಷ್ಮಣಸ್ಯಾತ್ಮಜಾವುಭೌ ।
ಹಿಮವತ್ಪರ್ವತಸ್ಯಾಂತೇ ಸ್ಫೀತೌ ಜನಪದೌ ತಯೋಃ ॥ ೧೫೯ ॥

---

೧೫೫. ಆ ರಘುರಾಜನಿಗೆ ಅಜನೆಂಬ ಪುತ್ರನಿದ್ದನು. ಅವನಿಂದ ಇಕ್ಷ್ವಾಕು ವಂಶವನ್ನು ಬೆಳಗುವ ದಶರಥ ರಾಜನೆಂಬ ವೀರ್ಯಸಂಪನ್ನನಾದ ಪುತ್ರನು ಜನಿಸಿದನು.

೧೫೬. ಆ ದಶರಥನ ಪುತ್ರರಲ್ಲಿ ರಾಮ ಎಂಬ ಜ್ಯೇಷ್ಠ ಪುತ್ರನು ವೀರನೂ ಧರ್ಮ ಮರ್ಮವನ್ನು ಅರಿತವನೂ ಮತ್ತು ಲೋಕಗಳಲ್ಲಿ ಪ್ರಸಿದ್ಧನೂ ಆಗಿದ್ದನು. ಭರತ, ಲಕ್ಷ್ಮಣ ಮತ್ತು ಶತ್ರುಘ್ನ ಎಂಬುವರು ರಾಮನ ಸಹೋದರರಾದ ದಶರಥನ ಪುತ್ರರು.

೧೫೭. ಶತ್ರುಘ್ನನು ಮಧು ಎಂಬ ರಾಕ್ಷಸನ ಪುತ್ರನಾದ ಲವಣಾಸುರನನ್ನು ಸಂಹರಿಸಿ ಅವನ ಮಧುವನಕ್ಕೆ ಹೋಗಿ ಅಲ್ಲಿ ಮಥುರಾ ಎಂಬ ನಗರಿಯನ್ನು ಸ್ಥಾಪಿಸಿದನು.

೧೫೮. ವಿದೇಹ ರಾಜಕನ್ಯೆಯಲ್ಲಿ ಹುಟ್ಟಿದ ಸುಬಾಹು, ಶೂರಸೇನ ಎಂಬ ಇಬ್ಬರು ಶತ್ರುಘ್ನನ ಪುತ್ರರು ಆ ಮಥುರಾನಗರಿಯನ್ನು ಪರಿಪಾಲನ ಮಾಡಿದರು.

೧೫೯. ಲಕ್ಷ್ಮಣನಿಗೆ ಅಂಗದ, ಚಂದ್ರಕೇತು ಎಂಬ ಇಬ್ಬರು ಪುತ್ರರಿದ್ದರು ಹಿಮವತ್ಪರ್ವತದ ಕಡೆಯ ಶ್ರೇಣಿಯಲ್ಲಿ ಸಮೃದ್ಧವಾದ ಎರಡು ದೇಶಗಳು ಅಂಗದ ಚಂದ್ರಕೇತು ರಾಜರಿಗೆ ಸೇರಿದ್ದುವು.

**ಅಂಗದಸ್ಯಾಂಗದಾ ಖ್ಯಾತಾ ದೇಶೇ ಕಾರಯನೇ ಪುರೀ ।**
**ಚಂದ್ರಕೇತೋಸ್ತು ವಿಖ್ಯಾತಾ ಚಂದ್ರಚಕ್ರಾ ಪುರೀ ತಥಾ ॥ ೧೬೦ ॥**

**ಭರತಸ್ಯಾತ್ಮಜೌ ವೀರೌ ತಕ್ಷಃ ಪುಷ್ಕರ ಏವ ಚ ।**
**ಗಾಂಧಾರವಿಷಯೇ ಸಿದ್ಧೇ ತಯೋಃ ಪುರ್ಯೌ ಮಹಾತ್ಮನೋಃ ॥ ೧೬೧ ॥**

**ತಕ್ಷಸ್ಯ ದಿಕ್ಷು ವಿಖ್ಯಾತಾ ನಾಮ್ನಾ ತಕ್ಷಶಿಲಾ ಪುರೀ ।**
**ಪುಷ್ಕರಸ್ಯಾಪಿ ವೀರಸ್ಯ ವಿಖ್ಯಾತಾ ಪುಷ್ಕರಾವತೀ ॥ ೧೬೨ ॥**

**ಗಾಥಾಂ ಚೈವಾತ್ರ ಗಾಯಂತಿ ಯೇ ಪುರಾಣವಿದೋ ಜನಾಃ ।**
**ರಾಮೇಣ ಬದ್ಧಾಂ ಸತ್ಯಾರ್ಥಾಂ ಮಹಾತ್ಮ್ಯೈತ್ತಸ್ಯ ಧೀಮತಃ ॥ ೧೬೩ ॥**

**ಶ್ಯಾಮೋ ಯುವಾ ಲೋಹಿತಾಕ್ಷೋ ದೀಪ್ತಾಸ್ಯೋ ಮಿತಭಾಷಿತಃ ।**
**ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಭುಜಃ ॥ ೧೬೪ ॥**

---

೧೬೦. ಅಂಗದನಿಗೆ ಕಾರಯನವೆಂಬ ದೇಶದಲ್ಲಿ ಪ್ರಸಿದ್ಧವಾದ ಅಂಗದಾ ಎಂಬ ನಗರಿಯೂ, ಚಂದ್ರಕೇತುವಿಗೆ ಚಂದ್ರ ಚಕ್ರಾ ಎಂದು ಪ್ರಸಿದ್ಧಿ ಹೊಂದಿದ ಮಂಗಳಕರವಾದ ನಗರಿಯೂ ರಾಜಧಾನಿಗಳಾಗಿದ್ದುವು.

೧೬೧. ಭರತನಿಗೆ ತಕ್ಷ, ಪುಷ್ಕರ ಎಂಬ ಇಬ್ಬರು ವೀರರಾದ ಪುತ್ರರಿದ್ದರು. ಆ ಮಹಾತ್ಮರು ರಾಜರಾಗಿ ಆಳಿದ ನಗರಗಳು ಗಾಂಧಾರ ದೇಶಗಳಲ್ಲಿ ಸೇರಿದ್ದುವು.

೧೬೨. ತಕ್ಷನು ರಾಜನಾಗಿ ಆಳಿವ ತಕ್ಷಶಿಲಾ ಎಂಬ ನಗರಿಯು ಎಲ್ಲ ದಿಕ್ಕುಗಳಲ್ಲಿಯೂ ಪ್ರಸಿದ್ಧಿ ಹೊಂದಿತ್ತು ವೀರನಾದ ಪುಷ್ಕರನು ಆಳಿದ ನಗರಿಯು ಪುಷ್ಕರಾವತಿಯೆಂದು ಪ್ರಸಿದ್ಧವಾಗಿತ್ತು.

೧೬೩. ಮಹಾಪ್ರಾಜ್ಞನಾದ ಶ್ರೀರಾಮನ ಮಾಹಾತ್ಮ್ಯವನ್ನು ಸೂಚಿಸುವ ಸತ್ಯಾಂಶವಾದ ಅರ್ಥಗಳಿಂದ ಕೂಡಿದ ಶ್ರೀರಾಮ ಬದ್ಧವಾದ ಗಾಥಾಪದ್ಯಗಳನ್ನು ಪುರಾಣಜ್ಞರಾದ ಜನಗಳು ಗಾನಮಾಡುತ್ತಿದ್ದಾರೆ.

೧೬೪. ಶ್ರೀರಾಮನು ತರುಣ ವಯಸ್ಸಿನವನೂ, ಶ್ಯಾಮಸುಂದರನೂ, ಕೆಂಪಾದ ನೇತ್ರವುಳ್ಳವನೂ, ತೇಜಸ್ವಿಯಾದ ಮುಖವುಳ್ಳವನೂ, ಮಿತವಾದ ಭಾಷಣ ಶೀಲವುಳ್ಳವನೂ, ಜಾನುಪರ್ಯಂತ ದೀರ್ಘವಾದ ಬಾಹುಗಳುಳ್ಳವನೂ, ಸುಂದರವಾದ ಮುಖವುಳ್ಳವನೂ, ಸಿಹ್ಮದಂತೆ ಸ್ಕಂಧವುಳ್ಳವನೂ, ಮತ್ತು ಮಹಾಭುಜಬಲವುಳ್ಳ ಮಹಾತ್ಮನೂ ಆಗಿರುವನು.

**ದಶವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ ।**
**ಋಕ್ಸಾಮಯಜುಷಾಂ ಘೋಷೋ ಯೋ ಘೋಷಶ್ಚ ಮಹಾಸ್ವನಃ ॥ ೧೬೫ ॥**

**ಅವ್ಯುಚ್ಛಿನ್ನೋಽಭವದ್ರಾಜ್ಯೇ ದೀಯತಾಂ ಭುಜ್ಯತಾಮಿತಿ ।**
**ಜನಸ್ಥಾನೇ ವಸನ್ ಕಾರ್ಯಂ ತ್ರಿದಶಾನಾಂ ಚಕಾರ ಸಃ ॥ ೧೬೬ ॥**

**ತಮಾಗಸ್ಕಾರಿಣಂ ಪೂರ್ವಂ ಪೌಲಸ್ತ್ಯಂ ಮನುಜರ್ಷಭಃ ।**
**ಸೀತಾಯಾಃ ಪದಮನ್ವಿಚ್ಛನ್ನಿಜಘಾನ ಮಹಾಯಶಾಃ ॥ ೧೬೭ ॥**

**ಸತ್ತ್ವವಾನ್ ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ ।**
**ಅತಿಸೂರ್ಯಂ ಚ ವಹ್ನಿಂ ಚ ರಾಮೋ ದಾಶರಥಿರ್ಬಭೌ ॥ ೧೬೮ ॥**

**ಏವಮೇಷ ಮಹಾಬಾಹೋಸ್ತಸ್ಯ ಪುತ್ರೌ ಬಭೂವತುಃ ।**
**ಕುಶೋ ಲವ ಇತಿ ಖ್ಯಾತೌ ತಯೋರ್ದೇಶೌ ನಿಬೋಧತ ॥ ೧೬೯ ॥**

---

೧೬೫. ಇಂತಹ ಶ್ರೀರಾಮನು ಹತ್ತು ಸಹಸ್ರ ವರ್ಷಗಳವರೆಗೆ ರಾಜ್ಯಪರಿಪಾಲನವನ್ನು ಮಾಡಿದನು. ಅವನ ರಾಜ್ಯದಲ್ಲಿ ಉಚ್ಚವಾದ ಮಹಾಧ್ವನಿಯಿಂದ ಕೂಡಿದ ಋಗ್ವೇದ, ಸಾಮವೇದ, ಯಜುರ್ವೇದಗಳ ಪಠನ ಘೋಷವು ಯಾವಾಗಲೂ ಕೇಳುತ್ತಲಿತ್ತು.

೧೬೬. ಮತ್ತು ಅವನ ರಾಜ್ಯದಲ್ಲಿ ದಾನವನ್ನು ತೆಗೆದುಕೊಳ್ಳಿರಿ, ಭೋಜನವನ್ನು ಮಾಡಿರಿ ಮುಂತಾದ ಉದಾರ ವಚನಗಳು ಅವಿಚ್ಛಿನ್ನವಾಗಿ ಕೇಳುತ್ತಿದ್ದುವು. ಆ ಶ್ರೀರಾಮನು ಜನಸ್ಥಾನಾರಣ್ಯದಲ್ಲಿ ವಾಸಮಾಡಿ ದೇವಕಾರ್ಯವನ್ನು ನೆರವೇರಿಸಿದನು.

೧೬೭. ಪುರುಷೋತ್ತಮನೂ ಮಹಾ ಯಶಸ್ವಿಯೂ ಆದ ಶ್ರೀರಾಮನು ಮೊದಲು ಅಪರಾಧವನ್ನು ಮಾಡಿದ ರಾವಣಾಸುರನನ್ನು ಅಪಹರಿಸಲ್ಪಟ್ಟ ಸೀತಾದೇವಿಯ ಮಾರ್ಗವನ್ನು ಅನ್ವೇಷಣ ಮಾಡುತ್ತ ಹೋಗಿ ಸಂಹರಿಸಿದನು.

೧೬೮. ಬಲ ಮುಂತಾದ ನಿರವಧಿಗುಣಗಳಿಂದ ಸಂಪನ್ನನಾದ, ಮತ್ತು ತನ್ನ ತೇಜೋ ವಿಶೇಷದಿಂದ ರಾಜಿಸುವ ದಶರಥ ಪುತ್ರನಾದ ರಾಮನು ಸೂರ್ಯ, ಅಗ್ನಿ ಮುಂತಾದ ತೇಜಸ್ಸುಗಳನ್ನು ಮೀರಿ ಪ್ರಕಾಶಿಸಿದನು.

೧೬೯. ಈ ರೀತಿಯಾಗಿ ಪ್ರಶಂಸಾಸ್ಪದನೂ ಮಹಾ ಬಾಹುಬಲಶಾಲಿಯೂ ಆದ ಶ್ರೀರಾಮನಿಗೆ ಕುಶ, ಲವ ಎಂದು ಖ್ಯಾತಿಯನ್ನು ಹೊಂದಿದ ಇಬ್ಬರು ಪುತ್ರರು ಜನಿಸಿದರು, ಅವರು ಆಳಿದ ದೇಶಗಳನ್ನು ಶ್ರವಣಮಾಡಿರಿ.

ಕುಶಸ್ಯ ಕೋಶಲಾ ರಾಜ್ಯಂ ಪುರೀ ಚಾಪಿ ಕುಶಸ್ಥಲೀ ।
ರಮ್ಯಾ ನಿವೇಶಿತಾ ತೇನ ವಿಂಧ್ಯಪರ್ವತಸಾನುಷು ॥ ೧೭೦ ॥

ಉತ್ತರಾಕೋಶಲೇ ರಾಜ್ಯಂ ಲವಸ್ಯ ಚ ಮಹಾತ್ಮನಃ ।
ಶ್ರಾವಸ್ತಿರ್ಲೋಕವಿಖ್ಯಾತಾ ಕುಶವಂಶಂ ನಿಬೋಧತ ॥ ೧೭೧ ॥

ಕುಶಸ್ಯ ಪುತ್ರೋ ಧರ್ಮಾತ್ಮಾ ಹ್ಯತಿಥಿಃ ಸುಪ್ರಿಯಾತಿಥಿಃ ।
ಅತಿಥೇರಪಿ ವಿಖ್ಯಾತೋ ನಿಷಧೋ ನಾಮ ಪಾರ್ಥಿವಃ ॥ ೧೭೨ ॥

ನಿಷಧಸ್ಯ ನಲಃ ಪುತ್ರೋ ನಲಸ್ಯ ತು ನಭಾಃ ಸುತಃ ।
ನಭಸಃ ಪುಂಡರೀಕಸ್ತು ಕ್ಷೇಮಧನ್ವಾ ತತಃ ಸ್ಮೃತಃ ॥ ೧೭೩ ॥

ಕ್ಷೇಮಧನ್ವಸುತೋ ರಾಜಾ ದೇವಾನೀಕಃ ಪ್ರತಾಪವಾನ್ ।
ಆಸೀದಹೀನಗುರ್ನಾಮ ದೇವಾನೀಕಾತ್ಮಜಃ ಪ್ರಭುಃ ॥ ೧೭೪ ॥

---

೧೭೦. ಕುಶನು ಕೋಶಲ ರಾಜ್ಯವನ್ನು ಆಳಿದನು. ಅವನಿಗೆ ಕುಶಸ್ಥಲಿಯು ರಾಜಧಾನಿಯಾಗಿತ್ತು. ಆ ನಗರಿಯು ವಿಂಧ್ಯಪರ್ವತದ ತಪ್ಪಲುಗಳ ಶ್ರೇಣಿಯಲ್ಲಿ ರಮ್ಯವಾಗಿ ಸ್ಥಾಪಿಸಲ್ಪಟ್ಟಿತು.

೧೭೧. ಮಹಾತ್ಮನಾದ ಲವನಿಗೆ ಉತ್ತರಾಕೋಶಲವೆಂಬ ಪ್ರಾಂತದಲ್ಲಿ ರಾಜ್ಯವಿದ್ದಿತು. ಅವನಿಗೆ ಪ್ರಪಂಚದಲ್ಲಿ ವಿಖ್ಯಾತವಾದ ಶ್ರಾವಸ್ತಿ ಎಂಬ ನಗರಿಯು ರಾಜಧಾನಿಯಾಗಿತ್ತು. ಇನ್ನು ಮುಂದೆ ಕುಶನ ವಂಶವನ್ನು ಶ್ರವಣಮಾಡಿರಿ.

೧೭೨. ಕುಶನಿಗೆ ಅತಿಥಿ ಸತ್ಕಾರದಲ್ಲಿ ಪ್ರೀತಿಯುಳ್ಳ, ಧರ್ಮಾತ್ಮನಾದ ಅತಿಥಿ ಯೆಂಬ ರಾಜನು ಪುತ್ರನಾಗಿದ್ದನು. ಅತಿಥಿ ಎಂಬುವನಿಗೆ ನಿಷಧನೆಂಬ ನಾಮಾಂಕಿತ ನಾದ ವಿಖ್ಯಾತರಾಜನು ಪುತ್ರನಾಗಿದ್ದನು.

೧೭೩. ನಿಷಧರಾಜನಿಗೆ ನಲ ಎಂಬ ಪುತ್ರನೂ ನಲನಿಗೆ ನಭಾ ಎಂಬ ಪುತ್ರನೂ, ನಭಾ ಎಂಬುವನಿಗೆ ಪುಂಡರೀಕನೆಂಬ ಪುತ್ರನೂ ಮತ್ತು ಅವನಿಗೆ ಕ್ಷೇಮ ಧನ್ವಾ ಎಂಬ ಪುತ್ರನೂ ಇದ್ದರೆಂದು ಸ್ಮರಿಸಲ್ಪಟ್ಟಿರುವರು.

೧೭೪. ಪ್ರತಾಪಶಾಲಿಯಾದ ದೇವಾನೀಕ ಎಂಬುವನು ಕ್ಷೇಮ ಧನ್ವನಿಗೆ ಪುತ್ರನಾದನು. ಪ್ರಭುವಾದ ಅಹೀನಗು ಎಂಬ ರಾಜನು ದೇವಾನೀಕನಿಗೆ ಪುತ್ರನಾಗಿ ಜನಿಸಿದನು.

**ಅಹೀನಗೋಸ್ತು ದಾಯಾದಃ ಪಾರಿಯಾತ್ರೋ ಮಹಾಯಶಾಃ ।**
**ದಲಸ್ತಸ್ಯಾತ್ಮಜಶ್ಚಾಪಿ ತಸ್ಮಾಜ್ಜಜ್ಞೇ ಬಲೋ ನೃಪಃ ॥ ೧೭೫ ॥**

**ಉಲೂಕೋ ನಾಮ ಧರ್ಮಾತ್ಮಾ ಬಲಪುತ್ರೋ ಬಭೂವ ಹ ।**
**ವಜ್ರನಾಭಃ ಸುತಸ್ತಸ್ಯ ಶಂಖಣಸ್ತಸ್ಯ ಚಾತ್ಮಜಃ ॥ ೧೭೬ ॥**

**ಶಂಖಣಸ್ಯ ಸುತೋ ವಿದ್ವಾನ್ ವ್ಯುಷಿತಾಶ್ವ ಇತಿ ಶ್ರುತಃ ।**
**ವ್ಯುಷಿತಾಶ್ವಸುತಶ್ಚಾಪಿ ರಾಜಾ ವಿಶ್ವಸಹಃ ಕಿಲ ॥ ೧೭೭ ॥**

**ಹಿರಣ್ಯನಾಭಃ ಕೌಶಲ್ಯೋ ವರಿಷ್ಠಸ್ತತ್ಸುತೋಽಭವತ್ ।**
**ಪೌಷ್ಯಂಜೇಶ್ಚ ಸ ವೈ ಶಿಷ್ಯಃ ಸ್ಮೃತಃ ಪ್ರಾಚ್ಯೇಷು ಸಾಮಸು ॥ ೧೭೮ ॥**

**ಶತಾನಿ ಸಂಹಿತಾನಾಂ ತು ಪಂಚ ಯೋಽಧೀತವಾಂಸ್ತತಃ ।**
**ತಸ್ಮಾದಧಿಗತೋ ಯೋಗೋ ಯಾಜ್ಞವಲ್ಕ್ಯೇನ ಧೀಮತಾ ॥ ೧೭೯ ॥**

---

೧೭೫. ಮಹಾ ಕೀರ್ತಿರಾಶಿಯನ್ನು ಆರ್ಜಿಸಿದ ಪಾರಿಯಾತ್ರನು ಅಹೀನಗು ಎಂಬುವನ ಪುತ್ರನಾಗಿದ್ದನು, ಪಾರಿಯಾತ್ರನಿಗೆ ದಲ ಎಂಬ ಪುತ್ರನಿದ್ದನು. ಅವನಿಗೆ ಬಲನೆಂಬ ರಾಜನು ಪುತ್ರನಾಗಿ ಜನಿಸಿದನು.

೧೭೬. ಧರ್ಮಾತ್ಮನಾದ ಮತ್ತು ಉಲೂಕ ಎಂಬ ನಾಮಾಂಕಿತನಾದ ರಾಜನು ಬಲರಾಜನಿಗೆ ಪುತ್ರನಾದನು. ಉಲೂಕನಿಗೆ ವಜ್ರನಾಭ ಎಂಬ ಪುತ್ರನೂ ವಜ್ರನಾಭನಿಗೆ ಶಂಖಣನೆಂಬ ಪುತ್ರನೂ ಇದ್ದರು.

೧೭೭. ಶಂಖಣನಿಗೆ ಜ್ಞಾನಿಯಾದ ವ್ಯುಷಿತಾಶ್ವ ಎಂಬುವನು ಪುತ್ರನಾಗಿ ಜನಿಸಿದನೆಂದು ಪ್ರಸಿದ್ಧವಾಗಿದೆ. ವ್ಯುಷಿತಾಶ್ವನಿಗೆ ವಿಶ್ವಸಹ ಎಂಬ ರಾಜನು ಪುತ್ರನಾಗಿ ಹುಟ್ಟಿದನು.

೧೭೮. ಕೋಸಲ ಕನ್ಯೆಯಲ್ಲಿ ಜನಿಸಿದ, ಶ್ರೇಷ್ಠನಾದ ಹಿರಣ್ಯನಾಭನೆಂಬುವನು ವಿಶ್ವಸಹರಾಜನಿಗೆ ಪುತ್ರನಾಗಿದ್ದನು. ಅವನು ಪ್ರಾಚ್ಯಸಾಮ ಮಂತ್ರಗಳ ಅಧ್ಯಯನದಲ್ಲಿ ಪೌಷ್ಯಂಜಿ ಎಂಬ ಮುನಿಯ ಶಿಷ್ಯನೆಂದು ಸ್ಮರಿಸಲ್ಪಟ್ಟಿರುವನು.

೧೭೯. ಮತ್ತು ಹಿರಣ್ಯನಾಭನು ಆ ಗುರುವಿನಿಂದ ಐದುನೂರು ವೇದ ಸಂಹಿತೆಗಳನ್ನು ಅಧ್ಯಯನ ಮಾಡಿದನು. ಜ್ಞಾನಿಯಾದ ಯಾಜ್ಞವಲ್ಕ್ಯಮುನಿಯು ಹಿರಣ್ಯನಾಭನಿಂದ ಯೋಗಶಾಸ್ತ್ರ ಜ್ಞಾನವನ್ನು ಹೊಂದಿದನು.

ಪುಷ್ಪಸ್ತಸ್ಯ ಸುತೋ ವಿದ್ವಾನ್ ಧ್ರುವಸಂಧಿಶ್ಚ ತತ್ಸುತಃ ।
ಸುದರ್ಶನಸ್ತಸ್ಯ ಸುತೋ ಹ್ಯಗ್ನಿವರ್ಣಃ ಸುದರ್ಶನಾತ್ ॥ ೧೮೦ ॥

ಅಗ್ನಿವರ್ಣಸ್ಯ ಶೀಘ್ರುಸ್ತು ಶೀಘ್ರುಕಸ್ಯ ಮರುಃ ಸ್ಮೃತಃ ।
ಮರುಸ್ತು ಯೋಗಮಾಸ್ಥಾಯ ಕಲಾಪಗ್ರಾಮಮಾಸ್ಥಿತಃ ॥ ೧೮೧ ॥

ಏಕೋನವಿಂಶಪ್ರಯುಗೇ ಕ್ಷತ್ರಸ್ಪ್ರಾವರ್ತಕಃ ಪ್ರಭುಃ ।
ಪ್ರಭುಸುತೋ ಮರೋಃ ಪುತ್ರಃ ಸುಸಂಧಿಸ್ತಸ್ಯ ಚಾತ್ಮಜಃ ॥ ೧೮೨ ॥

ಸುಸಂಧೇಶ್ಚ ತಥಾಮರ್ಷಃ ಸಹಸ್ವಾನ್ನಾಮ ನಾಮತಃ ।
ಆಸೀತ್ ಸಹಸ್ವತಃ ಪುತ್ರೋ ರಾಜಾ ವಿಶ್ರುತವಾನಿತಿ ॥ ೧೮೩ ॥

ತಸ್ಯಾಸೀದ್ವಿಶ್ರುತವತಃ ಪುತ್ರೋ ರಾಜಾ ಬೃಹದ್ಬಲಃ ।
ಏತೇ ಹೀಕ್ಷ್ವಾಕುದಾಯಾದಾ ರಾಜಾನಃ ಶತಶಃ ಸ್ಮೃತಾಃ ॥ ೧೮೪ ॥

---

೧೮೦. ಆ ಹಿರಣ್ಯನಾಭನಿಗೆ ಪುಷ್ಪ ಎಂಬ ಜ್ಞಾನಿಯಾದ ಪುತ್ರನೂ ಪುಷ್ಪ ಎಂಬುವನಿಗೆ ಧ್ರುವಸಂಧಿ ಎಂಬ ಪುತ್ರನೂ, ಧ್ರುವಸಂಧಿಗೆ ಸುದರ್ಶನ ಎಂಬ ಪುತ್ರನೂ ಮತ್ತು ಸುದರ್ಶನನಿಗೆ ಅಗ್ನಿವರ್ಣನೆಂಬ ಪುತ್ರನೂ ಇದ್ದರು.

೧೮೧. ಅಗ್ನಿವರ್ಣನಿಗೆ ಶೀಘ್ರು ಎಂಬ ಪುತ್ರನೂ, ಶೀಘ್ರುಕನಿಗೆ ಮರು ಎಂಬ ಪುತ್ರನೂ ಇದ್ದರೆಂದು ಸ್ಮರಿಸಲ್ಪಟ್ಟಿರುವರು, ಮರು ಎಂಬುವನು ಯೋಗಸಮಾಧಿಯ ಬಲದಿಂದ ಕಲಾಪಗ್ರಾಮವೆಂಬ ಗ್ರಾಮವನ್ನು ಹೊಂದಿದನು.

೧೮೨. ಪ್ರಭುವಾದ ಮರು ಎಂಬುವನು ಹತ್ತೊಂಭತ್ತನೆಯ ಯುಗ ಪರ್ಯಾಯದಲ್ಲಿ ಕ್ಷತ್ರಿಯ ವಂಶ ಪ್ರವರ್ತಕನಾಗಿದ್ದನು, ಆ ಮರುವಿಗೆ ಪ್ರಭುಸುತ ಎಂಬ ಪುತ್ರನಿದ್ದನು. ಅವನಿಗೆ ಸುಸಂಧಿ ಎಂಬುವನು ಪುತ್ರನಾಗಿ ಜನಿಸಿದನು.

೧೮೩. ಸುಸಂಧಿರಾಜನಿಗೆ ಶತ್ರುಗಳಿಂದ ಸಹಿಸಲಾಗದ ಸಹಸ್ವಾನ್ ಎಂಬ ಸಂಜ್ಞಾಂಕಿತನಾದ ಪುತ್ರನಿದ್ದನು, ಸಹಸ್ವಾನ್ ಎಂಬುವನಿಗೆ ವಿಶ್ರುತವಾನ್ ಎಂಬುವನು ಪುತ್ರನಾಗಿದ್ದನು.

೧೮೪. ಆ ವಿಶ್ರುತವಾನ್ ಎಂಬುವನಿಗೆ ಬೃಹದ್ಬಲನೆಂಬ ರಾಜನು ಪುತ್ರನಾಗಿದ್ದನು. ಹೀಗೆ ಇವರೆಲ್ಲರೂ ಇಕ್ಷ್ವಾಕುರಾಜನ ಸಂತತಿಯಲ್ಲಿ ಪುತ್ರರಾಗಿ ಹುಟ್ಟಿದ ರಾಜರು. ಇವರೆಲ್ಲರೂ ಅನೇಕ ಸಂಖ್ಯಾತರಾಗಿರುವರೆಂದು ಸ್ಮರಿಸಲ್ಪಟ್ಟಿರುವರು.

ವಂಶೇ ಪ್ರಧಾನಾ ಯೇ ತಸ್ಮಿನ್ ಪ್ರಾಧಾನ್ಯೇನ ತು ಕೀರ್ತಿತಾಃ ।
ಪಠನ್ ಸಮ್ಯಗಿಮಾಂ ಸೃಷ್ಟಿಮಾದಿತ್ಯಸ್ಯ ವಿವಸ್ವತಃ || ೧೮೫ ||

ಪ್ರಜಾವಾನೇತಿ ಸಾಯುಜ್ಯಂ ಮನೋರ್ವೈವಸ್ವತಸ್ಯ ಸಃ ।
ಶ್ರಾದ್ಧದೇವಸ್ಯ ದೇವಸ್ಯ ಪ್ರಜಾನಾಂ ಪುಷ್ಟಿದಸ್ಯ ಚ || ೧೮೬ ||

ವಿಪಾಪ್ಮಾ ವಿರಜಾಶ್ಚೈವ ಆಯುಷ್ಮಾನ್ ಜಾಯತೇಽಚ್ಯುತಃ || ೧೮೭ ||

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ತ್ರಿಷಷ್ಟಿತಮೋಽಧ್ಯಾಯಃ

---

೧೮೫. ಈ ವಂಶದಲ್ಲಿ ಪ್ರಧಾನರಾಗಿರುವ ವ್ಯಕ್ತಿಗಳನ್ನು ಮಾತ್ರ ಅವರಲ್ಲಿ ಪ್ರಧಾನವಾಗಿದ್ದ ಚರಿತ್ರ ವಿಷಯಗಳಿಂದ ಕೂಡಿ ಹೇಳಲ್ಪಟ್ಟಿರುವರು. ಅದಿತಿ ಪುತ್ರನಾದ ಸೂರ್ಯನ ಈ ಪ್ರಜಾ ಸೃಷ್ಟಿಯನ್ನು ಚನ್ನಾಗಿ ಪಠನ ಮಾಡಬೇಕು

೧೮೬. ಪಠನ ಮಾಡಿರುವ ಮಾನವನು ವೈವಸ್ವತ ಮನುವಿನ ಸಾಯುಜ್ಯವನ್ನೂ ಪ್ರಜಾಸಂಪತ್ತಿಯನ್ನೂ ಹೊಂದುವನು, ಮತ್ತು ಪ್ರಜೆಗಳಿಗೆ ಪುಷ್ಟಿಯನ್ನು ಅನುಗ್ರಹಿಸುವ ಯಮಧರ್ಮರಾಜದೇವನ ಅನುಗ್ರಹವನ್ನು ಹೊಂದುವನು.

೧೮೭. ಮತ್ತು ಈ ಪವಿತ್ರ ಚರಿತ್ರ ಶ್ರವಣದಿಂದ ಪಾಪಗಳನ್ನು ಕಳೆದುಕೊಂಡವನೂ, ರಜೋಗುಣ ಸಂಪರ್ಕವಿಲ್ಲದವನೂ, ದೀರ್ಘಾಯುಷ್ಮಂತನೂ ಮತ್ತು ತನ್ನ ಸಂಪತ್ತಿಯಿಂದ ಚ್ಯುತಿಯಿಲ್ಲದವನೂ ಆಗುವನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತಮೂರನೆಯ
ಅಧ್ಯಾಯವು ಮುಗಿದುದು.

---

# ಚತುಃಷಷ್ಟಿತಮೋಽಧ್ಯಾಯಃ

**ಸೂತ ಉವಾಚ :—**

**ಅನುಜಸ್ಯ ವಿಕುಕ್ಷೇಸ್ತು ನಿಮೇರ್ವಂಶಂ ನಿಬೋಧತ ।**
**ಯೋಽಸೌ ನಿವೇಶಯಾಮಾಸ ಪುರಂ ದೇವಪುರೋಪಮಮ್ ॥ ೧ ॥**

**ಜಯಂತಮಿತಿವಿಖ್ಯಾತಂ ಗೌತಮಸ್ಯಾಶ್ರಮಾಂತಿಕಮ್ ।**
**ಯಸ್ಯಾನ್ವವಾಯೇ ಜಜ್ಞೇ ವೈ ಜನಕೋ ನೃಪಸತ್ತಮಃ ॥ ೨ ॥**

**ನಿಮಿರ್ನಾಮ ಸುಧರ್ಮಾತ್ಮಾ ಸರ್ವಸತ್ತ್ವನಮಸ್ಕೃತಃ ।**
**ಆಸೀತ್ ಪುತ್ರೋ ಮಹಾರಾಜಾ ಚೇಕ್ಷ್ವಾಕೋರ್ಭೂರಿತೇಜಸಃ ॥ ೩ ॥**

**ಸ ಶಾಪೇನ ವಸಿಷ್ಠಸ್ಯ ವಿದೇಹಃ ಸಮಪದ್ಯತ ।**
**ತಸ್ಯ ಪುತ್ರೋ ಮಿಥಿರ್ನಾಮ ಜನಿತಃ ಪರ್ವಭಿಸ್ತ್ರಿಭಿಃ ॥ ೪ ॥**

---

೧. ಸೂತಮುನಿಯು ಇಂತೆಂದನು :—ವಿಕುಕ್ಷಿಯ ಅನುಜನಾದ ನಿಮಿ ರಾಜನ ವಂಶ ಸಂತತಿಯನ್ನು ಶ್ರವಣಮಾಡಿರಿ, ಆ ನಿಮಿರಾಜನು ತನ್ನ ನಗರವನ್ನು ದೇವನಗರದಂತೆ ಸ್ಥಾಪಿಸಿದನು.

೨. ಗೌತಮ ಮುನಿಯ ಆಶ್ರಮ ಸಮೀಪದಲ್ಲಿರುವ ಜಯಂತವೆಂಬ ನಗರವು ಆ ನಿಮಿರಾಜನ ಶಾಸನದಲ್ಲಿತ್ತು, ಆ ನಿಮಿರಾಜನ ವಂಶದಲ್ಲಿ ರಾಜಶ್ರೇಷ್ಠನಾದ ಜನಕಮಹಾರಾಜನು ಜನಿಸಿದನು.

೩. ಮಹಾರಾಜನೆ! ಅತಿಶಯವಾದ ತೇಜಸ್ಸಿನಿಂದ ಪೂರ್ಣನಾದ ಇಕ್ಷ್ವಾಕು ರಾಜನಿಗೆ ಧರ್ಮಾತ್ಮನೂ, ಸರ್ವ ಪ್ರಾಣಿಗಳಿಗೆ ವಂದ್ಯನೂ ಆದ ನಿಮಿ ಎಂಬುವನು ಪುತ್ರನಾಗಿದ್ದನು.

೪. ಅವನು ವಸಿಷ್ಠ ಮಹಾಮುನಿಯ ಶಾಪದಿಂದ ದೇಹವನ್ನು ಕಳೆದುಕೊಂಡು ವಿದೇಹನಾದನು. ಅವನಿಗೆ ಮಿಥಿ ಎಂಬುವನು ಮೂರು ಪರ್ವಗಳಿಂದ ಕೂಡಿ ಪುತ್ರನಾಗಿ ಜನಿಸಿದನು.

ಅರಣ್ಯಾಂ ಮಥ್ಯಮಾನಾಯಾಂ ಪ್ರಾದುರ್ಭೂತೋ ಮಹಾಯಶಾಃ ।
ನಾಮ್ನಾ ಮಿಥಿರಿತಿ ಖ್ಯಾತೋ ಜನನಾಜ್ಜನಕೋಽಭವತ್ ॥ ೫ ॥

ಮಿಥಿರ್ನಾಮ ಮಹಾವೀರ್ಯೋ ಯೇನಾಸೌ ಮಿಥಿಲಾಭವತ್ ।
ರಾಜಾಸೌ ಜನಕೋ ನಾಮ ಜನಕಾಚ್ಚಾಪ್ಯುದಾವಸುಃ ॥ ೬ ॥

ಉದಾವಸೋಸ್ತು ಧರ್ಮಾತ್ಮಾ ಜಾತೋಽಸೌ ನಂದಿವರ್ಧನಃ ।
ನಂದಿವರ್ಧನತಃ ಶೂರಃ ಸುಕೇತುರ್ನಾಮ ಧಾರ್ಮಿಕಃ ॥ ೭ ॥

ಸುಕೇತೋರಪಿ ಧರ್ಮಾತ್ಮಾ ದೇವರಾತೋ ಮಹಾಬಲಃ ।
ದೇವರಾತಸ್ಯ ಧರ್ಮಾತ್ಮಾ ಬೃಹದುಕ್ಥ ಇತಿ ಶ್ರುತಃ ॥ ೮ ॥

ಬೃಹದುಕ್ಥಸ್ಯ ತನಯೋ ಮಹಾವೀರ್ಯಃ ಪ್ರತಾಪವಾನ್ ।
ಮಹಾವೀರ್ಯಸ್ಯ ಧೃತಿಮಾನ್ ಸುಧೃತಿಸ್ತಸ್ಯ ಚಾತ್ಮಜಃ ॥ ೯ ॥

---

೫. ಯಜ್ಞದಲ್ಲಿ ಅಗ್ನಿಯ ಉತ್ಪತ್ತಿಗೋಸ್ಕರ ಅರಣಿಯನ್ನು ಮಥನ ಮಾಡುತ್ತಿರುವಾಗ ಮಹಾ ಯಶಸ್ವಿಯೂ ಮಿಥಿ ಎಂಬ ನಾಮ ಪ್ರಸಿದ್ಧಿಯುಳ್ಳವನೂ ಆದ ಪುತ್ರನು ಹುಟ್ಟಿದನು. ಅವನು ಅಂತಹ ಜನನವನ್ನು ಹೊಂದಿದ್ದರಿಂದ ಜನಕನೆಂದು ಪ್ರಸಿದ್ಧನಾದನು.

೬. ಮಹಾ ವೀರ್ಯಸಂಪನ್ನನಾದ ಆ ಮಿಥಿರಾಜನು ಮಿಥಿಲಾ ಎಂಬ ನಗರಿಯನ್ನು ಸ್ಥಾಪಿಸಿದನು. ಈ ರಾಜನು ಜನಕರಾಜನೆಂದು ಪ್ರಸಿದ್ಧನಾಗಿದ್ದನು. ಈ ಜನಕರಾಜನಿಂದ ಉದಾವಸು ಎಂಬ ಪುತ್ರನು ಹುಟ್ಟಿದನು.

೭. ಉದಾವಸು ರಾಜನಿಂದ ಧರ್ಮಾತ್ಮನಾದ ನಂದಿವರ್ಧನನೆಂಬ ರಾಜನು ಪುತ್ರನಾಗಿ ಜನಿಸಿದನು. ಆ ನಂದಿವರ್ಧನನಿಂದ ಶೂರನೂ, ಧಾರ್ಮಿಕನೂ ಆದ ಸುಕೇತು ಎಂಬ ಪುತ್ರನು ಜನ್ಮವೆತ್ತಿದನು.

೮. ಸುಕೇತುವಿಗೆ ಧರ್ಮಾತ್ಮನೂ ಮಹಾಬಲಶಾಲಿಯೂ ಆದ ದೇವರಾತನೆಂಬ ಪುತ್ರನೂ, ದೇವರಾತನಿಗೆ ಧರ್ಮಾತ್ಮನಾದ ಬೃಹದುಕ್ಥ ಎಂಬ ಪುತ್ರನೂ ಜನಿಸಿ ಪ್ರಸಿದ್ಧರಾಗಿರುವರು.

೯. ಬೃಹದುಕ್ಥನಿಗೆ ಮಹಾಪ್ರತಾಪಶಾಲಿಯಾದ ಮಹಾವೀರ್ಯನೆಂಬ ಪುತ್ರ ಸಿದ್ದಮ. ಮಹಾವೀರ್ಯನಿಗೆ ಧೃತಿಮಾನ್ ಎಂಬ ಪುತ್ರನೂ ಧೃತಿಮಂತನಿಗೆ ಸುಧೃತಿ ಎಂಬ ಪುತ್ರನೂ ಜನಿಸಿದರು.

ಸುಧೃತೇರಪಿ ಧರ್ಮಾತ್ಮಾ ಧೃಷ್ಟಕೇತುಃ ಪರಂತಪಃ ।
ಧೃಷ್ಟಕೇತುಸುತಶ್ಚಾಪಿ ಹರ್ಯಶ್ವೋ ನಾಮ ವಿಶ್ರುತಃ ॥ ೧೦ ॥

ಹರ್ಯಶ್ವಸ್ಯ ಮರುಃ ಪುತ್ರೋ ಮರೋಃ ಪುತ್ರಃ ಪ್ರತಿಂಬಕಃ ।
ಪ್ರತಿಂಬಕಸ್ಯ ಧರ್ಮಾತ್ಮಾ ರಾಜಾ ಕೀರ್ತಿರಥಃ ಸ್ಮೃತಃ ॥ ೧೧ ॥

ಪುತ್ರಃ ಕೀರ್ತಿರಥಸ್ಯಾಪಿ ದೇವಮೀಢ ಇತಿ ಶ್ರುತಃ ।
ದೇವಮೀಢಸ್ಯ ವಿಬುಧೋ ವಿಬುಧಸ್ಯ ಮಹಾಧೃತಿಃ ॥ ೧೨ ॥

ಮಹಾಧೃತಿಸುತೋ ರಾಜಾ ಕೀರ್ತಿರಾತಃ ಪ್ರತಾಪವಾನ್ ।
ಕೀರ್ತಿರಾತಾತ್ಮಜೋ ವಿದ್ವಾನ್ ಮಹಾರೋಮೇತಿ ವಿಶ್ರುತಃ ॥ ೧೩ ॥

ಮಹಾರೋಮ್ಣಸ್ತು ವಿಖ್ಯಾತಃ ಸ್ವರ್ಣರೋಮಾ ವ್ಯಜಾಯತ ।
ಸ್ವರ್ಣರೋಮಾತ್ಮಜಶ್ಚಾಪಿ ಹ್ರಸ್ವರೋಮಾಽಭವನ್ನೃಪಃ ॥ ೧೪ ॥

---

೧೦. ಸುಧೃತಿ ಎಂಬುವನಿಗೆ ಧರ್ಮಾತ್ಮನೂ ಶತ್ರುನಿಗ್ರಹದಲ್ಲಿ ತತ್ಪರನೂ ಆದ ಧೃಷ್ಟಕೇತು ಎಂಬ ಪುತ್ರನಿದ್ದನು. ಧೃಷ್ಟಕೇತುವಿಗೆ ಹರ್ಯಶ್ವನೆಂದು ಪ್ರಸಿದ್ಧನಾದ ಪುತ್ರನು ಜನಿಸಿದನು.

೧೧. ಹರ್ಯಶ್ವನಿಗೆ ಮರು ಎಂಬ ಪುತ್ರನೂ ಮರು ಎಂಬುವನಿಗೆ ಪ್ರತಿಂಬಕ ಎಂಬ ಪುತ್ರನೂ ಮತ್ತು ಪ್ರತಿಂಬಕನಿಗೆ ಧರ್ಮಾತ್ಮನಾದ ಕೀರ್ತಿರಥರಾಜ ಎಂಬ ಪುತ್ರನೂ ಜನಿಸಿದರೆಂದು ಸ್ಮರಿಸಲ್ಪಟ್ಟಿರುವರು.

೧೨. ಕೀರ್ತಿರಥನಿಗೆ ದೇವಮೀಢನು ಪುತ್ರನಾಗಿದ್ದನೆಂಬುದು ಪ್ರಸಿದ್ಧವಾಗಿದೆ. ದೇವಮೀಢನಿಗೆ ವಿಬುಧನೆಂಬ ಪುತ್ರನೂ ವಿಬುಧನಿಗೆ ಮಹಾಧೃತಿ ಎಂಬ ಪುತ್ರನೂ ಇದ್ದರು.

೧೩. ಮಹಾಧೃತಿಯಿಂದ ಪ್ರತಾಪಶಾಲಿಯಾದ ಕೀರ್ತಿರಾತನೆಂಬ ರಾಜನು ಜನ್ಮವೆತ್ತಿದನು. ಕೀರ್ತಿರಾತನಿಗೆ ಜ್ಞಾನಿಯೂ ಮಹಾ ರೋಮ ಎಂಬ ಸಂಜ್ಞೆಯಿಂದ ಪ್ರಸಿದ್ಧನೂ ಆದ ಪುತ್ರನು ಜನಿಸಿದನು.

೧೪. ಮಹಾರೋಮನಿಂದ ವಿಖ್ಯಾತನಾದ ಸ್ವರ್ಣರೋಮ ಎಂಬ ಪುತ್ರನು ಜನಿಸಿದನು. ಆ ಸ್ವರ್ಣರೋಮನಿಗೆ ಹ್ರಸ್ವರೋಮ ಎಂದು ಪ್ರಸಿದ್ಧಿಯುಳ್ಳ ರಾಜನು ಪುತ್ರನಾಗಿದ್ದನು.

ಹ್ರಸ್ವರೋಮಾತ್ಮಜೋ ವಿದ್ವಾನ್ ಸೀರಧ್ವಜ ಇತಿ ಶ್ರುತಃ ।
ಉದ್ಭಿನ್ನಾ ಕರ್ಷತಾ ಯೇನ ಸೀತಾ ರಾಜ್ಞಾ ಯಶಸ್ವಿನೀ ॥ ೧೫ ॥

ರಾಮಸ್ಯ ಮಹಿಷೀ ಸಾಧ್ವೀ ಸುವ್ರತಾ ನಿಯತವ್ರತಾ ।
ವೈಶಂಪಾಯನ ಉವಾಚ :—
ಕಥಂ ಸೀತಾ ಸಮುತ್ಪನ್ನಾ ಕೃಷ್ಯಮಾಣಾ ಯಶಸ್ವಿನೀ ॥ ೧೬ ॥

ಕಿಮರ್ಥಂ ವಾಕೃಷದ್ರಾಜಾ ಕ್ಷೇತ್ರಂ ಯಸ್ಮಿನ್ ಬಭೂವ ಹ ।
ಸೂತ ಉವಾಚ :—
ಅಗ್ನಿಕ್ಷೇತ್ರೇ ಕೃಷ್ಯಮಾಣೇ ಅಶ್ವಮೇಧೇ ಮಹಾತ್ಮನಃ ॥ ೧೭ ॥

ವಿಧಿನಾ ಸುಪ್ರಯತ್ನೇನ ತಸ್ಮಾತ್ ಸಾ ತು ಸಮುತ್ಥಿತಾ ।
ಸೀರಧ್ವಜಾನುಜಾತಸ್ತು ಭಾನುಮಾನ್ನಾಮ ಮೈಥಿಲಃ ॥ ೧೮ ॥

ಭ್ರಾತಾ ಕುಶಧ್ವಜಸ್ತಸ್ಯ ಸ ಕಾಶ್ಯಧಿಪತಿರ್ನೃಪಃ ।
ತಸ್ಯ ಭಾನುಮತಃ ಪುತ್ರಃ ಪ್ರದ್ಯುಮ್ನಶ್ಚ ಪ್ರತಾಪವಾನ್ ॥ ೧೯ ॥

---

೧೫. ಹ್ರಸ್ವರೋಮನ ಜ್ಞಾನಿಯಾದ ಪುತ್ರನು ಸೀರಧ್ವಜನೆಂದು ಪ್ರಸಿದ್ಧನಾಗಿದ್ದನು. ಆ ಸೀರಧ್ವಜರಾಜನು ಭೂಮಿಯನ್ನು ಉಳುತ್ತಿರುವಾಗ ಯಶಸ್ವಿನಿಯಾದ ಸೀತಾದೇವಿಯು ಅಭಿವ್ಯಕ್ತಿ ಹೊಂದಿದಳು.

೧೬. ಆ ಸೀತಾದೇವಿಯು ಉತ್ತಮವಾದ ಮತ್ತು ಅಖಂಡಿತವಾದ ವ್ರತಾಚರಣೆಯುಳ್ಳವಳಾಗಿ ಶ್ರೀರಾಮನ ಭಾರ್ಯೆಯಾದಳು, ವೈಶಂಪಾಯನ ಮುನಿಯು ಮುಂದೆ ಹೀಗೆ ಪ್ರಶ್ನಿಸಿದನು. ಭೂಮಿಯನ್ನು ಉಳುತ್ತಿರಲು ಕೀರ್ತಿಮತಿಯಾದ ಸೀತೆಯು ಹೇಗೆ ಹುಟ್ಟಿದಳು ?

೧೭. ಸೀರಧ್ವಜರಾಜನು ಸೀತೆಯ ಉತ್ಪತ್ತಿಗೆ ಆಧಾರವಾದ ಕ್ಷೇತ್ರವನ್ನು ಏತಕ್ಕೋಸ್ಕರ ಕೃಷಿಯಿಂದ ಸಂಸ್ಕಾರಮಾಡಿದನು ? ಸೂತಮುನಿಯು ಪ್ರತ್ಯುತ್ತರವನ್ನು ಹೇಳಿದನು :—ಮಹಾತ್ಮನಾದ ಆ ರಾಜನು ಅಶ್ವಮೇಧಯಾಗವನ್ನು ಮಾಡುವ ಪ್ರಸಂಗದಲ್ಲಿ ಅಗ್ನಿಯ ಕ್ಷೇತ್ರವನ್ನು ಕೃಷಿಯಿಂದ ಸಂಸ್ಕರಿಸಿದನು.

೧೮. ಯಥಾವಿಧಿಯಾಗಿಯೂ ಪ್ರಯತ್ನ ಪೂರ್ವಕವಾಗಿಯೂ ಯಜ್ಞಭೂಮಿಯ ಕೃಷಿಯಲ್ಲಿ ಸೀತಾದೇವಿಯು ಆವಿರ್ಭಾವಹೊಂದಿದಳು. ಸೀರಧ್ವಜರಾಜನಿಗೆ ಮಿಥಿವಂಶದಲ್ಲಿ ಹುಟ್ಟಿದ ಭಾನುಮಾನ್ ಎಂಬ ರಾಜನು ಅನುಜನಾಗಿದ್ದನು.

೧೯. ಭಾನುಮಂತನಿಗೆ ಕುಶಧ್ವಜನೆಂಬ ಸಹೋದರನಿದ್ದನು. ಆವನು ಕಾಶಿರಾಜ್ಯಕ್ಕೆ ರಾಜನಾಗಿದ್ದನು, ಇವರಲ್ಲಿ ಭಾನುಮಂತನಿಗೆ ಪ್ರದ್ಯುಮ್ನನೆಂಬ ಪ್ರತಾಪಶಾಲಿಯಾದ ಪುತ್ರನಿದ್ದನು.

ಮುನಿಸ್ತಸ್ಯ ಸುತಶ್ಚಾಪಿ ತಸ್ಮಾದೂರ್ಜವಹಃ ಸ್ಮೃತಃ ।
ಊರ್ಜವಹಾತ್ ಸನದ್ವಾಜಃ ಶಕುನಿಸ್ತಸ್ಯ ಚಾತ್ಮಜಃ ॥ ೨೦ ॥

ಸ್ವಾಗತಃ ಶಕುನೇಃ ಪುತ್ರಃ ಸುವರ್ಚಾಸ್ತತ್ಸುತಃ ಸ್ಮೃತಃ ।
ಸುತೋ ಯಸ್ತಸ್ಯ ದಾಯಾದಃ ಸುಶ್ರುತಸ್ತಸ್ಯ ಚಾತ್ಮಜಃ ॥ ೨೧ ॥

ಸುಶ್ರುತಸ್ಯ ಜಯಃ ಪುತ್ರೋ ಜಯಸ್ಯ ವಿಜಯಃ ಸುತಃ ।
ವಿಜಯಸ್ಯ ಕ್ರತುಃ ಪುತ್ರಃ ಕ್ರತೋಽಶ್ಚ ಸುನಯಃ ಸ್ಮೃತಃ ॥ ೨೨ ॥

ಸುನಯಾದ್ವೀತಹವ್ಯಸ್ತು ವೀತಹವ್ಯಾತ್ಮಜೋ ಧೃತಿಃ ।
ಧೃತೇಸ್ತು ಬಹುಲಾಶ್ವೋಽಭೂದ್ಬಹುಲಾಶ್ವಸುತಃ ಕೃತಿಃ ॥ ೨೩ ॥

---

೨೦. ಆ ಪ್ರದ್ಯುಮ್ನನಿಗೆ ಮುನಿ ಎಂಬ ಪುತ್ರನೂ ಮುನಿ ಎಂಬುವನಿಗೆ ಊರ್ಜವಹನೆಂಬ ಪುತ್ರನೂ ಇದ್ದರೆಂದು ಸ್ಮರಿಸಲ್ಪಟ್ಟಿರುವರು. ಊರ್ಜವಹನಿಗೆ ಸನದ್ವಾಜ ಎಂಬ ಪುತ್ರನೂ ಸನದ್ವಾಜನಿಗೆ ಶಕುನಿ ಎಂಬ ಪುತ್ರನೂ ಇದ್ದರು.

೨೧. ಶಕುನಿಗೆ ಸ್ವಾಗತ ಎಂಬುವನೂ, ಸ್ವಾಗತನಿಗೆ ಸುವರ್ಚಾ ಎಂಬುವನೂ ಪುತ್ರರಾಗಿದ್ದರೆಂದು ಸ್ಮರಿಸಲ್ಪಟ್ಟಿರುವರು, ಆ ಸುವರ್ಚನಿಗೆ ಸುತ ಎಂಬ ಪುತ್ರನೂ ಸುತನಿಗೆ ಸುಶ್ರುತನೆಂಬ ಪುತ್ರನೂ ಇದ್ದರು.

೨೨. ಸುಶ್ರುತನಿಗೆ ಜಯನೆಂಬುವನೂ ಜಯನಿಗೆ ವಿಜಯನೆಂಬುವನೂ ವಿಜಯನಿಗೆ ಕ್ರತು ಎಂಬುವನೂ ಮತ್ತು ಕ್ರತು ಎಂಬುವನಿಗೆ ಸುನಯನೆಂಬುವನೂ ಪುತ್ರರಾಗಿದ್ದರೆಂದು ಸ್ಮರಿಸಲ್ಪಟ್ಟು ಇರುವರು.

೨೩. ಸುನಯನಿಂದ ವೀತಹವ್ಯನೆಂಬುವನೂ, ವೀತಹವ್ಯನಿಂದ ಧೃತಿ ಎಂಬುವನೂ, ಧೃತಿಯಿಂದ ಬಹುಲಾಶ್ವ ಎಂಬುವನೂ, ಮತ್ತು ಬಹುಲಾಶ್ವನಿಂದ ಕೃತಿ ಎಂಬ ಪುತ್ರನೂ ಕ್ರಮವಾಗಿ ಜನಿಸಿದರು.

ತಸ್ಮಿನ್ ಸಂತಿಷ್ಠತೇ ವಂಶೋ ಜನಕಾನಾಂ ಮಹಾತ್ಮನಾಮ್ ।
ಇತ್ಯೇತೇ ಮೈಥಿಲಾಃ ಪ್ರೋಕ್ತಾಃ ಸೋಮಸ್ಯಾಪಿ ನಿಬೋಧತ ॥ ೨೪ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಚತುಃಷಷ್ಟಿ
ತಮೋಽಧ್ಯಾಯಃ

---

೨೪. ಹೀಗೆ ಮಹಾತ್ಮರಾದ ಜನಕರಾಜರ ವಂಶವು ಕೃತಿ ಎಂಬ ಪುತ್ರನ ವರೆಗೆ ಬಂದು ಅಲ್ಲಿ ಸಮಾಪ್ತಿಹೊಂದುವುದು. ಈ ರೀತಿಯಾಗಿ ಮೈಥಿಲ ರಾಜರ ವಂಶಾವಳಿಯು ಹೇಳಲ್ಪಟ್ಟಿತು, ಮುಂದೆ ಚಂದ್ರವಂಶದ ರಾಜರನ್ನು ಶ್ರವಣಮಾಡಿರಿ,

ಬ್ರಹ್ಮಾಂಡಪುರಾಣವಲ್ಲಿ ಉತ್ತರಾರ್ಧದಲ್ಲಿ ಅರವತ್ತ ನಾಲ್ಕನೆಯ ಅಧ್ಯಾಯವು
ಮುಗಿದುದು.

---

## ಪಂಚಷಷ್ಟಿತಮೋಽಧ್ಯಾಯಃ

**ಸೂತ ಉವಾಚ :—**

**ಪಿತಾ ಸೋಮಸ್ಯ ವೈ ವಿಪ್ರಾ ಜಜ್ಞೇಽತ್ರಿರ್ಭಗವಾನೃಷಿಃ ।**
**ತತ್ರಾತ್ರಿಃ ಸರ್ವಲೋಕಾನಾಂ ತಸ್ಥೌ ಸ್ವೇನೌಜಸಾ ವೃತಃ ॥ ೧ ॥**

**ಕರ್ಮಣಾ ಮನಸಾ ವಾಚಾ ಶುಭಾನ್ಯೇವ ಸಮಾಚರನ್ ।**
**ಕಾಷ್ಠಕುಡ್ಯಶಿಲಾಭೂತ ಊರ್ಧ್ವಬಾಹುರ್ಮಹಾದ್ಯುತಿಃ ॥ ೨ ॥**

**ಸುದುಶ್ಚರಂ ನಾಮ ತಪೋ ಯೇನ ತಪ್ತಂ ಮಹತ್ಪುರಾ ।**
**ತ್ರೀಣಿ ವರ್ಷಸಹಸ್ರಾಣಿ ದಿವ್ಯಾನೀತಿ ಹಿ ನಃ ಶ್ರುತಮ್ ॥ ೩ ॥**

**ತಸ್ಯೋರ್ಧ್ವರೇತಸಸ್ತತ್ರ ಸ್ಥಿತಸ್ಯಾನಿಮಿಷಸ್ಯ ಹ ।**
**ಸೋಮತ್ವಂ ತನುರಾಪೇದೇ ಮಹಾಬುದ್ಧಿಃ ಸ ವೈ ದ್ವಿಜಃ ॥ ೪ ॥**

---

೧. ಸೂತ ಮುನಿಯು ಇಂತೆಂದನು :— ವಿಪ್ರನೆ! ಚಂದ್ರನ ಪಿತನೂ ಪೂಜ್ಯನೂ ಆದ ಅತ್ರಿಮಹರ್ಷಿಯು ಆದಿಯಲ್ಲಿ ಜನಿಸಿದನು, ಆಗ ಆ ಅತ್ರಿ ಮುನಿಯು ಸಕಲ ಲೋಕಗಳಲ್ಲಿಯೂ ತನ್ನ ತೇಜಸ್ಸಿನಿಂದ ತಾನು ಆವರಿಸಲ್ಪಟ್ಟು ಇದ್ದನು.

೨. ಆ ಅತ್ರಿಮುನಿಯು ಮನಸ್ಸು, ವಾಗಿಂದ್ರಿಯ, ದೇಹಗಳಿಂದ ಶುಭ ಕರ್ಮಗಳನ್ನು ಮಾತ್ರ ಆಚರಿಸುತ್ತ, ಕಡ್ಡಿ, ಗೋಡೆ, ಕಲ್ಲು ಮುಂತಾದ ಸ್ಥಿರವಸ್ತು ಗಳಂತೆ ಅಚಲನಾಗಿ ಊರ್ಧ್ವ ಭಾಗಕ್ಕೆ ವ್ಯಾಪಿಸಿದ ಬಾಹುಗಳುಳ್ಳವನಾಗಿ ಮತ್ತು ಅತಿಶಯವಾದ ಕಾಂತಿಯುಳ್ಳವನಾಗಿ ತಪಸ್ಸನ್ನು ಆಚರಿಸಿದನು.

೩. ಇತರರಿಂದ ಮಾಡಲಾಗದ್ದರಿಂದ ಸುದುಶ್ಚರವೆಂಬ ಸಂಜ್ಞಾಂಕಿತವಾದಂತೆ ಇರುವ ತಪಸ್ಸು ಅವನಿಂದ ಪೂರ್ವದಲ್ಲಿ ಆಚರಿಸಲ್ಪಟ್ಟಿತು. ಆ ತಪಸ್ಸು ದಿವ್ಯಮಾನದ ಮೂರು ಸಹಸ್ರ ವರ್ಷಗಳ ವರೆಗೆ ನಡೆಯಿತೆಂದು ನಮಗೆ ತಿಳಿದಿರುವುದಾಗಿದೆ.

೪. ಆಗ ಊರ್ಧ್ವರೇತಸ್ಸಿನದಶೆಯಲ್ಲಿ ಕಣ್ಣು ರೆಪ್ಪೆಯೂ ಚಲಿಸದಂತೆ ಇರುವ ಆ ಮುನಿಯ ದೇಹವು ಕ್ರಮವಾಗಿ ಚಂದ್ರರೂಪ ಪರಿಣಾಮವನ್ನು ಹೊಂದಿತು. ಆ ವಿಪ್ರನು ಅತಿಶಯವಾದ ಜ್ಞಾನವಂತನಾಗಿದ್ದನು.

**ಊರ್ಧ್ವಮಾಚಕ್ರಮೇ ತಸ್ಯ ಸೋಮತ್ವಂ ಭಾವಿತಾತ್ಮನಃ ।**
**ನೇತ್ರಾಭ್ಯಾಮಸ್ರವತ್ ಸೋಮೋ ದಶಧಾ ದ್ಯೋತಯನ್ ದಿಶಃ ॥ ೫ ॥**

**ತಂ ಗರ್ಭಂ ವಿಧಿನಾ ಹೃಷ್ಟಾ ದಶ ದೇವ್ಯೋ ದಧುಸ್ತದಾ ।**
**ಸಮೇತ್ಯ ಧಾರಯಾಮಾಸುರ್ನ ಚ ತಾಃ ಸಮಶಕ್ನುವನ್ ॥ ೬ ॥**

**ಸ ತಾಭ್ಯಃ ಸಹಸೈವಾಥ ದಿಗ್ಭ್ಯೋ ಗರ್ಭಃ ಪ್ರಸಾಧಿತಃ ।**
**ಪಪಾತ ಭಾಸಯಂಲ್ಲೋಕಾನ್ ಶೀತಾಂಶುಃ ಸರ್ವಭಾವನಃ ॥ ೭ ॥**

**ಯದಾ ನ ಧಾರಣೇ ಶಕ್ತಾಸ್ತಸ್ಯ ಗರ್ಭಸ್ಯ ತಾಃ ಸ್ತ್ರಿಯಃ ।**
**ತತಃ ಸಹಾಭಿಃ ಶೀತಾಂಶುರ್ನಿಪಪಾತ ವಸುಂಧರಾಮ್ ॥ ೮ ॥**

**ಪತಂತಂ ಸೋಮಮಾಲೋಕ್ಯ ಬ್ರಹ್ಮಾ ಲೋಕಪಿತಾಮಹಃ ।**
**ರಥಮಾರೋಪಯಾಮಾಸ ಲೋಕಾನಾಂ ಹಿತಕಾಮ್ಯಯಾ ॥ ೯ ॥**

---

೫. ಆತ್ಮಭಾವನೆಯನ್ನು ಅವಲಂಬಿಸಿದ ಆ ಮುನಿಯ ಸೋಮಭಾವವು ಕ್ರಮವಾಗಿ ದೇಹದ ಊರ್ಧ್ವಭಾಗವನ್ನು ಆಕ್ರಮಿಸಿ ಹತ್ತು ವಿಭಾಗಗಳಿಂದ ದಿಕ್ಕುಗಳನ್ನು ಬೆಳಗುತ್ತ ಕಣ್ಣುಗಳಿಂದ ಪ್ರವಹಿಸಿತು.

೬. ಆಗ ಹತ್ತು ಮಂದಿ ದೇವಸ್ತ್ರೀಯರು ಆ ಅತ್ರಿಗರ್ಭವಾದ ಸೋಮಾಂಶವನ್ನು ಯಥಾವಿಧಿಯಾಗಿ ಧರಿಸಿದರು. ಅವರೆಲ್ಲರೂ ಸೇರಿ ಬಂದು ಧರಿಸಲು ಯತ್ನಿಸಿದರೂ ಅದನ್ನು ಧರಿಸಲು ಅವರು ಶಕ್ತರಾಗಲಿಲ್ಲ.

೭. ಆಗ ಆ ಸ್ತ್ರೀಯರಿಂದ ದಶದಿಕ್ಕುಗಳ ಮೂಲಕ ಆ ಗರ್ಭವು ಕೂಡಲೆ ಪೂರ್ಣವಾಗಿ ಬಿಡಲ್ಪಟ್ಟಿತು. ಆಗ ಸರ್ವ ಪ್ರಪಂಚಗಳ ಸ್ಥಿತಿಗೆ ಕಾರಣನಾದ ಚಂದ್ರನು ಲೋಕಗಳನ್ನು ಪ್ರಕಾಶಪಡಿಸುತ್ತ ಕೆಳಕ್ಕೆ ಬೀಳುವವನಾದನು.

೮. ಯಾವಾಗ ಆ ಸ್ತ್ರೀಯರು ಆ ಗರ್ಭವನ್ನು ಧಾರಣಮಾಡುವುದರಲ್ಲಿ ಶಕ್ತರಾಗಿರಲಿಲ್ಲವೋ ಆಗ ಆ ಸ್ತ್ರೀಯರೊಡನೆ ಗರ್ಭವು ಭೂಮಿಯ ಕಡೆಗೆ ಬೀಳುವಂತೆ ಆಯಿತು.

೯. ಆಗ ಸರ್ವ ಲೋಕಗಳಿಗೆ ಪಿತಾಮಹನಾದ ಬ್ರಹ್ಮದೇವನು ಚಂದ್ರನು ಬೀಳುತ್ತಿದ್ದುದನ್ನು ಕಂಡು ಲೋಕಗಳಿಗೆ ಹಿತವನ್ನು ಉಂಟುಮಾಡಬೇಕೆಂಬ ಅಭಿಲಾಷೆಯಿಂದ ಚಂದ್ರನನ್ನು ರಥದಲ್ಲಿ ಇರಿಸಿದನು.

**ಸ ಹಿ ವೇದಮಯೋ ವಿಪ್ರಾ ಧರ್ಮಾತ್ಮಾ ಸತ್ಯಸಂಗರಃ ।**
**ಯುಕ್ತೇ ವಾಜಿಸಹಸ್ರೇಣ ರಥೇಽಧ್ಯಾಸ್ತೇತಿ ನಃ ಶ್ರುತಮ್ ॥ ೧೦ ॥**

**ತಸ್ಮಿನ್ನಿಪತಿತೇ ದೇವಾಃ ಪುತ್ರೇಽತ್ರೇಃ ಪರಮಾತ್ಮನಃ ।**
**ತುಷ್ಟುವುರ್ಬ್ರಹ್ಮಣಃ ಪುತ್ರಾ ಮಾನಸಾಃ ಸಪ್ತ ವಿಶ್ರುತಾಃ ॥ ೧೧ ॥**

**ತತ್ರೈವಾಂಗಿರಸಾಸ್ತಸ್ಯ ಭೃಗೋಶ್ಚೈವಾತ್ಮಜಾಸ್ತಥಾ ।**
**ಋಗ್ಭಿರ್ಯಜುರ್ಭಿರ್ಬಹುಭಿರಥರ್ವಾಂಗಿರಸೈರಪಿ ॥ ೧೨ ॥**

**ತತಃ ಸಂಸ್ತೂಯಮಾನಸ್ಯ ತೇಜಃ ಸೋಮಸ್ಯ ಭಾಸ್ವತಃ ।**
**ಆಪ್ಯಾಯಮಾನಂ ಲೋಕಾಂಸ್ತ್ರೀನ್ ಭಾವಯಾಮಾಸ ಸರ್ವಶಃ ॥ ೧೩ ॥**

**ಸ ತೇನ ರಥಮುಖ್ಯೇನ ಸಾಗರಾಂತಾಂ ವಸುಂಧರಾಮ್ ।**
**ತ್ರಿಃಸಪ್ತಕೃತ್ವೋಽತಿಯಶಾಶ್ಚಕಾರಾಭಿಪ್ರದಕ್ಷಿಣಮ್ ॥ ೧೪ ॥**

---

೧೦. ವಿಪ್ರರೆ! ಆ ಚಂದ್ರನು ದೇವಸ್ವರೂಪನೂ, ಧರ್ಮಾತ್ಮನೂ ಮತ್ತು ಸತ್ಯಪ್ರತಿಜ್ಞೆಯುಳ್ಳವನೂ ಆಗಿ ನೂರು ಅಶ್ವಗಳಿಂದ ಕೂಡಿ ಸಂಚರಿಸುವ ರಥದಲ್ಲಿ ಇರುವನೆಂದು ನಾವು ಎಲ್ಲರೂ ಕೇಳಿರುವೆವು.

೧೧. ಅತ್ರಿ ಪರಮಾತ್ಮನ ಪುತ್ರನಾದ ಆ ಚಂದ್ರನು ಕೆಳಕ್ಕೆ ಬೀಳುತ್ತಿರಲು ಬ್ರಹ್ಮದೇವನ ಮಾನಸ ಪುತ್ರರೆಂದು ಪ್ರಸಿದ್ಧರಾದ ಏಳು ಮಂದಿ ದೇವತೆಗಳು ಚಂದ್ರನನ್ನು ಸ್ತುತಿಸಿದರು.

೧೨. ಮತ್ತು ಅಲ್ಲಿಯೇ ಬೃಹಸ್ಪತಿಯ ಪುತ್ರರೂ ಭೃಗುಮುನಿಯ ಪುತ್ರರೂ ಸೇರಿ ಋಙ್ಮಂತ್ರ, ಯಜುರ್ಮಂತ್ರ ಅನೇಕಾನೇಕ ಅಥರ್ವಾಂಗಿರಸ ಮಂತ್ರಗಳಿಂದ ಸ್ತುತಿಸಿದರು.

೧೩. ಅನಂತರದಲ್ಲಿ ಈ ರೀತಿಯಾಗಿ ಸ್ತುತಿಸಲ್ಪಡುತ್ತಲಿದ್ದ ಪ್ರಕಾಶಮಯನಾದ ಚಂದ್ರನ ತೇಜಃಪುಂಜವು ವೃದ್ಧಿಹೊಂದುತ್ತ ಎಲ್ಲ ಎಡೆಗಳಲ್ಲಿ ಮೂರು ಲೋಕಗಳನ್ನೂ ಉಜ್ಜೀವನವಾಗುವಂತೆ ಭಾವಿಸಿತು,

೧೪. ಮಹಾಯಶಸ್ವಿಯೊದ ಚಂದ್ರನು ಆ ಮುಖ್ಯವಾದ ರಥದಿಂದ ಸಾಗರ ಪರ್ಯಂತವಾದ ಭೂಮಿಯನ್ನು ಪ್ರದಕ್ಷಿಣಾಕಾರವಾಗಿ ಇಪ್ಪತ್ತೊಂದು ಸಲ ಸುತ್ತಿದನು.

ತಸ್ಯ ಯದ್ವರ್ಧಿತಂ ತೇಜಃ ಪೃಥಿವೀಮನ್ವಪದ್ಯತ ।
ಓಷಧ್ಯಸ್ತಾಃ ಸಮುದ್ಭೂತಾಸ್ತೇಜಸಾ ಖಂ ಜ್ವಲತ್ಯುತ || ೧೫ ||

ತಾಭಿಃ ಪುಷ್ಣಾತ್ಯಯಂ ಲೋಕಾನ್ ಪ್ರಜಾಶ್ಚಾಪಿ ಚತುರ್ವಿಧಾಃ ।
ಪೋಷ್ಟಾ ಹಿ ಭಗವಾನ್ ಸೋಮೋ ಜಗತೋ ಹಿ ದ್ವಿಜೋತ್ತಮಾಃ
|| ೧೬ ||

ಸ ಲಬ್ಧತೇಜಾಸ್ತಪಸಾ ಸಂಸ್ತವೈಸ್ತೈಃ ಸ್ವಕರ್ಮಭಿಃ ।
ತಪಸ್ತೇಪೇ ಮಹಾಭಾಗಃ ಸಮಾನಾಂ ನವತೀರ್ದಶ || ೧೭ ||

ಹಿರಣ್ಯವರ್ಣಾ ಯಾ ದೇವ್ಯೋ ಧಾರಯಂತ್ಯಾತ್ಮನಾ ಜಗತ್ ।
ವಿಭುಸ್ತಾಸಾಂ ಮುದಾ ಸೋಮಃಪ್ರಖ್ಯಾತಃ ಸ್ವೇನ ಕರ್ಮಣಾ || ೧೮ ||

ತತಸ್ತಸ್ಮೈ ದದೌ ರಾಜ್ಯಂ ಬ್ರಹ್ಮಾ ಬ್ರಹ್ಮವಿದಾಂ ವರಃ ।
ಬೀಜೌಷಧೀನಾಂ ವಿಪ್ರಾಣಾಮಪಾಂ ಚ ದ್ವಿಜಸತ್ತಮಾಃ || ೧೯ ||

---

೧೫. ಹೀಗಿರಲು ಚಂದ್ರಮಂಡಲದಲ್ಲಿ ಹೆಚ್ಚು ವೃದ್ಧಿಯಾಗಿರುವ ತೇಜಸ್ಸು ಪೃಥಿವಿಯನ್ನು ಹೊಂದಿತು, ಆ ಅಂಶದಿಂದ ಪೃಥಿವಿಯಲ್ಲಿ ನಾನಾ ವಿಧವಾದ ಔಷಧಿಗಳು ಬೆಳೆದುವು. ಮಿಕ್ಕ ತೇಜಸ್ಸಿನ ಅಂಶದಿಂದ ಆಕಾಶವು ಪ್ರಕಾಶಿಸುವುದು.

೧೬. ಔಷಧಿ ರೂಪವಾದ ತನ್ನ ಅಂಶಗಳಿಂದ ಚಂದ್ರನು ಮೂರು ಲೋಕಗಳನ್ನೂ ನಾಲ್ಕು ವಿಧವಾದ ಪ್ರಜಾವರ್ಗವನ್ನೂ ಪೋಷಿಸುತ್ತಾನೆ. ದ್ವಿಜಶ್ರೇಷ್ಠರೆ! ಈ ರೀತಿಯಾಗಿ ಪೂಜ್ಯನಾದ ಚಂದ್ರನು ಜಗತ್ತಿಗೆ ಪೋಷಕನಾಗಿರುವನು.

೧೭. ಆ ಮಹಾಭಾಗನಾದ ಚಂದ್ರನು ತಪಸ್ಸಿನಿಂದಲೂ ತನ್ನ ವಿಷಯವಾದ ಸ್ತುತಿ ವಚನಗಳಿಂದಲೂ ಮತ್ತು ತನ್ನ ವ್ಯಾಪಾರಗಳಿಂದಲೂ ಹೊಂದಿದ ಅತಿಶಯ ತೇಜಸ್ಸುಳ್ಳವನಾಗಿ ಒಂಭೈನೂರು ವರ್ಷಪರ್ಯಂತವಾಗಿ ತಪವನ್ನು ಆಚರಿಸಿದನು.

೧೮. ಸುವರ್ಣದಂತೆ ವರ್ಣವುಳ್ಳ ಯಾವ ದೇವತೆಗಳು ತಮ್ಮ ಸ್ವರೂಪದಿಂದ ಜಗತ್ತನ್ನು ಧರಿಸುವರೋ, ಅವರಿಗೆಲ್ಲ ಪ್ರೀತಿಯಿಂದ ಪ್ರಭುವಾದ ಚಂದ್ರನು ತನ್ನ ಕರ್ಮ ವಿಶೇಷದಿಂದ ಪ್ರಖ್ಯಾತನಾದನು.

೧೯. ದ್ವಿಜಶ್ರೇಷ್ಠರೆ! ತರುವಾಯ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮದೇವನು ಚಂದ್ರನಿಗೆ ಬೀಜೌಷಧಿ, ವಿಪ್ರ, ಮತ್ತು ಜಲಗಳ ರಾಜತ್ವವನ್ನು ಕಲ್ಪಿಸಿ ಕೊಟ್ಟನು.

ಸೋಽಭಿಷಿಕ್ತೋ ಮಹಾತೇಜಾ ಮಹಾರಾಜ್ಯೇನ ರಾಜರಾಟ್ ।
ಲೋಕಾನ್ ವೈ ಭಾವಯಾಮಾಸ ತೇಜಸ್ವೀ ತಪತಾಂ ವರಃ ॥ ೨೦ ॥

ಸಪ್ತವಿಂಶತಿರಿಂದೋಸ್ತು ದಾಕ್ಷಾಯಣ್ಯೋ ಮಹಾವ್ರತಾಃ ।
ದದೌ ಪ್ರಾಚೇತಸೋ ದಕ್ಷೋ ನಕ್ಷತ್ರಾಣೀತಿ ಯಾ ವಿದುಃ ॥ ೨೧ ॥

ಸ ತತ್ ಪ್ರಾಪ್ಯ ಮಹದ್ರಾಜ್ಯಂ ಸೋಮಃ ಸೋಮವತಾಂ ಪ್ರಭುಃ ।
ಸಮಾರೇಭೇ ರಾಜಸೂಯಂ ಸಹಸ್ರಶತದಕ್ಷಿಣಮ್ ॥ ೨೨ ॥

ಹಿರಣ್ಯಗರ್ಭಶ್ಚೋದ್ಗಾತಾ ಬ್ರಹ್ಮಾ ಬ್ರಹ್ಮತ್ವಮೀಯಿವಾನ್ ।
ಸದಸ್ಯಸ್ತತ್ರ ಭಗವಾನ್ ಹರಿರ್ನಾರಾಯಣಃ ಪ್ರಭುಃ ॥ ೨೩ ॥

ಸನತ್ಕುಮಾರಪ್ರಮುಖೈರಾದ್ಯೈರ್ಬ್ರಹ್ಮರ್ಷಿಭಿರ್ವೃತಃ ॥ ೨೪ ॥

---

೨೦. ಹೀಗೆ ರಾಜ್ಯಾಧಿಕಾರದಲ್ಲಿ ಪಟ್ಟಾಭಿಷಿಕ್ತನೂ ಮಹಾ ತೇಜಸ್ವಿಯೂ ಮಹಾ ರಾಜ್ಯವು ಲಭಿಸಿರುವುದರಿಂದ ರಾಜರಾಜನೂ ಮತ್ತು ತಪಿಸುತ್ತಿರುವ ತೇಜೋ ಮಂಡಲದಲ್ಲಿ ಪ್ರಧಾನನೂ ಆದ ಚಂದ್ರನು ಲೋಕಗಳನ್ನೆಲ್ಲ ಪುಷ್ಟಿಯಾಗುತ್ತಿರುವಂತೆ ಇರಿಸಿದನು.

೨೧. ಇಂತಹ ಚಂದ್ರನಿಗೆ ಪ್ರಾಚೇತಸನೆಂಬ ದಕ್ಷಪ್ರಜಾಪತಿಯು ಅಶ್ವಿನ್ಯಾದಿ ರೂಪವಾದ ಇಪ್ಪತ್ತೇಳು ನಕ್ಷತ್ರಗಳೆಂದು ತಿಳಿದಿರುವ ಮಹಾ ವ್ರತಾಚರಣ ತತ್ಪರ ರಾದ ಇಪ್ಪತ್ತೊಂದು ಮಂದಿ ತನ್ನ ಕನ್ಯೆಯರನ್ನು ಕೊಟ್ಟನು.

೨೨. ಸೋಮರಸವೆಂಬ ಹವಿರ್ದಾನ ಮಾಡುವ ವಿಪ್ರರಿಗೆ ರಾಜನಾದ ಚಂದ್ರನು ಆ ಮಹಾ ರಾಜ್ಯವನ್ನು ಹೊಂದಿ ಸಹಸ್ರ-ಶತ ಮುಂತಾದ ಅಧಿಕ ಸಂಖ್ಯೆಯ ದಕ್ಷಿಣಾ ದಾನದಿಂದ ಕೂಡಿದ ರಾಜಸೂಯ ಯಾಗವನ್ನು ಮಾಡಲು ಉಪಕ್ರಮಿಸಿದನು.

೨೩. ಅವನು ಮಾಡಿದ ರಾಜಸೂಯ ಯಾಗದಲ್ಲಿ ಹಿರಣ್ಯಗರ್ಭದೇವನು ಉದ್ಗಾತೃ ಎಂಬ ಋತ್ವಿಜನ ಕರ್ಮವನ್ನೂ ಬ್ರಹ್ಮನು ಬ್ರಹ್ಮ ಎಂಬುವನ ಋತ್ವಿಕ್ಕ ರ್ಮವನ್ನೂ ಹೊಂದಿದರು, ಪೂಜ್ಯನೂ, ಸರ್ವನಿಯಾಮಕನೂ, ಮತ್ತು ಸಕಲ ವಿಪತ್ತುಗಳನ್ನು ದೂರ ಓಡಿಸುವವನೂ ಆದ ಶ್ರೀಮನ್ನಾರಾಯಣನು ಸದಸ್ಯ ನಾಗಿದ್ದನು.

೨೪. ಆಗ ಶ್ರೀಮನ್ನಾರಾಯಣನು ಸನತ್ಕುಮಾರ ಮುಂತಾದ ಪುರಾತನರಾದ ಬ್ರಹ್ಮರ್ಷಿಗಳಿಂದ ವರಿಸಲ್ಪಟ್ಟವನಾಗಿ ಸದಸ್ಯತ್ವವನ್ನು ಹೊಂದಿದನು.

ದಕ್ಷಿಣಾಮುದದಾತ್ ಸೋಮಸ್ತ್ರೀನ್ ಲೋಕಾನಿತಿ ನಃ ಶ್ರುತಮ್ ।
ತೇಭ್ಯೋ ಬ್ರಹ್ಮರ್ಷಿಮುಖ್ಯೇಭ್ಯಃ ಸದಸ್ಯೇಭ್ಯಶ್ಚ ವೈ ದ್ವಿಜಾಃ ॥ ೨೫ ॥

ತಂ ಸಿನೀ ಚ ಕುಹೂಶ್ಚೈವ ವಪುಃ ಪುಷ್ಟಿಃ ಪ್ರಭಾ ವಸುಃ ।
ಕೀರ್ತಿರ್ಧೃತಿಶ್ಚ ಲಕ್ಷ್ಮೀಶ್ಚ ನವ ದೇವ್ಯಃ ಸಿಷೇವಿರೇ ॥ ೨೬ ॥

ಪ್ರಾಪ್ಯಾವಭೃಥಮವ್ಯಗ್ರಃ ಸರ್ವದೇವರ್ಷಿಪೂಜಿತಃ ।
ಅತಿರೇಜೇ ಹಿ ರಾಜೇಂದ್ರೋ ದಶಧಾ ಭಾಸಯನ್ ದಿಶಃ ॥ ೨೭ ॥

ತಸ್ಯ ತತ್ಪ್ರಾಪ್ಯ ದುಷ್ಪ್ರಾಪಮೈಶ್ವರ್ಯಮೃಷಿಸಂಸ್ತುತಮ್ ।
ವಿಬಭ್ರಾಮ ಮತಿರ್ವಿಪ್ರಾ ವಿನಯಾದನಯಾವೃತಾ ॥ ೨೮ ॥

ಬೃಹಸ್ಪತೇಃ ಸ ವೈ ಭಾರ್ಯಾಂ ತಾರಾಂ ನಾಮ ಯಶಸ್ವಿನೀಮ್ ।
ಜಹಾರ ಸಹಸಾ ಸರ್ವಾನವಮತ್ಯಾಂಗಿರಃಸುತಾನ್ ॥ ೨೯ ॥

---

೨೫. ದ್ವಿಜರೆ! ಆಗ ಚಂದ್ರನ ಋತ್ವಿಜರೂ, ಸದಸ್ಯರೂ ಆಗಿದ್ದ ಬ್ರಹ್ಮರ್ಷಿ ವರೇಣ್ಯರಿಗೆ ಮೂರು ಲೋಕಗಳನ್ನು ದಕ್ಷಿಣಾರೂಪವಾಗಿ ಕೊಟ್ಟನೆಂದು ನಮಗೆ ಶ್ರುತವಾಗಿರುವುದು.

೨೬. ಇಂತಹ ಚಂದ್ರನನ್ನು ಸಿನೀ, ಕುಹೂ, ವಪು, ಪುಷ್ಟಿ, ಪ್ರಭಾ, ವಸು ಕೀರ್ತಿ, ಧೃತಿ, ಮತ್ತು ಲಕ್ಷ್ಮಿಯೆಂಬ ಒಂಭತ್ತು ಮಂದಿ ದೇವಿಯರು ಸೇವೆ ಮಾಡಿದರು.

೨೭. ಯಜ್ಞಕರ್ಮದಲ್ಲಿ ವ್ಯಾಕುಲತೆಯಿಲ್ಲದವನೂ, ಸಮಸ್ತ ದೇವ–ಋಷಿ ವೃಂದದಿಂದ ಪೂಜಿಸಲ್ಪಟ್ಟವನೂ ಆದ ಚಂದ್ರನು ಯಜ್ಞ ಸಮಾಪ್ತಿಯಲ್ಲಿ ಅವಭೃಥ ಕರ್ಮವನ್ನು ಆಚರಿಸಿ ರಾಜೇಂದ್ರನಾಗಿ ಹತ್ತು ದಿಕ್ಕುಗಳನ್ನು ತನ್ನ ಜ್ಯೋತಿಯಿಂದ ಬೆಳಗುತ್ತ ಪ್ರಕಾಶಿಸಿದನು.

೨೮. ವಿಪ್ರರೆ! ಹೀಗೆ ಇತರರಿಂದ ಲಭಿಸಲಾಗದ, ಮುನಿಜನರಿಂದ ಸ್ತುತಿಸಲ್ಪಟ್ಟ ಆ ಪ್ರಶಸ್ತವಾದ ಈಶ್ವರತ್ವವನ್ನು ಹೊಂದಿದ ಚಂದ್ರನ ಬುದ್ಧಿಯು ವಿನಯಕ್ಕೆ ಬದಲಾಗಿ ದುರ್ನಯದಿಂದ ಆವರಿಸಲ್ಪಟ್ಟು ಭ್ರಮಿಸಿತು.

೨೯. ಹೀಗಿರಲು ಅವನು ಮಹಾಕೀರ್ತಿಸಂಪನ್ನೆಯಾದ ಬೃಹಸ್ಪತಿಯ ಭಾರ್ಯೆಯಾದ ತಾರೆಯನ್ನು ಎಲ್ಲ ಬೃಹಸ್ಪತಿಪುತ್ರರರ್ನ್ನೂ ತಿರಸ್ಕರಿಸಿ ಅವಿವೇಕದಿಂದ ಅಪಹರಿಸಿದನು.

ಸ ಯಾಚ್ಯಮಾನೋ ದೇವೈಶ್ಚ ತಥಾ ದೇವರ್ಷಿಭಿಶ್ಚ ಹ ।
ನೈವ ವ್ಯಸರ್ಜಯತ್ತಾರಾಂ ತಸ್ಮಾ ಆಂಗಿರಸೇ ತದಾ ॥ ೩೦ ॥

ಉಶನಾಸ್ತಸ್ಯ ಜಗ್ರಾಹ ಪಾರ್ಷ್ಣಿಮಂಗಿರಸೋ ಭವಃ ।
ಸ ಹಿ ಶಿಷ್ಯೋ ಮಹಾತೇಜಾಃ ಪಿತುಃ ಪೂರ್ವಂ ಬೃಹಸ್ಪತೇಃ ॥ ೩೧ ॥

ತೇನ ಸ್ನೇಹೇನ ಭಗವಾನ್ ರುದ್ರಸ್ತಸ್ಯ ಬೃಹಸ್ಪತೇಃ ।
ಪಾರ್ಷ್ಣಿಗ್ರಾಹೋಽಭವದ್ದೇವಃ ಪ್ರಗೃಹ್ಯಾಜಗವಂ ಧನುಃ ॥ ೩೨ ॥

ತೇನ ಬ್ರಹ್ಮಶಿರೋ ನಾಮ ಪರಮಾಸ್ತ್ರಂ ಮಹಾತ್ಮನಾ ।
ಉದ್ದಿಶ್ಯ ದೇವಾನುತ್ಸೃಷ್ಟಂ ಯೇನೈಷಾಂ ನಾಶಿತಂ ಯಶಃ ॥ ೩೩ ॥

ತತ್ರ ತದ್ಯುದ್ಧಮಭವತ್ ಪ್ರಖ್ಯಾತಂ ತಾರಕಾಮಯಮ್ ।
ದೇವಾನಾಂ ದಾನವಾನಾಂ ಚ ಲೋಕಕ್ಷಯಕರಂ ಮಹತ್ ॥ ೩೪ ॥

---

೩೦. ಆಗ ಅನೇಕ ದೇವತೆಗಳಿಂದಲೂ ದೇವರ್ಷಿಗಳಿಂದಲೂ ವಿಧವಿಧವಾಗಿ ಕೇಳಿಕೊಳ್ಳಲ್ಪಟ್ಟರೂ ಆ ಚಂದ್ರನು ತಾರೆಯನ್ನು ಬೃಹಸ್ಪತಿಗೆ ಹಿಂತಿರುಗಿ ಒಪ್ಪಿಸಲಿಲ್ಲ.

೩೧. ಗುರು–ಚಂದ್ರರ ವೈಷಮ್ಯದಲ್ಲಿ ಶುಕ್ರನು ಚಂದ್ರನಬೆಂಬಲಕ್ಕೆ ಬಂದನು, ಈಶ್ವರನು ಬೃಹಸ್ಪತಿಯ ಸಹಾಯಕ್ಕೆ ಬಂದನು. ಮಹಾತೇಜಸ್ವಿಯಾದ ಈಶ್ವರನು ಪೂರ್ವದಲ್ಲಿ ಬೃಹಸ್ಪತಿಯ ತಂದೆಯ ಶಿಷ್ಯನಾಗಿದ್ದನು.

೩೨. ಭಗವಂತನಾದ ರುದ್ರನು ಬೃಹಸ್ಪತಿಯಲ್ಲಿದ್ದ ಆ ಸ್ನೇಹ ಭಾವನೆಯ ನಿಮಿತ್ತದಿಂದ ತನ್ನ ಅಜಗವವೆಂಬ ಬಿಲ್ಲನ್ನು ತೆಗೆದುಕೊಂಡು ಬೆಂಬಲಕ್ಕೆ ಬಂದ ಪಾರ್ಷ್ಣಿಗ್ರಾಹನಾದನು.

೩೩. ಮಹಾತ್ಮನಾದ ಈಶ್ವರನಿಂದ ಯುದ್ಧರಂಗದಲ್ಲಿ ದೇವತೆಗಳನ್ನುದ್ದೇಶಿಸಿ ಬ್ರಹ್ಮಶಿರ ಎಂಬ ಉತ್ತಮವಾದ ಅಸ್ತ್ರವು ಪ್ರಯೋಗಿಸಲ್ಪಟ್ಟಿತು, ಅದರಿಂದ ದೇವತೆಗಳ ಜಯಲಾಭದ ಯಶಸ್ಸು ಅಪಹರಿಸಲ್ಪಟ್ಟಿತು.

೩೪. ತಾರಕೆಗಳಿಗೆ ಪೀಡಾಜನಕವಾಗಿ ಲೋಕಗಳನ್ನು ಸಂಹಾರಮಾಡುವ ದೇವ–ದಾನವರ ಮಹಾಯುದ್ಧವು ಭಯಂಕರವಾಗಿ ಪ್ರಖ್ಯಾತವಾಗುವಂತೆ ಜರುಗಿತು.

ತತ್ರ ಶಿಷ್ಟಾಸ್ತು ಯೇ ದೇವಾಸ್ತುಷಿತಾಶ್ಚೈವ ತೇ ಸ್ಮೃತಾಃ ।
ಬ್ರಹ್ಮಾಣಂ ಶರಣಂ ಜಗ್ಮುರಾದಿದೇವಂ ಪಿತಾಮಹಮ್ ॥ ೩೫ ॥

ತತೋ ನಿವಾರ್ಯೋಽಶನಸಂ ರುದ್ರಂ ಜ್ಯೇಷ್ಠಂ ಚ ಶಂಕರಮ್ ।
ದದಾವಂಗಿರಸೇ ತಾರಾಂ ಸ್ವಯಮೇತ್ಯ ಪಿತಾಮಹಃ ॥ ೩೬ ॥

ಅಂತರ್ವತ್ನೀಂ ಚ ತಾಂ ದೃಷ್ಟ್ವಾ ತಾರಾಂ ತಾರಾಧಿಪಾನನಾಮ್ ।
ಗರ್ಭಮುತ್ಸೃಜ ಸದ್ಯಸ್ತ್ವಂ ವಿಪ್ರಃ ಪ್ರಾಹ ಬೃಹಸ್ಪತಿಃ ॥ ೩೭ ॥

ಮದೀಯಾಯಾಂ ನ ತೇ ಯೋನೌ ಗರ್ಭೋ ಧಾರ್ಯಃ ಕಥಂ ಚನ ।
ಅಥೋ ತಾರಾಸೃಜದ್ಗರ್ಭಂ ಜ್ವಲಂತಮಿವ ಪಾವಕಮ್ ॥ ೩೮ ॥

ಜಾತಮಾತ್ರೋಽಥ ಭಗವಾನ್ ದೇವಾನಾಮಾಕ್ಷಿಪದ್ವಪುಃ ।
ತತಃ ಸಂಶಯಮಾಪನ್ನಾಸ್ತಾರಾಮಕಥಯನ್ ಸುರಾಃ ॥ ೩೯ ॥

---

೩೫. ಆ ಯುದ್ಧದಲ್ಲಿ ಮಿಕ್ಕಿರುವ ತುಷಿತ ಎಂದು ಸ್ಮರಿಸಲ್ಪಟ್ಟಿರುವ ದೇವತೆಗಳು ಆದಿದೇವನೂ ಲೋಕಗಳಿಗೆಲ್ಲ ಪಿತಾಮಹನೂ ಆದ ಬ್ರಹ್ಮದೇವನನ್ನು ಶರಣ ಹೊಂದಿದರು.

೩೬. ಆಗ ಪಿತಾಮಹನಾದ ಬ್ರಹ್ಮದೇವನು ಶುಕ್ರಾಚಾರ್ಯನನ್ನೂ ಮತ್ತು ದೇವತೆಗಳಿಗೆ ಜ್ಯೇಷ್ಠನೂ ಭಯಂಕರಮೂರ್ತಿಯೂ ಆದ ಶಂಕರನನ್ನೂ ಬಿಡಿಸಿ ತಾನೇ ಬಂದು ತಾರೆಯನ್ನು ಬೃಹಸ್ಪತಿಗೆ ಕೊಟ್ಟನು.

೩೭. ಆಗ ವಿಪ್ರನಾದ ಬೃಹಸ್ಪತಿಯು ಚಂದ್ರನಂತೆ ಸುಂದರವಾದ ಮುಖವುಳ್ಳ ತಾರೆಯು ಗರ್ಭವತಿಯಾಗಿರುವುದನ್ನು ನೋಡಿ ಈಗಲೇ ನೀನು ಗರ್ಭವನ್ನು ಪರಿತ್ಯಜಿಸು ಎಂದು ಹೇಳಿದನು.

೩೮. ನನ್ನ ಅಧೀನವಾದ ನಿನ್ನ ಜನನೇಂದ್ರಿಯದಲ್ಲಿ ಪರಕೀಯವಾದ ಈ ಗರ್ಭವನ್ನು ಸರ್ವಪ್ರಕಾರದಿಂದಲೂ ಧರಿಸಲಾಗದು, ಎಂದು ಹೇಳಲಾಗಿ ತಾರೆಯು ಜ್ವಲಿಸುವ ಅಗ್ನಿಯಂತಿದ್ದ ಆ ಗರ್ಭವನ್ನು ತ್ಯಜಿಸಿದಳು.

೩೯. ಆ ಗರ್ಭದಿಂದ ಪೂಜ್ಯನಾದ ಶಿಶುವು ಹುಟ್ಟಿದ ಕೂಡಲೆ ದೇವತಾಯೋಗ್ಯವಾದ ಆಕಾರವನ್ನು ಧರಿಸಿತು. ಆಗ ಸರ್ವದೇವತೆಗಳು ತಾರಾದೇವಿಯನ್ನು ಕುರಿತು ಕೇಳಿದರು.

ಸತ್ಯಂ ಬ್ರೂಹಿ ಸುತಃ ಕಸ್ಯ ಸೋಮಸ್ಯಾಥ ಬೃಹಸ್ಪತೇಃ ।
ಹ್ರೀಯಮಾಣಾ ಯದಾ ದೇವಾನ್ನಾಹ ಸಾ ಸಾಧ್ವಸಾಧು ವಾ ॥ ೪೦ ॥

ತದಾ ತಾಂ ಶಪ್ತುಮಾರಬ್ಧಃ ಕುಮಾರೋ ದಸ್ಯುಹಂತಮಃ
ತಂ ನಿವಾರ್ಯ ತದಾ ಬ್ರಹ್ಮಾ ತಾರಾಂ ಪಪ್ರಚ್ಛ ಸಂಶಯಮ್॥ ೪೧ ॥

ಯದತ್ರ ತಥ್ಯಂ ತದ್ಬ್ರೂಹಿ ತಾರೇ ಕಸ್ಯ ಸುತಸ್ತ್ವಯಮ್ ।
ಸಾ ಪ್ರಾಂಜಲಿರುವಾಚೇದಂ ಬ್ರಹ್ಮಾಣಂ ವರದಂ ಪ್ರಭುಮ್ ॥ ೪೨ ॥

ಸೋಮಸ್ಯೇತಿ ಮಹಾತ್ಮಾನಂ ಕುಮಾರಂ ದಸ್ಯುಹಂತಮಮ್ ।
ತತಃ ಸುತಮುಪಾಘ್ರಾಯ ಸೋಮೋ ರಾಜಾ ಪ್ರಜಾಪತಿಃ ॥ ೪೩ ॥

ಬುಧ ಇತ್ಯಕರೋನ್ನಾಮ ತಸ್ಯ ಪುತ್ರಸ್ಯ ಧೀಮತಃ ।
ಪ್ರತಿಘಸ್ರಂ ಚ ಗಗನೇ ಸಮಭ್ಯುತ್ತಿಷ್ಠತೇ ಬುಧಃ ॥ ೪೪ ॥

---

೪೦. ತಾರೆಯೆ ! ಚಂದ್ರ-ಬೃಹಸ್ಪತಿ ಇವರಿಬ್ಬರಲ್ಲಿ ಈ ಕುಮಾರನು ಯಾರ ಪುತ್ರನಾಗಿರುವನು ? ಸತ್ಯವನ್ನು ಹೇಳು, ಹೀಗೆ ಕೇಳಲು ತಾರೆಯು ನಾಚಿಕೆಗೊಂಡವಳಾಗಿ ಸಾಧು ಅಥವಾ ಅಸಾಧುವಾದ ಯಾವವಿಷಯವನ್ನೂ ಹೇಳಲಿಲ್ಲ.

೪೧. ಆಗ ಶತ್ರುನಿಗ್ರಹಕಾರಿಗಳಲ್ಲಿ ಶ್ರೇಷ್ಠನಾದ ಕುಮಾರನು ಆ ತಾರೆಯನ್ನು ಶಪಿಸಲು ಉಪಕ್ರಮಿಸಿದನು. ಆಗ ಬ್ರಹ್ಮನು ಕುಮಾರನನ್ನು ನಿವಾರಿಸಿ ತಾರೆಯನ್ನು ಕುರಿತು ಈ ಸಂಶಯದ ಸಮಾಧಾನನ್ನು ಪ್ರಶ್ನಿಸಿದನು.

೪೨. ತಾರೆಯೆ ! ಇವನು ಯಾರ ಪುತ್ರನು ? ಇದರಲ್ಲಿ ನಿಜಾಂಶವು ಏನಿರುವುದೊ ಅದನ್ನು ಹೇಳು, ಹೀಗೆ ಬ್ರಹ್ಮದೇವನು ಪ್ರಶ್ನಿಸಲಾಗಿ ತಾರೆಯು ಅಂಜಲಿಯನ್ನು ಕಟ್ಟಿಕೊಂಡು ವರದಾನದಲ್ಲಿ ದಕ್ಷನೂ ಮತ್ತು ಪ್ರಭುವೂ ಆದ ಬ್ರಹ್ಮನನ್ನು ಕುರಿತು ಹೀಗೆ ಹೇಳಿದಳು.

೪೩. ಈ ದಸ್ಯುಹಂತಮ=ಶತ್ರು ಚೋರಾದಿನಿವರ್ತಕನಾದ ಮತ್ತು ಮಹಾತ್ಮನಾದ ಕುಮಾರನು ಚಂದ್ರನಿಂದ ಹುಟ್ಟಿದನೆಂದಳು, ಆಗ ಪ್ರಜಾಪತಿಯಾದ ಸೋಮರಾಜನು ಪುತ್ರನನ್ನು ಶಿರದಲ್ಲಿ ಮೂಸಿನೋಡಿದನು.

೪೪. ಮತ್ತು ಆ ವಿದ್ವಾಂಸನಾದ ಪುತ್ರನಿಗೆ ಬುಧನೆಂದು ಹೆಸರನ್ನಿಟ್ಟನು. ಆಬುಧನು ಪ್ರತಿಯೊಂದು ದಿನದಲ್ಲಿಯೂ ಆಕಾಶದಲ್ಲಿ ಉದಯಿಸಿ ಮೇಲಕ್ಕೆ ಬರುವನು.

ಉತ್ಪಾದಯಾಮಾಸ ತದಾ ಪುತ್ರಂ ವೈ ರಾಜಪುತ್ರಿಕಾ ।
ತಸ್ಯ ಪುತ್ರೋ ಮಹಾತೇಜಾ ಬಭೂವೈಲಃ ಪುರೂರವಾಃ ॥ ೪೫ ॥

ಉರ್ವಶ್ಯಾಂ ಜಜ್ಞಿರೇ ತಸ್ಯ ಪುತ್ರಾಃ ಷಟ್ ಸುಮಹೌಜಸಃ ।
ಪ್ರಸಹ್ಯ ಧರ್ಷಿತಸ್ತತ್ರ ವಿವಶೋ ರಾಜಯಕ್ಷ್ಮಣಾ ॥ ೪೬ ॥

ತತೋ ಯಕ್ಷ್ಮಾಭಿಭೂತಸ್ತು ಸೋಮಃ ಪ್ರಕ್ಷೀಣಮಂಡಲಃ ।
ಜಗಾಮ ಶರಣಾಯಾಥ ಪಿತರಂ ಸೋಽತ್ರಿಮೇವ ತು ॥ ೪೭ ॥

ತಸ್ಯ ತತ್ ಪಾಪಶಮನಂ ಚಕಾರಾತ್ರಿರ್ಮಹಾಯಶಾಃ ।
ಸ ರಾಜಯಕ್ಷ್ಮಣಾ ಮುಕ್ತಃ ಶ್ರಿಯಾ ಜಜ್ವಾಲ ಸರ್ವಶಃ ॥ ೪೮ ॥

ಏತತ್ ಸೋಮಸ್ಯ ವೈ ಜನ್ಮ ಕೀರ್ತಿತಂ ದ್ವಿಜಸತ್ತಮಾಃ ।
ವಂಶಂ ತಸ್ಯ ದ್ವಿಜಶ್ರೇಷ್ಠಾಃ ಕೀರ್ತ್ಯಮಾನಂ ನಿಬೋಧತ ॥ ೪೯ ॥

---

೪೫. ಆ ಬುಧನ ಸಂಗದಿಂದ ರಾಜಪುತ್ರಿಯೊಬ್ಬಳು ಪುತ್ರನನ್ನು ಪ್ರಸವಿಸಿದಳು. ಬುಧನ ಆ ಪುತ್ರನು ಮಹಾತೇಜಸ್ವಿಯೂ ಇಲಾಪುತ್ರನಾದ ಪುರೂರವನೆಂದು ಪ್ರಸಿದ್ಧಿಯುಳ್ಳವನೂ ಆಗಿದ್ದನು.

೪೬. ಆ ಪುರೂರವನಿಗೆ ಉರ್ವಶಿಯೆಂಬ ಅಪ್ಸರೆಯಲ್ಲಿ ಮಹಾ ತೇಜಸ್ವಿಗಳಾದ ಆರು ಮಂದಿ ಪುತ್ರರು ಜನಿಸಿದರು. ಹೀಗೆ ನಡೆಯುತ್ತಿರಲು ಚಂದ್ರನು ಗುರು ಭಾರ್ಯಾಸಮಾಗಮ ದೋಷದಿಂದ ರಾಜಯಕ್ಷ್ಮರೋಗದಿಂದ ಪ್ರಬಲವಾಗಿ ತಿರಸ್ಕರಿಸಲ್ಪಟ್ಟನು.

೪೭. ತರುವಾಯ ರಾಜಯಕ್ಷ್ಮರೋಗದಿಂದ ತಿರಸ್ಕರಿಸಲ್ಪಟ್ಟ ಚಂದ್ರನು ಕ್ಷೀಣವಾದ ಮಂಡಲವುಳ್ಳವನಾಗಿ ತಂದೆಯಾದ ಅತ್ರಿಮುನಿಯನ್ನು ಶರಣಹೊಂದಿದನು.

೪೮. ಮಹಾ ಯಶಸ್ವಿಯಾದ ಅತ್ರಿಮುನಿಯು ಚಂದ್ರನ ಆ ಪಾಪವನ್ನು ಶಮನಮಾಡಿದನು. ಆಗ ಆ ಚಂದ್ರನು ರಾಜಯಕ್ಷ್ಮರೋಗದಿಂದ ಬಿಡಲ್ಪಟ್ಟವನಾಗಿ ಸರ್ವ ಪ್ರಕಾರಗಳಿಂದಲೂ ಕಾಂತಿಯಿಂದ ರಾಜಿಸಿದನು.

೪೯. ದ್ವಿಜಶ್ರೇಷ್ಠರೆ! ಹೀಗೆ ಚಂದ್ರನ ಜನ್ಮ ವೃತ್ತಾಂತವು ನಿಮಗೆ ಕೀರ್ತಿಸಲ್ಪಟ್ಟಿರುವುದು. ದ್ವಿಜೋತ್ತಮರೆ! ಮುಂದೆ ಚಂದ್ರನ ವಂಶಾವಳಿಯನ್ನು ವರ್ಣಿಸುವ ನನ್ನ ವಚನವನ್ನು ಕೇಳಿರಿ.

ಧನ್ಯಮಾರೋಗ್ಯಮಾಯುಷ್ಯಂ ಪುಣ್ಯಂ ಕಲ್ಮಷಶೋಧನಮ್ ।
ಸೋಮಸ್ಯ ಜನ್ಮ ಶ್ರುತ್ವೈವಂ ಸರ್ವಪಾಪೈಃ ಪ್ರಮುಚ್ಯತೇ ॥ ೫೦ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಪಂಚಷಷ್ಟಿತಮೋಽಧ್ಯಾಯಃ

---

೫೦. ಈ ರೀತಿಯಾದ ಚಂದ್ರನ ಜನ್ಮ ವೃತ್ತಾಂತದ ಶ್ರವಣವು ಧನ್ಯತ್ತೆ ಆರೋಗ್ಯ, ಆಯುಷ್ಯ, ಪುಣ್ಯ, ಪಾತಕಗಳಿಂದ ಪವಿತ್ರತೆ ಮುಂತಾದ ಫಲಗಳನ್ನು ಕೊಡುವುದು, ಮತ್ತು ಇಂತಹ ಚರಿತ್ರವನ್ನು ಶ್ರವಣಮಾಡಿದ ಮಾನವನು ಸಮಸ್ತ ಪಾಪಗಳಿಂದ ಮುಕ್ತನಾಗುವನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೈದನೆಯ ಅಧ್ಯಾಯವು
ಮುಗಿದುದು

---

## ಷಟ್‌ಷಷ್ಟಿತಮೋಽಧ್ಯಾಯಃ

**ಸೂತ ಉವಾಚ :—**

**ಸೋಮಸ್ಯ ತು ಬುಧಃ ಪುತ್ರೋ ಬುಧಸ್ಯ ತು ಪುರೂರವಾಃ ।**
**ತೇಜಸ್ವೀ ದಾನಶೀಲಶ್ಚ ಯಜ್ವಾ ವಿಪುಲದಕ್ಷಿಣಃ ॥ ೧ ॥**

**ಬ್ರಹ್ಮವಾದೀ ಪರಾಕ್ರಾಂತಃ ಶತ್ರುಭಿರ್ಯುಧಿ ದುರ್ಜಯಃ ।**
**ಆಹರ್ತಾ ಚಾಗ್ನಿಹೋತ್ರಸ್ಯ ಯಜ್ಞಾನಾಂ ಚ ಮಹೀಪತಿಃ ॥ ೨ ॥**

**ಸತ್ಯವಾಗ್ಧರ್ಮಬುದ್ಧಿಶ್ಚ ಕಾಂತಃ ಸಂವೃತ್ತಮೈಥುನಃ ।**
**ಅತೀವ ತ್ರಿಷು ಲೋಕೇಷು ರೂಪೇಣಾಪ್ರತಿಮೋಽಭವತ್ ॥ ೩ ॥**

**ತಂ ಬ್ರಹ್ಮವಾದಿನಂ ದಾಂತಂ ಧರ್ಮಜ್ಞಂ ಸತ್ಯವಾದಿನಮ್ ।**
**ಉರ್ವಶೀ ವರಯಾಮಾಸ ಹಿತ್ವಾ ಮಾನಂ ಯಶಸ್ವಿನೀ ॥ ೪ ॥**

---

೧. ಸೂತಮುನಿಯು ಇಂತೆಂದನು : ಚಂದ್ರನಿಗೆ ಬುಧನು ಪುತ್ರನಾಗಿದ್ದನು. ಬುಧನಿಗೆ ಪುರೂರವನೆಂಬ ಪುತ್ರನಿದ್ದನು. ಆ ಪುರೂರವನು ಅತಿ ತೇಜಸ್ವಿಯೂ, ದಾನಶೀಲನೂ ಯಜ್ಞಾಚರಣಪರನೂ ಮತ್ತು ಅತಿಶಯವಾದ ದಕ್ಷಿಣಾದಾನದ ಔದಾರ್ಯವುಳ್ಳವನೂ ಆಗಿದ್ದನು.

೨. ಮತ್ತು ಬ್ರಹ್ಮವಾದಿಯೂ ಪರಾಕ್ರಮಿಯೂ ಯುದ್ಧದಲ್ಲಿ ಶತ್ರುಗಳಿಂದ ಜಯಿಸಲಾಗದವನೂ, ಮತ್ತು ಅಗ್ನಿಹೋತ್ರ–ಅನೇಕ ಯಜ್ಞಗಳನ್ನು ಆಚರಿಸಿದವನೂ ಆದ ರಾಜನಾಗಿದ್ದನು.

೩. ಹಾಗು ಸತ್ಯವಚನ, ಧಾರ್ಮಿಕವಾದ ಬುದ್ಧಿ, ಸೌಂದರ್ಯ ಗುಣಗಳಿಂದ ಕೂಡಿದವನೂ ತ್ಯಜಿಸಿದ ಮೈಥುನ ವ್ಯಸನವುಳ್ಳವನೂ ಮತ್ತು ಮೂರು ಲೋಕಗಳಲ್ಲಿ ಅತ್ಯಂತ ಸುಂದರವಾದ ರೂಪದಿಂದ ಸಿರುಪಮನೂ ಆಗಿದ್ದನು.

೪. ಯಶಸ್ವಿಯಾದ ಉರ್ವಶಿಯು ತನ್ನ ಸಹಜವಾದ ಮಾನವನ್ನು ಬಿಟ್ಟು ಬ್ರಹ್ಮವಾದಿಯೂ ಜಿತೇಂದ್ರಿಯನೂ, ಧರ್ಮವನ್ನು ಅರಿತವನೂ, ಮತ್ತು ಸತ್ಯವಾದಿಯೂ ಆದ ಪುರೂರವ ರಾಜನನ್ನು ವರಿಸಿದಳು.

7

ತಯಾ ಸಹಾವಸದ್ರಾಜಾ ದಶ ವರ್ಷಾಣಿ ಚಾಷ್ಟ ಚ ।
ಸಪ್ತ ಷಟ್ ಸಪ್ತ ಚಾಷ್ಟೌ ಚ ದಶ ಚಾಷ್ಟೌ ಚ ವೀರ್ಯವಾನ್ ॥ ೫ ॥

ವನೇ ಚೈತ್ರರಥೇ ರಮ್ಯೇ ತಥಾ ಮಂದಾಕಿನೀತಟೇ ।
ಅಲಕಾಯಾಂ ವಿಶಾಲಾಯಾಂ ನಂದನೇ ಚ ವನೋತ್ತಮೇ ॥ ೬ ॥

ಗಂಧಮಾದನಪಾದೇಷು ಮೇರುಶೃಂಗೇ ನಗೋತ್ತಮೇ ।
ಉತ್ತರಾಂಶ್ಚ ಕುರೂನ್ ಪ್ರಾಪ್ಯ ಕಲಾಪಗ್ರಾಮಮೇವ ಚ ॥ ೭ ॥

ಏತೇಷು ವನಮುಖ್ಯೇಷು ಸುರೈರಾಚರಿತೇಷು ಚ ।
ಉರ್ವಶ್ಯಾ ಸಹಿತೋ ರಾಜಾ ರೇಮೇ ಪರಮಯಾ ಮುದಾ ॥ ೮ ॥

ಋಷಯ ಊಚುಃ :–

ಗಂಧರ್ವೀ ಚೋರ್ವಶೀ ದೇವೀ ರಾಜಾನಂ ಮಾನುಷಂ ಕಥಮ್ ।
ಉತ್ಸೃಜ್ಯ ತಂ ಚ ಸಂಪ್ರಾಪ್ತಾ ತನ್ನೋ ಬ್ರೂಹಿ ಚ ದುಷ್ಕೃತಮ್॥ ೯ ॥

---

೫. ವೀರ್ಯಶಾಲಿಯಾದ ರಾಜನು ಆ ಊರ್ವಶಿಯೊಡನೆ ಹತ್ತು, ಎಂಟು, ಏಳು, ಎಂಟು, ಏಳು, ಎಂಟು, ಹತ್ತು ಮತ್ತು ಎಂಟು ಎಂಬ ಸಂಖ್ಯೆಗಳ ಸಂಕಲನದಿಂದ ಲಭಿಸುವ ಅರವತ್ತು ನಾಲ್ಕು ಸಂಖ್ಯೆಯಷ್ಟು ವರ್ಷಗಳವರೆಗೆ ವಾಸಮಾಡಿದನು.

೬. ಮತ್ತು ಚೈತ್ರರಥವೆಂಬ ರಮ್ಯವಾದ ವನದಲ್ಲಿಯೂ, ಮಂದಾಕಿನೀ ನದಿಯ ತೀರಾರಣ್ಯಗಳಲ್ಲಿಯೂ, ಅಲಕಾ-ವಿಶಾಲಾ ನಗರಗಳಲ್ಲಿಯೂ ಉತ್ತಮವಾದ ನಂದನ ವನದಲ್ಲಿಯೂ ರಾಜನು ಉರ್ವಶಿಯೊಡನೆ ವಿಹರಿಸಿದನು.

೭. ಮತ್ತು ಗಂಧಮಾದನ ಪರ್ವತದ ಪಾದಗಳಲ್ಲಿಯೂ ಪರ್ವತೋತ್ತಮವಾದ ಮೇರುಪರ್ವತದ ಶೃಂಗದಲ್ಲಿಯೂ ಉತ್ತರ ಕುರು, ಕಲಾಪಗ್ರಾಮ ಮುಂತಾದ ಸ್ಥಳಗಳಲ್ಲಿಯೂ ವಿಹಾರ ಸುಖವನ್ನು ಅನುಭವಿಸಿದನು.

೮. ಹೀಗೆ ಉರ್ವಶಿಯಿಂದ ಸಹಿತನಾದ ಪುರೂರವ ರಾಜನು ದೇವತೆಗಳ ವಿಹಾರಕ್ಕೆ ಆಶ್ರಯವಾದ ಮುಖ್ಯವಾದ ಇಂತಹ ವನಗಳಲ್ಲಿ ಪರಮಾನಂದಭರಿತನಾಗಿ ವಿಹಾರಮಾಡಿದನು.

೯. ಮುಂದೆ ಮುನಿಗಳು ಈ ರೀತಿಯಾಗಿ ಪ್ರಶ್ನಿಸಿದರು :–ಗಂಧರ್ವ ಕುಲದಲ್ಲಿ ಹುಟ್ಟಿದ ಉರ್ವಶೀ ದೇವಿಯು ಮನುಷ್ಯನಾದ ರಾಜನನ್ನು ಹೇಗೆ ವರಿಸಿದಳು? ಮತ್ತು ಅವನನ್ನು ಬಿಟ್ಟು ಏಕೆ ಬಂದಳು? ಇದಕ್ಕೆ ಕಾರಣವಾಗಿ ಅವಳಲ್ಲಿ ಯಾವ ದುಷ್ಕೃತವು ಇತ್ತು?

ಸೂತ ಉವಾಚ :—

ಬ್ರಹ್ಮಶಾಪಾಭಿಭೂತಾ ಸಾ ಮಾನುಷಂ ಸಮುಪಸ್ಥಿತಾ ।
ಆತ್ಮನಃ ಶಾಪಮೋಕ್ಷಾರ್ಥಂ ನಿಯಮಂ ಸಾ ಚಕಾರ ತು ॥ ೧೦ ॥

ಅನಗ್ನದರ್ಶನಮ್ ಚೈವ ಅಕಾಮಾತ್ ಸಹ ಮೈಥುನಮ್ ।
ದ್ವೌ ಮೇಷೌ ಶಯನಾಭ್ಯಾಶೇ ಸಾ ತಾವದ್ವ್ಯವತಿಷ್ಠತೇ ॥ ೧೧ ॥

ಘೃತಮಾತ್ರಂ ತಥಾಹಾರಃ ಕಾಲಮೇಕಂ ತು ಪಾರ್ಥಿವ ।
ಯದ್ಯೇಷ ಸಮಯೋ ರಾಜನ್ ಯಾವತ್ಕಾಲಶ್ಚ ತೇ ದೃಢಃ ॥ ೧೨ ॥

ತಾವತ್ಕಾಲಂ ತು ವತ್ಸ್ಯಾಮಿ ಏಷ ನಃ ಸಮಯಃ ಕೃತಃ ।
ತಸ್ಯಾಸ್ತಂ ಸಮಯಂ ಸರ್ವಂ ಸ ರಾಜಾ ಪರ್ಯಪಾಲಯತ್ ॥ ೧೩ ॥

ಏವಂ ಸಾ ಚಾವಸತ್ತೇನ ಸಹೈಲೇನಾಭಿಗಾಮಿನೀ ।
ವರ್ಷಾಣ್ಯಥ ಚತುಷ್ಷಷ್ಟಿಂ ತದ್ಭಕ್ತ್ಯಾ ಶಾಪಮೋಹಿತಾ ॥ ೧೪ ॥

---

೧೦. ಸೂತಮುನಿಯು ಇಂತೆಂದನು : —ಬ್ರಹ್ಮದೇವನ ಶಾಪದಿಂದ ತಿರಸ್ಕರಿಸಲ್ಪಟ್ಟ ಉರ್ವಶಿಯು ಮಾನವನನ್ನು ವರಿಸಿದಳು. ಮತ್ತು ತನ್ನ ಶಾಪವಿಮೋಚನಕ್ಕೆ ಅವಳು ಕೆಲವು ನಿಯಮವನ್ನು ಅವಲಂಬಿಸಿದ್ದಳು.

೧೧. ಅವಳು ಕಲ್ಪಿಸಿಕೊಂಡ ನಿಯಮಗಳು—ನಗ್ನನನ್ನು ನೋಡದಿರುವುದು, ಕಾಮವಿಲ್ಲದೆ ಮೈಥುನ ಧರ್ಮಾಚರಣೆಯು, ಮತ್ತು ಶಯನ ಸಮೀಪದಲ್ಲಿ ಯಾವಾಗಲೂ ಎರಡು ಆಡುಗಳ ಸ್ಥಾಪನೆಯು, ಇಂತಹ ನಿಯಮಗಳಿಗೆ ಭಂಗವುಂಟಾಗದಿರುವವರೆಗೆ ಅವಳು ಭೂಮಿಯಲ್ಲಿರುವಳು.

೧೨. ಮತ್ತು ರಾಜನಲ್ಲಿ ಈ ನಿಯಮಗಳನ್ನು ಹೇಳಿಕೊಂಡಿದ್ದಳು, ರಾಜನೆ! ಒಂದು ಹೊತ್ತು ಘೃತದ ಆಹಾರವನ್ನು ಮಾತ್ರ ಸೇವಿಸುವೆನು, ಪಾರ್ಥಿವನೆ! ಈ ನಿಯಮ ಸಂಕೇತವು ನಿನ್ನಿಂದ ದೃಢವಾಗಿ ಸಾಧಿಸಲ್ಪಡಬೇಕು.

೧೩. ಈ ಸಮಯವು ಎಷ್ಟುಕಾಲ ಭಗ್ನವಾಗದಿರುವುದೊ ಅಷ್ಟುಕಾಲಮಾತ್ರ ನಿನ್ನೊಡನೆ ವಾಸಮಾಡುವೆನು. ಇದು ನಮ್ಮಿಬ್ಬರ ಒಪ್ಪಂದವು, ಎಂದು ಹೇಳಲು ಆ ರಾಜನು ಅವಳ ಆ ಎಲ್ಲ ಸಮಯವನ್ನೂ ಪರಿಪಾಲಿಸಿದನು.

೧೪. ಹೀಗೆ ಉರ್ವಶಿಯು ಆ ಐಲ ಪುರೂರವರಾಜನನ್ನು ಸೇರಿದವಳಾಗಿ ಶಾಪದಿಂದ ಮೂಢಳಾಗಿ ಅವನಲ್ಲಿ ಪತಿಭಕ್ತಿಯಿಂದ ಅರವತ್ತುನಾಲ್ಕು ವರ್ಷಗಳವರೆಗೆ ಅವನೊಡನೆ ವಾಸಮಾಡಿದಳು.

ಉರ್ವಶೀ ಮಾನುಷಂ ಪ್ರಾಪ್ತಾ ಗಂಧರ್ವಾಶ್ಚಿಂತಯಾನ್ವಿತಾಃ ।

ಗಂಧರ್ವಾ ಊಚುಃ :—

ಚಿಂತಯಧ್ವಂ ಮಹಾಭಾಗಾ ಯಥಾ ಸಾ ತು ವರಾಂಗನಾ ॥ ೧೫ ॥

ಆಗಚ್ಛೇತ್ತು ಪುನರ್ದೇವಾನುರ್ವಶೀ ಸ್ವರ್ಗಭೂಷಣಮ್ ।
ತತೋ ವಿಶ್ವಾವಸುರ್ನಾಮ ಗಂಧರ್ವಃ ಸುಮಹಾಮತಿಃ ॥ ೧೬ ॥

ಜಹಾರೋರಣಕೌ ತಸ್ಯಾಸ್ತತ್ಪಶ್ಚಾತ್ ಸಾ ದಿವಂ ಗತಾ ।
ತಸ್ಯಾಸ್ತು ವಿರಹೇಣಾಸೌ ಭ್ರಮಮಾಣಸ್ತಥೋರ್ವಶೀಮ್ ॥ ೧೭ ॥

ದದರ್ಶ ಚ ಕುರುಕ್ಷೇತ್ರೇ ತಯಾ ಸಂಭಾಷಿತೋಽಸ್ಯಯಮ್ ।
ಗಂಧರ್ವಾನುಪಧಾವೇತಿ ಸ ತಚ್ಚಕ್ರೇಽಥ ತೇ ದದುಃ ॥ ೧೮ ॥

ಅಗ್ನಿಸ್ಥಾಲೀಂ ತಯಾ ರಾಜಾ ಗತಃ ಸ್ವರ್ಗಂ ಮಹಾರಥಃ ।
ಏಕೋಽಗ್ನಿಃ ಪೂರ್ವಮಾಸೀದ್ವೈ ಐಲಸ್ತಂ ತ್ರೇನಕಲ್ಪಯತ್ ॥ ೧೯ ॥

---

೧೫. ಊರ್ವಶಿಯು ಮಾನವನನ್ನು ಪತಿಯನ್ನಾಗಿ ಹೊಂದಿರುವ ಈ ಸಮಯದಲ್ಲಿ ಗಂಧರ್ವರು ಚಿಂತೆಯಿಂದ ಕೂಡಿದವರಾದರು. ಆಗ ಗಂಧರ್ವರು ಈ ರೀತಿಯಾಗಿ ಮಾತನಾಡಿಕೊಂಡರು :—ಮಹಾಭಾಗರೆ! ಉತ್ತಮಾಂಗನೆಯಾದ ಊರ್ವಶಿಯು ಮನುಷ್ಯಲೋಕವನ್ನು ಬಿಟ್ಟುಬರುವ ಉಪಾಯವನ್ನು ಚಿಂತಿಸಿರಿ.

೧೬. ಸ್ವರ್ಗಕ್ಕೆ ಭೂಷಣದಂತೆ ಇರುವ ಉರ್ವಶಿಯು ಮತ್ತೆ ದೇವತೆಗಳ ಸನ್ನಿಧಿಗೆ ಹೇಗೆ ಬಂದು ಸೇರುವಳೋ ಚಿಂತಿಸಿರಿ. ಆಗ ಮಹಾ ಬುದ್ಧಿಸಂಪನ್ನನಾದ ವಿಶ್ವಾವಸು ಎಂಬ ಗಂಧರ್ವನು ಉರ್ವಶಿಯನ್ನು ತರಲು ಯತ್ನಿಸಿದನು.

೧೭. ಅವನು ಉರ್ವಶಿಯ ಮೇಷಗಳನ್ನು ಅಪಹರಿಸಿದನು. ಮೇಷಗಳು ಅದೃಶ್ಯವಾಗಲು ಉರ್ವಶಿಯು ಸ್ವರ್ಗಲೋಕಕ್ಕೆ ಬಂದಳು. ಆಗ ಉರ್ವಶಿಯ ವಿಯೋಗದುಃಖದಿಂದ ರಾಜನು ಪೃಥಿವಿಯಲ್ಲಿ ಭ್ರಮಿಸಿದನು.

೧೮. ಆಗ ಕುರುಕ್ಷೇತ್ರದಲ್ಲಿ ಉರ್ವಶಿಯನ್ನು ಕಂಡು ಅವಳಿಂದ ರಾಜನು ಗಂಧರ್ವರನ್ನು ತೃಪ್ತಿಪಡಿಸಿ ಗಂಧರ್ವಲೋಕಕ್ಕೆ ಬಾ, ಎಂದು ಹೇಳಲ್ಪಟ್ಟನು. ತರುವಾಯ ಅವನು ಅದರಂತೆ ಆಚರಿಸಿದನು.

೧೯. ಆಗ ಗಂಧರ್ವರು ರಾಜನಿಗೆ ಅಗ್ನಿಸ್ಥಾಲಿಯನ್ನು ಕೊಟ್ಟರು. ಮಹಾರಥನಾದ ರಾಜನು ಅದರಿಂದ ಸ್ವರ್ಗವನ್ನು ಹೊಂದಿದನು, ಮೊದಲು ಸ್ಥಾಲಿಯಲ್ಲಿ ಒಂದು ಅಗ್ನಿಯು ಇತ್ತು, ಅದರಿಂದ ಐಲರಾಜನು ಮೂರು ಅಗ್ನಿಗಳನ್ನು ನಿರ್ಮಿಸಿದನು

ಏವಂಪ್ರಭಾವೋ ರಾಜಾಸೀದೈಲಸ್ತು ದ್ವಿಜಸತ್ತಮಾಃ ।
ದೇಶೇ ಪುಣ್ಯತಮೇ ಚೈವ ಮಹರ್ಷಿಭಿರಲಂಕೃತೇ ॥ ೨೦ ॥

ರಾಜ್ಯಂ ಸ ಕಾರಯಾಮಾಸ ಪ್ರಯಾಗೇ ಪೃಥಿವೀಪತಿಃ ।
ಉತ್ತರೇ ಯಾಮುನೇ ತೀರೇ ಪ್ರತಿಷ್ಠಾನೇ ಮಹಾಯಶಾಃ ॥ ೨೧ ॥

ತಸ್ಯ ಪುತ್ರಾ ಬಭೂವುರ್ಹಿ ಷಡಿಂದ್ರೋಪಮತೇಜಸಃ ।
ಗಂಧರ್ವಲೋಕೇ ವಿದಿತಾ ಆಯುರ್ಧೀಮಾನಮಾವಸುಃ ॥ ೨೨ ॥

ವಿಭಾವಸುಃ ಶ್ರುತಾಯುಶ್ಚ ಘೃತಾಯುಶ್ಚೋರ್ವಶೀಸುತಾಃ ।
ಅಮಾವಸೋಸ್ತು ವೈ ಜಾತೋ ಭೀಮೋ ರಾಜಾಥ ವಿಶ್ವಜಿತ್॥ ೨೩ ॥

ಶ್ರೀಮಾನ್ ಭೀಮಸ್ಯ ದಾಯಾದೋ ರಾಜಾಸೀತ್ ಕಾಂಚನಪ್ರಭಃ ।
ವಿದ್ವಾಂಸ್ತು ಕಾಂಚನಸ್ಯಾಪಿ ಸುಹೋತ್ರೋಽಭೂನ್ಮಹಾಬಲಃ ॥ ೨೪ ॥

---

೨೦. ದ್ವಿಜಶ್ರೇಷ್ಠರೆ ! ಐಲಪುರೂರವರಾಜನು ಇಂತಹ ಅಪಾರ ಪ್ರಭಾವವುಳ್ಳವನಾಗಿದ್ದನು, ಅವನು ಪುಣ್ಯತಮವೂ ಮಹರ್ಷಿಗಳಿಂದ ಅಲಂಕರಿಸಲ್ಪಟ್ಟಿರುವುದೂ ಆದ ಪ್ರದೇಶದಲ್ಲಿ ವಾಸಿಸಿದ್ದನು.

೨೧. ಯಮುನಾ ನದಿಯ ಉತ್ತರ ತೀರದಲ್ಲಿ ಪ್ರಯಾಗಕ್ಷೇತ್ರದ ಬಳಿಯಲ್ಲಿ ಪ್ರತಿಷ್ಠಾನ ನಗರಿಯಲ್ಲಿ ಮಹಾಯಶಸ್ವಿಯಾದ ಪುರೂರವ ರಾಜನು ರಾಜ್ಯವನ್ನು ಸ್ಥಾಪಿಸಿದನು.

೨೨. ಅವನಿಗೆ ಇಂದ್ರನಿಗೆ ಸಮಾನವಾದ ತೇಜಸ್ಸಿನಿಂದ ರಾಜಿಸುವ ಆರು ಮಂದಿ ಪುತ್ರರು ಇದ್ದರು. ಅವರು ಈ ನಾಮಾಂಕನದಿಂದ ಗಂಧರ್ವ ಲೋಕದಲ್ಲಿ ಪ್ರಸಿದ್ಧರಾಗಿರುವರು, ಇವರಲ್ಲಿ ಆಯು, ಧೀಮಾನ್, ಅಮಾವಸು ಎಂದು ಮೂರು ಮಂದಿಯ ಹೆಸರು.

೨೩. ಮತ್ತು ವಿಭಾವಸು, ಶ್ರುತಾಯು, ಘೃತಾಯು ಎಂದು ಮತ್ತೆ ಮೂರು ಮಂದಿಯ ಹೆಸರು. ಹೀಗೆ ಆರುಮಂದಿ ಉರ್ವಶೀದೇವಿಯ ಪುತ್ರರಿದ್ದರು, ಅಮಾವಸು ಎಂಬುವನಿಂದ ಪ್ರಪಂಚವನ್ನು ಜಯಿಸಿದ ಭೀಮ ಎಂಬ ರಾಜನಿದ್ದನು.

೨೪. ಭೀಮರಾಜನಿಗೆ ಶ್ರೀಮಂತನಾದ ಕಾಂಚನ ಪ್ರಭ ಎಂಬ ರಾಜನು ಪುತ್ರನಾಗಿದ್ದನು. ಆ ಕಾಂಚನ ಪ್ರಭನಿಗೆ ಜ್ಞಾನಿಯೂ ಮಹಾಬಲಶಾಲಿಯೂ ಆದ ಸುಹೋತ್ರ ಎಂಬುವನು ಪುತ್ರನಾಗಿ ಜನಿಸಿದನು.

**ಸುಹೋತ್ರಸ್ಯಾಭವಜ್ಜಹ್ನುಃ ಕೇಶಿನೀಗರ್ಭಸಂಭವಃ ।**
**ಪ್ರತಿಗತ್ಯ ತತೋ ಗಂಗಾ ವಿತತೇ ಯಜ್ಞಕರ್ಮಣಿ ॥ ೨೫ ॥**

**ಸಾದಯಾಮಾಸ ತಂ ದೇಶಂ ಭಾವಿನೋಽರ್ಥಸ್ಯ ದರ್ಶನಾತ್ ।**
**ಗಂಗಯಾ ಪ್ಲಾವಿತಂ ದೃಷ್ಟ್ವಾ ಯಜ್ಞವಾಟಂ ಸಮಂತತಃ ॥ ೨೬ ॥**

**ಸೌಹೋತ್ರಿರಪಿ ಸಂಕ್ರುದ್ಧೋ ಗಂಗಾಂ ರಾಜಾ ದ್ವಿಜೋತ್ತಮಾಃ ।**
**ತದಾ ರಾಜರ್ಷಿಣಾ ಪೀತಾಂ ಗಂಗಾಂ ದೃಷ್ಟ್ವಾ ಸುರರ್ಷಯಃ ॥ ೨೭ ॥**

**ಉಪನಿನ್ಯುರ್ಮಹಾಭಾಗಾ ದುಹಿತೃತ್ವೇನ ಜಾಹ್ನವೀಮ್ ।**
**ಯೌವನಾಶ್ವಸ್ಯ ಪೌತ್ರೀಂ ತು ಕಾವೇರೀಂ ಜಹ್ನುರಾವಹತ್ ॥ ೨೮ ॥**

**ಯುವನಾಶ್ವಸ್ಯ ಶಾಪೇನ ಗಂಗಾರ್ಧೇನ ವಿನಿರ್ಮಮೇ ।**
**ಕಾವೇರೀಂ ಸರಿತಾಂ ಶ್ರೇಷ್ಠಾಂ ಜಹ್ನುಭಾರ್ಯಾಮನಿಂದಿತಾಮ್**
**॥ ೨೯ ॥**

---

೨೫. ಸುಹೋತ್ರನಿಗೆ ಕೇಶಿನಿ ಎಂಬ ಭಾರ್ಯೆಯ ಗರ್ಭದಲ್ಲಿ ಜಹ್ನು ಎಂಬ ಪುತ್ರನು ಜನಿಸಿದನು. ಈ ಜಹ್ನುವು ಆಚರಿಸಿದ ವಿಶಾಲವಾದ ಯಜ್ಞಕರ್ಮದ ಭೂಮಿಯನ್ನು ಗಂಗಾನದಿಯು ಆವರಿಸಿತು.

೨೬. ಮತ್ತು ಆ ನದಿಯು ಮುಂದಿನ ಭವಿತವ್ಯತೆಯಿಂದ ಆ ಯಜ್ಞಭೂಮಿಯನ್ನು ನಾಶಮಾಡಿತು. ಆಗ ಜಹ್ನುವು ಯಜ್ಞಭೂಮಿಯು ಗಂಗಾನದಿಯ ಪ್ರವಾಹದಿಂದ ತೇಲಿಹೋಗುತ್ತಿರುವುದನ್ನು ಕಂಡನು.

೨೭. ದ್ವಿಜೋತ್ತಮರೆ! ಜಹ್ನುರಾಜನು ಕೋಪಗೊಂಡವನಾಗಿ ಗಂಗೆಯನ್ನು ಪಾನಮಾಡಿದನು. ಆಗ ದೇವತೆಗಳು ಮತ್ತು ಮುನಿಗಳು ರಾಜರ್ಷಿಯಾದ ಜಹ್ನುವಿನಿಂದ ಗಂಗೆಯು ಪಾನಮಾಡಲ್ಪಟ್ಟಿರುವುದನ್ನು ನೋಡಿದರು.

೨೮. ಮಹಾತ್ಮರೆಲ್ಲರೂ ಸೇರಿ ಜಹ್ನುರಾಜರ್ಷಿಯ ಪುತ್ರಿಯ ರೂಪದಿಂದ ಮತ್ತೆ ಗಂಗಾನದಿಯನ್ನು ಕಲ್ಪಿಸಿ ತಂದರು. ಯೌವನಾಶ್ವನ ಪೌತ್ರಿಯಾದ ಕಾವೇರಿಯನ್ನು ಜಹ್ನುಮುನಿಯು ವಿವಾಹ ಮಾಡಿಕೊಂಡನು.

೨೯. ಯುವನಾಶ್ವನ ಶಾಪದಿಂದ ಗಂಗೆಯು ತನ್ನ ಅರ್ಧದಿಂದ ಜಹ್ನುಮುನಿಯ ಭಾರ್ಯೆಯೂ, ನಿರ್ದುಷ್ಟಳೂ ಮತ್ತು ನದಿಗಳಲ್ಲಿ ಪ್ರಶಸ್ತವೂ ಆದ ಕಾವೇರಿಯನ್ನು ನಿರ್ಮಿಸಿದಳು.

ಜಹ್ನುಸ್ತು ದಯಿತಂ ಪುತ್ರಂ ಸುನಹಂ ನಾಮ ಧಾರ್ಮಿಕಮ್ ।
ಕಾವೇರ್ಯಾಂ ಜನಯಾಮಾಸ ಅಜಕಸ್ತಸ್ಯ ಚಾತ್ಮಜಃ ॥ ೩೦ ॥

ಅಜಕಸ್ಯ ತು ದಾಯಾದೋ ಬಲಾಕಾಶೋ ಮಹಾಯಶಾಃ ।
ಬಭೂವ ಮೃಗಯಾಶೀಲಃ ಕುಶಸ್ತಸ್ಯಾತ್ಮಜಃ ಸ್ಮೃತಃ ॥ ೩೧ ॥

ಕುಶಪುತ್ರಾ ಬಭೂವುಶ್ಚ ಚತ್ವಾರೋ ದೇವವರ್ಚಸಃ ।
ಕುಶಾಂಬಃ ಕುಶನಾಭಶ್ಚ ಅಮೂರ್ತರಯಸೋ ವಸುಃ ॥ ೩೨ ॥

ಕುಶಕಸ್ತು ತಪಸ್ತೇಪೇ ಪುತ್ರಾರ್ಥೀ ರಾಜಸತ್ತಮಃ ।
ಪೂರ್ಣೇ ವರ್ಷಸಹಸ್ರೇ ವೈ ಶತಕ್ರತುರಪಶ್ಯತ ॥ ೩೩ ॥

ತಮುಗ್ರತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ ।
ಸಮರ್ಥಃ ಪುತ್ರಜನನೇ ಸ್ವಯಮೇವಾಸ್ಯ ಶಾಶ್ವತಃ ॥ ೩೪ ॥

---

೩೦. ಜಹ್ನುವು ಕಾವೇರಿಯಲ್ಲಿ ಧಾರ್ಮಿಕನೂ, ಪರಮಪ್ರಿಯನೂ ಆದ ಸುನಹ ಎಂಬ ಪುತ್ರನನ್ನು ಸೃಷ್ಟಿಸಿದನು. ಆ ಸುನಹ ಎಂಬುವನಿಗೆ ಅಜಕ ಎಂಬುವನು ಪುತ್ರನಾಗಿ ಜನಿಸಿದನು.

೩೧. ಅಜಕನೆಂಬುವನಿಗೆ ಮಹಾ ಕೀರ್ತಿಸಂಪನ್ನನಾದ ಬಲಾಕಾಶ್ವನೆಂಬ ಪುತ್ರನು ಜನಿಸಿದನು. ಅವನು ವಿಶೇಷವಾಗಿ ಮೃಗಬೇಟೆಯ ವ್ಯಸನವನ್ನು ಹೊಂದಿದ್ದನು. ಅವನಿಗೆ ಕುಶನೆಂಬ ಪುತ್ರನಿದ್ದನೆಂದು ಸ್ಮರಿಸಲ್ಪಟ್ಟಿರುವನು.

೩೨. ಕುಶನಿಗೆ ದೇವತೆಗಳಂತೆ ಒಪ್ಪುವ ವರ್ಚಸ್ಸಿನಿಂದ ಕೂಡಿದ ಕುಶಾಂಬ, ಕುಶನಾಭ, ಅಮೂರ್ತರಯಸ ಮತ್ತು ವಸು ಎಂಬ ನಾಲ್ಕು ಮಂದಿ ಪುತ್ರರು ಇದ್ದರು.

೩೩. ಇವರಲ್ಲಿ ರಾಜಶ್ರೇಷ್ಠನಾದ ಕುಶಿಕನೆಂಬುವನು ಪುತ್ರಾರ್ಥಿಯಾಗಿ ತಪವನ್ನು ಆಚರಿಸಿದನು. ಹಾಗೆಯೇ ಎರಡು ಸಹಸ್ರ ವರ್ಷಗಳು ಪೂರ್ತಿಯಾಗಿ ಕಳೆಯಲು ತಪಶ್ಚರ್ಯೆಯಲ್ಲಿ ನಿರತನಾದ ಕುಶಿಕನನ್ನು ಇಂದ್ರನು ನೋಡಿದನು.

೩೪. ಸಹಸ್ರ ನಯನಗಳಿಂದ ಕೂಡಿದ ಇಂದ್ರನು ಕಠಿನವಾದ ತಪಸ್ಸಿನಲ್ಲಿ ಮಗ್ನನಾದ ಕುಶಿಕನನ್ನು ಕಂಡು ಶಾಶ್ವತನೂ ಸರ್ವಸಮರ್ಥನೂ ಆದ ತಾನೇ ಅವನ ಪುತ್ರರೂಪದಿಂದ ಹುಟ್ಟುವಂತೆ ಸಂಕಲ್ಪಿಸಿದನು.

ಪುತ್ರತ್ವಂ ಕಲ್ಪಯಾಮಾಸ ಸ್ವಯಮೇವ ಪುರಂದರಃ ।
ಗಾಧಿರ್ನಾಮಾಭವತ್ಪುತ್ರಃ ಕೌಶಿಕಃ ಪಾಕಶಾಸನಃ ॥ ೩೫ ॥

ಪೌರುಕುತ್ಸ್ಯಭವದ್ಭಾರ್ಯಾ ಗಾಧೇಸ್ತಸ್ಯಾಮಜಾಯತ ।
ಪೂರ್ವಂ ಕನ್ಯಾ ಮಹಾಭಾಗಾ ನಾಮ್ನಾ ಸತ್ಯವತೀ ಶುಭಾ ॥ ೩೬ ॥

ತಾ ಗಾಧಿಃ ಪುತ್ರಕಾಮಾಯ ಋಚೀಕಾಯ ದದೌ ಪ್ರಭುಃ ।
ತಸ್ಯಾಃ ಪ್ರೀತಸ್ತು ವೈ ಭರ್ತಾ ಭಾರ್ಗವೋ ಭೃಗುನಂದನಃ ॥ ೩೭ ॥

ಪುತ್ರಾರ್ಥೇ ಸಾಧಯಾಮಾಸ ಚರುಂ ಗಾಧೇಸ್ತಥೈವ ಚ ।
ಅಥಾವೋಚತ್ ಪ್ರಿಯಾಂ ತತ್ರ ಋಚೀಕೋ ಭಾರ್ಗವಸ್ತದಾ ॥ ೩೮ ॥

ಉಪಭೋಜ್ಯಶ್ಚರುರಯಂ ತ್ವಯಾ ಮಾತ್ರಾ ಚ ತೇ ಶುಭಃ ।
ತಸ್ಯಾ ಜನಿಷ್ಯತೇ ಪುತ್ರೋ ದೀಪ್ತಿಮಾನ್ ಕ್ಷತ್ರಿಯರ್ಷಭಃ ॥ ೩೯ ॥

---

೩೫. ಆಗ ಇಂದ್ರನು ಅದರಂತೆ ತನ್ನನು ಪುತ್ರನನ್ನಾಗಿ ಕಲ್ಪಿಸಿಕೊಂಡನು. ಪಾಕನೆಂಬ ಅಸುರನನ್ನು ನಿಗ್ರಹ ಮಾಡಿದ ಇಂದ್ರನು ಕುಶಿಕನ ಪುತ್ರನಾಗಿ ಜನಿಸಿ ಗಾಧಿ ಎಂಬ ನಾಮಾಂಕಿತನಾದನು.

೩೬. ಆ ಗಾಧಿ ರಾಜನಿಗೆ ಪುರುಕುತ್ಸನ ಪುತ್ರಿಯು ಭಾರ್ಯೆಯಾಗಿದ್ದಳು. ಆಕೆಯಲ್ಲಿ ಮೊದಲು ಮಂಗಳಶೀಲಳೂ, ಮಹಾಭಾಗ್ಯವತಿಯೂ ಮತ್ತು ಸತ್ಯವತಿ ಎಂಬ ನಾಮಾಂಕಿತಳೂ ಆದ ಕನ್ಯೆಯು ಹುಟ್ಟಿದಳು.

೩೭. ಪ್ರಭುವಾದ ಗಾಧಿರಾಜನು ಆ ಸತ್ಯವತಿ ಎಂಬ ಕನ್ಯೆಯನ್ನು ಪುತ್ರಕಾಮನಾಗಿರುವ ಋಚೀಕ ಮುನಿಗೆ ಪ್ರದಾನಮಾಡಿದನು. ಭೃಗುಮುನಿಯ ವಂಶದಲ್ಲಿ ಜನಿಸಿದುದರಿಂದ ಭಾರ್ಗವ ಎಂಬ ಉಪನಾಮಾಂಕಿತನಾದ ಋಚೀಕನು ಆಕೆಯಲ್ಲಿ ಪ್ರೀತಿಯುಳ್ಳವನಾದನು.

೩೮. ಆಗ ಸತ್ಯವತಿಯಲ್ಲಿಯೂ ಗಾಧಿ ರಾಜನ ಪತ್ನಿಯಲ್ಲಿಯೂ ಪುತ್ರರತ್ನಗಳು ಹುಟ್ಟುವಂತೆ ಚರುವನ್ನು ನಿರ್ಮಿಸಿದನು. ಮತ್ತು ಭಾರ್ಗವನಾದ ಋಚೀಕ ಮುನಿಯು ಆ ವಿಷಯವನ್ನು ಕುರಿತು ಪ್ರಿಯೆಗೆ ಹೇಳಿದನು.

೩೯. ಈ ಮಂಗಳಕರವಾದ ಚರುವನ್ನು ನೀನೂ ನಿನ್ನ ತಾಯಿಯೂ ಭುಂಜಿಸಬೇಕು. ಇದರಿಂದ ನಿನ್ನ ತಾಯಿಯಲ್ಲಿ ಅತಿತೇಜಸ್ವಿಯೂ ಕ್ಷತ್ರಿಯೋತ್ತಮನೂ ಆದ ಪುತ್ರನು ಹುಟ್ಟುವನು.

ಅಜೇಯಃ ಕ್ಷತ್ರಿಯೈರ್ಯುದ್ಧೇ ಕ್ಷತ್ರಿಯರ್ಷಭಸೂದನಃ ।
ತವಾಪಿ ಪುತ್ರಂ ಕಲ್ಯಾಣಿ ಧೃತಿಮಂತಂ ತಪೋಧನಮ್ ॥ ೪೦ ॥

ಶಮಾತ್ಮಕಂ ದ್ವಿಜಶ್ರೇಷ್ಠಂ ಚರುರೇಷ ವಿಧಾಸ್ಯತಿ ।
ಏವಮುಕ್ತ್ವಾ ತು ತಾಂ ಭಾರ್ಯಾಮೃಚೀಕೋ ಭೃಗುನಂದನಃ॥ ೪೧ ॥

ತಪಸ್ಯಭಿರತೋ ನಿತ್ಯಮರಣ್ಯಂ ಪ್ರವಿವೇಶ ಹ ।
ಗಾಧಿಃ ಸದಾರಸ್ತು ತದಾ ಋಚೀಕಾಶ್ರಮಮಭ್ಯಗಾತ್ ॥ ೪೨ ॥

ತೀರ್ಥಯಾತ್ರಾಪ್ರಸಂಗೇನ ಸುತಾಂ ದ್ರಷ್ಟುಂ ನರೇಶ್ವರಃ ।
ಚರುದ್ವಯಂ ಗೃಹೀತ್ವಾ ತು ಋಷೇಃ ಸತ್ಯವತೀ ತದಾ ॥ ೪೩ ॥

ಭರ್ತುರ್ವಚನಮವ್ಯಗ್ರಾ ದೃಷ್ಟ್ವಾ ಮಾತ್ರೇ ನ್ಯವೇದಯತ್ ।
ಮಾತಾ ತು ತಸ್ಯೈ ದೈವೇನ ದುಹಿತ್ರೇ ಸ್ವಚರುಂ ದದೌ । ॥ ೪೪ ॥

---

೪೦. ಆ ಪುತ್ರನು ಯುದ್ಧದಲ್ಲಿ ಇತರ ಕ್ಷತ್ರಿಯರಿಂದ ಜಯಿಸಲಾಗದವನೂ ಮತ್ತು ಶತ್ರು ಕ್ಷತ್ರಿಯರನ್ನು ಸಂಹರಿಸಲು ಶಕ್ತನೂ ಆಗುವನು. ಕಲ್ಯಾಣ ಶೀಲಳೇ! ನಿನಗೆ ಧೈರ್ಯಶಾಲಿಯೂ ತಪಸ್ವಿಯೂ ಆದ ಪುತ್ರನು ಜನಿಸುವನು.

೪೧. ಈ ಚರುವು ನಿನ್ನಲ್ಲಿ ಶಮಗುಣದಿಂದ ಕೂಡಿದ ಬ್ರಾಹ್ಮಣೋತ್ತಮನಾದ ಪುತ್ರನನ್ನು ಕೊಡುವುದು. ಭೃಗುವಂಶದಲ್ಲಿ ಹುಟ್ಟಿದ ಋಚೀಕ ಮುನಿಯು ಭಾರ್ಯೆಗೆ ಈ ರೀತಿಯಾಗಿ ಹೇಳಿದನು.

೪೨. ಮತ್ತು ತಾನು ತಪಶ್ಚರ್ಯೆಯಲ್ಲಿ ನಿರತನಾಗಿ ವನವನ್ನು ಪ್ರವೇಶ ಮಾಡಿದನು. ಅದೇ ಸಮಯದಲ್ಲಿ ಗಾಧಿ ರಾಜನು ರಾಣಿಯಿಂದೊಡಗೂಡಿವನಾಗಿ ಋಚೀಕ ಮುನಿಯು ಆಶ್ರಮಕ್ಕೆ ಬಂದನು.

೪೩. ಗಾಧಿರಾಜನು ತೀರ್ಥಯಾತ್ರೆಯನ್ನು ನಡೆಯಿಸುತ್ತಿದ್ದ ಸಂದರ್ಭದಲ್ಲಿ ಮಗಳನ್ನು ನೋಡುವುದಕ್ಕೋಸ್ಕರ ಆ ಅರಣ್ಯಕ್ಕೆ ಬಂದನು. ಆಗ ಸತ್ಯವತಿಯು ಮುನಿಯು ಕೊಟ್ಟಿದ್ದ ಎರಡು ಚರುಗಳನ್ನು ಹಸ್ತದಲ್ಲಿ ತೆಗೆದುಕೊಂಡಳು.

೪೪. ಆಗ ಪತಿಯು ಹೇಳಿದ್ದ ವಚನದಲ್ಲಿ ಪ್ರಮಾದ ಹೊಂದಿ ಸಂತೋಷ ದಿಂದ ಆ ವಾರ್ತೆಯನ್ನು ತನ್ನ ತಾಯಿಗೆ ಹೇಳಿ ಚರುಗಳನ್ನು ಒಪ್ಪಿಸಿದಳು. ತಾಯಿಯು ದೈವಯೋಗದಿಂದ ತನ್ನ ಚರುವನ್ನು ಮಗಳಿಗೆ ಕೊಟ್ಟಳು.

ತಸ್ಯಾಶ್ಚರುಮಥಾಜ್ಞಾನಾದಾತ್ಮನಃ ಸಾ ಚಕಾರ ಹ ।
ಅಥ ಸತ್ಯವತೀ ಗರ್ಭಂ ಕ್ಷತ್ರಿಯಾಂತಕರಂ ಶುಭಮ್ ॥ ೪೫ ॥

ಧಾರಯಾಮಾಸ ದೀಪ್ತೇನ ವಪುಷಾ ಘೋರದರ್ಶನಾ ।
ತಾಮೃಚೀಕಸ್ತತೋ ದೃಷ್ಟ್ವಾ ಯೋಗೇನಾಪ್ಯವಮೃಶ್ಯ ಚ ॥ ೪೬ ॥

ತದಾಬ್ರವೀದ್ದ್ವಿಜಶ್ರೇಷ್ಠಃ ಸ್ವಾಂ ಭಾರ್ಯಾಂ ವರವರ್ಣಿನೀಮ್ ।
ಮಾತ್ರಾಸಿ ವಂಚಿತಾ ಭದ್ರೇ ಚರುವ್ಯತ್ಯಾಸಹೇತುನಾ ॥ ೪೭ ॥

ಜನಿಷ್ಯತಿ ಹಿ ಪುತ್ರಸ್ತೇ ಕ್ರೂರಕರ್ಮಾತಿದಾರುಣಃ ।
ಮಾತಾ ಜನಿಷ್ಯತೇ ಚಾಪಿ ತಥಾಭೂತಂ ತಪೋಧನಮ್ ॥ ೪೮ ॥

ವಿಶ್ವಂ ಹಿ ಬ್ರಹ್ಮ ತಪಸಾ ಮಯಾ ತತ್ರ ಸಮರ್ಪಿತಮ್ ।
ಏವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ ॥ ೪೯ ॥

---

೪೫. ಮತ್ತು ಅಜ್ಞಾನದಿಂದ ಪುತ್ರಿಯ ಭಾಗದ ಚರುವನ್ನು ತಾನು ಉಪಯೋಗಿಸಿದಳು. ತರುವಾಯ ಸತ್ಯವತಿಯು ಕ್ಷತ್ರಿಯರನ್ನು ಸದೆ ಬಡಿಯುವ ಮಂಗಳಕರನಾದ ಪುತ್ರನ ಗರ್ಭವನ್ನು ಧರಿಸಿದಳು.

೪೬. ಮತ್ತು ಗರ್ಭಮಹಿಮೆಯಿಂದ ಜ್ವಲಿಸುವ ಶರೀರದಿಂದ ಘೋರವಾದ ದರ್ಶನವುಳ್ಳವಳಾದಳು, ಅನಂತರದಲ್ಲಿ ಋಚೀಕ ಮುನಿಯು ಘೋರ ದರ್ಶನವುಳ್ಳ ಆಕೆಯನ್ನು ನೋಡಿ ಯೋಗದೃಷ್ಟಿಯಿಂದ ನಡೆದ ಸಂಗತಿಯನ್ನು ತಿಳಿದನು.

೪೭. ಆಗ ದ್ವಿಜೋತ್ತಮನಾದ ಋಚೀಕ ಮುನಿಯು ಉತ್ತಮಾಂಗನೆಯಾದ ತನ್ನ ಭಾರ್ಯೆಯನ್ನು ಕುರಿತು ಹೇಳಿದನು. ಕಲ್ಯಾಣಿಯೆ! ಚರುಗಳ ವ್ಯತ್ಯಾಸ ಮಾಡಿದ ನಿನ್ನ ಮಾತೆಯಿಂದ ನೀನು ವಂಚಿತಳಾಗಿದ್ದೀ.

೪೮. ಕೂರವಾದ ಕರ್ಮಗಳಿಂದ ಅತಿ ಭಯಂಕರನಾದ ಪುತ್ರನು ನಿನ್ನಲ್ಲಿ ಜನಿಸುವನು. ಅಂತಹ ಶಮಾದಿ ಗುಣಗಳಿಂದ ಕೂಡಿದ ತಪಸ್ವಿ ಪುತ್ರನನ್ನು ನಿನ್ನ ತಾಯಿಯು ಪ್ರಸವಿಸುವಳು.

೪೯. ಆ ಗರ್ಭದಲ್ಲಿ ಸಮಸ್ತ ಬ್ರಹ್ಮಬೀಜವು ತಪೋಮಹಿಮೆಯಿಂದ ಆ ಗರ್ಭದಲ್ಲಿ ಇರಿಸಲ್ಪಟ್ಟಿದೆ. ಮಹಾಭಾಗ್ಯವತಿಯಾದ ಸತ್ಯವತಿಯು ಆಗ ಪತಿಯಿಂದ ಈ ರೀತಿಯಾಗಿ ಹೇಳಲ್ಪಟ್ಟಳು.

ಪ್ರಸಾದಯಾಮಾಸ ಪತಿಂ ಸುತೋ ಮೇ ನೇದೃಶೋ ಭವೇತ್ ।
ಬ್ರಾಹ್ಮಣಾಪಶದಸ್ತ್ವತ್ತ ಇತ್ಯುಕ್ತೋ ಮುನಿರಬ್ರವೀತ್ ‖ ೫೦ ‖

ನೈವ ಸಂಕಲ್ಪಿತಃ ಕಾಮೋ ಮಯಾ ಭದ್ರೇ ತಥಾ ತ್ವಯಾ ।
ಉಗ್ರಕರ್ಮಾ ಭವೇತ್ಪುತ್ರಃ ಪಿತುರ್ಮಾತುಶ್ಚ ಕಾರಣಾತ್ ‖ ೫೧ ‖

ಪುನಃ ಸತ್ಯವತೀ ವಾಕ್ಯಮೇವಮುಕ್ತಾಬ್ರವೀದಿದಮ್ ।
ಇಚ್ಛಂಲ್ಲೋಕಾನಪಿ ಮುನೇ ಸೃಜೇಥಾಃ ಕಿಂ ಪುನಃ ಸುತಮ್ ‖ ೫೨ ‖

ಶಮಾತ್ಮಕಮೃಜುಂ ಭರ್ತಃ ಪುತ್ರಂ ಮೇ ದಾತುಮರ್ಹಸಿ ।
ಕಾಮಮೇವಂವಿಧಃ ಪೌತ್ರೋ ಮಮ ಸ್ಯಾತ್ತವ ಸುವ್ರತ ‖ ೫೩ ‖

ಯದ್ಯನ್ಯಥಾ ನ ಶಕ್ಯಂ ವೈ ಕರ್ತುಮೇವಂ ದ್ವಿಜೋತ್ತಮ ।
ತತಃ ಪ್ರಸಾದಮಕರೋತ್ ಸ ತಸ್ಯಾಸ್ತಪಸೋ ಬಲಾತ್ ‖ ೫೪ ‖

---

೫೦. ಆಗ ಅವಳು ನಿನ್ನಿಂದ ನನಗೆ ಅಂತಹ ಬ್ರಾಹ್ಮಣಾಧಮನಾದ ಕ್ರೂರ ಪುತ್ರನು ಹುಟ್ಟಲಾಗದು, ಎಂದು ಹೇಳುತ್ತ ಪತಿಯನ್ನು ಸಂತೈಸಿದಳು. ಹೀಗೆ ಪ್ರಿಯೆಯಿಂದ ಕೇಳಲ್ಪಟ್ಟ ಮುನಿಯು ಮತ್ತೆ ಹೇಳಿದನು.

೫೧. ಮಂಗಳಸ್ವರೂಪಳೆ! ಇಂತಹ ಪುತ್ರನಾಗುವ ಕಾಮವು ನಿನ್ನಿಂದಲಾಗಲಿ ನನ್ನಿಂದಲಾಗಲಿ ಸಂಕಲ್ಪಿಸಲ್ಪಟ್ಟಿಲ್ಲ. ನಿನ್ನ ಮಾತಾಪಿತೃಗಳ ನಿಮಿತ್ತದಿಂದ ನಿನ್ನಲ್ಲಿ ಉಗ್ರಕರ್ಮಗಳನ್ನು ಸಾಧಿಸುವ ಪುತ್ರನು ನಿನಗೆ ಹುಟ್ಟುವನು.

೫೨. ಪತಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ಸತ್ಯವತಿಯು ಮತ್ತೆ ಮುನಿಯನ್ನು ಕುರಿತು ಹೇಳಿದಳು. ಮುನಿಯೇ! ನೀನು ಇಷ್ಟಪಟ್ಟರೆ ಸಮಸ್ತ ಲೋಕಗಳನ್ನು ಸೃಷ್ಟಿಸಲು ಶಕ್ತನಾಗಿರುತ್ತೀ, ಯೋಗ್ಯ ಪುತ್ರನನ್ನು ಅನುಗ್ರಹಿಸಲಾರೆಯಾ

೫೩. ಪತಿದೇವನೆ! ಶಾಂತಿಪ್ರಿಯನೂ ಸರಲಸ್ವಭಾವನೂ ಆದ ಪುತ್ರನನ್ನು ನನಗೆ ಕೊಡಲು ನೀನು ಅರ್ಹನಾಗಿದ್ದೀ. ಸಾಧು ನಿಯಮಾಲಂಕೃತನಾದ ಪತಿಯೆ! ನನಗೆ ಕ್ರೂರ ಕರ್ಮಗಳಿಂದ ಭಯಂಕರನಾದ ಪೌತ್ರನು ಹುಟ್ಟುವುದಾದರೂ ಆಗಲಿ,

೫೪. ವಿಪ್ರೋತ್ತಮನೆ! ಚರುವಿನಿಮಯ ಫಲವನ್ನು ವ್ಯತ್ಯಾಸಮಾಡಲು ಆಗದಿದ್ದಲ್ಲಿ ಅಂತಹ ಪೌತ್ರನು ಹುಟ್ಟುವಂತೆ ಆಗಲಿ, ಆಗ ಮುನಿಯು ತನ್ನ ತಪೋಬಲದಿಂದ ಆಕೆಯಲ್ಲಿ ಅನುಗ್ರಹವನ್ನಿತ್ತನು.

ಪುತ್ರೇ ನಾಸ್ತಿ ವಿಶೇಷೋ ಮೇ ಪೌತ್ರೇ ವಾ ವರವರ್ಣಿನಿ ।
ತ್ವಯಾ ಯಥೋಕ್ತಂ ವಚನಂ ತಥಾ ಭದ್ರೇ ಭವಿಷ್ಯತಿ ॥ ೫೫ ॥

ತಸ್ಮಾತ್ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಮ್ ।
ತಪಸ್ಯಭಿರತಂ ದಾಂತಂ ಜಮದಗ್ನಿಂ ಶಮಾತ್ಮಕಮ್ ॥ ೫೬ ॥

ಭೃಗೋಶ್ಚರುವಿಪರ್ಯಾಸೇ ರೌದ್ರವೈಷ್ಣವಯೋಃ ಪುರಾ ।
ಜಮನಾದ್ವೈಷ್ಣವಸ್ಯಾಗ್ನೇರ್ಜಮದಗ್ನಿರಜಾಯತ ॥ ೫೭ ॥

ವಿಶ್ವಾಮಿತ್ರಂ ತು ದಾಯಾದಂ ಗಾಧಿಃ ಕುಶಿಕನಂದನಃ ।
ಪ್ರಾಪ್ಯ ಬ್ರಹ್ಮರ್ಷಿಸಮತಾಂ ಜಗಾಮ ಬ್ರಹ್ಮಣಾ ವೃತಃ ॥ ೫೮ ॥

ಸಾ ಹಿ ಸತ್ಯವತೀ ಪುಣ್ಯಾ ಸತ್ಯವ್ರತಪರಾಯಣಾ ।
ಕೌಶಿಕೀತಿ ಸಮಾಖ್ಯಾತಾ ಪ್ರವೃತ್ತೇಯಂ ಮಹಾನದೀ ॥ ೫೯ ॥

---

೫೫. ಉತ್ತಮಾಂಗನೆಯೆ! ಪುತ್ರನಲ್ಲಿಯೂ ಪೌತ್ರನಲ್ಲಿಯೂ ನನಗೇನೂ ತಾರತಮ್ಯ ದೃಷ್ಟಿಯು ಇರುವುದಿಲ್ಲ. ಮಂಗಳಕರಳೆ! ಅಂತಹ ಪೌತ್ರನಿದ್ದರೂ ಇರಲಿ ಎಂದು ಅಂಗೀಕಾರಮಾಡಿದ ನಿನ್ನ ವಚನವು ಹಾಗೆಯೆ. ಆಗಲಿ. ಎಂದು ಅನುಗ್ರಹಿಸಿದನು.

೫೬. ಆದುದರಿಂದ ಸತ್ಯವತಿಯು ತಪಸ್ಸಿನಲ್ಲಿ ನಿರತನೂ, ಜಿತೇಂದ್ರಿಯನೂ, ಶಾಂತಿಪ್ರಿಯನೂ ಮತ್ತು ಭೃಗುಮುನಿಯ ವಂಶೋತ್ಪನ್ನನೂ ಆದ ಜಮದಗ್ನಿ ಮುನಿಯೆಂಬ ಪುತ್ರನನ್ನು ಪ್ರಸವಿಸಿದಳು.

೫೭. ಹೀಗೆ ಪೂರ್ವದಲ್ಲಿ ರುದ್ರ-ವಿಷ್ಣು ದೇವತೆಗಳಿಗರ್ಪಿಸಿದ ಋಚೀಕ ಮುನಿಯ ಚರುವ ವ್ಯತ್ಯಾಸವನ್ನು ಹೊಂದಿ ವೈಷ್ಣವಾಗ್ನಿ ತೇಜಸ್ಸಿನಿಂದ ಜನಿಸಿದುದರಿಂದ ಪುತ್ರನು ಜಮದಗ್ನಿ ಎಂಬ ಅನ್ವರ್ಥ ನಾಮಾಂಕಿತನಾದನು.

೫೮. ಕುಶಿಕ ರಾಜನ ಪುತ್ರನಾದ ಗಾಧಿ ರಾಜನು ವಿಶ್ವಾಮಿತ್ರನೆಂಬ ಪುತ್ರನನ್ನು ಹೊಂದಿ ಬ್ರಾಹ್ಮಣನಿಂದ ವರಿಸಲ್ಪಟ್ಟು ಬ್ರಹ್ಮರ್ಷಿಗಳ ಸಾಮ್ಯವನ್ನು ಹೊಂದಿದನು.

೫೯. ಅಮೋಘವಾದ ವ್ರತ ನಿಯಮಗಳಲ್ಲಿ ಆಸಕ್ತಳಾದ ಆ ಸತ್ಯವತಿಯು ಕೌಶಿಕೀ ಎಂಬ ಪವಿತ್ರ ನಾಮಾಂಕಿತಳಾದ ನದಿಯ ರೂಪದಿಂದ ಪ್ರವರ್ತಿಸಿದಳು.

ಪರಿಸ್ರುತಾ ಮಹಾಭಾಗಾ ಕೌಶಿಕೀ ಸರಿತಾಂ ವರಾ ।
ಇಕ್ಷ್ವಾಕುವಂಶಪ್ರಭವೋ ರೇಣುಕೊ ನಾಮ ಪಾರ್ಥಿವಃ　　　॥ ೬೦ ॥

ತಸ್ಯ ಕನ್ಯಾ ಮಹಾಭಾಗಾ ಕಮಲೀ ನಾಮ ರೇಣುಕಾ ।
ರೇಣುಕಾಯಾಂ ಕಮಲ್ಯಾಂ ತು ತಪೋಧೃತಿಸಮಾಧಿನಾ　　　॥ ೬೧ ॥

ಆರ್ಚಿಕೋ ಜನಯಾಮಾಸ ಜಮದಗ್ನಿಃ ಸುದಾರುಣಮ್ ।
ಸರ್ವವಿದ್ಯಾಂತಗಂ ಶ್ರೇಷ್ಠಂ ಧನುರ್ವೇದಸ್ಯ ಪಾರಗಮ್　　　॥ ೬೨ ॥

ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಮ್ ।
ಔರ್ವಸ್ಯೈವಮೃಚೀಕಸ್ಯ ಸತ್ಯವತ್ಯಾಂ ಮಹಾಮನಾಃ　　　॥ ೬೩ ॥

ಜಮದಗ್ನಿಸ್ತಪೋವೀರ್ಯಾಜ್ಜಜ್ಞೇ ಬ್ರಹ್ಮವಿದಾಂವರಃ ।
ಮಧ್ಯಮಶ್ಚ ಶುನಃಶೇಫಃ ಶುನಃಪುಚ್ಛಃ ಕನಿಷ್ಠಕಃ　　　॥ ೬೪ ॥

---

೬೦. ಮಹಾ ಭಾಗ್ಯೋಪೇತವಾದ ಆ ಕೌಶಿಕೀ ನದಿಯು ನದಿಗಳಲ್ಲಿ ಉತ್ತಮವಾದುದೆಂದೆನಿಸಿ ಪ್ರವಹಿಸಿತು. ಇಕ್ಷ್ವಾಕು ರಾಜನ ವಂಶದಲ್ಲಿ ಜನಿಸಿದ ರೇಣುಕ ಎಂಬ ಓರ್ವ ರಾಜನಿದ್ದನು.

೬೧. ಆ ರೇಣುಕ ರಾಜನಿಗೆ ಮಹಾಭಾಗ್ಯದಿಂದ ಕೂಡಿದ ರೇಣುಕಾ ಅಥವಾ ಕಮಲೀ ಎಂಬ ಕನ್ಯೆಯಿದ್ದಳು. ತಪಸ್ಸು, ಧಾರಣೆ, ಸಮಾಧಿಗಳಲ್ಲಿ ನಿರತನಾದ ಜಮದಗ್ನಿ ಮುನಿಗೆ ಆ ರೇಣುಕ ರಾಜನ ಪುತ್ರಿಯಾದ ಕಮಲಿಯು ಪತ್ನಿಯಾಗಿದ್ದಳು.

೬೨. ಋಚೀಕ ಪುತ್ರನಿಂದ ಜಮದಗ್ನಿ ಮುನಿಯು ಆ ಭಾರ್ಯೆಯಲ್ಲಿ ಸರ್ವವಿದ್ಯೆಗಳಲ್ಲಿ ನಿಷ್ಣಾತನೂ, ಧನುರ್ವೇದದಲ್ಲಿ ಪಾರಂಗತನೂ, ಶ್ರೇಷ್ಠನೂ ಮತ್ತು ದಾರುಣನೂ ಆದ ಪುತ್ರನನ್ನು ಹೊಂದಿದನು.

೬೩. ಆ ಪುತ್ರನು ಕ್ಷತ್ರಿಯರನ್ನು ಸಂಹರಿಸುವವನೂ, ಜ್ವಲಿಸುವ ಅಗ್ನಿಯಂತೆ ತೇಜಸ್ವಿಯಾದವನೂ ಮತ್ತು ರಾಮನೆಂದು ಪ್ರಸಿದ್ಧನೂ ಆಗಿದ್ದನು.ಔರ್ವಪುತ್ರನಾದ ಋಚೀಕಮುನಿಯ ಭಾರ್ಯೆಯಾದ ಸತ್ಯವತಿಯಲ್ಲಿ ಉದಾರಮನಸ್ಸಿನಿಂದ ಶೋಭಿಸುವ ಪುತ್ರನು ಜನಿಸಿದನು.

೬೪. ಋಚೀಕಮುನಿಯ ತಪೋವೀರ್ಯದಿಂದ ಬ್ರಹ್ಮಜ್ಞಾನಿಗಳಲ್ಲಿ ಉತ್ತಮನೆನಿಸಿದ ಜಮದಗ್ನಿ ಯೆಂಬ ಪುತ್ರನು ಜನಿಸಿದನು, ತರುವಾಯ ಇವನನ್ನು ಅನುಸರಿಸಿ ಶುನಃಶೇಫನೆಂಬ ಮಧ್ಯಮ ಪುತ್ರನೂ ಶುನಃಪುಚ್ಛನೆಂಬ ಕನಿಷ್ಠ ಪುತ್ರನೂ ಜನಿಸಿದರು.

ವಿಶ್ವಾಮಿತ್ರಸ್ತು ಧರ್ಮಾತ್ಮಾ ನಾಮ್ನಾ ವಿಶ್ವರಥಃ ಸ್ಮೃತಃ ।
ಜಜ್ಞೇ ಭೃಗುಪ್ರಸಾದೇನ ಕೌಶಿಕಾನ್ವಯವರ್ಧನಃ ॥ ೬೫ ॥

ವಿಶ್ವಾಮಿತ್ರಸ್ಯ ಪುತ್ರಸ್ತು ಶುನಃಶೇಫೋಽಭವನ್ಮುನಿಃ ।
ಹರಿಶ್ಚಂದ್ರಸ್ಯ ಯಜ್ಞೇ ತು ಪಶುತ್ವೇ ನಿಯತಃ ಸ ವೈ ॥ ೬೬ ॥

ದೇವೈರ್ದತ್ತಃ ಶುನಃಶೇಫೋ ವಿಶ್ವಾಮಿತ್ರಾಯ ವೈ ಪುನಃ ।
ದೇವೈರ್ದತ್ತಃ ಸ ವೈ ಯಸ್ಮಾದ್ದೇವರಾತಸ್ತತೋಽಭವತ್ ॥ ೬೭ ॥

ವಿಶ್ವಾಮಿತ್ರಸ್ಯ ಪುತ್ರಾಣಾಂ ಶುನಃಶೇಫೋಽಗ್ರಜಃ ಸ್ಮೃತಃ ।
ಮಧುಚ್ಛಂದಾದಯಶ್ಚೈವ ಕೃತದೇವೌ ಧ್ರುವಾಷ್ಟಕೌ ॥ ೬೮ ॥

ಕಚ್ಛಪಃ ಪೂರಣಶ್ಚೈವ ವಿಶ್ವಾಮಿತ್ರಸುತಾಸ್ತು ವೈ ।
ತೇಷಾಂ ಗೋತ್ರಾಣಿ ಬಹುಧಾ ಕೌಶಿಕಾನಾಂ ಮಹಾತ್ಮನಾಮ್ ॥ ೬೯ ॥

---

೬೫. ಧರ್ಮಶೀಲನಾದ ವಿಶ್ವಾಮಿತ್ರನೆಂಬುವನು ವಿಶ್ವರಥ ಎಂಬ ನಾಮದಿಂದ ಸ್ಮರಿಸಲ್ಪಟ್ಟಿರುವನು, ಅವನು ಭೃಗುಮುನಿಯ ಅನುಗ್ರಹದಿಂದ ಕೌಶಿಕರಾಜರ ವಂಶಾವಳಿಯನ್ನು ಬೆಳಗುವವನಾದನು.

೬೬. ಶುನಃಶೇಫನೆಂಬ ಮುನಿಯು ಹರಿಶ್ಚಂದ್ರನು ಮಾಡಿದ ಯಜ್ಞದಲ್ಲಿ ಪಶುವಾಗಿ ಬಂಧಿಸಲ್ಪಟ್ಟವನಾಗಿ ಕಡೆಗೆ ವಿಶ್ವಾಮಿತ್ರನ ಪುತ್ರನಾದನು.

೬೭. ದೇವತೆಗಳಿಗೆ ಅರ್ಪಿಸಿ ಪಶುವಾಗಿ ಬಂಧಿಸಲ್ಪಟ್ಟ ಶುನಃಶೇಫನು ವಿಶ್ವಾಮಿತ್ರನಿಗೆ ದೇವತೆಗಳಿಂದ ಅನುಗ್ರಹಪೂರ್ವಕವಾಗಿ ಕೊಡಲ್ಪಟ್ಟನು. ಹೀಗೆ ದೇವತೆಗಳಿಂದ ಕೊಡಲ್ಪಟ್ಟಿದ್ದರಿಂದ ಅವನ್ನು ಸೂಚಿಸುವ ದೇವರಾತ ಎಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿದವನಾದನು.

೬೮. ವಿಶ್ವಾಮಿತ್ರನ ಪುತ್ರರ ಗಣದಲ್ಲಿ ಶುನಃಶೇಫನು ಅಗ್ರಜನೆಂದು ಸ್ಮರಿಸಲ್ಪಟ್ಟಿದ್ದನು. ವಿಶ್ವಾಮಿತ್ರನ ಪುತ್ರರ ಗಣಕ್ಕೆ ಮಧುಚ್ಛಂದ ಮುಂತಾದವರೂ, ಕೃತದೇವ, ಧ್ರುವ, ಮತ್ತು ಅಷ್ಟಕ ಮುಂತಾದವರೂ ಸೇರಿದ್ದರು.

೬೯. ಹಾಗು ಕಚ್ಛಪ, ಪೂರಣ ಎಂಬುವರು ವಿಶ್ವಾಮಿತ್ರನ ಪುತ್ರವರ್ಗವನ್ನು ಹೊಂದಿದ್ದರು, ಹೀಗೆ ಮಹಾತ್ಮರಾದ ಕೌಶಿಕ ಸಂತತಿಯಲ್ಲಿ ಹುಟ್ಟಿದವರ ಗೋತ್ರಗಳು ಅನೇಕವಾಗಿ ವಿಸ್ತಾರಹೊಂದಿವೆ.

ಪಾರ್ಥಿವಾ ದೇವರಾತಾಶ್ಚ ಯಾಜ್ಞವಲ್ಕ್ಯಾಃ ಸಮರ್ಷಣಾಃ ।
ಉದುಂಬರಾಶ್ಚ ವಾತಡ್ಯಾಸ್ತಾಲಕಾಯನಚಾಂದ್ರವಾಃ ॥ ೭೦ ॥

ಲೋಹಿಣ್ಯೋ ರೇಣವಶ್ಚೈವ ತಥಾ ಕಾರೀಷವಃ ಸ್ಮೃತಾಃ ।
ಬಭ್ರವಃ ಪಣಿನಶ್ಚೈವ ಧ್ಯಾನಜಪ್ಯಾಸ್ತಥೈವ ಚ ॥ ೭೧ ॥

ಶ್ಯಾಮಾಯನಾ ಹಿರಣ್ಯಾಕ್ಷಾ ಸಾಂಕೃತಾ ಗಾಲವಾಃ ಸ್ಮೃತಾಃ ।
ದೇವಲಾ ಯಾಮದೂತಾಶ್ಚ ಶಾಲಂಕಾಯನಬಾಷ್ಕಲಾಃ ॥ ೭೨ ॥

ಲಾಲಾಟ್ಯಾ ಬಾದರಾಶ್ಚಾನ್ಯೇ ವಿಶ್ವಾಮಿತ್ರಸ್ಯ ಧೀಮತಃ ।
ಋಷ್ಯಂತರವಿವಾಹ್ಯಾಸ್ತೇ ಬಹವಃ ಕೌಶಿಕಾಃ ಸ್ಮೃತಾಃ ॥ ೭೩ ॥

ಕೌಶಿಕಾಃ ಸೌಶ್ರುತಾಶ್ಚೈವ ತಥಾನ್ಯೇ ಸೈಂಧವಾಯನಾಃ ।
ಯೋಗೇಶ್ವರಸ್ಯ ಪುಣ್ಯಸ್ಯ ಬ್ರಹ್ಮರ್ಷೇಃ ಕೌಶಿಕಸ್ಯ ವೈ ।
ವಿಶ್ವಾಮಿತ್ರಸ್ಯ ಪುತ್ರಾಣಾಂ ಶುನಃಶೇಫೋಽಗ್ರಜಃ ಸ್ಮೃತಃ ॥ ೭೪ ॥

---

೭೦. ಅವರಲ್ಲಿ ಪಾರ್ಥಿವ, ದೇವರಾತ, ಯಾಜ್ಞವಲ್ಕ್ಯ, ಮರ್ಷಣ ಉದುಂಬರ, ವಾತಡ್ಯ, ತಾಲಕಾಯನ ಮತ್ತು ಚಾಂದ್ರವ ಮುಂತಾದವರು ಕೌಶಿಕವಂಶದಿಂದ ಜನಿಸಿದ ಗೋತ್ರಪ್ರವರ್ತಕರಾಗಿವರು.

೭೧. ಮತ್ತು ಲೋಹಿಣಿ, ರೇಣು, ಕಾರೀಷವ, ಬಭ್ರು, ಪಣಿ, ಧ್ಯಾನಜಪ ಎಂಬ ಮಹಾತ್ಮರನೇಕರು ಗೋತ್ರ ಪತಿಷ್ಠಾಪಕರಾಗಿರುತ್ತಾರೆ.

೭೨. ಹಾಗೆಯೇ ಶ್ಯಾಮಾಯನ, ಹಿರಣ್ಯಾಕ್ಷ, ಸಾಂಕೃತ, ಗಾಲವ, ದೇವಲ, ಯಾಮದೂತ, ಶಾಲಂಕಾಯನ ಮತ್ತು ಬಾಷ್ಕಲ ಎಂಬ ನಾಮದಿಂದ ಪ್ರಸಿದ್ಧರಾಗಿರುವ ಮಹಾತ್ಮರ ಗಣಗಳು ಗೋತ್ರಪ್ರವರ್ತಕ ಶ್ರೇಣಿಯಲ್ಲಿ ಸೇರಿಕೊಂಡಿವೆ.

೭೩. ಲಾಲಾಟ್ಯ, ಬಾದರ, ಮತ್ತು ಇನ್ನು ಅನೇಕರು ಜ್ಞಾನಿಯಾದ ವಿಶ್ವಾಮಿತ್ರನ ವಂಶಾನುಕ್ರಮದಿಂದ ಬಂದು ಇತರ ಋಷಿವಂಶದೊಡನೆ ವಿವಾಹ ಸಂಬಂಧ ಯೋಗ್ಯರಾಗಿ ಕೌಶಿಕರೆಂದು ಸ್ಮರಿಸಲ್ಪಟ್ಟಿರುವರು.

೭೪. ಕೌಶಿಕರು, ಸೌಶ್ರುತರು, ಮತ್ತು ಸೈಂಧವಾಯನರು—ಇವರೆಲ್ಲರೂ ಯೋಗೇಶ್ವರನೂ, ಬ್ರಹ್ಮರ್ಷಿಯೂ ಮತ್ತು ಕುಶಿಕ ವಂಶೋತ್ಪನ್ನನೂ ಆದ ವಿಶ್ವಾಮಿತ್ರನ ಪುತ್ರರ ಪ್ರಣಾಳಿಕೆಯು, ಇವರಲ್ಲಿ ಶುನಃಶೇಫನು ಅಗ್ರಜನೆಂದು ಸ್ಮರಿಸಲ್ಪಟ್ಟಿರುವನು.

ದೃಷದ್ವತೀಸುತಶ್ಚಾಪಿ ವಿಶ್ವಾಮಿತ್ರಾತ್ತಥಾಷ್ಟಕಃ ।
ಅಷ್ಟಕಸ್ಯ ಸುತೋ ಲೌಹಿಃ ಪ್ರೋಕ್ತೋ ಜಹ್ನುಗಣೋ ಮಯಾ ॥ ೭೫ ॥

ಋಷಯ ಊಚುಃ :—

ಕಿಂಲಕ್ಷಣೇನ ಧರ್ಮೇಣ ತಪಸೇಹ ಶ್ರುತೇನ ವಾ ॥ ೭೬ ॥

ಬ್ರಾಹ್ಮಣ್ಯಂ ಸಮನುಪ್ರಾಪ್ತಂ ವಿಶ್ವಾಮಿತ್ರಾದಿಭಿರ್ನೃಪೈಃ ।
ಯೇನ ಯೇನಾಭಿಧಾನೇನ ಬ್ರಾಹ್ಮಣ್ಯಂ ಕ್ಷತ್ರಿಯಾ ಗತಾಃ ॥ ೭೭ ॥

ವಿಶೇಷಂ ಜ್ಞಾತುಮಿಚ್ಛಾಮಿ ತಪಸೋ ದಾನತಸ್ತಥಾ ।
ಏವಮುಕ್ತಸ್ತತೋ ವಾಕ್ಯಮಬ್ರವೀದಿದಮರ್ಥವತ್ ॥ ೭೮ ॥

ಅನ್ಯಾಯೋಪಗತೈರ್ದ್ರವ್ಯೈರಾಹೂಯ ದ್ವಿಜಸತ್ತಮಾನ್ ।
ಧರ್ಮಾಭಿಕಾಂಕ್ಷೀ ಯಜತೇ ನ ಧರ್ಮಫಲಮಶ್ನುತೇ ॥೭೯ ॥

---

೭೫. ವಿಶ್ವಾಮಿತ್ರನ ಭಾರ್ಯೆಯಾದ ದೃಷದ್ವತೀ ಎಂಬುವಳಲ್ಲಿ ಅಷ್ಟಕ ಎಂಬ ಪುತ್ರನು ಜನಿಸಿರುವನು, ಅಷ್ಟಕನಿಗೆ ಲೌಹಿ ಎಂಬ ಪುತ್ರನು ಜನಿಸಿರುವನು. ಹೀಗೆ ಜಹ್ನು ವಂಶೀಕರ ಗಣವು ನನ್ನಿಂದ ವರ್ಣಿಸಲ್ಪಟ್ಟಿದೆ.

೭೬. ಋಷಿಗಳು ಹೀಗೆ ಪ್ರಶ್ನಿಸಿದರು :—ಕ್ಷತ್ರಿಯ ರಾಜರಿಗೆ ಬ್ರಾಹ್ಮಣತ್ವವನ್ನು ಉಂಟುಮಾಡುವ ಧರ್ಮ, ತಪಸ್ಸು, ಅಥವಾ ಅಧ್ಯಯನಗಳು ಯಾವುವು ? ಅವುಗಳ ಸ್ವರೂಪವೇನು ?

೭೭. ವಿಶ್ವಾಮಿತ್ರ ಮುಂತಾದ ಕ್ಷತ್ರಿಯರಾಜರಿಂದ ಬ್ರಾಹಣ್ಯವು ಸ್ವೀಕರಿಸಲ್ಪಟ್ಟಿರುವುದು. ಯಾವ ಯಾವ ವಿಧದ ತಪಸ್ಸು ಮುಂತಾದ ಉಪಾಯದಿಂದ ಕ್ಷತ್ರಿಯರು ಬ್ರಾಹ್ಮಣ್ಯವನ್ನು ಹೊಂದಿರುವರು ?

೭೮. ತಪಸ್ಸು. ದಾನ, ಇವುಗಳಲ್ಲಿರುವ ಅಂತಹ ವಿಶೇಷವನ್ನು ತಿಳಿಯಲು ಇಷ್ಟವುಳ್ಳವನಾಗಿದ್ದೇವೆ. ಈ ರೀತಿಯಾಗಿ ಕೇಳಲ್ಪಟ್ಟ ಸೂತಮುನಿಯು ತರುವಾಯ ಅರ್ಥಗರ್ಭಿತವಾದ ಈ ವಚನವನ್ನು ಹೇಳಿದನು.

೭೯. ಅನ್ಯಾಯದಿಂದ ಲಭಿಸಿರುವ ದ್ರವ್ಯವನ್ನು ಉಪಯೋಗಿಸಿ ದ್ವಿಜೋತ್ತಮರನ್ನು ಆಹ್ವಾನಿಸಿ ಧರ್ಮದ ಆಕಾಂಕ್ಷೆಯಿಂದ ಸತ್ಕರಿಸಿದರೆ ಅಂತಹ ಧರ್ಮದ ಫಲಕ್ಕೆ ಅವನು ಭಾಗಿಯಾಗುವುದಿಲ್ಲ.

ಜಪಂ ಕೃತ್ವಾ ತಥಾ ತೀವ್ರಂ ಧನಲೋಭಾನ್ನಿರಂಕುಶಃ ।
ರಾಗಮೋಹಾನ್ವಿತೋ ಹ್ಯಂತೇ ಪಾವನಾರ್ಥಂ ದದಾತಿ ಯಃ ॥ ೮೦ ॥

ತೇನ ದತ್ತಾನಿ ದಾನಾನಿ ಹ್ಯಫಲಾನಿ ಭವಂತ್ಯುತ ।
ತಸ್ಯ ಧರ್ಮಪ್ರವೃತ್ತಸ್ಯ ಹಿಂಸಕಸ್ಯ ದುರಾತ್ಮನಃ ॥ ೮೧ ॥

ಏವಂ ಲಬ್ಧ್ವಾ ಧನಂ ಮೋಹಾದ್ದದತೋ ಯಜತಶ್ಚ ಹ ।
ಸಂಕ್ಲಿಷ್ಟಂ ಕರ್ಮಣಾ ದಾನಂ ನ ತಿಷ್ಠತಿ ದುರಾತ್ಮನಃ ॥ ೮೨ ॥

ನ್ಯಾಯಾಗತಾನಾಂ ದ್ರವ್ಯಾಣಾಂ ತೀರ್ಥೇ ಸಂಪ್ರತಿಪಾದನಮ್ ।
ಕಾಮಾನನಭಿಸಂಧಾಯ ಯಜತೇ ಚ ದದಾತಿ ಚ ॥ ೮೩ ॥

ಸ ದಾನಫಲಮಾಪ್ನೋತಿ ತಚ್ಚ ದಾನಂ ಸುಖೋದಯಮ್ ।
ದಾನೇನ ಭೋಗಾನಾಪ್ನೋತಿ ಸ್ವರ್ಗಂ ಸತ್ಯೇನ ಗಚ್ಛತಿ ॥ ೮೪ ॥

---

೮೦. ಹಾಗೆಯೇ ಧನದ ಲೋಭದಿಂದ ನಿರಂಕುಶನಾಗಿ ರಾಗ-ಮೋಹಾದಿಗಳಿಗೆ ಪರತಂತ್ರನಾಗಿ ತೀವ್ರವಾದ ಜಪವನ್ನು ಮಾಡಿ ತರುವಾಯ ಪವಿತ್ರತೆಗೋಸ್ಕರ ಲಬ್ಧವಾದ ಆ ಧನವನ್ನು ತ್ಯಾಗಮಾಡುವುದು ಸಾರ್ಥಕವಾಗುವುದಿಲ್ಲ.

೮೧. ಅಂತಹವನಿಂದ ಕೊಡಲ್ಪಟ್ಟ ದಾನಗಳು ನಿರರ್ಥಕಗಳಾಗುವುವು. ಮತ್ತು ಹಾಗೆ ಧರ್ಮದಲ್ಲಿ ಪ್ರವೃತ್ತನಾದವನು ನಿಜವಾಗಿ ದುರಾತ್ಮನೂ ಹಿಂಸಕನೂ ಆಗಿರುವನು.

೮೨. ಮೋಹದಿಂದ ಧನವನ್ನು ಆರ್ಜಿಸಿ ದಾನ, ಯಾಗಗಳನ್ನು ಆಚರಿಸುವ ಮಾನವನ ಕ್ಲೇಶಕರವಾದ ಕರ್ಮದಿಂದ ಸಾಧಿಸಿದ ದಾನವು ಆ ದುರಾತ್ಮನಾದ ಅಭಿಮಾನಿಗೆ ಶಾಶ್ವತವಾಗಿ ನಿಲ್ಲಲಾರದು.

೮೩. ನ್ಯಾಯದಿಂದ ಆರ್ಜಿಸಿದ ಧನವನ್ನು ಸತ್ಪಾತ್ರದಲ್ಲಿ ವಿನಿಯೋಗ ಮಾಡುವುದು ಉತ್ತಮವಾದ ದಾನವೆನಿಸುವುದು. ಆಗಲೂ ಫಲಾಕಾಂಕ್ಷೆಯನ್ನು ಇಟ್ಟುಕೊಳ್ಳದೆ ಯಾಗ-ದಾನಗಳನ್ನು ಆಚರಿಸಬೇಕು.

೮೪. ಅಂತಹ ಅಧಿಕಾರಿಯು ತಾನು ಮಾಡಿದ ದಾನದ ಫಲವನ್ನು ಅನುಭವಿಸುತ್ತಾನೆ. ಅವನ ದಾನ ಕರ್ಮವು ಸುಖಪರಿಣಾಮವನ್ನುಂಟುಮಾಡುವುದು, ದಾನ ಕರ್ಮದಿಂದ ಉತ್ತಮ ಭೋಗಗಳನ್ನು ಹೊಂದುತ್ತಾನೆ. ಸತ್ಯ ವಚನದಿಂದ ಸ್ವರ್ಗ ಸುಖವನ್ನು ಅನುಭವಿಸುತ್ತಾನೆ.

8

ತಪಸಾ ತು ಸುತಪ್ತೇನ ಲೋಕಾನ್ವಿಷ್ಟಭ್ಯ ತಿಷ್ಠತಿ ।
ಸತ್ಯಂ ತು ತಪಸಃ ಶ್ರೇಯಸ್ತಸ್ಮಾಜ್ಜ್ಞಾನಂ ಗುರು ಸ್ಮೃತಮ್ ॥ ೮೫ ॥

ಶ್ರೂಯಂತೇ ಹಿ ತಪಸ್ಸಿದ್ಧಾಃ ಕ್ಷತ್ರೋಪೇತಾ ದ್ವಿಜಾತಯಃ ।
ವಿಶ್ವಾಮಿತ್ರೋ ನರಪತಿರ್ಮಾಂಧಾತಾ ಸಂಕೃತಿಃ ಕಪಿಃ ॥ ೮೬ ॥

ಕಾಶ್ಯಶ್ಚ ಪುರುಕುತ್ಸಶ್ಚ ಶಲೋ ಗೃತ್ಸಮದಃ ಪ್ರಭುಃ ।
ಆರ್ಷ್ಟಿಷೇಣೋಽಜಮೀಢಶ್ಚ ಭಾರ್ಗವ್ಯೋಮಸ್ತಥೈವ ಚ ॥ ೮೭ ॥

ಕಕ್ಷೀವಾಂಶ್ಚೈವೌಶಿಜಶ್ಚ ನೃಪಶ್ಚ ಶಿಶಿರಸ್ತಥಾ ।
ರಥೀತರಃ ಶೌನಕಶ್ಚ ವಿಷ್ಣುವೃದ್ಧಾದಯೋ ನೃಪಾಃ ॥ ೮೮ ॥

ಕ್ಷತ್ರೋಪೇತಾಃ ಸ್ಮೃತಾ ಹ್ಯೇತೇ ತಪಸಾ ಋಷಿತಾಂ ಗತಾಃ ।
ಏತೇ ರಾಜರ್ಷಯಃ ಸರ್ವೇ ಸಿದ್ಧಿಂ ತು ಮಹತೀಂ ಗತಾಃ ॥ ೮೯ ॥

---

೮೫. ಕಠಿನವಾದ ತಪಸ್ಸಿನಿಂದ ಲೋಕಗಳನ್ನು ವಶೀಕರಿಸಿ ನಿಲ್ಲುತ್ತಾನೆ. ಅಂತಹ ತಪಸ್ಸಿಗಿಂತಲೂ ಸತ್ಯವಚನ ಧರ್ಮವು ಉತ್ತಮವು. ಅದಕ್ಕಿಂತಲೂ ಜ್ಞಾನವು ಅತಿಶಯುವಾದುದೆಂದು ಸ್ಮರಿಸಲ್ಪಟ್ಟಿರುವುದು.

೮೬. ವಿಶ್ವಾಮಿತ್ರ, ಮಾಂಧಾತಾ, ಸಂಕೃತಿ, ಮತ್ತು ಕಪಿ ಮುಂತಾದ ರಾಜರು ಕ್ಷತ್ರಿಯ ಜಾತಿಯಿಂದ ಕೂಡಿ ಹುಟ್ಟಿ ತಪಸ್ಸಿದ್ಧಿಯನ್ನು ಹೊಂದಿ ಅದರ ಮಹಿಮೆಯಿಂದ ದ್ವಿಜರಾದರೆಂಬುದು ಕೇಳಲ್ಪಡುತ್ತಿದೆಯಷ್ಟೆ!

೮೭. ಹಾಗೆಯೆ ಕಾಶ್ಯ, ಪುರುಕುತ್ಸ, ಶಲ, ಗೃತ್ಸಮದ, ಆರ್ಷ್ಟಿಷೇಣ, ಅಜಮೀಢ ಮತ್ತು ಭಾರ್ಗವ್ಯೋಮ ಮುಂತಾದ ಸರ್ವ ಶಕ್ತರಾದ ಅನೇಕ ರಾಜರು ತಪಸ್ಸಿದ್ಧಿಯನ್ನು ಹೊಂದಿದವರಲ್ಲಿ ಗಣ್ಯರಾಗಿರುವರು.

೮೮. ಮತ್ತು ಕಕ್ಷೀವಾನ್, ಔಶಿಜ, ಶಿಶಿರನೃಪ, ರಥೀತರ, ಶೌನಕ ಹಾಗು ವಿಷ್ಣುವೃದ್ಧ ಮುಂತಾದ ಹಲವಾರು ಮಂದಿ ರಾಜರು ಅಪಾರ ತಪಸ್ಸಿದ್ಧಿಯನ್ನು ಹೊಂದಿ ಪ್ರಖ್ಯಾತರಾಗಿರುವರು.

೮೯. ಇವರೆಲ್ಲರೂ ಕ್ಷತ್ರಜಾತಿಯಲ್ಲಿ ಜನ್ಮವೆತ್ತಿ ತಪೋಬಲದಿಂದ ಋಷಿತ್ವವನ್ನು ಹೊಂದಿರುವರೆಂದು ಸ್ಮರಿಸಲ್ಪಟ್ಟಿರುವರು. ಇವರೆಲ್ಲರೂ ರಾಜರ್ಷಿ ಎಂದು ಕರೆಯಲ್ಪಟ್ಟವರಾಗಿ ಹೆಚ್ಚಾದ ತಪಸ್ಸಿದ್ಧಿಯನ್ನು ಹೊಂದಿರುವರು.

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಆಯೋರ್ವಂಶಂ ಮಹಾತ್ಮನಃ ॥ ೯೦ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ**
**ಷಟ್ ಷಷ್ಟಿತಮೋಽಧ್ಯಾಯಃ**

---

೯೦. ಇನ್ನು ಮುಂದೆ ಮಹಾತ್ಮನಾದ ಆಯುರಾಜನ ವಂಶಾವಳಿಯನ್ನು ಉಪದೇಶಮಾಡುತ್ತೇನೆ. ಸಾವಧಾನರಾಗಿ ಶ್ರವಣ ಮಾಡಿರಿ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತಾರನೆಯ ಅಧ್ಯಾಯವು ಸಮಾಪ್ತವು.

---

# ಸಪ್ತಷಷ್ಟಿತಮೋಽಧ್ಯಾಯಃ

ಆಯೋಃ ಪುತ್ರಾ ಮಹಾತ್ಮಾನಃ ಪಂಚೈವಾಸನ್ಮಹಾಬಲಾಃ ।
ಸ್ವರ್ಭಾನುತನಯಾಯಾಂ ತೇ ಪ್ರಭಾಯಾಂ ಜಜ್ಞಿರೇ ನೃಪಾಃ ॥ ೧ ॥

ನಹುಷಃ ಪ್ರಥಮಸ್ತೇಷಾಂ ಕ್ಷತ್ರವೃದ್ಧಸ್ತತಃ ಸ್ಮೃತಃ ।
ರಂಭೋ ರಜಿರನೇನಾಶ್ಚ ತ್ರಿಷು ಲೋಕೇಷು ವಿಶ್ರುತಾಃ ॥ ೨ ॥

ಕ್ಷತ್ರವೃದ್ಧಾತ್ಮಜಶ್ಚೈವ ಸುನಹೋತ್ರೋ ಮಹಾಯಶಾಃ ।
ಸುನಹೋತ್ರಸ್ಯ ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ॥ ೩ ॥

ಕಾಶಃ ಶಲಶ್ಚ ದ್ವಾವೇತೌ ತಥಾ ಗೃತ್ಸಮದಃ ಪ್ರಭುಃ ।
ಪುತ್ರೋ ಗೃತ್ಸಮದಸ್ಯಾಪಿ ಶುನಕೋ ಯಸ್ಯ ಶೌನಕಃ ॥ ೪ ॥

---

೧. ಆಯು ಎಂಬುವನಿಗೆ ಮಹಾ ಬಲಿಷ್ಠರೂ ಮಹಾತ್ಮರೂ ಆದ ಐದು ಮಂದಿ ಪುತ್ರರಿದ್ದರು, ಆ ಐದು ಮಂದಿ ರಾಜರು ಸ್ವರ್ಭಾನು ಎಂಬುವನ ಪುತ್ರಿಯಾದ ಪ್ರಭಾ ಎಂಬಾಕೆಯಲ್ಲಿ ಜನಿಸಿರುವರು.

೨. ಇವರಲ್ಲಿ ನಹುಷನು ಮೊದಲನೆಯವನು, ಕ್ಷತ್ರವೃದ್ಧನು ಎರಡನೆಯವನೆಂದು ಸ್ಮರಿಸಲ್ಪಟ್ಟಿರುವನು, ತರುವಾಯ ರಂಭ, ರಜಿ ಮತ್ತು ಅನೇನಾ ಎಂಬ ಮೂರು ಮಂದಿಯು ಮೂರು ಲೋಕಗಳಲ್ಲಿ ಪ್ರಖ್ಯಾತರಾಗಿರುವರು.

೩. ಇವರಲ್ಲಿ ಕ್ಷತ್ರವೃದ್ಧ ಎಂಬುವನಿಗೆ ಮಹಾಯಶಸ್ವಿಯಾದ ಸುನಹೋತ್ರ ಎಂಬ ಪುತ್ರನಿದ್ದನು, ಸುನಹೋತ್ರನಿಗೆ ಅತ್ಯಂತ ಧಾರ್ಮಿಕರಾದ ಮೂರು ಮಂದಿ ಪುತ್ರರು ಇದ್ದರು.

೪. ಸರ್ವ ದಕ್ಷರಾದ ಆ ಮೂರು ಮಂದಿ ಪುತ್ರರು ಕಾಶ, ಶಲ ಮತ್ತು ಗೃತ್ಸಮದ ಎಂಬ ನಾಮಾಂಕಿತರಾಗಿದ್ದರು, ಗೃತ್ಸಮದನಿಗೆ ಶುನಕನೆಂಬ ಪುತ್ರನಿದ್ದನು. ಅವನಿಗೆ ಶೌನಕನೆಂಬ ಪುತ್ರನಿದ್ದನು.

ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ವೈಶ್ಯಾಃ ಶೂದ್ರಾಸ್ತಥೈವ ಚ ।
ಏತಸ್ಯ ವಂಶೇ ಸಂಭೂತಾ ವಿಚಿತ್ರೈಃ ಕರ್ಮಭಿರ್ದ್ವಿಜಾಃ ॥ ೫ ॥

ಶಲಾತ್ಮಜೋ ಹ್ಯಾರ್ಷ್ಟಿಷೇಣಃ ಶಿಶಿರಸ್ತಸ್ಯ ಚಾತ್ಮಜಃ ।
ಶೌನಕಾಶ್ಚಾರ್ಷ್ಟಿಷೇಣಾಶ್ಚ ಕ್ಷತ್ರೋಪೇತಾ ದ್ವಿಜಾತಯಃ ॥ ೬ ॥

ಕಾಶ್ಯಸ್ಯ ಕಾಶಿಪೋ ರಾಜಾ ಪುತ್ರೋ ದೀರ್ಘತಪಾಸ್ತಥಾ ।
ಧನ್ವಶ್ಚ ದೀರ್ಘತಪಸೋ ವಿದ್ವಾನ್ ಧನ್ವಂತರಿಸ್ತತಃ ॥ ೭ ॥

ತಪಸೋಽಂತೇ ಮಹಾತೇಜಾ ಜಾತೋ ವೃದ್ಧಸ್ಯ ಧೀಮತಃ ।
ಅಥೈನಮೃಷಯಃ ಪ್ರೋಚುಃ ಸೂತಂ ವಾಕ್ಯಮಿದಂ ಪುನಃ ॥ ೮ ॥

ಋಷಯಃ ಊಚುಃ :—
ಕಶ್ಚ ಧನ್ವಂತರಿರ್ದೇವೋ ಮಾನುಷೇಷ್ವಿಹ ಜಜ್ಞಿವಾನ್ ।
ಏತದ್ವೇದಿತುಮಿಚ್ಛಾಮಸ್ತನ್ನೋ ಬ್ರೂಹಿ ಪರಂತಪ ॥ ೯ ॥

---

೫. ದ್ವಿಜರೆ! ಆ ಶೌನಕ ಮುನಿಯ ವಂಶದಲ್ಲಿ ವಿಚಿತ್ರವಾದ ಕರ್ಮಗಳಿಂದ ಕೂಡಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಅನೇಕ ವ್ಯಕ್ತಿಗಳು ಸಂಭವಿಸಿರುವರು.

೬. ಶಲ ಎಂಬುವನಿಗೆ ಆರ್ಷ್ಟಿಷೇಣ ಎಂಬ ಪುತ್ರನೂ, ಅವನಿಗೆ ಶಿಶಿರ ಎಂಬ ಪುತ್ರನೂ ಜನಿಸಿದರು. ಶೌನಕ, ಮತ್ತು ಆರ್ಷ್ಟಿಷೇಣ ವಂಶದಲ್ಲಿ ಹುಟ್ಟಿದವರು ಕ್ಷತ್ರಜಾತಿಯಿಂದ ದ್ವಿಜರಾದ ಮಹಾತ್ಮರಾಗಿರುವರು.

೭. ಕಾಶ್ಯ ಎಂಬುವನಿಗೆ ಕಾಶಿರಾಜ್ಯವನ್ನು ಆಳುವ ರಾಜನಾದ ದೀರ್ಘತಪ ಎಂಬ ಪುತ್ರನಿದ್ದನು. ದೀರ್ಘತಪಸಿಗೆ ಧನ್ವನೆಂಬ ಪುತ್ರನಿದ್ದನು. ಧನ್ವನಿಂದ ಧನ್ವಂತರಿಯು ಪುತ್ರನಾಗಿ ಜನಿಸಿದನು.

೮. ಧನ್ವ ಎಂಬ ವೃದ್ಧನೂ ಜ್ಞಾನಿಯೂ ಆದ ಪಿತನಿಂದ ತಪೋನುಷ್ಠಾನದ ಅಂತದಲ್ಲಿ ಮಹಾ ತೇಜಸ್ವಿಯಾದ ಧನ್ವಂತರಿಯು ಹುಟ್ಟಿರುವನು. ಇದನ್ನು ಕೇಳಿದ ಮುನಿಗಳು ಸೂತಮುನಿಯನ್ನು ಕುರಿತು ಮತ್ತೆ ಈ ಪ್ರಶ್ನವಚನಗಳನ್ನು ಆಡಿದರು.

೯. ಋಷಿಗಳು ಇಂತೆಂದರು: —ಮಾನವ ಕುಲದಲ್ಲಿ ಧನ್ವಂತರಿ ರೂಪದಿಂದ ಜನ್ಮವೆತ್ತಿದ್ದ ದೇವನು ಯಾರು? ಅಂತಃ ಶತ್ರುಗಳನ್ನು ನಿಗ್ರಹಿಸುವ ಮಹಾ ತಪಸ್ವಿಯೆ! ಇದನ್ನು ತಿಳಿಯಲು ಕುತೂಹಲವುಳ್ಳವರಾಗಿದ್ದೇವೆ, ಅದನ್ನು ನಮಗೆ ಹೇಳು.

ಸೂತ ಉವಾಚ :—

ಧನ್ವಂತರೇಃ ಸಂಭವೋಽಯಂ ಶ್ರೂಯತಾಮಿಹ ವೈ ದ್ವಿಜಾಃ ।
ಸ ಸಂಭೂತಃ ಸಮುದ್ರಾಂತೇ ಮಥ್ಯಮಾನೇಽಮೃತೇ ಪುರಾ ॥೧೦ ॥

ಉತ್ಪನ್ನಃ ಕಲಶಾತ್ ಪೂರ್ವಂ ಸರ್ವತಶ್ಚ ಶ್ರಿಯಾ ವೃತಃ ।
ಸದ್ಯಃ ಸಂಸಿದ್ಧಕಾರ್ಯಂ ತಂ ದೃಷ್ಟ್ವಾ ವಿಷ್ಣುರವಸ್ಥಿತಃ ॥ ೧೧ ॥

ಅಬ್ಜಸ್ತ್ವಮಿತಿ ಹೋವಾಚ ತಸ್ಮಾದಬ್ಜಸ್ತು ಸ ಸ್ಮೃತಃ ।
ಅಬ್ಜಃ ಪ್ರೋವಾಚ ವಿಷ್ಣುಂ ತಂ ತನಯೋಽಸ್ಮಿ ತವ ಪ್ರಭೋ ॥ ೧೨ ॥

ವಿಧತ್ಸ್ವ ಭಾಗಂ ಸ್ಥಾನಂ ಚ ಮಮ ಲೋಕೇ ಸುರೋತ್ತಮ ।
ಏವಮುಕ್ತಃ ಸ ದೃಷ್ಟ್ವಾ ತು ತಥ್ಯಂ ಪ್ರೋವಾಚ ಸ ಪ್ರಭುಃ ॥ ೧೩ ॥

ಕೃತೋ ಯಜ್ಞವಿಭಾಗಸ್ತು ದೈತೇಯೈರ್ಹಿ ಸುರೈಸ್ತಥಾ ।
ವೇದೇಷು ವಿಧಿಯುಕ್ತಂ ಚ ವಿಧಿಹೋತ್ರಂ ಮಹರ್ಷಿಭಿಃ ॥ ೧೪ ॥

---

೧೦. ಸೂತಮುನಿಯು ಇಂತೆಂದನು :–ದ್ವಿಜೋತ್ತಮರೆ! ಧನ್ವಂತರಿ ದೇವನ ಜನ್ಮವೃತ್ತಾಂತವು ನಿಮ್ಮಿಂದ ಕೇಳಲ್ಪಡಲಿ, ಪೂರ್ವದಲ್ಲಿ ಸಮುದ್ರದಲ್ಲಿ ಅಮೃತಮಥನವು ನಡೆದ ಪ್ರಸಂಗದಲ್ಲಿ ಧನ್ವಂತರಿಯು ಜನಿಸಿದನು

೧೧. ಆ ಧನ್ವಂತರಿಯು ಮೊದಲು ಕಲಶದಿಂದ ಜನಿಸಿ ಸುತ್ತಲೂ ಕಾಂತಿ ಮಂಡಲದಿಂದ ಸುತ್ತುವರಿಯಲ್ಪಟ್ಟವನಾದನು. ಮತ್ತು ಕೂಡಲೆ ಸಿದ್ಧಿಹೊಂದಿರುವ ಕಾರ್ಯದಿಂದ ಕೂಡಿದ ಧನ್ವಂತರಿಯನ್ನು ನೋಡಿ ವಿಷ್ಣುಪರಮಾತ್ಮನು ಅಲ್ಲಿಗೆ ಬಂದನು.

೧೨. ಆಗ ಧನ್ವಂತರಿಯನ್ನು ನೋಡಿ ನೀರಿನಿಂದ ಹುಟ್ಟಿರುವುದರಿಂದ ನೀನು ಅಬ್ಜನಾಗಿ ಇದ್ದೀ ಹೀಗೆಂದು ಹೇಳಿದನು. ಆದ್ದರಿಂದ ಧನ್ವಂತರಿಯು ಅಬ್ಜನೆಂದು ಸ್ಮರಿಸಲ್ಪಟ್ಟಿರುವನು. ಆ ಅಬ್ಜನು ವಿಷ್ಣುವನ್ನು ಕುರಿತು ಸ್ವಾಮಿಯೆ! ನಾನು ನಿನ್ನ ಪುತ್ರನಾಗಿರುವೆನು ಎಂದು ಹೇಳಿದನು.

೧೩. ದೇವೋತ್ತಮನೆ! ನನಗೆ ಲೋಕದಲ್ಲಿ ಸ್ಥಾನವನ್ನೂ ಹವಿರ್ಭಾಗವನ್ನೂ ಕಲ್ಪಿಸು. ಹೀಗೆಂದು ಕೇಳಲ್ಪಟ್ಟ ವಿಷ್ಣು ಪರಮಾತ್ಮನು ಅವನನ್ನು ನೋಡುತ್ತ ಸತ್ಯಾಂಶ ಗರ್ಭಿತವಾದ ವಚನವನ್ನು ಹೇಳಿದನು.

೧೪. ನಿನಗೆ ದೈತ್ಯರಿಂದಲೂ ದೇವತೆಗಳಿಂದಲೂ ಯಜ್ಞದಲ್ಲಿ ಹವಿರ್ಭಾಗವು ನಿರ್ಮಿಸಲ್ಪಟ್ಟಿರುವುದು. ಮಹರ್ಷಿಗಳಿಂದ ವೇದಗಳಲ್ಲಿ ಕಂಡ ವಿಧಾನದಂತೆ ನಿನಗೆ ಹೋಮವಿಶೇಷವು ವಿಧಿಸಲ್ಪಟ್ಟಿಲ್ಲ.

ನ ಶಕ್ಯಮಿಹ ಹೋಮಂ ವೈ ತುಭ್ಯಂ ಕರ್ತುಂ ಕದಾಚನ ।
ಅರ್ವಾಕ್ ಸೂತೋಽಸಿ ಹೇ ದೇವ ತವ ಮಂತ್ರೋ ನ ವೈ ಪ್ರಭೋ
॥ ೧೫ ॥

ದ್ವಿತೀಯಾಯಾಂ ತು ಸಂಭೂತ್ಯಾಂ ಲೋಕೇ ಖ್ಯಾತಿಂ ಗಮಿಷ್ಯಸಿ ।
ಅಣಿಮಾದಿಯುತಾಂ ಸಿದ್ಧಿಂ ಗತಸ್ತತ್ರ ಭವಿಷ್ಯಸಿ ॥ ೧೬ ॥

ಏತೇನೈವ ಶರೀರೇಣ ದೇವತ್ವಂ ಪ್ರಾಪ್ಸ್ಯಸಿ ಪ್ರಭೋ ।
ಚಾತುರ್ಮಂತ್ರೈರ್ಘೃತೈರ್ಗವ್ಯೈರ್ಯಕ್ಷ್ಯಂತೇ ತ್ವಾಂ ದ್ವಿಜಾತಯಃ
॥ ೧೭ ॥

ಅಥವಾ ತ್ವಂ ಪುನಶ್ಚೈವ ಹ್ಯಾಯುರ್ವೇದಂ ವಿಧಾಸ್ಯಸಿ ।
ಅವಶ್ಯಭಾವೀ ಹ್ಯರ್ಥೋಽಯಂ ಪ್ರಾಗ್ದೃಷ್ಟಸ್ತ್ವಬ್ಜಯೋನಿನಾ ॥ ೧೮ ॥

ದ್ವಿತೀಯಂ ದ್ವಾಪರಂ ಪ್ರಾಪ್ಯ ಭವಿತಾ ತ್ವಂ ನ ಸಂಶಯಃ ।
ತಸ್ಮಾತ್ತಸ್ಮೈ ವರಂ ದತ್ವಾ ವಿಷ್ಣುರಂತರ್ದಧೇ ತತಃ ॥ ೧೯ ॥

---

೧೫. ಆದುದರಿಂದ ನಿನಗೆ ಯಾವಾಗಲೂ ಹೋಮವನ್ನು ಮಾಡುವುದು ಶಕ್ಯವಾಗಿಲ್ಲ. ಎಲೆ ದೇವನೆ! ನೀನು ಈಚೆಗೆ ಜನ್ಮವನ್ನೆತ್ತಿರುತ್ತೀ. ಪ್ರಭುವೆ! ನಿನ್ನ ಸ್ತುತಿಗರ್ಭಿತವಾದ ಮಂತ್ರವು ಯಾವುದೂ ಇಲ್ಲ.

೧೬. ನೀನು ನಿನ್ನ ಎರಡನೆಯ ಅವತಾರದಲ್ಲಿ ಮಹತ್ತಾದ ಖ್ಯಾತಿಯನ್ನು ಲೋಕದಲ್ಲಿ ಗಳಿಸುತ್ತೀ, ಅಲ್ಲಿ ಅಣಿಮಾದಿಗಳಿಂದ ಕೂಡಿದ ಅಷ್ಟೈಶ್ವರ್ಯ ಸಿದ್ಧಿಯನ್ನು ಹೊಂದುವವನಾಗುತ್ತೀ.

೧೭. ಮತ್ತು ಪ್ರಭುವೆ! ಈ ಶರೀರದಿಂದಲೆ ನೀನು ದೇವತಾರೂಪವನ್ನು ಹೊಂದುತ್ತೀ, ಆಗ ದ್ವಿಜರು ನಿನ್ನನ್ನು ಉದ್ದೇಶಿಸಿ ನಾಲ್ಕು ಮಂತ್ರಗಳಿಂದ ಸಂಸ್ಕೃತವಾದ ಗೋವಿನ ಆಜ್ಯಾಹುತಿಗಳಿಂದ ಹೋಮಮಾಡುತ್ತಾರೆ.

೧೮. ಹಾಗು ನೀನು ಮತ್ತೆ ಆಯುರ್ವೇದ ಗ್ರಂಥವನ್ನು ರಚಿಸುವವನಾಗುತ್ತೀ. ಹೀಗೆ ಅವಶ್ಯವಾಗಿ ಭವಿತವ್ಯವಾದ ಈ ವಿಷಯವು ಬ್ರಹ್ಮದೇವನಿಂದ ಮೊದಲು ನಿರೀಕ್ಷಿಸಲ್ಪಟ್ಟಿರುವುದು.

೧೯. ಎರಡನೆಯ ಪರ್ಯಾಯದ ದ್ವಾಪರ ಯುಗದಲ್ಲಿ ನೀನು ಸಂಭವಿಸುತ್ತೀ, ಇದರಲ್ಲಿ ಸಂಶಯವಿಲ್ಲ. ಆದುದರಿಂದ ಆ ಧನ್ವಂತರಿಗೆ ವಿಷ್ಣು ಪರಮಾತ್ಮನು ಈ ವಿಧವಾದ ವರಗಳನ್ನು ನೀಡಿ ತರುವಾಯ ಅದೃಶ್ಯನಾದನು.

ದ್ವಿತೀಯೇ ದ್ವಾಪರೇ ಪ್ರಾಪ್ತೇ ಸೌನಹೋತ್ರಃ ಸ ಕಾಶಿರಾಟ್ ।
ಪುತ್ರಕಾಮಸ್ತಪಸ್ತೇಪೇ ನೃಪೋ ದೀರ್ಘತಪಾಸ್ತಥಾ ॥ ೨೦ ॥

ಅಬ್ಜಂ ದೇವಂ ತು ಪುತ್ರಾರ್ಥೇ ಹ್ಯಾರಿರಾಧಯಿಷುರ್ನೃಪಃ ।
ವರೇಣ ಛಂದಯಾಮಾಸ ತತೋ ಧನ್ವಂತರಿರ್ನೃಪಮ್ ॥ ೨೧ ॥

ನೃಪ ಉವಾಚ :—

ಭಗವನ್ ಯದಿ ತುಷ್ಟಸ್ತ್ವಂ ಪುತ್ರೋ ಮೇ ಗತಿಮಾನ್ ಭವೇಃ ।
ತಥೇತಿ ಸಮನುಜ್ಞಾಯ ತತ್ರೈವಾಂತರಧಾತ್ ಪ್ರಭುಃ ॥ ೨೨ ॥

ತಸ್ಯ ಗೇಹೇ ಸಮುತ್ಪನ್ನೋ ದೇವೋ ಧನ್ವಂತರಿಸ್ತದಾ ।
ಕಾಶಿರಾಜೋ ಮಹಾರಾಜಃ ಸರ್ವರೋಗಪ್ರಣಾಶನಃ ॥ ೨೩ ॥

ಆಯುರ್ವೇದಂ ಭರದ್ವಾಜಾತ್ ಪ್ರಾಪ್ಯೇಹ ಸಭಿಷಕ್ಕ್ರಿಯಮ್ ।
ತಮಷ್ಟಧಾ ಪುನರ್ವ್ಯಸ್ಯ ಶಿಷ್ಯೇಭ್ಯಃ ಪ್ರತ್ಯಪಾದಯತ್ ॥ ೨೪ ॥

---

೨೦. ಹೀಗೆ ಎರಡನೆಯ ದ್ವಾಪರಯುಗವು ಪ್ರಾಪ್ತವಾಗಲು ಸುನಹೋತ್ರ ಪುತ್ರನೂ ಕಾಶಿ ರಾಜನೂ ಆದ ದೀರ್ಘತಪ ಎಂಬ ರಾಜನು ಪುತ್ರಕಾಮನೆಯಿಂದ ತಪವನ್ನು ಆಚರಿಸಿದನು.

೨೧. ಆ ದೀರ್ಘತಪ ರಾಜನು ಪುತ್ರಲಾಭಕ್ಕೋಸ್ಕರ ಅಬ್ಜ ದೇವನನ್ನು ಆರಾಧಿಸಲು ಇಷ್ಟವುಳ್ಳವನಾದನು. ಆಗ ಧನ್ವಂತರಿಯು ಆ ರಾಜನನ್ನು ಇಷ್ಟವಾದ ವರ ಪ್ರದಾನದಿಂದ ಸಂತೋಷಗೊಳಿಸಿದನು.

೨೨. ರಾಜನು ಇಂತೆಂದನು :—ಪೂಜ್ಯನೆ ! ನೀನು ನನ್ನಲ್ಲಿ ಸಂತೋಷಗೊಂಡು ಅನುಗ್ರಹ ಮಾಡುವುದಾದರೆ ನೀನು ನನಗೆ ಗತಿಪ್ರದನಾದ ಪುತ್ರನಾಗಿ ಜನಿಸು, ಹೀಗೆಂಬ ವರವನ್ನು ರಾಜನು ಕೇಳಲು ಪ್ರಭುವಾದ ಧನ್ವಂತರಿ ದೇವನು ಹಾಗೆ ಆಗಲೆಂದು ಹೇಳಿ ಅಲ್ಲಿಯೆ ಅಂತರ್ಧಾನ ಹೊಂದಿದನು.

೨೩. ಆಗ ಆ ರಾಜನ ಗೃಹದಲ್ಲಿ ಧನ್ವಂತರಿ ದೇವನು ಅವತರಿಸಿದನು, ಮತ್ತು ಕ್ರಮವಾಗಿ ಅವನು ಮಹಾರಾಜ ಪಟ್ಟಕ್ಕೆ ಬಂದು ಕಾಶಿ ನಗರದ ರಾಜನಾದನು. ಪ್ರಜೆಗಳ ಸಕಲ ರೋಗಗಳನ್ನು ನಿವಾರಿಸುವವನಾಗಿದ್ದನು.

೨೪. ಆ ರಾಜನು ಭರದ್ವಾಜ ಮುನಿಯಿಂದ ಚಿಕಿತ್ಸಾಕ್ರಮದಿಂದ ಸಹಿತವಾದ ಆಯುರ್ವೇದವನ್ನು ಹೊಂದಿದನು. ಮತ್ತು ಆ ಆಯುರ್ವೇದವನ್ನು ಮತ್ತೆ ಎಂಟು ವಿಧವಾಗಿ ವಿಂಗಡಿಸಿ ಶಿಷ್ಯರಿಗೆ ಅವುಗಳನ್ನು ಪ್ರವಚನಮಾಡಿದನು.

ಧನ್ವಂತರಿಸುತಶ್ಚಾಪಿ ಕೇತುಮಾನಿತಿ ವಿಶ್ರುತಃ ।
ಅಥ ಕೇತುಮತಃ ಪುತ್ರೋ ಜಜ್ಞೇ ಭೀಮರಥೋ ನೃಪಃ ॥ ೨೫ ॥

ಪುತ್ರೋ ಭೀಮರಥಸ್ಯಾಪಿ ಜಾತೋ ಧೀಮಾನ್ ಪ್ರಜೇಶ್ವರಃ ।
ದಿವೋದಾಸ ಇತಿ ಖ್ಯಾತೋ ವಾರಾಣಸ್ಯಧಿಪೋಽಭವತ್ ॥ ೨೬ ॥

ಏತಸ್ಮಿನ್ನೇವ ಕಾಲೇ ತು ಪುರೀಂ ವಾರಾಣಸೀಂ ಪುರಾ ।
ಶೂನ್ಯಾಂ ನಿವೇಶಯಾಮಾಸ ಕ್ಷೇಮಕೋ ನಾಮ ರಾಕ್ಷಸಃ ॥ ೨೭ ॥

ಶಪ್ತಾ ಹಿ ಸಾ ಪುರೀ ಪೂರ್ವಂ ನಿಕುಂಭೇನ ಮಹಾತ್ಮನಾ ।
ಶೂನ್ಯಾ ವರ್ಷಸಹಸ್ರಂ ವೈ ಭವಿತ್ರೀತಿ ಪುನಃ ಪುನಃ ॥ ೨೮ ॥

ತಸ್ಯಾಂ ತು ಶಪ್ತಮಾತ್ರಾಯಾಂ ದಿವೋದಾಸಃ ಪ್ರಜೇಶ್ವರಃ ।
ವಿಷಯಾಂತೇ ಪುರೀಂ ರಮ್ಯಾಂ ಗೋಮತ್ಯಾಂ ಸನ್ನ್ಯವೇಶಯತ್ ॥ ೨೯ ॥

---

೨೫. ಆ ಧನ್ವಂತರಿಗೆ ಕೇತುಮಾನ್ ಎಂಬ ಪ್ರಖ್ಯಾತನಾದ ಪುತ್ರನಿದ್ದನು. ಆ ಕೇತುಮಂತನೆಂಬುವನಿಗೆ ಭೀಮರಥನೆಂಬ ರಾಜನು ಪುತ್ರನಾಗಿ ಜನಿಸಿದನು.

೨೬. ಆ ಭೀಮರಥನಿಗೆ ಜ್ಞಾನವಂತನೂ ಪ್ರಜಾಪ್ರಭುವೂ ಮತ್ತು ದಿವೋದಾಸ ಎಂಬ ನಾಮಾಂಕನದಿಂದ ಪ್ರಖ್ಯಾತನೂ ಆದ ಪುತ್ರನು ಜನಿಸಿ ಅವನು ಕಾಶಿ ರಾಜ್ಯಕ್ಕೆ ಅಧಿಪತಿಯಾದನು.

೨೭. ಪೂರ್ವದಲ್ಲಿ ಇದೇ ಸಮಯದಲ್ಲಿ ಕ್ಷೇಮಕ ಎಂಬ ಒಬ್ಬ ರಾಕ್ಷಸನು ಆ ವಾರಾಣಸೀ ನಗರಿಯನ್ನು ಸರ್ವ ಶೂನ್ಯವನ್ನಾಗಿ ಮಾಡಿ ಇರಿಸಿದನು.

೨೮. ಪೂರ್ವದಲ್ಲಿ ಮಹಾತ್ಮನಾದ ನಿಕುಂಭನಿಂದ ಒಂದು ಸಹಸ್ರ ಸಂವತ್ಸರಗಳ ವರೆಗೆ ವಾರಣಾಸಿಯು ಮತ್ತೆ ಮತ್ತೆ ಶೂನ್ಯವಾಗಿರುವುದು ಎಂದು ಆ ನಗರಿಯು ಶಪಿಸಲ್ಪಟ್ಟಿರುವುದು.

೨೯. ಹೀಗೆ ಆ ನಗರಿಯು ಶಪಿಸಲ್ಪಟ್ಟ ಕೂಡಲೆ ಪ್ರಜಾ ರಕ್ಷಕನಾದ ದಿವೋದಾಸ ರಾಜನು ಆ ರಾಜ್ಯದ ಸೀಮೆಯಲ್ಲಿ ಗೋಮತೀ ತೀರದಲ್ಲಿ ರಮ್ಯವಾದ ನಗರವನ್ನು ಸ್ಥಾಪಿಸಿದನು.

ಋಷಯ ಊಚುಃ :—

ವಾರಾಣಸೀಂ ಕಿಮರ್ಥಂ ತಾಂ ನಿಕುಂಭಃ ಶಪ್ತವಾನ್ ಪುರಾ ।
ನಿಕುಂಭಶ್ಚಾಪಿ ಧರ್ಮಾತ್ಮಾ ಸಿದ್ಧಕ್ಷೇತ್ರಂ ಶಶಾಪ ಯಃ ॥ ೩೦ ॥

ಸೂತ ಉವಾಚ :—

ದಿವೋದಾಸಸ್ತು ರಾಜರ್ಷಿರ್ನಗರೀಂ ಪ್ರಾಪ್ಯ ಪಾರ್ಥಿವಃ ।
ವಸತೇ ಸ ಮಹಾತೇಜಾಃ ಸ್ಫೀತಾಯಾಂ ವೈ ನರಾಧಿಪಃ ॥ ೩೧ ॥

ಏತಸ್ಮಿನ್ನೇವ ಕಾಲೇ ತು ಕೃತದಾರೋ ಮಹೇಶ್ವರಃ ।
ದೇವ್ಯಾಃ ಸ ಪ್ರಿಯಕಾಮಸ್ತು ವಸನ್ ವೈ ಶ್ವಶುರಾಂತಿಕೇ ॥ ೩೨ ॥

ದೇವಾಜ್ಞಯಾ ಪಾರಿಷದಾ ವಿಶ್ವರೂಪಾಸ್ತಪೋಧನಾಃ ।
ಪೂರ್ವೋಕ್ತರೂಪಸಂವೇಷೈಸ್ತೋಷಯಂತಿ ಮಹೇಶ್ವರೀಮ್ ॥ ೩೩ ॥

ಹೃಷ್ಯತೇ ತೈರ್ಮಹಾದೇವೋ ಮೇನಾ ನೈವ ತು ತುಷ್ಯತಿ ।
ಜುಗುಪ್ಸತೇ ಸಾ ನಿತ್ಯಂ ವೈ ದೇವಂ ದೇವೀಂ ತಥೈವ ಚ ॥ ೩೪ ॥

---

೩೦. ಋಷಿಗಳು ಈ ರೀತಿಯಾಗಿ ಪ್ರಶ್ನಿಸಿದರು :—ಪೂರ್ವದಲ್ಲಿ ನಿಕುಂಭನು ಆ ವಾರಣಸಿಯನ್ನು ಏಕೆ ಶಪಿಸಿದನು? ಸಿದ್ಧಿ ಪ್ರದವಾದ ಆ ಕ್ಷೇತ್ರವನ್ನು ಶಪಿಸಿದ ಧರ್ಮಾತ್ಮನಾದ ನಿಕುಂಭನು ಯಾರು?

೩೧. ಸೂತ ಮುನಿಯು ಉತ್ತರವಿತ್ತನು :—ರಾಜರ್ಷಿಯೂ, ಮಹಾ ತೇಜಸ್ವಿಯೂ ಆದ ದಿವೋದಾಸನೆಂಬ ರಾಜನು ಸಮೃದ್ಧಿಯಿಂದಿರುವ ಭೂಮಿಯಲ್ಲಿ ವಾರಣಸೀ ನಗರಿಯನ್ನು ರಾಜಧಾನಿಯಾಗಿ ಹೊಂದಿ ವಾಸಮಾಡಿದನು.

೩೨. ಈ ಸಮಯದಲ್ಲಿ ಪಾರ್ವತಿಯನ್ನು ಪಾಣಿಗ್ರಹಣ ಮಾಡಿಕೊಂಡಿರುವ ಪರಮೇಶ್ವರನು ದೇವಿಯ ಪ್ರೀತಿಗೋಸ್ಕರ ಶ್ವಶುರನಾದ ಹಿಮವಂತನ ಸಮೀಪದಲ್ಲಿ ವಾಸಮಾಡಿದನು.

೩೩. ಹೀಗಿರಲು ನಾನಾ ರೂಪಗಳನ್ನು ಧರಿಸಿದ ತಪಸ್ವಿಗಳು ಪರಮೇಶ್ವರನ ಪಾರಿಷದರಾಗಿ ಹಿಂದೆ ಹೇಳಿದಂತೆ ರೂಪ-ವೇಷಗಳಿಂದ ಪಾರ್ವತೀದೇವಿಯನ್ನು ಸಂತೋಷಗೊಳಿಸುತ್ತಿದ್ದರು.

೩೪. ಇದರಿಂದ ಪರಮೇಶ್ವರನು ಹರ್ಷಗೊಳ್ಳುತ್ತಿದ್ದನು, ಆದರೇ ಮೇನಾ ದೇವಿಯು ಮಾತ್ರ ಯಾವಾಗಲೂ ಪಾರ್ವತಿಯನ್ನೂ ಪರಮೇಶ್ವರನನ್ನೂ ನೋಡಿ ಅವರ ವಿಷಯದಲ್ಲಿ ಸಂತೋಷಪಡದೆ ಜುಗುಪ್ಸೆಯನ್ನು ಹೊಂದುತ್ತಿದ್ದಳು.

ಮಮ ಪಾರ್ಶ್ವೇ ತ್ವನಾಚಾರಸ್ತವ ಭರ್ತಾ ಮಹೇಶ್ವರಃ ।
ದರಿದ್ರಃ ಸರ್ವಥೈವೇಹ ಹಾ ಕಷ್ಟಂ ಲಜ್ಜತೇ ನ ವೈ ॥ ೩೫ ॥

ಮಾತ್ರಾ ತಥೋಕ್ತಾ ವಚಸಾ ಸ್ತ್ರೀಸ್ವಭಾವಾನ್ನ ಚಕ್ಷಮೇ ।
ಸ್ಮಿತಂ ಕೃತ್ವಾ ತು ವರದಾ ಹರಪಾರ್ಶ್ವಮಥಾಗಮತ್ ॥ ೩೬ ॥

ವಿಷಣ್ಣವದನಾ ದೇವೀ ಮಹಾದೇವಮಭಾಷತ ।
ನೇಹ ವತ್ಸ್ಯಾಮ್ಯಹಂ ದೇವ ನಯ ಮಾಂ ಸ್ವಂ ನಿವೇಶನಮ್ ॥ ೩೭ ॥

ತಥೋಕ್ತಸ್ತು ಮಹಾದೇವಃ ಸರ್ವಾಂಲ್ಲೋಕಾನ್ನಿರೀಕ್ಷ್ಯ ಹ ।
ವಾಸಾರ್ಥಂ ರೋಚಯಾಮಾಸ ಪೃಥಿವ್ಯಾಂ ತು ದ್ವಿಜೋತ್ತಮಾಃ ॥ ೩೮ ॥

ವಾರಾಣಸೀಂ ಮಹಾತೇಜಾಃ ಸಿದ್ಧಕ್ಷೇತ್ರಂ ಮಹೇಶ್ವರಃ ।
ದಿವೋದಾಸೇನ ತಾಂ ಜ್ಞಾತ್ವಾ ನಿವಿಷ್ಟಾಂ ನಗರೀಂ ಭವಃ ॥ ೩೯ ॥

---

೩೫. ಮತ್ತು ಮಗಳ ಸನ್ನಿಧಿಯಲ್ಲಿ ಹೀಗೆ ಹೇಳಿದಳು, ನನ್ನ ಸಮೀಪದಲ್ಲಿ ದುರಾಚಾರಪರನಾಗಿ ನಿನ್ನ ಪತಿಯಾದ ಮಹೇಶ್ವರನಿರುವನು. ಆವನು ಪರಮ ದರಿದ್ರನಾಗಿರುವನು, ಅಯ್ಯೋ! ಅವನಿಗೇಕೆ ನಾಚಿಕೆಯಿಲ್ಲವೊ!

೩೬. ಹೀಗೆ ತಾಯಿಯಿಂದ ಹೇಳಲ್ಪಟ್ಟ ಪಾರ್ವತಿಯು ಸ್ತ್ರೀ ಸ್ವಭಾವಾನುಸಾರವಾಗಿ ವಚನವನ್ನು ಸಹಿಸಲಿಲ್ಲ, ಭಕ್ತರಿಗೆ ವರ ದಾನವನ್ನು ಮಾಡುವ ಪಾರ್ವತೀದೇವಿಯು ನಕ್ಕು ಈಶ್ವರನ ಸನ್ನಿಧಿಗೆ ಬಂದಳು.

೩೭. ಆಗ ಪಾರ್ವತೀದೇವಿಯು ವಿಷಾದಗೊಂಡ ಮುಖವುಳ್ಳವಳಾಗಿ ಈಶ್ವರನನ್ನು ಕುರಿತು ಹೇಳಿದಳು. ದೇವನೆ! ನಾನು ಇಲ್ಲಿ ವಾಸಮಾಡುವುದಿಲ್ಲ. ನೀನು ನನ್ನನ್ನು ನಿನ್ನ ನಿವೇಶನಕ್ಕೆ ಕರೆದುಕೊಂಡುಹೋಗು.

೩೮. ದ್ವಿಜೋತ್ತಮರೆ! ಆ ರೀತಿಯಾಗಿ ಹೇಳಲ್ಪಟ್ಟ ಪರಮೇಶ್ವರನು ಸಮಸ್ತ ಲೋಕಗಳನ್ನು ನೋಡಿ ಅವುಗಳಲ್ಲೆಲ್ಲ ಭೂಲೋಕದಲ್ಲಿರುವ ವಾರಾಣಸೀ ನಗರವನ್ನು ತನ್ನ ವಾಸಕ್ಕೆ ಯೋಗ್ಯವನ್ನಾಗಿ ರುಚಿಸಿದನು.

೩೯. ಮಹಾತೇಜಸ್ವಿಯಾದ ಪರಮೇಶ್ವರನು ಸಿದ್ಧಕ್ಷೇತ್ರವಾದ ಆ ವಾರಣಸೀ ನಗರಿಯು ದಿವೋದಾಸನಿಂದ ಸ್ಥಾಪಿಸಿ ಪಾಲಿಸಲ್ಪಟ್ಟಿರುವುದನ್ನು ನೋಡಿದನು.

**ಪಾರ್ಶ್ವಸ್ಥಂ ಸ ಸಮಾಹೂಯ ಗಣೇಶಂ ಕ್ಷೇಮಮಬ್ರವೀತ್ ।**
**ಗಣೇಶ್ವರ ಪುರೀಂ ಗತ್ವಾ ಶೂನ್ಯಾಂ ವಾರಾಣಸೀಂ ಕುರು ॥ ೪೦ ॥**

**ಮೃದುನಾ ಚಾಭ್ಯುಪಾಯೇನ ಅತಿವೀರ್ಯಃ ಸ ಪಾರ್ಥಿವಃ ।**
**ತತೋ ಗತ್ವಾ ನಿಕುಂಭಸ್ತು ಪುರೀಂ ವಾರಾಣಸೀಂ ಪುರಾ ॥ ೪೧ ॥**

**ಸ್ವಪ್ನೇ ಸಂದರ್ಶಯಾಮಾಸ ಮಂಕನಂ ನಾಮತೋ ದ್ವಿಜಮ್ ।**
**ಶ್ರೇಯಸ್ತೇಽಹಂ ಕರಿಷ್ಯಾಮಿ ಸ್ಥಾನಂ ಮೇ ರೋಚಯಾನಘ ॥ ೪೨ ॥**

**ಮದ್ರೂಪಾಂ ಪ್ರತಿಮಾಂ ಕೃತ್ವಾ ನಗರ್ಯಂತೇ ನಿವೇಶಯ ।**
**ತಥಾ ಸ್ವಪ್ನೇ ಯಥಾ ದೃಷ್ಟಂ ಸರ್ವಂ ಕಾರಿತವಾನ್ ದ್ವಿಜಃ ॥ ೪೩ ॥**

**ನಗರೀದ್ವಾರ್ಯನುಜ್ಞಾಪ್ಯ ರಾಜಾನಂ ತು ಯಥಾವಿಧಿ ।**
**ಪೂಜಾ ತು ಮಹತೀ ಚೈವ ನಿತ್ಯಮೇವ ಪ್ರಯುಜ್ಯತೇ ॥ ೪೪ ॥**

---

೪೦. ಆಗ ತನ್ನ ಪಾರ್ಶ್ವದಲ್ಲಿದ್ದ ಗಣಾಧಿಪತಿಯಾದ ಕ್ಷೇಮಕನನ್ನು ಕರೆದು ಗಣಾಧಿಪನೆ! ವಾರಾಣಸೀನಗರಕ್ಕೆ ಹೋಗಿ ಅದನ್ನು ಈಗ ಶೂನ್ಯವನ್ನಾಗಿ ಮಾಡು.

೪೧. ಆದರೆ ಅಲ್ಲಿರುವ ರಾಜನು ಅತಿ ವೀರ್ಯಶಾಲಿಯಾಗಿರುವನು ; ಮೃದುವಾದ ಉಪಾಯದಿಂದ ಈ ಕಾರ್ಯವನ್ನು ಮಾಡು. ಹೀಗೆಂದು ಆಜ್ಞಾಪಿಸಲ್ಪಟ್ಟ ನಿಕುಂಭನು ವಾರಾಣಸೀನಗರಿಯ ಸಮೀಪಕ್ಕೆ ಬಂದನು.

೪೨. ಅಲ್ಲಿ ಮಂಕನನೆಂಬ ನಾಮಾಂಕಿತನಾದ ಒಬ್ಬ ದ್ವಿಜನಿಗೆ ಸ್ವಪ್ನದಲ್ಲಿ ನಿಕುಂಭನು ಕಾಣಿಸಿಕೊಂಡನು. ಮತ್ತು ಹೀಗೆ ಹೇಳಿದನು :—ನಿಷ್ಕಳಂಕನೆ! ನನಗೊಂದು ಸ್ಥಾನವನ್ನು ಕಲ್ಪಿಸು, ನಾನು ನಿನಗೆ ಶ್ರೇಯಸ್ಸನ್ನು ಉಂಟುಮಾಡುವೆನು.

೪೩. ನನ್ನ ರೂಪದಿಂದ ಕೂಡಿರುವ ಒಂದು ಪ್ರತಿಮೆಯನ್ನು ಮಾಡಿ ನಗರದ ಎಲ್ಲೆಯಲ್ಲಿ ಸ್ಥಾಪಿಸು, ಎಂದು ಹೇಳಿದನು. ಆ ದ್ವಿಜನು ಸ್ವಪ್ನದಲ್ಲಿ ಕಂಡಂತೆ ಎಲ್ಲವನ್ನೂ ಹಾಗೆಯೇ ಆಚರಿಸಿದನು.

೪೪. ಮೊದಲು ರಾಜನ ಅನುಮತಿಯನ್ನು ಪಡೆದು ನಗರದ ದ್ವಾರದಲ್ಲಿ ಯಥಾವಿಧಿಯಾಗಿ ನಿಕುಂಭ ಪ್ರತಿಮೆಯನ್ನು ಸ್ಥಾಪಿಸಿ ಪ್ರತಿನಿತ್ಯವೂ ಅಲ್ಲಿ ಮಹಾಪೂಜೆಯನ್ನು ನಡೆಯಿಸಿದನು.

ಗಂಧೈರ್ಧೂಪೈಶ್ಚ ಮಾಲ್ಯೈಶ್ಚ ಪ್ರೇಕ್ಷಣೀಯೈಸ್ತಥೈವ ಚ ।
ಅನ್ನಪ್ರದಾನಯುಕ್ತೈಶ್ಚ ಹ್ಯತ್ಯದ್ಭುತಮಿವಾಭವತ್ ॥ ೪೫ ॥

ಏವಂ ಸಂಪೂಜ್ಯತೇ ತತ್ರ ನಿತ್ಯಮೇವ ಗಣೇಶ್ವರಃ ।
ತತೋ ವರಸಹಸ್ರಾಣಿ ನಾಗರಾಣಾಂ ಪ್ರಯಚ್ಛತಿ ॥ ೪೬ ॥

ಪುತ್ರಾನ್ ಹಿರಣ್ಯಮಾಯೂಂಷಿ ಸರ್ವಕಾಮಾಂಸ್ತಥೈವ ಚ ।
ರಾಜ್ಞಸ್ತು ಮಹಿಷೀ ಶ್ರೇಷ್ಠಾ ಸುಯಶಾ ನಾಮ ವಿಶ್ರುತಾ ॥ ೪೭ ॥

ಪುತ್ರಾರ್ಥಮಾಗತಾ ಸಾಧ್ವೀ ರಾಜ್ಞಾ ದೇವೀ ಪ್ರಚೋದಿತಾ ।
ಪೂಜಾಂ ತು ವಿಪುಲಾಂ ಕೃತ್ವಾ ದೇವೀ ಪುತ್ರಾನಯಾಚತ ॥ ೪೮ ॥

ಪುನಃ ಪುನರಥಾಗತ್ಯ ಬಹುಶಃ ಪುತ್ರಕಾರಣಾತ್ ।
ನ ಪ್ರಯಚ್ಛತಿ ಪುತ್ರಾಂಸ್ತು ನಿಕುಂಭಃ ಕಾರಣೇನ ತು ॥ ೪೯ ॥

---

೪೫. ಅಲ್ಲಿ ಗಂಧ, ಧೂಪ, ಮಾಲ್ಯ, ವಿವಿಧವಾದ ಪ್ರೇಕ್ಷಣೀಯ ಮತ್ತು ಅನ್ನ ದಾನಗಳ ಮಹಾ ವಿಜೃಂಭಣೆಯಿಂದ ನಡೆಯುತ್ತಿದ್ದ ನಿಕುಂಭೇಶ್ವರನ ಪೂಜೆಯು ಒಂದು ಅದ್ಭುತದಂತೆ ಪರಿಣಮಿಸಿತು.

೪೬. ಈ ರೀತಿಯಾಗಿ ಅಲ್ಲಿ ಗಣೇಶ್ವರನಾದ ನಿಕುಂಭನು ಪ್ರತಿನಿತ್ಯವೂ ಪೂಜಿಸಲ್ಪಡುವನು. ಭಕ್ತಿಯಿಂದ ಅರ್ಚಿಸಿದ ನಗರ ಜನರಿಗೆ ಸಾವಿರಾರು ವರಗಳನ್ನು ಅನುಗ್ರಹಿಸುವನು.

೪೭. ಪ್ರಜೆಗಳಿಗೆ ಇಷ್ಟವಾದ ಪುತ್ರ, ಹಿರಣ್ಯ, ಆಯುಷ್ಯ ಮತ್ತು ಸರ್ವಕಾಮಗಳನ್ನು ಅನುಗ್ರಹಿಸುತ್ತಿದ್ದನು. ಹೀಗಿರಲು ರಾಜನಿಗೆ ಸುಯಶಾ ಎಂದು ಪ್ರಖ್ಯಾತಳಾದ ಶ್ರೇಷ್ಠಳಾದ ಪಟ್ಟದ ರಾಣಿಯಿದ್ದಳು.

೪೮. ಪತಿವ್ರತೆಯಾದ ಆ ರಾಣಿಯು ರಾಜನಿಂದ ಪ್ರೇರೇಪಿಸಲ್ಪಟ್ಟವಳಾಗಿ ಪುತ್ರಾರ್ಥಿನಿಯಾಗಿ ನಿಕುಂಭೇಶ್ವರನ ಸಮೀಪಕ್ಕೆ ಬಂದಳು. ಅವಳು ವಿಜೃಂಭಣೆಯಿಂದ ಪೂಜೆಯನ್ನು ಸಲ್ಲಿಸಿ ಸಂತತಿಯನ್ನು ಪ್ರಾರ್ಥಿಸಿದಳು.

೪೯. ಹೀಗೆ ಪುತ್ರಾಕಾಂಕ್ಷೆಯಿಂದ ಮತ್ತೆ ಮತ್ತೆ ಅನೇಕಾವರ್ತಿಯಾಗಿ ರಾಣಿಯು ಬಂದು ಅರ್ಚಿಸಿದಳು. ಆದರೆ ನಿಕುಂಭನು ಅವಳಿಗೆ ಮಾತ್ರ ಒಂದು ನಿಮಿತ್ತ ವಿಶೇಷದಿಂದ ಪುತ್ರರನ್ನು ಅನುಗ್ರಹಿಸಲಿಲ್ಲ.

ಕ್ರುಧ್ಯತೇ ಯದಿ ರಾಜಾತು ತತಃ ಕಿಂಚಿತ್ ಪ್ರವರ್ತತೇ ।
ಅಥ ದೀರ್ಘೇಣ ಕಾಲೇನ ಕ್ರೋಧೋ ರಾಜಾನಮಾವಿಶತ್ ॥ ೫೦ ॥

ಭೂತಂ ತ್ವಿದಂ ಮಹದ್ದ್ವಾರಿ ನಾಗರಾಣಾಂ ಪ್ರಯಚ್ಛತಿ ।
ಪ್ರೀತ್ಯಾ ವರಾಂಶ್ಚ ಶತಶೋ ನ ಕಿಂಚಿನ್ನಃ ಪ್ರಯಚ್ಛತಿ ॥ ೫೧ ॥

ಮಾಮಕೈಃ ಪೂಜ್ಯತೇ ನಿತ್ಯಂ ನಗರ್ಯಾಂ ಮಮ ಚೈವ ತು ।
ಸ ಯಾಚಿತಶ್ಚ ಬಹುಶೋ ದೇವ್ಯಾ ಮೇ ಪುತ್ರಕಾರಣಾತ್ ॥ ೫೨ ॥

ನ ದದಾತಿ ಚ ಪುತ್ರಂ ಮೇ ಕೃತಘ್ನೋ ಬಹುಭೋಜನಃ ।
ಅತೋ ನಾರ್ಹತಿ ಪೂಜಾಂ ತು ಮತ್ಸಕಾಶಾತ್ ಕಥಂ ಚನ ॥ ೫೩ ॥

ತಸ್ಮಾತ್ತು ನಾಶಯಿಷ್ಯಾಮಿ ತಸ್ಯ ಸ್ಥಾನಂ ದುರಾತ್ಮನಃ ।
ಏವಂ ತು ಸ ವಿನಿಶ್ಚಿತ್ಯ ದುರಾತ್ಮಾ ರಾಜಕಿಲ್ಬಿಷೀ ॥ ೫೪ ॥

---

೫೦. ರಾಜನು ಈ ನಿಮಿತ್ತದಿಂದ ಒಂದುಸಲ ಕೋಪಿಸಿಕೊಂಡರೆ ಆಗ ನನ್ನ ಇಷ್ಟವು ನೆರವೇರುತ್ತದೆ ಎಂದು ನಿಕುಂಭನ ಆಶಯವಾಗಿತ್ತು. ಹೀಗೆ ದೀರ್ಘಕಾಲ ಕಳೆಯಲು ರಾಜನಿಗೆ ಕೋಪವುಂಟಾಯಿತು.

೫೧. ನಗರದ ಮಹಾದ್ವಾರದಲ್ಲಿರುವ ಈ ಭೂತವು ನಗರ ಜನರಿಗೆ ಪ್ರೀತಿ ಪೂರ್ವಕವಾಗಿ ನೂರಾರು ವರಗಳನ್ನು ಅನುಗ್ರಹಿಸುತ್ತದೆ. ಆದರೆ ನಮಗೆ ಮಾತ್ರ ಒಂದು ವರವನ್ನೂ ಕೊಡುವುದಿಲ್ಲ.

೫೨. ನನ್ನ ನಗರದಲ್ಲಿ ನನ್ನ ಪ್ರಜೆಗಳಿಂದ ಈ ಭೂತವು ನಿತ್ಯದಲ್ಲಿಯೂ ಪೂಜಿಸಲ್ಪಡುವುದು. ಈ ನಿಕುಂಭನು ಪುತ್ರಾರ್ಥಿನಿಯಾದ ದೇವಿಯಿಂದ ಅನೇಕಾವರ್ತಿ ಪ್ರಾರ್ಥಿಸಲ್ಪಟ್ಟಿರುವನು.

೫೩. ಆದರೆ ನನಗೆ ಮಾತ್ರ ಪುತ್ರನಾಗುವಂತೆ ವರವನ್ನು ಕೊಡಲಿಲ್ಲ. ಈ ಭೂತವು ಕೃತಘ್ನವೂ ಅತಿ ಆಹಾರವನ್ನು ಭುಂಜಿಸುವುದೂ ಆಗಿದೆ. ಆದ್ದರಿಂದ ನನ್ನಿಂದ ಯಾವರೀತಿಯಿಂದಲೂ ಪೂಜೆಯನ್ನು ಹೊಂದಲು ಇದು ಅರ್ಹವಾಗಿಲ್ಲ.

೫೪. ಆದ್ದರಿಂದ ದುರಾತ್ಮನಾದ ಆ ನಿಕುಂಭೇಶ್ವರನ ಸ್ಥಾನವನ್ನು ನಾಶಮಾಡುವೆನು. ಹೀಗೆ ದುರಾತ್ಮನೂ ರಾಜಪಾತಕಿಯೂ ಆದ ಆ ರಾಜನು ತೀರ್ಮಾನಿಸಿಕೊಂಡನು.

ಸ್ಥಾನಂ ಗಣಪತೇಸ್ತಸ್ಯ ನಾಶಯಾಮಾಸ ದುರ್ಮತಿಃ ।
ಭಗ್ನಮಾಯತನಂ ದೃಷ್ಟ್ವಾ ರಾಜಾನಮಶಪತ್ ಪ್ರಭುಃ ॥ ೫೫ ॥

ಯಸ್ಮಾದ್ವಿನಾಪರಾಧಂ ಮೇ ತ್ವಯಾ ಸ್ಥಾನಂ ವಿನಾಶಿತಮ್ ।
ಅಕಸ್ಮಾತ್ತು ಪುರೀ ಶೂನ್ಯಾ ಭವಿತ್ರೀ ತೇ ನರಾಧಿಪ ॥ ೫೬ ॥

ತತಸ್ತೇನ ತು ಶಾಪೇನ ಶೂನ್ಯಾ ವಾರಾಣಸೀ ತದಾ ।
ಶಪ್ತ್ವಾ ಪುರೀಂ ನಿಕುಂಭಸ್ತು ಮಹಾದೇವಮಥಾನಯತ್ ॥ ೫೭ ॥

ಶೂನ್ಯಾಂ ಪುರೀಂ ಮಹಾದೇವೋ ನಿರ್ಮಮೇ ಪದಮಾತ್ಮನಃ ।
ತುಲ್ಯಾಂ ದೇವವಿಭೂತ್ಯಾ ತು ದೇವ್ಯಾಶ್ಚೈವ ಮಹಾಮನಾಃ ॥ ೫೮ ॥

ರಮತೇ ತತ್ರ ವೈ ದೇವೀ ಹ್ಯೈಶ್ವರ್ಯಾತ್ ಸಾ ತು ವಿಸ್ಮಿತಾ ।
ದೇವ್ಯಾ ಕ್ರೀಡಾರ್ಥಮೀಶಾನೋ ದೇವೋ ವಾಕ್ಯಮಥಾಬ್ರವೀತ್
॥ ೫೯ ॥

---

೫೫. ಆಗ ಗಣೇಶ್ವರನಾದ ನಿಕುಂಭನ ಆ ಸ್ಥಾನವನ್ನು ದುರ್ಬುದ್ಧಿಯಾದ ರಾಜನು ಭಂಗಪಡಿಸಿದನು. ಆಗ ಪ್ರಭುವಾದ ನಿಕುಂಭೇಶ್ವರನು ಆಲಯವು ಭಂಗವಾಗಿರುವುದನ್ನು ಕಂಡು ರಾಜನನ್ನು ಶಪಿಸಿದನು.

೫೬. ರಾಜನೆ! ಏನೂ ಅಪರಾಧವಿಲ್ಲದೆ ನನ್ನ ಸ್ಥಾನವು ನಿನ್ನಿಂದ ನಾಶಮಾಡಲ್ಪಟ್ಟಿದೆ. ಆದ್ದರಿಂದ ನಿನ್ನ ನಗರಿಯು ನಿಷ್ಕಾರಣವಾಗಿ ಶೂನ್ಯವಾಗುವುದು, ಎಂದು ನಿಕುಂಭನು ಶಪಿಸಿದನು.

೫೭. ಆಗ ವಾರಾಣಸೀನಗರಿಯು ಆ ಶಾಪಬಲದಿಂದ ಶೂನ್ಯವಾಯಿತು. ನಿಕುಂಭನು ನಗರಿಯನ್ನು ಈ ರೀತಿ ಶಪಿಸಿ ಸರ್ವಶೂನ್ಯವನ್ನಾಗಿ ಮಾಡಿ ಅಲ್ಲಿಗೆ ಪರಮೇಶ್ವರನನ್ನು ಕರೆದುಕೊಂಡುಬಂದನು.

೫೮. ಉದಾರವಾದ ಮಾನಸವುಳ್ಳವನೂ ಮಹಾದೇವನೂ ಆದ ಶಿವನು ಶೂನ್ಯವಾದ ಆ ನಗರಿಯನ್ನು ದೇವತಾ ವಿಭೂತಿಗೆ ತುಲ್ಯವನ್ನಾಗಿ ಮಾಡಿ ತನ್ನ ಮತ್ತು ಮಹಾದೇವಿಯಾದ ಪಾರ್ವತಿಯ ವಾಸಭೂಮಿಯನ್ನಾಗಿ ಮಾಡಿದನು.

೫೯. ಪಾರ್ವತೀದೇವಿಯು ಅಲ್ಲಿರುವ ಐಶ್ವರ್ಯದಿಂದ ವಿಸ್ಮಯಹೊಂದಿದವಳಾಗಿ ಅಲ್ಲಿ ರಮಿಸಿದಳು. ಆಗ ಪರಮೇಶ್ವರನು ವಿನೋದಕ್ಕಾಗಿ ದೇವಿಗೆ ಈ ವಚನವನ್ನು ಹೇಳಿದನು.

ನಾಹಂ ದೇವಿ ಗಮಿಷ್ಯಾಮಿ ತ್ವನ್ಯತ್ರೇದಂ ವಿಹಾಯ ವೈ ॥ ೬೦ ॥

ಮಯಾ ಸಹ ರಮಸ್ವೇಹ ಕ್ಷೇತ್ರೇ ಭಾಮಿನ್ಯನುತ್ತಮೇ ।
ತಸ್ಮಾತ್ತದವಿಮುಕ್ತಂ ಹಿ ಪ್ರೋಕ್ತಂ ದೇವೇನ ವೈ ಸ್ವಯಮ್॥ ೬೧ ॥

ಏವಂ ವಾರಾಣಸೀ ಶಪ್ತಾ ಹ್ಯವಿಮುಕ್ತಂ ಚ ಕೀರ್ತಿತಾ ।
ಯಸ್ಮಿನ್ ವಸೇಚ್ಛ್ರೋ ದೇವಃ ಸರ್ವದೇವನಮಸ್ಕೃತಃ ॥ ೬೨ ॥

ಯುಗೇಷು ತ್ರಿಷು ಧರ್ಮಾತ್ಮಾ ಸಹ ದೇವ್ಯಾ ಮಹೇಶ್ವರಃ ।
ಅಂತರ್ಧಾನಂ ಕಲೌ ಯಾತಿ ತತ್ಪುರಂ ತು ಮಹಾತ್ಮನಃ ॥ ೬೩ ॥

ಅಂತರ್ಹಿತೇ ಪುರೇ ತಸ್ಮಿನ್ ಪುರೀ ಸಾ ವಸತೇ ಪುನಃ ।
ಏವಂ ವಾರಾಣಸೀ ಶಪ್ತಾ ನಿವೇಶಂ ಪುನರಾಗತಾ ॥ ೬೪ ॥

---

೬೦. ಪ್ರಿಯೆಯೆ! ನನಗೆ ಅವಿಮುಕ್ತಸ್ಥಾನವು ಗೃಹವಾಗಿರುವುದು ಇಂತಹ ಗೃಹವನ್ನು ನಾನು ಬಿಡುವುದಿಲ್ಲ. ದೇವಿಯನ್ನು ಕುರಿತು ನಗುತ್ತ ನನ್ನ ಗೃಹವು ಅವಿಮುಕ್ತವಲ್ಲವೆ? ದೇವಿಯೆ! ಇದನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ನಾನು ಹೋಗುವುದಿಲ್ಲ.

೬೧. ಭಾಮಿನಿಯೆ! ನಿರುಪಮವಾದ ಈ ಕ್ಷೇತ್ರದಲ್ಲಿ ನನ್ನೊಡನೆ ವಿಹರಿಸು. ನಮ್ಮಿಂದ ಯಾವಾಗಲೂ ಬಿಡಲ್ಪಡದಿರುವುದರಿಂದ ಆ ಸ್ಥಾನವು ಅವಿಮುಕ್ತವೆಂಬ ಯಥಾರ್ಥವಾದ ನಾಮದಿಂದ ಅಂಕಿತವಾಯಿತು. ಇದು ಶಿವನಿಂದ ಅವಿಮುಕ್ತ ವೆಂದು ಕರೆಯಲ್ಪಟ್ಟಿದೆ.

೬೨. ಈ ರೀತಿಯಾಗಿ ವಾರಾಣಸೀನಗರಿಯು ಶಪಿಸಲ್ಪಟ್ಟು ಶೂನ್ಯವಾಗಿ ಶಿವನಿಂದ ಅವಿಮುಕ್ತವೆಂದು ಕೀರ್ತಿಸಲ್ಪಟ್ಟಿರುವುದು. ಅಲ್ಲಿ ಸಕಲ ದೇವತೆಗಳಿಗೆ ವಂದ್ಯನಾದ ಪರಮೇಶ್ವರನು ವಾಸಮಾಡುತ್ತಿರುವನು.

೬೩. ಕೃತ ಮುಂತಾದ ಮೂರು ಯುಗಗಳಲ್ಲಿ ಧರ್ಮರೂಪಿಯಾದ ಶಿವನು ಪಾರ್ವತಿಯೊಡನೆ ಆ ಕ್ಷೇತ್ರದಲ್ಲಿ ವಾಸಮಾಡುತ್ತಾನೆ. ಮಹಾತ್ಮನ ಆ ಅವಿಮುಕ್ತ ಪುರವೆಂಬ ಕ್ಷೇತ್ರವು ಕಲಿಯುಗದಲ್ಲಿ ಅದೃಶ್ಯವಾಗುವುದು.

೬೪. ಅವಿಮುಕ್ತಪುರವು ಅದೃಶ್ಯವಾಗಲಾಗಿ ಮತ್ತೆ ಆ ವಾರಾಣಸೀನಗರಿಯು ಅಲ್ಲಿ ಉದ್ಭವಿಸುವುದು. ಹೀಗೆ ಶಪಿಸಲ್ಪಟ್ಟ ವಾರಾಣಸಿಯು ಮತ್ತೆ ಅಲ್ಲಿ ಪ್ರತಿಷೆ ಯನ್ನು ಹೊಂದುವುದು.

ಭದ್ರಸೇನಸ್ಯ ಪುತ್ರಾಣಾಂ ಶತಮುತ್ತಮಧನ್ವಿನಾಮ್ ।
ಹತ್ವಾ ನಿವೇಶಯಾಮಾಸ ದಿವೋದಾಸೋ ನರಾಧಿಪಃ ॥ ೬೫ ॥

ಭದ್ರಸೇನಸ್ಯ ರಾಜ್ಯಂ ತು ಹತಂ ತೇನ ಬಲೀಯಸಾ ।
ಭದ್ರಸೇನಸ್ಯ ಪುತ್ರಸ್ತು ದುರ್ಮದೋ ನಾಮ ನಾಮತಃ ॥ ೬೬ ॥

ದಿವೋದಾಸೇನ ಬಾಲೇತಿ ಘೃಣಯಾ ಸ ವಿಸರ್ಜಿತಃ ।
ದಿವೋದಾಸಾದ್ದೃಷದ್ವತ್ಯಾಂ ವೀರೋ ಜಜ್ಞೇ ಪ್ರತರ್ದನಃ ॥ ೬೭ ॥

ತೇನ ಪುತ್ರೇಣ ಬಾಲೇನ ಪ್ರಹೃತಂ ತಸ್ಯ ವೈ ಪುನಃ ।
ವೈರಸ್ಯಾಂತಂ ಮಹಾರಾಜ ತದಾ ತೇನ ವಿಧಿತ್ಸತಾ ॥ ೬೮ ॥

ಪ್ರತರ್ದನಸ್ಯ ಪುತ್ರೌ ದ್ವೌ ವತ್ಸೋ ಗರ್ಗಶ್ಚ ವಿಶ್ರುತೌ ।
ವತ್ಸಪುತ್ರೋ ಹ್ಯಲರ್ಕಸ್ತು ಸನ್ನತಿಸ್ತಸ್ಯ ಚಾತ್ಮಜಃ ॥ ೬೯ ॥

---

೬೫. ಉತ್ತಮ ಧನುರ್ಧಾರಿಗಳಾದ ಭದ್ರಸೇನನ ಒಂದು ನೂರುಮಂದಿ ಪುತ್ರರನ್ನು ಸಂಹರಿಸಿ ದಿವೋದಾಸನೆಂಬ ರಾಜನು ಆ ನಗರಿಯನ್ನು ಪ್ರತಿಷ್ಠೆಗೊಳಿಸಿ ಪಾಲಿಸಿದನು.

೬೬. ಬಲಿಷ್ಠನಾದ ದಿವೋದಾಸನಿಂದ ಭದ್ರಸೇನನ ರಾಜ್ಯವು ನಾಶಮಾಡಲ ಟ್ಟಿತು, ಭದ್ರಸೇನನಿಗೆ ದುರ್ಮದ ಎಂಬ ನಾಮದಿಂದ ಪ್ರಸಿದ್ಧಿಹೊಂದಿದ ಒಬ್ಬ ಪುತ್ರನಿದ್ದನು.

೬೭. ದಿವೋದಾಸನು ಆ ದುರ್ಮದನನ್ನು ಬಾಲಕನೆಂದು ದಯೆಯಿಂದ ಕೊಲ್ಲದೆ ಬಿಟ್ಟಿದ್ದನು. ದಿವೋದಾಸನಿಂದ ದೃಷದ್ವತಿಯೆಂಬ ಭಾರ್ಯೆಯಲ್ಲಿ ವೀರ ನಾದ ಪ್ರತರ್ದನನು ಪುತ್ರನಾಗಿ ಜನಿಸಿದನು.

೬೮. ಮಹಾರಾಜನೆ! ಬಾಲಕನಾದ ಆ ದುರ್ಮದನು ವೈರವನ್ನು ಪೂರ್ತಿ ಯಾಗಿ ಸಾಧಿಸಿ ಕೊನೆ ಮುಟ್ಟಿಸುವುದಕ್ಕೋಸ್ಕರ ಆ ಪ್ರತರ್ದನನನ್ನು ಸಂಹರಿಸಿದನು.

೬೯. ಪ್ರತರ್ದನನಿಗೆ ವತ್ಸ, ಗರ್ಗ ಎಂದು ಪ್ರಸಿದ್ಧರಾದ ಇಬ್ಬರು ಪುತ್ರರು ಇದ್ದರು. ಇವರಲ್ಲಿ ವತ್ಸನಿಗೆ ಅಲರ್ಕ ಎಂಬುವನೂ ಅಲರ್ಕನಿಗೆ ಸನ್ನತಿ ಎಂಬುವನೂ ಪುತ್ರರಾಗಿ ಜನಿಸಿದರು.

9

ಅಲರ್ಕಂ ಪ್ರತಿ ರಾಜರ್ಷಿಂ ಶ್ಲೋಕೋ ಗೀತಃ ಪುರಾತನೈಃ ।
ಷಷ್ಟಿರ್ವರ್ಷಸಹಸ್ರಾಣಿ ಷಷ್ಟಿರ್ವರ್ಷಶತಾನಿ ಚ ॥ ೭೦ ॥

ಯುವಾ ರೂಪೇಣ ಸಂಪನ್ನೋ ಹ್ಯಲರ್ಕಃ ಕಾಶಿಸತ್ತಮಃ ।
ಲೋಪಾಮುದ್ರಾಪ್ರಸಾದೇನ ಪರಮಾಯುರವಾಪ್ತವಾನ್ ॥ ೭೧ ॥

ಶಾಪಸ್ಯಾಂತೇ ಮಹಾಬಾಹುರ್ಹತ್ವಾ ಕ್ಷೇಮಕರಾಕ್ಷಸಮ್ ।
ರಮ್ಯಾಮಾವಾಸಯಾಮಾಸ ಪುರೀಂ ವಾರಾಣಸೀಂ ನೃಪಃ ॥ ೭೨ ॥

ಸನ್ನತೇರಪಿ ದಾಯಾದಃ ಸುನೀಥೋ ನಾಮ ಧಾರ್ಮಿಕಃ ।
ಸುನೀಥಸ್ಯ ತು ದಾಯಾದಃ ಕ್ಷೇಮಾಖ್ಯೋ ನಾಮ ಧಾರ್ಮಿಕಃ ॥ ೭೩ ॥

ಕ್ಷೇಮಸ್ಯ ಕೇತುಮಾನ್ ಪುತ್ರಃ ಸುಕೇತುಸ್ತಸ್ಯ ಚಾತ್ಮಜಃ ।
ಸುಕೇತುತನಯಶ್ಚಾಪಿ ಧರ್ಮಕೇತುರಿತಿ ಶ್ರುತಃ ॥ ೭೪ ॥

---

೭೦. ಆ ಅಲರ್ಕ ರಾಜರ್ಷಿಯ ವಿಷಯದಲ್ಲಿ ಪುರಾಣಜ್ಞರಿಂದ ಒಂದು ಪ್ರಶಂಸಾಪರವಾದ ಪದ್ಯವು ಗಾನಮಾಡಲ್ಪಟ್ಟಿದೆ. ಅಲರ್ಕ ರಾಜರ್ಷಿಯು ಅರವತ್ತು ಸಾವಿರ ಆರುನೂರು ವರ್ಷಗಳ ವರೆಗೆ ಜೀವಿಸಿರುವನು.

೭೧. ಕಾಶಿರಾಜ ಶ್ರೇಷ್ಠನಾದ ಅಲರ್ಕನು ಅಷ್ಟು ದೀರ್ಘಕಾಲ ಯುವಕನೂ, ಸೌಂದರ್ಯದಿಂದ ಕೂಡಿದವನೂ, ಆಗಿ ಲೋಪಾಮುದ್ರೆಯ ಅನುಗ್ರಹದಿಂದ ಅತಿ ದೀರ್ಘಾಯುಷ್ಯವನ್ನು ಹೊಂದಿದನು.

೭೨. ಮಹಾ ಬಾಹು ಬಲಶಾಲಿಯಾದ ಅಲರ್ಕ ರಾಜನು ಶಾಪಾವಸಾನದಲ್ಲಿ ಕ್ಷೇಮಕನೆಂಬ ರಾಕ್ಷಸನನ್ನು ಸಂಹರಿಸಿ ರಮ್ಯವಾದ ವಾರಾಣಸೀ ನಗರಿಯನ್ನು ಪುನಃ ಸ್ಥಾಪಿಸಿದನು.

೭೩. ಸನ್ನತಿಗೆ ಸುನೀಥನೆಂಬ ಧಾರ್ಮಿಕನಾದ ಪುತ್ರನಿದ್ದನು. ಹಾಗೆ ಸುನೀಥನಿಗೆ ಕ್ಷೇಮ ಎಂಬ ನಾಮಾಂಕಿತನಾದ ಪರಮ ಧಾರ್ಮಿಕನಾದ ಒಬ್ಬ ಪುತ್ರನಿದ್ದನು.

೭೪. ಆ ಕ್ಷೇಮನಿಗೆ ಕೇತುಮಾನ್ ಎಂಬ ಪುತ್ರನೂ ಕೇತುಮಂತನಿಗೆ ಸುಕೇತು ಎಂಬ ಪುತ್ರನೂ ಮತ್ತು ಸುಕೇತುವಿಗೆ ಧರ್ಮಕೇತು ಎಂಬ ಪ್ರಸಿದ್ಧನಾದ ಪುತ್ರನೂ ಇದ್ದರು.

ಧರ್ಮಕೇತೋಸ್ತು ದಾಯಾದಃ ಸತ್ಯಕೇತುರ್ಮಹಾರಥಃ ।
ಸತ್ಯಕೇತುಸುತಶ್ಚಾಪಿ ವಿಭುರ್ನಾಮ ಪ್ರಜೇಶ್ವರಃ ॥ ೭೫ ॥

ಸುವಿಭುಸ್ತು ವಿಭೋಃ ಪುತ್ರಃ ಸುಕುಮಾರಸ್ತತಃ ಸ್ಮೃತಃ ।
ಸುಕುಮಾರಸ್ಯ ಪುತ್ರಸ್ತು ಧೃಷ್ಟಕೇತುಃ ಸುಧಾರ್ಮಿಕಃ ॥ ೭೬ ॥

ಧೃಷ್ಟಕೇತೋಸ್ತು ದಾಯಾದೋ ವೇಣುಹೋತ್ರಃ ಪ್ರಜೇಶ್ವರಃ ।
ವೇಣುಹೋತ್ರಸುತಶ್ಚಾಪಿ ಗಾರ್ಗ್ಯೋ ವೈ ನಾಮ ವಿಶ್ರುತಃ ॥ ೭೭ ॥

ಗಾರ್ಗ್ಯಸ್ಯ ಗರ್ಗಭೂಮಿಸ್ತು ವಂಶೋ ವತ್ಸಸ್ಯ ಧೀಮತಃ ।
ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ತಯೋಃ ಪುತ್ರಾಃ ಸುಧಾರ್ಮಿಕಾಃ ॥ ೭೮ ॥

ವಿಕ್ರಾಂತಾ ಬಲವಂತಶ್ಚ ಸಿಹ್ಮತುಲ್ಯಪರಾಕ್ರಮಾಃ ।
ಇತ್ಯೇತೇ ಕಾಶ್ಯಪಾಃ ಪ್ರೋಕ್ತಾ ರಜೇರಪಿ ನಿಬೋಧತ ॥ ೭೯ ॥

---

೭೫. ಧರ್ಮಕೇತು ಎಂಬುವನಿಗೆ ಮಹಾರಥನಾದ ಸತ್ಯಕೇತುವು ಪುತ್ರನಾಗಿ ಜನಿಸಿದನು. ಆ ಸತ್ಯಕೇತುವಿಗೆ ವಿಭು ಎಂಬ ನಾಮಾಂಕಿತನಾದ ರಾಜನು ಪುತ್ರನಾಗಿ ಜನಿಸಿದನು.

೭೬. ವಿಭುವಿಗೆ ಸುವಿಭು ಎಂಬುವನು ಪುತ್ರನಾದನು. ಸುವಿಭುವಿನಿಂದ ಸುಕುಮಾರನೆಂಬ ಪುತ್ರನು ಜನಿಸಿದನೆಂದು ಸ್ಮರಿಸಲ್ಪಟ್ಟಿರುವನು. ಆ ಸುಕುಮಾರನಿಗೆ ಧೃಷ್ಟಕೇತು ಎಂಬ ಧಾರ್ಮಿಕನಾದ ಪುತ್ರನಿದ್ದನು.

೭೭. ಧೃಷ್ಟಕೇತುವಿಗೆ ವೇಣುಹೋತ್ರನೆಂಬ ರಾಜನು ಪುತ್ರನಾಗಿದ್ದನು. ವೇಣುಹೋತ್ರನಿಗೆ ಗಾರ್ಗ್ಯ ಎಂಬ ಪ್ರಸಿದ್ಧನಾದ ಪುತ್ರನಿದ್ದನು.

೭೮. ಗಾರ್ಗ್ಯನೆಂಬುವನಿಗೆ ಗರ್ಗಭೂಮಿಯೆಂಬ ಪುತ್ರನು ಇದ್ದನು. ಹೀಗೆ ವತ್ಸ ಎಂಬ ಜ್ಞಾನಿಯ ವಂಶವು ಬೆಳೆಯಿತು. ಗರ್ಗಭೂಮಿಯು ಪರ್ಯಂತವಾಗಿ ಬಂದ ವಂಶದಲ್ಲಿ ಬ್ರಾಹ್ಮಣರೂ ಕ್ಷತ್ರಿಯರೂ ಆದ ಅನೇಕಮಂದಿ ಧಾರ್ಮಿಕರಾದ ಪುತ್ರರು ಜನಿಸಿದರು.

೭೯. ಅವರೆಲ್ಲರೂ ವಿಕ್ರಮಶಾಲಿಗಳೂ ಬಲಿಷ್ಠರೂ ಮತ್ತು ಸಿಹ್ಮಸಮಾನವಾದ ಪರಾಕ್ರಮವುಳ್ಳವರೂ ಆಗಿದ್ದರು. ಈ ರೀತಿಯಾಗಿ ಕಶ್ಯಪಗೋತ್ರಜರು ಹೇಳಲ್ಪಟ್ಟಿರುವರು. ಮುಂದೆ ರಜಿ ಎಂಬುವನ ಸಂತತಿಯನ್ನು ಕೇಳಿರಿ.

ರಜೇಃ ಪುತ್ರಶತಾನ್ಯಾಸನ್ ಪಂಚ ವೀರ್ಯವತೋ ಭುವಿ ।
ರಾಜೇಯಮಿತಿ ವಿಖ್ಯಾತಂ ಕ್ಷತ್ರಮಿಂದ್ರಭಯಾವಹಮ್ ॥ ೮೦ ॥

ತದಾ ದೇವಾಸುರೇ ಯುದ್ಧೇ ಸಮುತ್ಪನ್ನೇ ಸುದಾರುಣೇ ।
ದೇವಾಶ್ಚೈವಾಸುರಾಶ್ಚೈವ ಪಿತಾಮಹಮಥಾಬ್ರುವನ್ ॥ ೮೧ ॥

ಆವಯೋರ್ಭಗವನ್ಯುದ್ಧೇ ವಿಜೇತಾ ಕೋ ಭವಿಷ್ಯತಿ ।
ಬ್ರೂಹಿ ನಃ ಸರ್ವಲೋಕೇಶ ಶ್ರೋತುಮಿಚ್ಛಾಮಹೇ ವಯಮ್ ॥ ೮೨ ॥

ಬ್ರಹ್ಮೋವಾಚ :—

ಯೇಷಾಮರ್ಥಾಯ ಸಂಗ್ರಾಮೇ ರಜಿರಾತ್ತಾಯುಧಃ ಪ್ರಭುಃ ।
ಯೋತ್ಸ್ಯತೇ ತೇ ವಿಜೇಷ್ಯಂತೇ ತ್ರೀಂಲ್ಲೋಕಾನ್ನಾತ್ರ ಸಂಶಯಃ ॥ ೮೩ ॥

ರಜಿರ್ಯತಸ್ತತೋ ಲಕ್ಷ್ಮೀರ್ಯತೋ ಲಕ್ಷ್ಮೀಸ್ತತೋ ಧೃತಿಃ ।
ಯತೋ ಧೃತಿಸ್ತತೋ ಧರ್ಮೋ ಯತೋ ಧರ್ಮಸ್ತತೋ ಜಯಃ ॥ ೮೪ ॥

---

೮೦. ರಜಿ ಎಂಬುವನಿಗೆ ವೀರ್ಯವಂತರಾದ ಐದುನೂರು ಮಂದಿ ಪುತ್ರರು ಜನಿಸಿದರು. ಇಂದ್ರನಿಗೆ ಕೂಡ ಭೀತಿಯನ್ನು ಉಂಟುಮಾಡುವ ಕ್ಷತ್ರಿಯ ಜಾತಿಯ ಆ ರಜಿಪುತ್ರರ ಗುಂಪು ರಾಜೇಯವೆಂದು ಭೂಮಿಯಲ್ಲಿ ಖ್ಯಾತಿಯನ್ನು ಹೊಂದಿತ್ತು.

೮೧. ಆ ಸಮಯದಲ್ಲಿ ದೇವತೆಗಳಿಗೂ, ಅಸುರರಿಗೂ ಭಯಂಕರವಾದ ಒಂದು ಸಂಗ್ರಾಮವು ಪ್ರಸಕ್ತವಾಗಲು ದೇವತೆಗಳೂ ಅಸುರರೂ ಬ್ರಹ್ಮದೇವನನ್ನು ಕುರಿತು ಪ್ರಶ್ನಿಸಿದರು.

೮೨. ಪೂಜ್ಯನೇ ! ನಾವು ಮಾಡುತ್ತಲಿರುವ ಈ ಯುದ್ಧದಲ್ಲಿ ಯಾರಿಗೆ ಜಯವು ಲಭಿಸುವುದು ? ಸಮಸ್ತ ಲೋಕಗಳಿಗೆ ಈಶ್ವರನಾದ ಬ್ರಹ್ಮದೇವನೆ! ಇದನ್ನು ನಮಗೆ ಹೇಳು ; ನಾವು ಇದನ್ನು ಕೇಳಲು ಇಷ್ಟವುಳ್ಳವರಾಗಿದ್ದೇವೆ.

೮೩. ಬ್ರಹ್ಮದೇವನು ಇಂತೆಂದನು :—ರಜಿ ಎಂಬ ಪ್ರಭುವು ಸಂಗ್ರಾಮದಲ್ಲಿ ಆಯುಧಧಾರಿಯಾಗಿ ನಿಂತು ಯಾರಿಗಾಗಿ ಯುದ್ಧಮಾಡುವನೋ, ಅವರು ಜಯ ಶಾಲಿಗಳಾಗುವರು. ಇದರಲ್ಲಿ ಸಂಶಯವಿಲ್ಲ.

೮೪. ಯಾವ ಪಕ್ಷದಲ್ಲಿ ರಜಿಯು ಇರುವನೋ ಅಲ್ಲಿ ಲಕ್ಷ್ಮಿಯು ಒಲಿಯು ವಳು. ಲಕ್ಷ್ಮಿಯು ಒಲಿದ ಕಡೆ ಧೈರ್ಯವು ಉದಯಿಸುವುದು, ಧೈರ್ಯವು ಉದ ಯಿಸಿದ ಕಡೆ ಧರ್ಮವು ಆಲಂಬನ ಕೊಡುವುದು, ಮತ್ತು ಧರ್ಮಾಲಂಬನೆಯಿರುವ ಪಕ್ಷಕ್ಕೆ ಜಯವು ಸಿದ್ಧವು.

**ತೇ ದೇವಾ ದಾನವಾಃ ಸರ್ವೇ ತತಃ ಶ್ರುತ್ವಾ ರಜೇರ್ಜಯಮ್ ।**
**ಅಭ್ಯಯುರ್ಜಯಮಿಚ್ಛಂತಃ ಸ್ತುವಂತೋ ರಾಜಸತ್ತಮಮ್ ॥ ೮೫ ॥**

**ತೇ ಹೃಷ್ಟಮನಸಃ ಸರ್ವೇ ರಾಜಾನಂ ದೇವದಾನವಾಃ ।**
**ಊಚುರಸ್ಮಜ್ಜಯಾಯ ತ್ವಂ ಗೃಹಾಣ ವರಕಾರ್ಮುಕಮ್ ॥ ೮೬ ॥**

**ರಜಿರುವಾಚ :—**

**ಅಹಂ ಜೇಷ್ಯಾಮಿ ಭೋ ದೈತ್ಯಾ ದೇವಾಞ್ಛಕ್ರಪುರೋಗಮಾನ್ ।**
**ಇಂದ್ರೋ ಭವಾಮಿ ಧರ್ಮಾತ್ಮಾ ತತೋ ಯೋತ್ಸ್ಯೇ ರಣಾಜಿರೇ ॥ ೮೭ ॥**

**ದಾನವಾ ಊಚುಃ :—**

**ಅಸ್ಮಾಕಮಿಂದ್ರಃ ಪ್ರಹ್ಲಾದಸ್ತಸ್ಯಾರ್ಥೇ ವಿಜಯಾಮಹೇ ।**
**ಅಸ್ಮಿಂಸ್ತು ಸಮಯೇ ರಾಜಂಸ್ತಿಷ್ಠೇಥಾ ದೇವನೋದಿತೇ ॥ ೮೮ ॥**

**ಸ ತಥೇತಿ ಬ್ರುವನ್ನೇವ ದೇವೈರಪ್ಯಭಿನೋದಿತಃ ।**
**ಭವಿಷ್ಯಸೀಂದ್ರೋ ಜಿತ್ವೇತಿ ದೇವೈರಪಿ ನಿಮಂತ್ರಿತಃ ॥ ೮೯ ॥**

---

೮೫. ಹೀಗೆ ಆ ದೇವ–ದಾನವರೆಲ್ಲರೂ ಬ್ರಹ್ಮನಿಂದ ರಜಿಯು ಇದ್ದ ಪಕ್ಷಕ್ಕೆ ಜಯಲಾಭವೆಂಬುದನ್ನು ಕೇಳಿ ಜಯಹೊಂದಲು ಆಕಾಂಕ್ಷೆಯುಳ್ಳವರಾಗಿ ರಾಜಶ್ರೇಷ್ಠನಾದ ರಜಿಯನ್ನು ಸ್ತುತಿಸುತ್ತ ಸಮೀಪಕ್ಕೆ ಬಂದರು.

೮೬. ಸಂತೋಷಗೊಂಡ ಮಾನಸವುಳ್ಳ ಆ ದೇವ-ದಾನವರೆಲ್ಲರೂ ರಜಿ ಎಂಬ ರಾಜನನ್ನು ಕುರಿತು ನಮ್ಮ ಜಯಲಾಭಕ್ಕೋಸ್ಕರವಾಗಿ ನೀನು ಉತ್ತಮವಾದ ಬಿಲ್ಲನ್ನು ತೆಗೆದುಕೊ ಎಂದು ಹೇಳಿದರು.

೮೭. ರಜಿಯು ಇಂತೆಂದನು :—ಎಲೆ ದೈತ್ಯರೆ! ನಾನು ಯುದ್ಧದಲ್ಲಿ ಇಂದ್ರನು ಮುಂತಾದ ದೇವತೆಗಳನ್ನು ಜಯಿಸುತ್ತೇನೆ. ತರುವಾಯ ನಾನು ಧರ್ಮಾತ್ಮನಾದ ಇಂದ್ರನ ಅಧಿಕಾರವನ್ನು ಆಕ್ರಮಿಸುತ್ತೇನೆ. ಹಾಗಾದರೆ ಸಮರಾಂಗಣದಲ್ಲಿ ಯುದ್ಧಮಾಡುತ್ತೇನೆ.

೮೮. ದಾನವರು ಇಂತೆಂದರು :—ನಮಗೆ ಪ್ರಹ್ಲಾದಾಸುರನು ಇಂದ್ರನಾಗಿರುವನು. ಅವನಿಗೋಸ್ಕರ ನಾವು ಜಯಿಸೋಣ, ರಾಜನೆ! ನೀನು ಕೂಡ ಈ ಸಮಯವನ್ನು ಅಂಗೀಕರಿಸು, ಅಥವಾ ದೇವತೆಗಳೊಪ್ಪುವ ಸಮಯದಂತೆ ಇರು.

೮೯. ಆಗ ರಾಜನು ಹಾಗೆ ಆಗಲೆಂದು ಹೇಳುತ್ತ ದೇವತೆಗಳಿಂದಲೂ ತಮ್ಮ ಸಹಾಯಾರ್ಥವಾಗಿ ಯುದ್ಧಮಾಡಲು ಪ್ರೇರೇಪಿಸಲ್ಪಟ್ಟನು. ಯುದ್ಧದಲ್ಲಿ ಜಯವನ್ನು ಹೊಂದಿ ನೀನು ಇಂದ್ರನಾಗು ಎಂದು ದೇವತೆಗಳಿಂದ ಹೇಳಲ್ಪಟ್ಟನು.

ಜಘಾನ ದಾನವಾನ್ ಸರ್ವಾನ್ ಯೇಽವಧ್ಯಾ ವಜ್ರಪಾಣಯಃ ।
ಸ ವಿಪ್ರನಷ್ಟಾಂ ದೇವಾನಾಂ ಪರಮಶ್ರೀಃ ಶ್ರಿಯಂ ವಶೀ ॥ ೯೦ ॥

ನಿಹತ್ಯ ದಾನವಾನ್ ಸರ್ವಾನಾಜಹಾರ ರಜಿಃ ಪ್ರಭುಃ ।
ತಂ ತಥಾಹ ರಜಿಂ ತತ್ರ ದೇವೈಃ ಸಹ ಶತಕ್ರತುಃ ॥ ೯೧ ॥

ರಜಿಪುತ್ರೋಽಹಮಿತ್ಯುಕ್ತ್ವಾ ಪುನರೇವಾಬ್ರವೀದ್ವಚಃ ।
ಇಂದ್ರೋಽಸಿ ರಾಜನ್ ದೇವಾನಾಂ ಸರ್ವೇಷಾಂ ನಾತ್ರ ಸಂಶಯಃ ॥ ೯೨ ॥

ಯಸ್ಯಾಹಮಿಂದ್ರಃ ಪುತ್ರಸ್ತೇ ಖ್ಯಾತಿಂ ಯಾಸ್ಯಾಮಿ ಶತ್ರುಹನ್ ।
ಸ ತು ಶಕ್ರವಚಃ ಶ್ರುತ್ವಾ ವಂಚಿತಸ್ತೇನ ಮಾಯಯಾ ॥ ೯೩ ॥

ತಥೇತ್ಯೇವಾಹ ವೈ ರಾಜಾ ಪ್ರೀಯಮಾಣಃ ಶತಕ್ರತುಮ್ ।
ತಸ್ಮಿಂಸ್ತು ದೇವಸದೃಶೇ ದಿವಂ ಪ್ರಾಪ್ತೇ ಮಹೀಪತೌ ॥ ೯೪ ॥

---

೯೦. ಆಗ ರಾಜನು ವಜ್ರವನ್ನು ಹಸ್ತದಲ್ಲಿ ಧರಿಸಿ ಅವಧ್ಯರಾಗಿದ್ದ ಎಲ್ಲ ದಾನವರನ್ನು ಸಂಹಾರ ಮಾಡಿದನು. ಮತ್ತು ಸರ್ವಸ್ವತಂತ್ರನಾದ ರಾಜನು ಕಳೆದುಹೋಗಿದ್ದ ದೇವತೆಗಳ ದಿವ್ಯ ಸಂಪತ್ತಿಯನ್ನು ಉದ್ಧರಿಸಿದನು.

೯೧. ಪ್ರಭುವಾದ ರಜಿರಾಜನು ಎಲ್ಲ ದಾನವರನ್ನು ಕೊಂದು ದೇವಸಂಪತ್ತನ್ನು ಹಿಂದಕ್ಕೆ ತಂದನು. ಆಗ ಸಮಸ್ತ ದೇವತೆಗಳೊಡನೆ ಇಂದ್ರನು ಅಲ್ಲಿ ರಜಿಯನ್ನು ಕುರಿತು ಈ ರೀತಿಯಾಗಿ ಹೇಳಿದನು.

೯೨. ನಾನು ರಜಿರಾಜನ ಪುತ್ರನಾಗಿರುವೆನು. ಎಂದು ಮೊದಲು ಹೇಳಿ ಮತ್ತೆ ಈ ವಚನವನ್ನು ಹೇಳಿದನು. ರಾಜನೆ! ಸಮಸ್ತ ದೇವತೆಗಳಿಗೆ ನೀನು ಇಂದ್ರನಾಗಿರುತ್ತಿ, ಇದರಲ್ಲಿ ಸಂಶಯವಿಲ್ಲ.

೯೩. ಶತ್ರುಗಳನ್ನು ಸಂಹರಿಸಿದ ವೀರರಾಜನೆ! ಇಂದ್ರನಾದ ನಾನು ನಿನಗೆ ಪುತ್ರನಾಗಿ ಜನಿಸಿ ಖ್ಯಾತಿಯನ್ನು ಹೊಂದುವೆನು. ಆಗ ರಾಜನು ಇಂದ್ರನ ವಚನವನ್ನು ಕೇಳಿ ಅವನಿಂದ ಮಾಯೆಯಿಂದ ವಂಚಿಸಲ್ಪಟ್ಟನು.

೯೪. ರಾಜನು ಪ್ರೀತಿಗೊಂಡವನಾಗಿ ಹಾಗೆಯೆ ಆಗಲಿ ಎಂದು ಇಂದ್ರನಿಗೆ ಹೇಳಿದನು. ತರುವಾಯ ದೇವಸಮಾನನಾದ ಆ ರಜಿರಾಜನು ಸ್ವರ್ಗಲೋಕಕ್ಕೆ ಬಂದನು.

ದಾಯಾದ್ಯಮಿಂದ್ರಾದಾಜಹ್ರು ರಾಜಾರ್ಯತನಯಾ ರಜೇಃ ।
ತಾನಿ ಪುತ್ರ ಶತಾನ್ಯಸ್ಯ ತಚ್ಚ ಸ್ಥಾನಂ ಶಚೀಪತೇಃ ॥ ೯೫ ॥

ಸಮಾಕ್ರಾಮಂತ ಬಹುಧಾ ಸ್ವರ್ಗಲೋಕಂ ತ್ರಿವಿಷ್ಟಪಮ್ ।
ತತಃ ಕಾಲೇ ಬಹುತಿಥೇ ಸಮತೀತೇ ಮಹಾಬಲಃ ॥ ೯೬ ॥

ಹತರಾಜ್ಯೋಽಬ್ರವೀಚ್ಛಕ್ರೋ ಹತಭಾಗೋ ಬೃಹಸ್ಪತಿಮ್ ।
ಬದರೀಫಲಮಾತ್ರಂ ವೈ ಪುರೋಡಾಶಂ ವಿಧತ್ಸ್ವ ಮೇ ॥ ೯೭ ॥

ಬ್ರಹ್ಮರ್ಷೇ ಯೇನ ತಿಷ್ಠೇಯಂ ತೇಜಸಾಪ್ಯಾಯಿತಸ್ತತಃ ।
ಬ್ರಹ್ಮನ್ ಕೃಶೋಽಹಂ ವಿಮನಾ ಹೃತರಾಜ್ಯೋ ಹೃತಾಸನಃ ॥ ೯೮ ॥

ಹತೌಜಾ ದುರ್ಬಲೋ ಯುದ್ಧೇ ರಜಿಪುತ್ರೈಃ ಪ್ರಸೀದ ಮೇ ।
ಬೃಹಸ್ಪತಿರುವಾಚ :—
ಯದ್ಯೇವಂ ಚೋದಿತಃ ಶಕ್ರ ತ್ವಯಾಸ್ಯಾಂ ಪೂರ್ವಮೇವ ಹಿ ॥ ೯೯ ॥

---

೯೫. ಆಗ ರಜಿರಾಜನ ಆಚಾರ್ಯರ ಪುತ್ರರು ಇಂದ್ರನಿಂದ ಸಮಸ್ತ ಸ್ವತ್ತನ್ನು ಅಪಹರಿಸಿದರು. ಮತ್ತು ಅವನ ಒಂದುನೂರು ಮಂದಿ ಪುತ್ರರು ಇಂದ್ರನ ಸ್ಥಾನ ಮುಂತಾದ ಭೋಗಪದವನ್ನು ಆಕ್ರಮಿಸಿದರು.

೯೬. ಮತ್ತು ತೃತೀಯ ಭುವನವಾದ ಸ್ವರ್ಗಲೋಕವನ್ನು ಸರ್ವತೋಮುಖವಾಗಿ ಆಕ್ರಮಣಮಾಡಿದರು. ತರುವಾಯ ಮಹಾ ಬಲಿಷ್ಠನಾಗಿದ್ದ ಇಂದ್ರನಿಗೆ ಅನೇಕ ಕಾಲಗಣವು ಕಳೆದುಹೋಯಿತು.

೯೭. ಆಗ ರಾಜ್ಯವನ್ನು ಕಳೆದುಕೊಂಡ, ಹವಿರ್ಭಾಗಶೂನ್ಯನಾದ ಇಂದ್ರನು ಬೃಹಸ್ಪತ್ಯಾಚಾರ್ಯನನ್ನು ಕುರಿತು ಹೇಳಿದನು. ಒಂದು ಬದರೀಫಲದ ಪರಿಮಾಣವುಳ್ಳ ಪುರೋಡಾಶಹವಿಸ್ಸನ್ನು ನನಗೆ ದೊರಕಿಸು.

೯೮. ಬ್ರಹ್ಮರ್ಷಿಯೆ! ನಾನು ಆ ಪುರೋಡಾಶದ ತೇಜೋಮಾತ್ರದಿಂದ ಆಪ್ಯಾಯನ ಹೊಂದಿ ಬದುಕುವೆನು. ಬ್ರಾಹ್ಮಣನೆ! ನಾನು ಕೃಶನೂ, ವಿಷಾದ ಹೊಂದಿದ ಮಾನಸವುಳ್ಳವನೂ, ರಾಜ್ಯವನ್ನು ಕಳೆದುಕೊಂಡವನೂ, ಮತ್ತು ಸ್ಥಾನ ಚ್ಯುತಿ ಹೊಂದಿದವನೂ ಆಗಿರುವೆನು.

೯೯. ಯುದ್ಧದಲ್ಲಿ ರಜಿಯಪುತ್ರರಿಂದ ನಾಶಗೊಳಿಸಲ್ಪಟ್ಟ ವೀರ್ಯವುಳ್ಳವನಾಗಿ ಬಲಹೀನನಾಗಿದ್ದೇನೆ. ನನ್ನನ್ನು ಅನುಗ್ರಹಿಸು ಎಂದು ಇಂದ್ರನು ದೀನವಾಗಿ ಕೇಳಲು ಬೃಹಸ್ಪತಿಯು ಇಂತೆಂದನು:—ಇಂದ್ರನೆ! ನೀನು ಈ ಅವಸ್ಥೆಯನ್ನು ಹೊಂದಿ ಹೀಗೆ ಕೇಳಿಕೊಳ್ಳುವುದಾದರೆ ಮೊದಲು ಎಚ್ಚರವಾಗಿರಬಹುದಾಗಿತ್ತು.

ನಾಭವಿಷ್ಯತ್ತ್ವತ್ಪ್ರಿಯಾರ್ಥಮಕರ್ತವ್ಯಂ ಮಮಾನಘ ।
ಪ್ರಯತಿಷ್ಯಾಮಿ ದೇವೇಂದ್ರ ತ್ವದ್ಧಿತಾರ್ಥಂ ಮಹಾದ್ಯುತೇ ॥ ೧೦೦ ॥

ಯಜ್ಞಭಾಗಂ ಚ ರಾಜ್ಯಂ ಚ ಅಚಿರಾತ್ ಪ್ರತಿಪತ್ಸ್ಯಸೇ ।
ತಥಾ ಶಕ್ರ ಗಮಿಷ್ಯಾಮಿ ಮಾ ಭೂತ್ತೇ ವಿಕ್ಲವಂ ಮನಃ ॥ ೧೦೧ ॥

ತತಃ ಕರ್ಮ ಚಕಾರಾಸ್ಯ ತೇಜಃಸಂವರ್ಧನಂ ಮಹತ್ ।
ತೇಷಾಂ ಚ ಬುದ್ಧಿಸಮ್ಮೋಹಮಕರೋದ್ಬುದ್ಧಿಸತ್ತಮಃ ॥ ೧೦೨ ॥

ತೇ ಯದಾ ತು ಸುಸಮ್ಮೂಢಾ ರಾಗಾನ್ಮತ್ತಾ ವಿಧರ್ಮಿಣಃ ।
ಬ್ರಹ್ಮದ್ವಿಷಶ್ಚ ಸಂವೃತ್ತಾ ಹತವೀರ್ಯಪರಾಕ್ರಮಾಃ ॥ ೧೦೩ ॥

ತತೋ ಲೇಭೇ ಸುರೈಶ್ವರ್ಯಮೈಂದ್ರಸ್ಥಾನಂ ತಥೋತ್ತಮಮ್ ।
ಹತ್ವಾ ರಜಿಸುತಾನ್ ಸರ್ವಾನ್ ಕಾಮಕ್ರೋಧಪರಾಯಣಾನ್ ॥೧೦೪॥

---

೧೦೦. ನಿಷ್ಕಲಂಕನೆ! ನಿನ್ನ ಪ್ರಿಯಕ್ಕೋಸ್ಕರ ನನಗೆ ಅಕರ್ತವ್ಯವೆಂಬುದು ಯಾವುದೂ ಇಲ್ಲ. ಮಹಾ ಕಾಂತಿಶಾಲಿಯಾದ ದೇವೇಂದ್ರನೆ! ನಿನ್ನ ಹಿತಕ್ಕೋಸ್ಕರ ನಾನು ಪ್ರಯತ್ನಿಸುತ್ತೇನೆ.

೧೦೧. ಇಂದ್ರನೆ! ಯಜ್ಞಭಾಗವನ್ನೂ ರಾಜ್ಯವನ್ನೂ ಶೀಘ್ರವಾಗಿ ನೀನು ಮತ್ತೆ ಹೊಂದುತ್ತೀಯೆ, ಹಾಗೆ ನಾನು ಯತ್ನಿಸುತ್ತೇನೆ. ನಿನ್ನ ಮನಸ್ಸು ಚಿಂತೆಯಿಂದ ಕಳವಳಗೊಳ್ಳಬಾರದು.

೧೦೨. ತರುವಾಯ ಬೃಹಸ್ಪತಿಯು ಇಂದ್ರನಿಗೆ ತೇಜೋವೃದ್ಧಿಯನ್ನುಂಟುಮಾಡುವ ಒಂದು ಮಹತ್ತಾದ ಕರ್ಮವನ್ನು ಮಾಡಿದನು. ಮತ್ತು ಬುದ್ಧಿಶಾಲಿಯಾದ ಬೃಹಸ್ಪತಿಯು ಅವರಿಗೆ ಬುದ್ಧಿಯಲ್ಲಿ ಮೋಹವನ್ನುಂಟುಮಾಡಿದನು.

೧೦೩. ಆಗ ಆ ರಾಜಪುತ್ರರು ಮೋಹವುಳ್ಳವರಾಗಿ ರಾಗದಿಂದ ಮತ್ತರೂ, ಧರ್ಮಭ್ರಷ್ಟರೂ, ಬ್ರಹ್ಮದ್ವೇಷಿಗಳೂ ಮತ್ತು ನಾಶವಾದ ವೀರ್ಯ-ಪರಾಕ್ರಮವುಳ್ಳವರೂ ಆದರು.

೧೦೪. ತರುವಾಯ ಇಂದ್ರನು ಕಾಮ-ಕ್ರೋಧಾದಿಗಳ ಪರತಂತ್ರರಾದ ಎಲ್ಲ ರಜಿಪುತ್ರರನ್ನು ಸಂಹರಿಸಿ ದೇವೈಶ್ವರ್ಯವನ್ನೂ ಉತ್ತಮವಾದ ಇಂದ್ರಸ್ಥಾನವನ್ನೂ ಮತ್ತೆ ಹೊಂದಿದನು.

ಯ ಇದಂ ಚ್ಯವನಂ ಸ್ಥಾನಾತ್ಪ್ರತಿಷ್ಠಾಂ ಚ ಶತಕ್ರತೋಃ ।
ಶೃಣುಯಾಚ್ಛ್ರಾವಯೇದ್ವಾಪಿ ನ ಸ ದೌರಾತ್ಮ್ಯಮಾಪ್ನುಯಾತ್
॥ ೧೦೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಸಪ್ತಷಷ್ಟಿತಮೋಽಧ್ಯಾಯಃ

---

೧೦೫. ಯಾವ ಮಾನವನು ಇಂದ್ರನಿಗೆ ಉಂಟಾದ ಸ್ಥಾನಭ್ರಂಶ ಮತ್ತು ಪುನಃ ಸ್ವಸ್ಥಾನಪ್ರತಿಷ್ಠೆಗಳಿಂದ ಕೂಡಿದ ಚರಿತ್ರವನ್ನು ಶ್ರವಣಮಾಡುವನೊ, ಅಥವಾ ಪರರಿಂದ ಶ್ರವಣಮಾಡಿಸುವನೊ ಅವನು ದುರಾತ್ಮಸ್ವಭಾವವನ್ನು ಹೊಂದುವುದಿಲ್ಲ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೇಳನೆಯ
ಅಧ್ಯಾಯವು ಮುಗಿದುದು

---

# ಅಷ್ಟಷಷ್ಟಿತಮೋऽಧ್ಯಾಯಃ

---

ಋಷಯ ಊಚುಃ :—

ಮರುತೇನ ಕಥಂ ಕನ್ಯಾ ರಾಜ್ಞೇ ದತ್ತಾ ಮಹಾತ್ಮನಾ ।
ಕಿಂವೀರ್ಯಾಶ್ಚ ಮಹಾತ್ಮಾನೋ ಜಾತಾ ಮರುತಕನ್ಯಯಾ ॥ ೧ ॥

ಸೂತ ಉವಾಚ :—

ಆಹರತ್ಸ ಮರುತ್ಸೋಮಮನ್ನಕಾಮಃ ಪ್ರಜೇಶ್ವರಃ ।
ಮಾಸಿ ಮಾಸಿ ಮಹಾತೇಜಾಃ ಷಷ್ಟಿಸಂವತ್ಸರಾನ್ನೃಪ ॥ ೨ ॥

ತೇನ ತೇ ಮರುತಸ್ತಸ್ಯ ಮರುತ್ಸೋಮೇನ ತೋಷಿತಾಃ ।
ಅಕ್ಷಯಾನ್ನಂ ದದುಃ ಪ್ರೀತಾಃ ಸರ್ವಕಾಮಪರಿಚ್ಛದಮ್ ॥ ೩ ॥

ಅನ್ನಂ ತಸ್ಯ ಸಕೃದ್ಭುಕ್ತಮಹೋರಾತ್ರಂ ನ ಕ್ಷೀಯತೇ ।
ಕೋಟಿಶೋ ದೀಯಮಾನಂ ಚ ಸೂರ್ಯಸ್ಯೋದಯನಾದಪಿ ॥ ೪ ॥

---

೧. ಮುನಿಗಳು ಇಂತೆಂದರು :—ಮಹಾತ್ಮನಾದ ಮರುತನಿಂದ ತನ್ನ ಕನ್ಯೆಯು ರಾಜನಿಗೆ ಹೇಗೆ ಪ್ರದಾನಮಾಡಲ್ಪಟ್ಟಳು? ಮತ್ತು ಆ ಮರುತನ ಕನ್ಯೆಯಿಂದ ಹುಟ್ಟಿದ ಮಹಾತ್ಮರಾದ ಪ್ರಜೆಗಳು ಎಂತಹ ವೀರ್ಯವುಳ್ಳವರಾಗಿದ್ದರು?

೨. ಸೂತಮುನಿಯು ಇಂತೆಂದನು :—ರಾಜನೆ! ಮಹಾ ತೇಜಸ್ವಿಯೂ, ಮಹಾರಾಜನೂ ಆದ ಮರುತನು ಅನ್ನಸಮೃದ್ಧಿಯ ಕಾಮನೆಯುಳ್ಳವನಾಗಿ ಅರವತ್ತು ವರ್ಷಗಳ ವರೆಗೆ ಪ್ರತಿಮಾಸದಲ್ಲಿಯೂ ಸೋಮಯಾಗವನ್ನು ಆಚರಿಸಿದನು.

೩. ಮರುತನು ಮಾಡಿದ ಸೋಮಯಾಗದಿಂದ ತೃಪ್ತರಾದ ಮರುದ್ದೇವತೆಗಳು ಸುಪ್ರೀತರಾಗಿ ಮರುತನಿಗೆ ಸಕಲೇಷ್ಟಾರ್ಥೋಪಕರಣಗಳಿಂದ ಕೂಡಿದ ಅಕ್ಷಯವಾದ ಅನ್ನವನ್ನು ಅನುಗ್ರಹಿಸಿದರು.

೪. ಒಂದುಸಲ ಕಲ್ಪಿಸಿರುವ ಅನ್ನವನ್ನು ಸೂರ್ಯನ ಉದಯ ಮೊದಲುಗೊಂಡು ಕೋಟಿ ಸಂಖ್ಯೆಯಷ್ಟು ಅರ್ಥಿಗಳಿಗೆ ಕೊಟ್ಟರೂ ಅಹೋರಾತ್ರದ ವರೆಗೂ ಅದು ಕ್ಷಯಿಸುತ್ತಿರಲಿಲ್ಲ.

ಮಿತ್ರಜ್ಯೋತೇಸ್ತು ಕನ್ಯಾ ಯಾ ಮರುತಸ್ಯ ಚ ಧೀಮತಃ ।
ತಸ್ಮಾಜ್ಜಾತಾ ಮಹಾಸತ್ತ್ವಾ ಧರ್ಮಜ್ಞಾ ಮೋಕ್ಷದರ್ಶಿನಃ ॥ ೫ ॥

ಸನ್ನ್ಯಸ್ಯ ಗೃಹಧರ್ಮಾಣಿ ವೈರಾಗ್ಯಂ ಸಮುಪಸ್ಥಿತಾಃ ।
ಯತಿಧರ್ಮಮವಾಪ್ಯೇಹ ಬ್ರಹ್ಮಭೂಯಾಯ ತೇ ಗತಾಃ ॥ ೬ ॥

ಅನೇನಸಃ ಸುತೋ ಜಾತಃ ಕ್ಷತ್ರಧರ್ಮಾಃ ಪ್ರತಾಪವಾನ್ ।
ಕ್ಷತ್ರಧರ್ಮಸುತೋ ಜಾತಃ ಪ್ರತಿಪಕ್ಷೋ ಮಹಾತಪಾಃ ॥ ೭ ॥

ಪ್ರತಿಪಕ್ಷಸುತಶ್ಚಾಪಿ ಸೃಂಜಯೋ ನಾಮ ವಿಶ್ರುತಃ ।
ಸೃಂಜಯಸ್ಯ ಜಯಃ ಪುತ್ರೋ ವಿಜಯಸ್ತಸ್ಯ ಜಜ್ಞಿವಾನ್ ॥ ೮ ॥

ವಿಜಯಸ್ಯ ಜಯಃ ಪುತ್ರಸ್ತಸ್ಯ ಹರ್ಯಶ್ವಕಃ ಸ್ಮೃತಃ ।
ಹರ್ಯಶ್ವಸ್ಯ ಸುತೋ ರಾಜಾ ಸಹದೇವಃ ಪ್ರತಾಪವಾನ್ ॥ ೯ ॥

---

೫. ಜ್ಞಾನಿಯಾದ ಇಂತಹ ಮರುತನ ಕನ್ಯೆಯು ಮಿತ್ರಜ್ಯೋತಿ ಎಂಬುವನ ಭಾರ್ಯೆಯಾಗಿದ್ದಳು. ಮಿತ್ರಜ್ಯೋತಿಯಿಂದ ಮಹಾಸತ್ತ್ವವಂತರೂ ಧರ್ಮಜ್ಞರೂ ಮತ್ತು ಮೋಕ್ಷ ಸಾಕ್ಷಾತ್ಕಾರವುಳ್ಳವರೂ ಆದ ಪ್ರಜೆಗಳು ಜನಿಸಿದರು.

೬. ಅವರು ಸಮಸ್ತ ಗೃಹಸ್ಥಧರ್ಮಗಳನ್ನು ಸನ್ನ್ಯಾಸಮಾಡಿ ಉತ್ತಮವಾದ ವೈರಾಗ್ಯವನ್ನು ಹೊಂದಿ, ಯತಿಗಳ ಧರ್ಮವನ್ನು ಆಚರಿಸುತ್ತ ಬ್ರಹ್ಮಭಾವವೆಂಬ ಮುಕ್ತಿಪದವಿಗೆ ಹೋದರು.

೭. ಅನೇನ ಎಂಬುವನಿಗೆ ಪ್ರತಾಪಶಾಲಿಯಾದ ಕ್ಷತ್ರಧರ್ಮ ಎಂಬ ಪುತ್ರನು ಜನಿಸಿದನು. ಆ ಕ್ಷತ್ರಧರ್ಮನಿಗೆ ಮಹಾ ತಪಸ್ವಿಯಾದ ಪ್ರತಿಪಕ್ಷ ಎಂಬ ಪುತ್ರನು ಇದ್ದನು.

೮. ಪ್ರತಿಪಕ್ಷನಿಗೆ ಸೃಂಜಯನೆಂಬ ನಾಮಾಂಕಿತನಾದ ಪುತ್ರನು ಪ್ರಸಿದ್ಧನಾಗಿದ್ದನು. ಸೃಂಜಯನಿಗೆ ಜಯ ಎಂಬ ಪುತ್ರನೂ ಜಯನಿಗೆ ವಿಜಯ ಎಂಬ ಪುತ್ರನೂ ಜನಿಸಿದರು.

೯. ಆ ವಿಜಯನಿಗೆ ಜಯನೆಂಬ ಪುತ್ರನೂ ಜಯನಿಗೆ ಹರ್ಯಶ್ವ ಎಂಬ ಪುತ್ರನೂ ಜನಿಸಿರುವರೆಂದು ಸ್ಮರಿಸಲ್ಪಟ್ಟಿರುವರು, ಹರ್ಯಶ್ವನಿಗೆ ಪ್ರತಾಪವಂತನಾದ ಸಹದೇವನೆಂಬ ರಾಜನು ಪುತ್ರನಾಗಿದ್ದನು.

ಸಹದೇವಸ್ಯ ಧರ್ಮಾತ್ಮಾ ಅಹೀನ ಇತಿ ವಿಶ್ರುತಃ ।
ಅಹೀನಸ್ಯ ಜಯತ್ಸೇನಸ್ತಸ್ಯ ಪುತ್ರೋಽಥ ಸಂಕೃತಿಃ ॥ ೧೦ ॥

ಸಂಕೃತೇರಪಿ ಧರ್ಮಾತ್ಮಾ ಕೃತಧರ್ಮಾ ಮಹಾಯಶಾಃ ।
ಇತ್ಯೇತೇ ಕ್ಷತ್ರಧರ್ಮಾಣೋ ನಹುಷಸ್ಯ ನಿಬೋಧತ ॥ ೧೧ ॥

ನಹುಷಸ್ಯ ತು ದಾಯಾದಾಃ ಷಡಿಂದ್ರೋಪಮತೇಜಸಃ ।
ಯತಿರ್ಯಯಾತಿಃ ಸಂಯಾತಿರಾಯತಿರ್ವಿಯತಿಃ ಕೃತಿಃ ॥ ೧೨ ॥

ಯತಿರ್ಜ್ಯೇಷ್ಠಸ್ತು ತೇಷಾಂ ವೈ ಯಯಾತಿಸ್ತು ತತೋಽವರಃ ।
ಕಾಕುತ್ಸ್ಥಕನ್ಯಾಂ ಗಾಂ ನಾಮ ಲೇಭೇ ಪತ್ನೀಂ ಯತಿಸ್ತದಾ ॥ ೧೩ ॥

ಸ ಯತಿರ್ಮೋಕ್ಷಮಾಸ್ಥಾಯ ಬ್ರಹ್ಮಭೂತೋಽಭವನ್ಮುನಿಃ ।
ತೇಷಾಂ ಮಧ್ಯೇ ತು ಪಂಚಾನಾಂ ಯಯಾತಿಃ ಪೃಥಿವೀಪತಿಃ ॥ ೧೪ ॥

---

೧೦. ಸಹದೇವನಿಗೆ ಧಾರ್ಮಿಕೋತ್ತಮನಾದ ಅಹೀನನೆಂಬ ಪುತ್ರನು ಖ್ಯಾತಿಯನ್ನು ಹೊಂದಿದ್ದನು. ಅಹೀನನಿಗೆ ಜಯತ್ಸೇನನೆಂಬ ಪುತ್ರನೂ ಮತ್ತು ಜಯತ್ಸೇನನಿಗೆ ಸಂಕೃತಿ ಎಂಬ ಪುತ್ರನೂ ಇದ್ದರು.

೧೧. ಆ ಸಂಕೃತಿ ಎಂಬುವನಿಗೆ ಧರ್ಮಾತ್ಮನೂ ಮಹಾ ಕೀರ್ತಿಸಂಪನ್ನನೂ ಆದ ಕೃತಧರ್ಮನು ಪುತ್ರನಾಗಿದ್ದನು. ಇವರೆಲ್ಲರೂ ಕ್ಷಾತ್ರಧರ್ಮೋಚಿತರಾದ ರಾಜರಾಗಿದ್ದರು. ಮುಂದೆ ನಹುಷರಾಜನ ವಂಶಾವಳಿಯನ್ನು ಶ್ರವಣಮಾಡಿರಿ.

೧೨. ನಹುಷರಾಜನಿಗೆ ಯತಿ, ಯಯಾತಿ, ಸಂಯಾತಿ, ಆಯತಿ, ವಿಯತಿ ಮತ್ತು ಕೃತಿಯೆಂಬ ಹೆಸರುಳ್ಳ, ಇಂದ್ರನಿಗೆ ತುಲ್ಯವಾದ ತೇಜಸ್ಸಿನಿಂದ ಕೂಡಿದ ಆರು ಮಂದಿ ಪುತ್ರರಿದ್ದರು.

೧೩. ಅವರಲ್ಲಿ ಯತಿ ಎಂಬುವನು ಜ್ಯೇಷ್ಠ ಪುತ್ರನಾಗಿದ್ದನು. ಯಯಾತಿಯು ಅವನ ಒಡಹುಟ್ಟಿದವನಾಗಿದ್ದನು. ಆಗ ಯತಿಯು ಕಾಕುತ್ಸ್ಥ ರಾಜನ ಕನ್ಯೆಯಾದ ಗೋ ಎಂಬಾಕೆಯನ್ನು ಪತ್ನಿಯನ್ನಾಗಿ ಹೊಂದಿದ್ದನು.

೧೪. ಕ್ರಮವಾಗಿ ಆ ಯತಿಯು ಮುನಿಯಾಗಿ ಬ್ರಹ್ಮಭಾವವನ್ನು ಹೊಂದಿ ಮುಕ್ತಿಯನ್ನು ಪಡೆದನು. ಮಿಕ್ಕ ಐದುಮಂದಿ ಸಹೋದರರಲ್ಲಿ ಯಯಾತಿ ಎಂಬ ರಾಜನು ಒಬ್ಬನಾಗಿದ್ದನು.

ದೇವಯಾನೀಮುಶನಸಃ ಸುತಾಂ ಭಾರ್ಯಾಮವಾಪ ಹ ।
ಶರ್ಮಿಷ್ಠಾಮಾಸುರೀಂ ಚೈವ ತನಯಾಂ ವೃಷಪರ್ವಣಃ ॥ ೧೫ ॥

ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ।
ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ॥ ೧೬ ॥

ಅಜೀಜನನ್ಮಹಾವೀರ್ಯಾನ್ ಸುತಾನ್ ದೇವಸುತೋಪಮಾನ್ ।
ರಥಂ ತಸ್ಮೈ ದದೌ ಶಕ್ರಃ ಪ್ರೀತಃ ಪರಮಭಾಸ್ವರಮ್ ॥ ೧೭ ॥

ಅಸಂಗಂ ಕಾಂಚನಂ ದಿವ್ಯಮಕ್ಷಯೌ ಚ ಮಹೇಷುಧೀ ।
ಯುಕ್ತಂ ಮನೋಜವೈರಶ್ವೈರ್ಯೇನ ಕನ್ಯಾಂ ಸಮುದ್ವಹತ್ ॥ ೧೮ ॥

ಸ ತೇನ ರಥಮುಖ್ಯೇನ ಜಿಗಾಯ ಸತತಂ ಮಹೀಮ್ ।
ಯಯಾತಿರ್ಯುಧಿ ದುರ್ಧರ್ಷೋ ದೇವದಾನವಮಾನವೈಃ ॥ ೧೯ ॥

---

೧೫. ಅವನು ಶುಕ್ರಾಚಾರ್ಯನ ಪುತ್ರಿಯಾದ ದೇವಯಾನೀ ಎಂಬ ಭಾರ್ಯೆಯನ್ನೂ ಮತ್ತು ವೃಷಪರ್ವನ ಪುತ್ರಿಯಾದ ಅಸುರಜಾತಿಯ ಶರ್ಮಿಷ್ಠಾ ಎಂಬ ಭಾರ್ಯೆಯನ್ನೂ ಹೊಂದಿದ್ದನು.

೧೬. ದೇವಯಾನಿ ಎಂಬುವಳು ಯದು, ತುರ್ವಸು ಎಂಬ ಇಬ್ಬರು ಪುತ್ರರನು ಪ್ರಸವಿಸಿದಳು. ವೃಷಪರ್ವನ ಪುತ್ರಿಯಾದ ಶರ್ಮಿಷ್ಠೆ ಎಂಬಾಕೆಯು ದ್ರುಹ್ಯು, ಅನು ಮತ್ತು ಪೂರು ಎಂಬ ಪುತ್ರರನ್ನು ಹೊಂದಿದಳು.

೧೭. ಶರ್ಮಿಷ್ಠೆಯು ಪ್ರಸವಿಸಿದ ಪುತ್ರರೂ ದೇವಪುತ್ರರಿಗೆ ಸದೃಶರಾಗಿ ಬಲು ವೀರ್ಯವಂತರಾಗಿದ್ದರು. ಇಂದ್ರನು ಯಯಾತಿಯ ವಿಷಯದಲ್ಲಿ ಸುಪ್ರೀತನಾಗಿ ಅತ್ಯಂತ ಪ್ರಕಾಶಮಯವಾದ ರಥವನ್ನು ಅವನಿಗೆ ಕೊಟ್ಟನು.

೧೮. ತಡೆಯಿಲ್ಲದ ಗತಿಯುಳ್ಳದ್ದೂ ಸುವರ್ಣಮಯವೂ ಆದ ರಥದ ಜೊತೆಗೆ ಅಕ್ಷಯವಾದ ಬತ್ತಳಿಕೆಗಳನ್ನೂ ಮನೋವೇಗವುಳ್ಳ ಉತ್ತಮವಾದ ಅಶ್ವಗಳನ್ನೂ ಕೊಟ್ಟನು. ಆ ರಥದ ಸಹಾಯದಿಂದ ಅವನು ಕನ್ಯೆಯನ್ನು ಮದುವೆಯಾಗಿದ್ದನು.

೧೯. ಯಯಾತಿ ರಾಜನು ಉತ್ತಮವಾದ ರಥದಿಂದ ಯುದ್ಧಮಾಡಿ ರಣರಂಗದಲ್ಲಿ ದೇವ, ದಾನವ, ಮತ್ತು ಮಾನವರಿಂದ ತಡೆಯಲಾಗದಂತೆ ಇದ್ದು ಸಂತತವಾಗಿ ಭೂಮಿಯನ್ನು ಜಯಿಸಿದನು.

ಪೌರವಾಣಾಂ ನೃಪಾಣಾಂ ಚ ಸರ್ವೇಷಾಂ ಸೋಽಭವದ್ರಥೀ ।
ಯಾವತ್ಸ ದೇಶಪ್ರಭವಃ ಕೌರವ್ಯೋ ಜನಮೇಜಯಃ ॥ ೨೦ ॥

ಕುರೋಃ ಪೌತ್ರಸ್ಯ ರಾಜ್ಞಸ್ತು ರಾಜ್ಞಃ ಪಾರೀಕ್ಷಿತಸ್ಯ ಹ ।
ಜಗಾಮ ಸ ರಥೋ ನಾಶಂ ಶಾಪಾದ್ಗಾರ್ಗ್ಯಸ್ಯ ಧೀಮತಃ ॥ ೨೧ ॥

ಗಾರ್ಗ್ಯಸ್ಯ ಹಿ ಸುತಂ ಬಾಲಂ ಸ ರಾಜಾ ಜನಮೇಜಯಃ ।
ದುರ್ಬುದ್ಧಿರ್ಹಿಂಸಯಾಮಾಸ ಲೋಹಗಂಧೀ ನರಾಧಿಪಃ ॥ ೨೨ ॥

ಸ ಲೋಹಗಂಧೀ ರಾಜರ್ಷಿಃ ಪರಿಧಾವನ್ನಿತಸ್ತತಃ ।
ಪೌರಜಾನಪದೈಸ್ತ್ಯಕ್ತೋ ನ ಲೇಭೇ ಶರ್ಮ ಕರ್ಹಿಚಿತ್ ॥ ೨೩ ॥

ತತಃ ಸ ದುಃಖಸಂತಪ್ತೋ ನಾಲಭತ್ಸಂವಿದಂ ಕ್ವಚಿತ್ ।
ಸ ಪ್ರಾಯಾಚ್ಛೌನಕಮೃಷಿಂ ಶರಣಂ ವ್ಯಥಿತಸ್ತದಾ ॥ ೨೪ ॥

---

೨೦. ಕುರುವಂಶದಲ್ಲಿ ಜನಮೇಜಯನೆಂಬ ರಾಜನು ಹುಟ್ಟುವ ವರೆಗೆ ಆ ದೇಶದಲ್ಲಿ ಆಳಿರುವ ಪುರುವಂಶಾವಳಿಯಲ್ಲಿ ಜನಿಸಿರುವ ಎಲ್ಲ ರಾಜರಿಗೂ ಆ ರಥವು ಸಾಧನವಾಗಿತ್ತು.

೨೧. ಕುರುರಾಜನ ಪೌತ್ರನೂ ಪರೀಕ್ಷಿದ್ರಾಜನ ಪುತ್ರನೂ ಆ ಜನಮೇಜಯ ರಾಜನಿಂದ ಆ ರಥವು ಜ್ಞಾನಿಯಾದ ಗರ್ಗಮುನಿಯ ಶಾಪ ನಿಮಿತ್ತದಿಂದ ನಾಶವನ್ನು ಹೊಂದಿತು.

೨೨. ಆ ಜನಮೇಜಯ ರಾಜನು ಗಾರ್ಗ್ಯಮುನಿಯ ಬಾಲಕನಾದ ಪುತ್ರನನ್ನು ಅವಿವೇಕದಿಂದ ಹಿಂಸೆಮಾಡಿದನು. ಆ ಹಿಂಸಾಕರ್ಮದಿಂದ ರಾಜನು ಲೋಹಗಂಧಿ ಯಾದನು.

೨೩. ಲೋಹಗಂಧಿಯಾದ ಆ ರಾಜರ್ಷಿಯು ಅಲ್ಲಲ್ಲಿ ಸಂಚರಿಸುತ್ತ ಪುರ-ಗ್ರಾಮವಾಸಿಗಳಾದ ಸಮಸ್ತಜನರಿಂದ ತ್ಯಜಿಸಲ್ಪಟ್ಟವನಾಗಿ ಒಂದು ಎಡೆಯಲ್ಲಿಯೂ ಸುಖವನ್ನು ಹೊಂದಲಿಲ್ಲ.

೨೪. ತರುವಾಯ ದುಃಖದಿಂದ ಪೀಡಿತನಾದ ಆ ರಾಜನು ಕಷ್ಟದಿಂದ ಪಾರಾಗುವ ಯಾವ ಉಪಾಯವನ್ನೂ ಅರಿಯಲಿಲ್ಲ. ಕಡೆಯಲ್ಲಿ ಅವನು ಶೌನಕನೆಂಬ ಮುನಿಯನ್ನು ಶರಣಹೊಂದಿದನು.

ಇಂದ್ರೋತೋ ನಾಮ ವಿಖ್ಯಾತೋ ಯೋಽಸೌ ಮುನಿರುದಾರಧೀಃ ।
ಯೋಜಯಾಮಾಸ ಚೇಂದ್ರೋತಃ ಶೌನಕೋ ಜನಮೇಜಯಮ್ ॥ ೨೫ ॥

ಅಶ್ವಮೇಧೇನ ರಾಜಾನಂ ಪಾವನಾರ್ಥಂ ದ್ವಿಜೋತ್ತಮಾಃ ।
ಸ ಲೋಹಗಂಧೋ ವ್ಯನಶತ್ತಸ್ಯಾವಭೃಥಮೇತ್ಯ ಹ ॥ ೨೬ ॥

ಸ ವೈ ದಿವ್ಯೋ ರಥಸ್ತಸ್ಮಾದ್ವಸೋಶ್ಚೇದಿಪತೇಸ್ತಥಾ ।
ದತ್ತಃ ಶಕ್ರೇಣ ತುಷ್ಟೇನ ಲೇಭೇ ತಸ್ಮಾದ್ಬೃಹದ್ರಥಃ ॥ ೨೭ ॥

ತತೋ ಹತ್ವಾ ಜರಾಸಂಧಂ ಭೀಮಸ್ತಂ ರಥಮುತ್ತಮಮ್ ।
ಪ್ರದದೌ ವಾಸುದೇವಾಯ ಪ್ರೀತ್ಯಾ ಕೌರವನಂದನಃ ॥ ೨೮ ॥

ಸ ಜರಾಂ ಪ್ರಾಪ್ಯ ರಾಜರ್ಷಿರ್ಯಯಾತಿರ್ನಹುಷಾತ್ಮಜಃ ।
ಪುತ್ರಂ ಶ್ರೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ವಚಃ ॥ ೨೯ ॥

---

೨೫. ಉದಾರವಾದ ಬದ್ಧಿಯುಳ್ಳ ಆ ಮುನಿಯು ಇಂದ್ರೋತನೆಂದು ಪ್ರಖ್ಯಾತನಾಗಿದ್ದನು. ಆ ಶೌನಕ ಅಥವಾ ಇಂದ್ರೋತ ಎಂಬ ಮುನಿಯು ಜನಮೇಜಯ ರಾಜನನ್ನು ಶರಣಕೊಟ್ಟು ಸಂತೈಸಿದನು.

೨೬. ದ್ವಿಜೋತ್ತಮರೆ! ಆ ರಾಜನು ಪವಿತ್ರನಾಗುವುದಕ್ಕೋಸ್ಕರ ಅಶ್ವಮೇಧ ಯಾಗವನ್ನು ಮಾಡಿಸಿದನು. ಯಾಗಾವಸಾನದಲ್ಲಿ ಅವಭೃಥಕರ್ಮವು ಪೂರ್ತಿಯಾಗಲು ಅವನ ಲೋಹಗಂಧವು ನಾಶವಾಯಿತು.

೨೭. ಆಗ ಸಂತುಷ್ಟನಾದ ಇಂದ್ರನಿಂದ ದಿವ್ಯವಾದ ಆ ರಥವು ಚೇದಿ ದೇಶಾಧಿಪನಾದ ವಸು ಎಂಬುವನಿಗೆ ಕೊಡಲ್ಪಟ್ಟಿತು. ಮತ್ತೆ ಅವನಿಂದ ಬೃಹದ್ರಥನು ಆ ರಥವನ್ನು ಹೊಂದಿದನು.

೨೮. ತರುವಾಯ ಕುರುರಾಜ ಪುತ್ರನಾದ ಭೀಮನು ಆ ಜರಾಸಂಧ ರಾಜನನ್ನು ಗೆದ್ದು ಉತ್ತಮವಾದ ಆ ರಥವನ್ನು ಪ್ರೀತಿಯಿಂದ ವಸುದೇವನ ಪುತ್ರನಾದ ಶ್ರೀ ಕೃಷ್ಣನಿಗೆ ಕೊಟ್ಟನು.

೨೯. ನಹುಷರಾಜನ ಪುತ್ರನಾದ ಯಯಾತಿ ಎಂಬ ಆ ರಾಜರ್ಷಿಯು ವಾರ್ಧಕ್ಯವನ್ನು ಹೊಂದಿ ಜ್ಯೇಷ್ಠನೂ ಶ್ರೇಷ್ಠನೂ ಆದ ಯದು ಎಂಬ ತನ್ನ ಪುತ್ರನನ್ನು ಕುರಿತು ಈ ವಚನವನ್ನು ಹೇಳಿದನು.

ಜರಾವಲೀ ಚ ಮಾಂ ತಾತ ಪಲಿತಾನಿ ಚ ಪರ್ಯಯುಃ ।
ಕಾವ್ಯಸ್ಯೋಽಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ॥ ೩೦ ॥

ತ್ವಂ ಯದೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ಜರಾಂ ಮೇ ಪ್ರತಿಗೃಹ್ಣೀಷ್ವ ತಂ ಯದುಃ ಪ್ರತ್ಯುವಾಚ ಹ ॥ ೩೧ ॥

ಅನಿರ್ದಿಷ್ಟಾ ಹಿ ಮೇ ಭಿಕ್ಷಾ ಬ್ರಾಹ್ಮಣಸ್ಯ ಪ್ರತಿಶ್ರುತಾ ।
ಸಾ ತು ವ್ಯಾಯಾಮಸಾಧ್ಯಾ ವೈ ನ ಗ್ರಹೀಷ್ಯಾಮಿ ತೇ ಜರಾಮ್ ॥ ೩೨ ॥

ಜರಾಯಾಂ ಬಹವೋ ದೋಷಾಃ ಪಾನಭೋಜನಕಾರಿತಾಃ ।
ತಸ್ಮಾಜ್ಜರಾಂ ನ ತೇ ರಾಜನ್ ಗ್ರಹೀತುಮಹಮುತ್ಸಹೇ ॥ ೩೩ ॥

ಸಿತಶ್ಮಶ್ರುಧರೋ ದೀನೋ ಜರಯಾ ಶಿಥಿಲೀಕೃತಃ ।
ವಲೀಸಂತತಗಾತ್ರಶ್ಚ ನಿರಾಶೋ ದುರ್ಬಲಾಕೃತಿಃ ॥ ೩೪ ॥

---

೩೦. ಪುತ್ರನೆ! ಕಾವ್ಯ ಅಥವಾ ಶುಕ್ರಾಚಾರ್ಯನ ಶಾಪದಿಂದ ನನಗೆ ವಾರ್ಧಕ್ಯವು ಬಂದು ಅದರ ಪರಿಣಾಮವಾಗಿ ದೇಹದಲ್ಲಿ ವಳಿಗಳು ಹುಟ್ಟಿ ಕೂದಲು ನೆರೆತು ಬಿಳಿಯದಾಗಿವೆ. ಆದರೆ ಯೌವನದ ಸುಖಭೋಗದಲ್ಲಿ ನಾನು ತೃಪ್ತಿಯನ್ನು ಹೊಂದಿಲ್ಲ.

೩೧. ಯದುವೆ! ನೀನು ಈ ಮುಪ್ಪಿನೊಡನೆ ವಿಕಾರರೂಪವನ್ನು ಅನುಭವಿಸಲು ಅಂಗೀಕಾರಮಾಡು. ನನ್ನ ವೃದ್ಧಾವಸ್ಥೆಯನ್ನು ನೀನು ಪ್ರತಿಗ್ರಹಿಸು ಎಂದು ತಂದೆಯು ಹೇಳಲು ಯದುವು ಪ್ರತ್ಯುತ್ತರ ಹೇಳಿದನು.

೩೨. ಬ್ರಾಹ್ಮಣನಿಗೆ ಅರ್ಥಿಗಳ ಯಾಚನೆಯನ್ನು ಕೇಳಿ ಅದನ್ನು ಪೂರ್ತಿ ಮಾಡಿಕೊಡಲೇಬೇಕೆಂಬ ನಿಯಮವು ಎಲ್ಲಿಯೂ ನಿರ್ದಿಷ್ಟವಾಗಿಲ್ಲ. ಮತ್ತು ನಿನ್ನ ಈ ಭಿಕ್ಷೆಯು ಅತಿಶ್ರಮಸಾಧ್ಯವಾಗಿರುವುದು. ಆದ್ದರಿಂದ ನಿನ್ನ ಮುಪ್ಪನ್ನು ನಾನು ತೆಗೆದುಕೊಳ್ಳುವುದಿಲ್ಲ.

೩೩. ವಾರ್ಧಕಾವಸ್ಥೆಯಲ್ಲಿ ಪಾನ-ಭೋಜನಗಳಿಂದ ಉಂಟಾಗುವ ಅನೇಕ ದೋಷಗಳಿರುವುವು. ರಾಜನೆ! ಆದ್ದರಿಂದ ನಿನ್ನಿಂದ ಮುಪ್ಪನ್ನು ನಾನು ತೆಗೆದುಕೊಳ್ಳಲು ಇಷ್ಟಪಡುವುದಿಲ್ಲ.

೩೪. ಮಾನವನು ಮುಪ್ಪಿನಿಂದ ಬೆಳ್ಳಗಾದ ಗಡ್ಡ, ಮೀಸೆಯುಳ್ಳವನೂ, ದೀನನೂ, ಸಡಿಲಹೊಂದಿದ ಅವಯವಗಳುಳ್ಳವನೂ, ವಳಿಗಳಿಂದ ಪೂರ್ಣವಾದ ದೇಹವುಳ್ಳವನೂ, ಸಮಸ್ತ ಭೋಗಗಳಲ್ಲಿ ನಿರಾಶನೂ ಮತ್ತು ದುರ್ಬಲವಾದ ಆಕಾರವುಳ್ಳವನೂ ಆಗುವನು.

ಅಶಕ್ತಃ ಕಾರ್ಯಕರಣೇ ಪರಿಭೂತಸ್ತು ಯೌವನೇ ।
ಸಹೋಪಜೀವಿಭಿಶ್ಚೈವ ತಾಂ ಜರಾಂ ನಾಭಿಕಾಮಯೇ ॥ ೩೫ ॥

ಸಂತಿ ತೇ ಬಹವಃ ಪುತ್ರಾ ಮತ್ತಃ ಪ್ರಿಯತರಾ ನೃಪ ।
ಪ್ರತಿಗೃಹ್ಣಂತು ಧರ್ಮಜ್ಞ ಪುತ್ರಮನ್ಯಂ ವೃಣೀಷ್ವ ವೈ ॥ ೩೬ ॥

ಸ ಏವಮುಕ್ತೋ ಯದುನಾ ತೀವ್ರಕೋಪಸಮನ್ವಿತಃ ।
ಉವಾಚ ವದತಾಂ ಶ್ರೇಷ್ಠೋ ಜ್ಯೇಷ್ಠಂ ತಂ ಗರ್ಹಯನ್ ಸುತಮ್
॥ ೩೭ ॥

ಆಶ್ರಮಃ ಕಸ್ತವಾನ್ಯೋಽಸ್ತಿ ಕೋ ವಾ ಧರ್ಮವಿಧಿಸ್ತವ ।
ಮಾಮನಾದೃತ್ಯ ದುರ್ಬುದ್ಧೇ ಯದಹಂ ತವ ದೇಶಿಕಃ ॥ ೩೮ ॥

ಏವಮುಕ್ತ್ವಾ ಯದುಂ ರಾಜಾ ಶಶಾಪೈನಂ ಸ ಮನ್ಯುಮಾನ್ ।
ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ॥ ೩೯ ॥

---

೩೫. ಮತ್ತು ಕರ್ತವ್ಯಕಾರ್ಯಗಳನ್ನು ನೆರವೇರಿಸುವುದರಲ್ಲಿ ಅಶಕ್ತನೂ ತಾರುಣ್ಯದಲ್ಲಿರುವ ಸಹಚರ ಜನರಿಂದ ತಿರಸ್ಕರಿಸಲ್ಪಡುವವನೂ ಆಗುವನು. ಆದ್ದರಿಂದ ಅಂತಹ ಜರೆಯನ್ನು ನಾನು ಸ್ವೀಕರಿಸಲು ಇಷ್ಟಪಡುವುದಿಲ್ಲ.

೩೬. ರಾಜನೆ! ನಿನಗೆ ನನಗಿಂತಲೂ ಅತ್ಯಂತ ಪ್ರಿಯರಾದ ಬಹುಮಂದಿ ಪುತ್ರರಿರುವರು. ಧರ್ಮಜ್ಞನೆ! ಅವರಾರಾದರೂ ನಿನ್ನ ಮುಪ್ಪನ್ನು ತೆಗೆದುಕೊಳ್ಳಲಿ. ಮತ್ತೊಬ್ಬ ಪುತ್ರನನ್ನು ಕೇಳು.

೩೭. ಯದುವಿನಿಂದ ಈ ರೀತಿಯಾಗಿ ಹೇಳಲ್ಪಟ್ಟ ವಾಗ್ಮಿ ಜನರಲ್ಲಿ ಶ್ರೇಷ್ಠನಾದ ಯಯಾತಿರಾಜನು ತೀವ್ರ ಕೂಡಿದವನಾಗಿ ಪುತ್ರನಾದ ಆ ಯದುವನ್ನು ನಿಂದಿಸುತ್ತ ಈ ವಚನವನ್ನು ಹೇಳಿದನು.

೩೮. ದುರ್ಬುದ್ಧಿಯಾದ ಪುತ್ರನೆ! ನಾನು ನಿನಗೆ ಗುರುವು; ನನ್ನ ಇಷ್ಟಾಚರಣೆಯನ್ನು ಬಿಟ್ಟು ನಿನಗೆ ಮತ್ತಾವ ಆಶ್ರಮವಿರುವುದು? ಮತ್ತು ಯಾವ ಧರ್ಮವಿಧಿಯಿರುವುದು? ನನ್ನನ್ನು ಅನಾದರಮಾಡಿ ನಿನಗೆ ಯಾವ ಶ್ರೇಯೋಮಾರ್ಗವೂ ಇಲ್ಲ.

೩೯. ಯಯಾತಿ ರಾಜನು ಕೋಪಗೊಂಡವನಾಗಿ ಯದುವಿಗೆ ಈ ರೀತಿಯಾಗಿ ಹೇಳಿ ಅವನನ್ನು ಶಪಿಸಿದನು. ನನ್ನ ಹೃದಯದಿಂದ ನನಗೆ ಪುತ್ರನಾಗಿ ಹುಟ್ಟಿರುವ ನೀನು ನಿನ್ನ ತಾರುಣ್ಯವನ್ನು ನನಗೆ ಕೊಡುವುದಿಲ್ಲ.

ತಸ್ಮಾನ್ನ ರಾಜ್ಯಭಾಜ್ಮೂಢ ಪ್ರಜಾ ತೇ ವೈ ಭವಿಷ್ಯತಿ ।
ತುರ್ವಸೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥ ೪೦ ॥

ತುರ್ವಸುರುವಾಚ :—

ನ ಕಾಮಯೇ ಜರಾಂ ತಾತ ಕಾಮಭೋಗಪ್ರಣಾಶಿನೀಮ್ ।
ಜರಾಯಾಂ ಬಹವೋ ದೋಷಾಃ ಪಾನಭೋಜನಕಾರಿತಾಃ ॥ ೪೧ ॥

ತಸ್ಮಾಜ್ಜರಾಂ ನ ತೇ ರಾಜನ್ ಗ್ರಹೀತುಮಹಮುತ್ಸಹೇ ।

ಯಯಾತಿರುವಾಚ :—

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ
॥ ೪೨ ॥

ತಸ್ಮಾತ್ ಪ್ರಜಾ ನು ವಿಚ್ಛೇದಂ ತುರ್ವಸೋ ತವ ಯಾಸ್ಯತಿ ।
ಸಂಕೀರ್ಣೇಷು ಚ ಧರ್ಮೇಣ ಪ್ರತಿಲೋಮನರೇಷು ಚ ॥ ೪೩ ॥

ಪಿಶಿತಾಶಿಷು ಚಾನ್ಯೇಷು ಮೂಢ ರಾಜಾ ಭವಿಷ್ಯಸಿ ।
ಗುರುದಾರಪ್ರಸಕ್ತೇಷು ತಿರ್ಯಗ್ಯೋನಿಗತೇಷು ವಾ ।
ವಾಸಸ್ತೇ ಪಾಪಮ್ಲೇಚ್ಛೇಷು ಭವಿಷ್ಯತಿ ನ ಸಂಶಯಃ ॥ ೪೪ ॥

---

೪೦. ಮೂಢನೇ! ಆದ್ದರಿಂದ ನಿನ್ನ ಪ್ರಜೆಯು ನನ್ನ ರಾಜ್ಯಕ್ಕೆ ಭಾಗಿಯಾಗುವುದಿಲ್ಲ, ಎಂದು ಶಾಪಕೊಟ್ಟು ತುರ್ವಸುವನ್ನು ಕುರಿತು ಹೇಳಿದನು. ತುರ್ವಸುವೆ! ನೀನು ಮುಪ್ಪಿನೊಂದಿಗೆ ಈ ನನ್ನ ಪಾತಕವನ್ನು ಸ್ವೀಕರಿಸು.

೪೧. ತುರ್ವಸುವು ಇಂತೆಂದನು :—ತಂದೆಯೆ! ಕಾಮಭೋಗವನ್ನು ನಾಶಮಾಡುವ ನಿನ್ನ ಜರೆಯನ್ನು ನಾನು ಇಷ್ಟಪಡುವುದಿಲ್ಲ. ವಾರ್ಧಕಾವಸ್ಥೆಯಲ್ಲಿ ಪಾನ-ಭೋಜನಗಳಿಂದ ಅನೇಕ ದೋಷಗಳು ಸಂಭವಿಸುತ್ತವೆ.

೪೨. ರಾಜನೆ! ಆದ್ದರಿಂದ ನಿನ್ನ ಜರೆಯನ್ನು ಸ್ವೀಕಾರಮಾಡಲು ನಾನು ಒಪ್ಪುವುದಿಲ್ಲ. ಆಗ ಯಯಾತಿಯು ಇಂತೆಂದನು :- ನೀನು ನನ್ನ ಪುತ್ರನಾಗಿ ಹೃದಯದಿಂದ ಜನಿಸಿದವನಾಗಿ ನನಗೆ ನಿನ್ನ ತಾರುಣ್ಯವಯಸ್ಸನ್ನು ಕೊಡುವುದಿಲ್ಲ.

೪೩. ತುರ್ವಸುವೆ! ಆದ್ದರಿಂದ ನಿನ್ನ ಸಮಸ್ತ ಪ್ರಜೆಯು ವಿಚ್ಛೇದವನ್ನು ಹೊಂದುವುದು. ಮತ್ತು ನೀನು ಸಂಕೀರ್ಣರೂ ಪ್ರತಿಲೋಮವಾಗಿ ಜನಿಸಿದವರೂ ಆದ ನರರ ಧರ್ಮವನ್ನು ಅವಲಂಬಿಸಿ ಅವರಲ್ಲಿ ಸೇರುತ್ತೀ.

೪೪. ಮೂಢನೆ! ಮಾಂಸಭೋಜಿಗಳಾದ ಇತರ ಕ್ರೂರಜನರಿಗೆ ನೀನು ರಾಜನಾಗುತ್ತೀಯೆ, ಮತ್ತು ಗುರುಪತ್ನೀ ಸಂಗಮಾಡಿದ, ತಿರ್ಯಗ್ಜನ್ಮವನ್ನು ಹೊಂದಿದ, ಅಥವಾ ಮ್ಲೇಚ್ಛ ಜನಾಂಗಕ್ಕೆ ಸೇರಿದ ಮಹಾ ಪಾತಕಿಗಳ ಸಂಗಡ ನಿನಗೆ ವಾಸವು ಲಭಿಸಲಿ. ಪಾಪಿಯೆ! ಇದರಲ್ಲಿ ಸಂಶಯವಿಲ್ಲ.

**ಸೂತ ಉವಾಚ :—**

**ಏವಂ ತು ತುರ್ವಸುಂ ಶಪ್ತ್ವಾ ಯಯಾತಿಃ ಸುತಮಾತ್ಮನಃ || ೪೫ ||**

**ಶರ್ಮಿಷ್ಠಾಯಾಃ ಸುತಂ ದ್ರುಹ್ಯುಮಿದಂ ವಚನಮಬ್ರವೀತ್ ।**
**ದ್ರುಹ್ಯೋ ತ್ವಂ ಪ್ರತಿಪದ್ಯಸ್ವ ವರ್ಣರೂಪವಿನಾಶಿನೀಮ್ || ೪೬ ||**

**ಜರಾಂ ವರ್ಷಸಹಸ್ರಂ ವೈ ಯೌವನಂ ಸ್ವಂ ದದಸ್ವ ಮೇ ।**
**ಪೂರ್ಣೇ ವರ್ಷಸಹಸ್ರೇ ತೇ ಪ್ರತಿದಾಸ್ಯಾಮಿ ಯೌವನಮ್ || ೪೭ ||**

**ಸ್ವಂ ಚಾದಾಸ್ಯಾಮಿ ಭೂಯೋಽಹಂ ಪಾಪ್ಮಾನಂ ಜರಯಾ ಸಹ ।**

**ದ್ರುಹ್ಯುರುವಾಚ :—**

**ನಾರೋಹೇತ ರಥಂ ನಾಶ್ವಂ ಜೀರ್ಣೋ ಭುಂಕ್ತೇ ನ ಚ ಸ್ತ್ರಿಯಮ್ ।**
**ನ ಸುಖಂ ಚಾಸ್ಯ ಭವತಿ ನ ಜರಾಂ ತೇನ ಕಾಮಯೇ || ೪೮ ||**

**ಯಯಾತಿರುವಾಚ :—**

**ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ || ೪೯ ||**

---

೪೫. ಸೂತಮುನಿಯು ಇಂತೆಂದನು :—ಯಯಾತಿರಾಜನು ತನ್ನ ಪುತ್ರನಾದ ತುರ್ವಸುವನ್ನು ಈ ರೀತಿಯಾಗಿ ಶಪಿಸಿ ಅನರ್ಥಭಾಗಿಯನ್ನಾಗಿ ಮಾಡಿದನು.

೪೬. ತರುವಾಯ ಶರ್ಮಿಷ್ಠೆಯ ಪುತ್ರನಾದ ದ್ರುಹ್ಯುವನ್ನು ಕರೆದು ಈ ಮಾತನ್ನು ಹೇಳಿದನು. ದ್ರುಹ್ಯುವೆ! ಆಕಾರ-ಸೌಂದರ್ಯಗಳನ್ನು ನಾಶಮಾಡುವ ನನ್ನ ಮುಪ್ಪನ್ನು ನೀನು ತೆಗೆದುಕೋ.

೪೭. ಒಂದು ಸಹಸ್ರ ಸಂವತ್ಸರ ಪರ್ಯಂತವಾಗಿ ನನ್ನ ಮುಪ್ಪಿಗೆ ಬದಲಾಗಿ ನಿನ್ನ ಯೌವನವನ್ನು ನನಗೆ ಕೊಡು. ಒಂದು ಸಹಸ್ರ ವರ್ಷಗಳು ಪೂರ್ತಿಯಾದ ಕೂಡಲೆ ನಿನ್ನ ತಾರುಣ್ಯವನ್ನು ಹಿಂದಕ್ಕೆ ಕೊಡುತ್ತೇನೆ.

೪೮. ಮತ್ತೆ ನಾನು ಮುಪ್ಪಿನ ಜೊತೆಗೆ ನನ್ನ ಪಾತಕವನ್ನು ಹಿಂದಕ್ಕೆ ತೆಗೆದು ಕೊಳ್ಳುತ್ತೇನೆ. ಆಗ ದ್ರುಹ್ಯುವು ಹೀಗೆ ಹೇಳಿದನು, ವೃದ್ಧನಾದ ಮಾನವನು ಅಶ್ವ-ಮತ್ತು ರಥವನ್ನು ಆರೋಹಣ ಮಾಡಲಾರನು. ಸ್ತ್ರೀ ಸೌಖ್ಯವನ್ನು ಅನುಭವಿಸಲಾರನು, ಮತ್ತು ಅವನಿಗೆ ಸುಖವು ದೂರವಾದುದು. ಆದ್ದರಿಂದ ಮುಪ್ಪನ್ನು ನಾನು ಇಚ್ಛಿಸುವುದಿಲ್ಲ.

೪೯. ಯಯಾತಿಯು ಇಂತೆಂದನು :— ದ್ರುಹ್ಯುವೆ! ನನ್ನ ಹೃದಯವೆಂಬ ಅಂಗದಿಂದ ಜನ್ಮವೆತ್ತಿ ಪುತ್ರನೆನಿಸಿರುವ ನೀನು ಕೂಡ ನನ್ನ ಮಾತಿನಂತೆ ನನಗೆ ತಾರುಣ್ಯವನ್ನು ಕೊಡಲಾರೆಯಲ್ಲವೆ.

ತಸ್ಮಾದ್ದ್ರುಹ್ಯೋ ಪ್ರಿಯಃ ಕಾಮೋ ನ ತೇ ಸಂಪತ್ಸ್ಯತೇ ಕ್ವಚಿತ್ ।
ನೌಪ್ಲವೋತ್ತರಸಂಚಾರಸ್ತತ್ರ ನಿತ್ಯಂ ಭವಿಷ್ಯತಿ ॥ ೫೦ ॥

ಅರಾಜಾ ರಾಜವಂಶಸ್ತ್ವಂ ತತ್ರ ನಿತ್ಯಂ ವಸಿಷ್ಯಸಿ ।
ಅನೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥ ೫೧ ॥

ಏವಂ ವರ್ಷಸಹಸ್ರಂ ತು ಚರೇಯಂ ಯೌವನೇನ ತೇ ।
ಅನುರುವಾಚ :—
ಜೀರ್ಣಃ ಶಿಶುರಿವಾಶಕ್ತೋ ಜರಯಾ ಹ್ಯಶುಚಿಃ ಸದಾ ।
ನ ಜುಹೋತಿ ಸಕಾಲೇಽಗ್ನಿಂ ತಾಂ ಜರಾಂ ನಾಭಿಕಾಮಯೇ ॥ ೫೨ ॥
ಯಯಾತಿರುವಾಚ :—
ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ॥ ೫೩ ॥
ಜರಾದೋಷಸ್ತ್ವಯೋಕ್ತೋಽಯಂ ತಸ್ಮಾತ್ತ್ವಂ ಪ್ರತಿಪತ್ಸ್ಯಸೇ ।
ಪ್ರಜಾ ಚ ಯೌವನಂ ಪ್ರಾಪ್ತಾ ವಿನಶಿಷ್ಯತ್ಯನೋ ತವ ॥ ೫೪ ॥

---

೫೦. ಆದ್ದರಿಂದ ಪ್ರಿಯವಾಗಿರುವ ಯಾವುದೊಂದು ಕಾಮವೂ ಯಾವಾಗಲೂ ನಿನಗೆ ಲಭಿಸದೆ ಇರಲಿ. ಮತ್ತು ನೀನು ಯಾವಾಗಲೂ ಜಲಾಶಯಗಳಲ್ಲಿ ನೌಕಾದಿಗಳಿಂದ ಸಂಚರಿಸುವ ಕ್ಲೇಶವನ್ನು ಅನುಭವಿಸು.

೫೧. ರಾಜವಂಶದಲ್ಲಿ ಹುಟ್ಟಿದ ನೀನು ರಾಜನಾಗದೆ ಕ್ಲೇಶದಿಂದ ವಾಸಿಸುತ್ತೀ, ಹೀಗೆಂದು ಶಪಿಸಿ ಅನುವನ್ನು ಕುರಿತು ಹೇಳಿದನು, ಅನುವೆ! ನೀನು ನನ್ನ ಮುಪ್ಪನ್ನೂ ಪಾಪ ಕಳಂಕವನ್ನೂ ಪ್ರತಿಗ್ರಹಿಸು.

೫೨. ನಾನು ನಿನ್ನ ಯೌವನದಿಂದ ಒಂದು ಸಾವಿರ ವರ್ಷಗಳವರೆಗೆ ಸಂಚರಿಸುತ್ತಿರುವೆನು. ತಂದೆಯು ಹೀಗೆ ಕೇಳುತ್ತಿರಲು ಅನುವು ಹೀಗೆ ಹೇಳಿದನು. ಮುದುಕನು ಶಿಶುವಿನಂತೆ ಯಾವಾಗಲೂ ಅಶಕ್ತನೂ ಅಶುಚಿಯೂ ಆಗುವನು. ಅವನು ಸಕಾಲದಲ್ಲಿ ಅಗ್ನಿಹೋತ್ರಾದಿ ಹೋಮವನ್ನು ಮಾಡಲಾರನು. ಅಂತಹ ಜರೆಯನ್ನು ನಾನು ಕಾಮಿಸುವುದಿಲ್ಲ.

೫೩. ಯಯಾತಿರಾಜನು ಇಂತೆಂದನು :— ನೀನು ಕೂಡ ನನ್ನ ಹೃದಯದಿಂದ ಹುಟ್ಟಿದ ಪುತ್ರನು, ಹಾಗಿದ್ದರೂ ನನಗೆ ನಿನ್ನ ತಾರುಣ್ಯವಯಸ್ಸನ್ನು ಕೊಡುವುದಿಲ್ಲ.

೫೪. ಅನುವೆ! ಜರೆಯಲ್ಲಿ ಸಂಭವಿಸುವ ಅನೇಕ ದೋಷಗಳನ್ನು ನೀನು ಉಪನ್ಯಾಸ ಮಾಡಿರುತ್ತೀ, ಆದ್ದರಿಂದ ನೀನು ಜರಾದೋಷಗಳನ್ನು ಹೊಂದುತ್ತೀ, ನಿನ್ನ ಪ್ರಜೆಯು ಯೌವನವನ್ನು ಹೊಂದುವಷ್ಟರಲ್ಲಿ ಮರಣ ಹೊಂದುವುದು.

ಅಗ್ನಿಪ್ರಸ್ಕಂದನಪರಸ್ತ್ವಂ ವಾಪ್ಯೇವಂ ಭವಿಷ್ಯಸಿ ।
ಪೂರೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥ ೫೫ ॥

ಜರಾವಲೀ ಚ ಮಾಂ ತಾತ ಪಲಿತಾನಿ ಚ ಪರ್ಯಯುಃ ।
ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ॥ ೫೬ ॥

ಕಂಚಿತ್ಕಾಲಂ ಚರೇಯಂ ವೈ ವಿಷಯಾನ್ ವಯಸಾ ತವ ।
ಪೂರ್ಣೇ ವರ್ಷಸಹಸ್ರೇ ತೇ ಪ್ರತಿದಾಸ್ಯಾಮಿ ಯೌವನಮ್ ॥ ೫೭ ॥

ಸ್ವಂ ಚೈವ ಪ್ರತಿಪತ್ಸ್ಯೇಽಹಂ ಪಾಪ್ಮಾನಂ ಜರಯಾ ಸಹ ।
ಸೂತ ಉವಾಚ :—
ಏವಮುಕ್ತಃ ಪ್ರತ್ಯುವಾಚ ಪುತ್ರಃ ಪಿತರಮಂಜಸಾ ॥ ೫೮ ॥

ಯಥಾ ತು ಮನ್ಯಸೇ ತಾತ ಕರಿಷ್ಯಾಮಿ ತಥೈವ ಚ ।
ಪ್ರತಿಪತ್ಸ್ಯೇ ಚ ತೇ ರಾಜನ್ ಪಾಪ್ಮಾನಂ ಜರಯಾ ಸಹ ॥ ೫೯ ॥

---

೫೫. ನೀನು ನಿನ್ನ ಪ್ರಜೆಗೆ ಅಗ್ನಿ ಸಂಸ್ಕಾರವನ್ನು ಮಾಡುವವನು ಆಗುತ್ತೀ, ಹೀಗೆಂದು ಶಪಿಸಿ ಪೂರುವೆಂಬ ಕಡೆಯ ಪುತ್ರನನ್ನು ಕೇಳಿಕೊಂಡನು, ಪೂರುವೆ! ನೀನು ನನ್ನ ಮುಪ್ಪು—ಪಾತಕಗಳನ್ನು ಸ್ವೀಕರಿಸು.

೫೬. ಪುತ್ರನೆ! ಕಾವ್ಯ ಅಥವಾ ಶುಕ್ರಾಚಾರ್ಯನ ಶಾಪದ ನಿಮಿತ್ತದಿಂದ ನನ್ನ ದೇಹದಲ್ಲಿ ಮುಪ್ಪಿನ ವಳಿಗಳೂ ಮತ್ತು ಕೂದಲುಗಳಲ್ಲಿ ನೆರೆತದಿಂದ ಬಿಳುಪೂ ಹುಟ್ಟಿರುವುವು, ಯೌವನಸುಖದಿಂದ ತೃಪ್ತಿಯು ನನಗೆ ಉಂಟಾಗಲಿಲ್ಲ.

೫೭. ಹೀಗಿರಲು ನಿನ್ನ ತಾರುಣ್ಯ ವಯಸ್ಸಿನಿಂದ ನಾನು ಕೆಲವು ಕಾಲದವರೆಗೆ ವಿಷಯಗಳನ್ನು ಅನುಭವಿಸುವೆನು. ಒಂದು ಸಾವಿರ ವರ್ಷಗಳು ಪೂರ್ತಿಯಾಗಿ ಕಳೆದಮೇಲೆ ನಿನಗೆ ಯೌವನವನ್ನು ಹಿಂದಕ್ಕೆ ಕೊಡುತ್ತೇನೆ.

೫೮. ಆಗ ನನ್ನ ಮುಪ್ಪನ್ನು ಪಾಪಕಳಂಕದ ಜೊತೆಗೆ ಹಿಂದಕ್ಕೆ ಪಡೆಯುತ್ತೇನೆ. ಸೂತಮುನಿಯು ಮುಂದುವರಿಸಿ ಹೇಳಿದನು :— ಈ ರೀತಿಯಾಗಿ ತಂದೆಯಿಂದ ಹೇಳಲ್ಪಟ್ಟ ಪುತ್ರನು ತಂದೆಯನ್ನು ಕುರಿತು ಶೀಘ್ರವಾಗಿ ಪ್ರತಿವಚನವನ್ನು ಹೇಳಿದನು.

೫೯. ತಂದೆಯೆ! ನಾನೇನು ಮಾಡಬೇಕೆಂದು ನೀನು ಅರಿಯುವೆಯೋ ಅದರಂತೆಯೆ ಮಾಡುವೆನು. ರಾಜನೆ! ನಿನ್ನ ಮುಪ್ಪು —ಪಾತಕಗಳನ್ನು ನಾನು ತೆಗೆದುಕೊಳ್ಳುವೆನು.

ಗೃಹಾಣ ಯೌವನಂ ಮತ್ತಶ್ಚರ ಕಾಮಾನ್ ಯಥೇಪ್ಸಿತಾನ್ ।
ಜರಯಾಹಂ ಪ್ರತಿಚ್ಛನ್ನೋ ವಯೋರೂಪಧರಸ್ತವ ॥ ೬೦ ॥
ಯೌವನಂ ಭವತೇ ದತ್ತ್ವಾ ಚರಿಷ್ಯಾಮಿ ಯಥಾರ್ಥವತ್ ।
ಯಯಾತಿರುವಾಚ :—
ಪೂರೋ ಪ್ರೀತೋಽಸ್ಮಿ ಭದ್ರಂ ತೇ ಪ್ರೀತಶ್ಚೇದಂ ದದಾಮಿ ತೇ ॥ ೬೧ ॥
ಸರ್ವಕಾಮಸಮೃದ್ಧಾ ತೇ ಪ್ರಜಾ ರಾಜ್ಯೇ ಭವಿಷ್ಯತಿ ।
ಸೂತ ಉವಾಚ :
ಪೂರೋರನುಮತೋ ರಾಜಾ ಯಯಾತಿಃ ಸ್ವಜರಾಂ ತತಃ ॥ ೬೨ ॥
ಸಂಕ್ರಾಮಯಾಮಾಸ ತದಾ ಪ್ರಸಾದಾದ್ಭಾರ್ಗವಸ್ಯ ತು ।
ಗೌರವೇಣಾಥ ವಯಸಾ ಯಯಾತಿರ್ನಹುಷಾತ್ಮಜಃ ॥ ೬೩ ॥
ಪ್ರೀತಿಯುಕ್ತೋ ನರಶ್ರೇಷ್ಠಶ್ಚಚಾರ ವಿಷಯಾನ್ ಸ್ವಕಾನ್ ।
ಯಥಾಕಾಮಂ ಯಥೋತ್ಸಾಹಂ ಯಥಾಕಾಲಂ ಯಥಾಸುಖಮ್ ॥ ೬೪ ॥

---

೬೦. ನೀನು ನನ್ನಿಂದ ತಾರುಣ್ಯವಯಸ್ಸನ್ನು ಸ್ವೀಕರಿಸು, ಮತ್ತು ನಿನ್ನ ಇಷ್ಟಾನುಸಾರವಾಗಿ ಕಾಮ್ಯವಿಷಯಸೌಖ್ಯವನ್ನು ಅನುಭವಿಸು, ನಾನು ಈಗಾಗಲೆ ನಿನ್ನ ಮುಪ್ಪಿನಿಂದ ಆವರಿಸಲ್ಪಟ್ಟವನಾಗಿ ನಿನ್ನ ವಯಸ್ಸು ಮತ್ತು ರೂಪಗಳನ್ನು ಧರಿಸಿರುವೆನು.

೬೧. ನನ್ನ ಯೌವನವನ್ನು ನಿನಗೆ ಕೊಟ್ಟು ವಾರ್ಧಕ್ಯಕ್ಕೆ ಅನುಗುಣವಾದ ಆರ್ಥದಂತೆ ನಡೆಯುವೆನು. ಇದನ್ನು ಕೇಳಿ ಯಯಾತಿಯು ಇಂತೆಂದನು :— ಪೂರುವೆ ! ನಾನು ಸುಪ್ರೀತನಾಗಿರುವೆನು, ನಿನಗೆ ಮಂಗಳವಾಗಲಿ, ಪ್ರೀತಿಹೊಂದಿರುವ ನಾನು ನಿನಗೆ ಈ ವರಗಳನ್ನು ಕೊಡುವೆನು.

೬೨. ರಾಜ್ಯದಲ್ಲಿ ನಿನ್ನ ಪ್ರಜೆಯು ಸರ್ವಕಾಮಗಳ ಸಮೃದ್ಧಿಯನ್ನು ಹೊಂದಿ ಬಾಳುವುದು. ಸೂತಮುನಿಯು ಮುಂದೆ ಹೀಗೆ ಹೇಳಿದನು; ಪೂರುವಿನ ಅನುಮತಿಯನ್ನು ಹೊಂದಿದ ಯಯಾತಿರಾಜನು ತರುವಾಯ ತನ್ನ ಜರೆಯನ್ನು ಬಿಟ್ಟನು.

೬೩. ಭಾರ್ಗವಮುನಿಯ ಪ್ರಸಾದದಿಂದ ಅದನ್ನು ಪೂರುವಿನಲ್ಲಿ ಇರಿಸಿದನು. ತರುವಾಯ ನಹುಷನ ಪುತ್ರನಾದ ಯಯಾತಿರಾಜನು ಗೌರವದಿಂದ ಕೂಡಿದ ಉತ್ತಮವಾದ ತಾರುಣ್ಯದಿಂದ ಕೂಡಿದನು.

೬೪. ಮತ್ತು ಬಲು ಪ್ರೀತಿಯಿಂದ ಕೂಡಿದವನಾಗಿ ಆ ರಾಜನು ತನ್ನ ಇಷ್ಟವಾದ ವಿಷಯಗಳನ್ನು ಕಾಮ, ಉತ್ಸಾಹ, ಕಾಲ, ಮತ್ತು ಸುಖಗಳ ಅನುಕೂಲತೆಯನ್ನು ಅನುಸರಿಸಿ ಅನುಭವಿಸಿದನು.

ಧರ್ಮಾವಿರೋಧೀ ರಾಜೇಂದ್ರೋ ಯಥಾಶಕ್ತಿ ಸ ಏವ ಹಿ ।
ದೇವಾನತರ್ಪಯದ್ಯಜ್ಞೈಃ ಪಿತೄನ್ ಶ್ರಾದ್ಧೈಸ್ತಥೈವ ಚ ॥ ೬೫ ॥

ದಾರಾನನುಗ್ರಹೈರಿಷ್ಟೈಃ ಕಾಮ್ಯೈಶ್ಚ ದ್ವಿಜಸತ್ತಮಾನ್ ।
ಅತಿಥೀನನ್ನಪಾನೈಶ್ಚ ವೈಶ್ಯಾಂಶ್ಚ ಪರಿಪಾಲನೈಃ ॥ ೬೬ ॥

ಆನೃಶಂಸ್ಯೇನ ಶೂದ್ರಾಂಶ್ಚ ದಸ್ಯೂನ್ ಸನ್ನಿಗ್ರಹೇಣ ಚ ।
ಧರ್ಮೇಣ ಚ ಪ್ರಜಾಃ ಸರ್ವಾ ಯಥಾವದನುರಂಜಯನ್ ॥ ೬೭ ॥

ಯಯಾತಿಃ ಪಾಲಯಾಮಾಸ ಸಾಕ್ಷಾದಿಂದ್ರ ಇವಾಪರಃ ।
ಸ ರಾಜಾ ಸಿಂಹವಿಕ್ರಾಂತೋ ಯುವಾ ವಿಷಯಗೋಚರಃ ॥ ೬೮ ॥

ಅವಿರೋಧೇನ ಧರ್ಮಸ್ಯ ಚಚಾರ ಸುಖಮುತ್ತಮಮ್ ।
ಸ ಮಾರ್ಗಮಾಣಃ ಕಾಮಾನಾಮೇತದ್ದೋಷನಿದರ್ಶನಾತ್ ॥ ೬೯ ॥

---

೬೫. ಆದರೆ ರಾಜೇಂದ್ರನು ವಿಷಯ ಸುಖಾನುಭವದಲ್ಲಿ ಧರ್ಮಕ್ಕೆ ಅವಿರೋಧಿಯಾಗಿದ್ದು ಯಥಾಶಕ್ತಿಯಾಗಿ ಯಜ್ಞಗಳಿಂದ ದೇವತೆಗಳನ್ನೂ ಶ್ರಾದ್ಧ ಕರ್ಮದಿಂದ ಪಿತೃಗಳನ್ನೂ ತೃಪ್ತಿಪಡಿಸಿದನು.

೬೬. ಇಷ್ಟವಾದ ಪ್ರೇಮದಾನದ ಅನುಗ್ರಹಗಳಿಂದ ಪತ್ನೀಜನರನ್ನೂ, ಇಷ್ಟಾರ್ಥ ವಿತರಣೆಯಿಂದ ಬ್ರಾಹ್ಮಣೋತ್ತಮರನ್ನೂ ಅನ್ನಪಾನಾದಿ ನಿಯೋಗದಿಂದ ಅತಿಥಿಗಳನ್ನೂ ಮತ್ತು ಪೋಷಣದಿಂದ ವೈಶ್ಯರನ್ನೂ ತೃಪ್ತಿಗೊಳಿಸಿದನು.

೬೭. ಸೌಜನ್ಯಶೀಲದಿಂದ ಶೂದ್ರರನ್ನೂ, ವಿಹಿತವಾದ ನಿಗ್ರಹದಿಂದ ಕಳ್ಳ-ಕಾಕರನ್ನೂ ಮತ್ತು ಧರ್ಮ-ನ್ಯಾಯಗಳಿಂದ ಸಮಸ್ತ ಪ್ರಜೆಗಳನ್ನೂ ಯಥಾವಿಧಿಯಾಗಿ ರಂಜನಮಾಡಿದನು.

೬೮. ಹಾಗೆ ಯಯಾತಿರಾಜನು ಸಿಂಹಸಮಾನವಾದ ವಿಕ್ರಮವುಳ್ಳವನಾಗಿಯೂ ವಿಷಯಭೋಗದಲ್ಲಿ ನವತರುಣನಾಗಿಯೂ ಪ್ರತ್ಯಕ್ಷವಾಗಿ ಬಂದಿರುವ ಮತ್ತೊಬ್ಬ ಇಂದ್ರನಂತೆ ರಾಜ್ಯವನ್ನು ಪಾಲಿಸಿದನು.

೬೯. ಹೀಗೆ ಧರ್ಮಕ್ಕೆ ಸ್ವಲ್ಪವೂ ವಿರೋಧವಿಲ್ಲದಂತೆ ಉತ್ತಮವಾದ ಸುಖವನ್ನು ಭುಂಜಿಸಿದನು. ಕಾಮ್ಯವಿಷಯಗಳಲ್ಲಿ ದೋಷವನ್ನು ಸ್ವಲ್ಪವೂ ಗಣಿಸದೆ ಹೊಸಹೊಸ ಕಾಮಗಳನ್ನು ಹುಡುಕಿ ರಮಿಸಿದನು.

ವಿಶ್ವಾಚ್ಯಾ ಸಹಿತೋ ರೇಮೇ ವೈಭ್ರಾಜೇ ನಂದನೇ ವನೇ ।
ಅಪಶ್ಯತ್ ಸ ಯದಾ ತಾನ್ ವೈ ವರ್ಧಮಾನಾನ್ನೃಪಸ್ತದಾ ॥೭೦॥

ಗತ್ವಾ ಪೂರೋಃ ಸಕಾಶಂ ವೈ ಸ್ವಾಂ ಜರಾಂ ಪ್ರತ್ಯಪದ್ಯತ ।
ಸಂಪ್ರಾಪ್ಯ ಸ ತು ತಾನ್ ಕಾಮಾನ್ ತೃಪ್ತಃ ಖಿನ್ನಶ್ಚ ಪಾರ್ಥಿವಃ ॥ ೭೧ ॥

ಕಾಲಂ ವರ್ಷಸಹಸ್ರಂ ವೈ ಸಸ್ಮಾರ ಮನುಜಾಧಿಪಃ ।
ಪರಿಸಂಖ್ಯಾಯ ಕಾಲೇ ಚ ಕಲಾಃ ಕಾಷ್ಠಾಸ್ತಥೈವ ಚ ॥ ೭೨ ॥

ಪೂರ್ಣಂ ಮತ್ವಾ ತತಃ ಕಾಲಂ ಪೂರುಂ ಪುತ್ರಮುವಾಚ ಹ ।
ಯಥಾಸುಖಂ ಯಥೋತ್ಸಾಹಂ ಯಥಾಕಾಲಮರಿಂದಮ ॥ ೭೩ ॥

ಸೇವಿತಾ ವಿಷಯಾಃ ಪುತ್ರ ಯೌವನೇನ ಮಯಾ ತವ ।
ಪೂರೋ ಪ್ರೀತೋಽಸ್ಮಿ ಭದ್ರಂ ತೇ ಗೃಹಾಣ ತ್ವಂ ಸ್ವಯೌವನಮ್ ॥ ೭೪ ॥

---

೭೦. ವೈಭ್ರಾಜವೆಂಬ ನಂದನವನಕ್ಕೆ ಸೇರಿದ ದೇವೋದ್ಯಾನದಲ್ಲಿ ವಿಶ್ವಾಚೀ ಎಂಬ ಅಪ್ಸರೆಯೊಡನೆ ರಮಿಸಿದನು. ಆಗ ರಾಜನು ವಿಷಯಾನುಭವಗಳಿಂದ ವಿಷಯ ಕಾಮಗಳು ವೃದ್ಧಿ ಹೊಂದುತ್ತಿರುವುದನ್ನು ಕಂಡನು.

೭೧. ಆಗ ಪೂರುವಿನ ಸಮೀಪಕ್ಕೆ ಬಂದು ತನ್ನ ವಾರ್ಧಕವನ್ನು ಹಿಂದಕ್ಕೆ ತೆಗೆದುಕೊಂಡನು. ಆ ಪಾರ್ಥಿವನು ಅಪೇಕ್ಷಿಸಿದ ಕಾಮಗಳನ್ನು ಹೊಂದಿ ತೃಪ್ತಿಗೊಂಡವನಾಗಿ ಪರಿಣಾಮದಲ್ಲಿ ಖೇದಗೊಂಡನು.

೭೨. ಆಗ ನರಪತಿಯಾದ ಯಯಾತಿಯು ಕಳೆದುಹೋಗಿದ್ದ ಒಂದು ಸಹಸ್ರ ಸಂವತ್ಸರಕಾಲವನ್ನು ಸ್ಮರಿಸಿ ಅದರಲ್ಲಿ ಕಲಾ, ಕಾಷ್ಠಾ ಮುಂತಾದ ಕಾಲಾಂಶಗಳನ್ನು ಎಣಿಸಿಕೊಂಡನು.

೭೩. ತರುವಾಯ ತನ್ನ ಆಸೆಯ ಕಾಲಾವಧಿಯು ಪೂರ್ತಿಯಾದುದನ್ನು ತಿಳಿದು ಪುತ್ರನಾದ ಪೂರುವನ್ನು ಕುರಿತು ಹೀಗೆ ಹೇಳಿದನು. ಶತ್ರುನಿಗ್ರಹದಕ್ಷನಾದ ಪುತ್ರನೆ! ಕಾಲ, ಸುಖ, ಉತ್ಸಾಹಗಳಿಗೆ ತಕ್ಕಂತೆ ನನ್ನ ವಿಷಯೋಪಭೋಗವು ನೆರವೇರಿತು.

೭೪. ಪುತ್ರನೆ! ನಿನ್ನ ಯೌವನದಿಂದ ನಾನು ಸಮಸ್ತ ವಿಷಯಗಳನ್ನು ಅನುಭವಿಸಿದೆನು. ಪೂರುವೆ! ನಿನ್ನಲ್ಲಿ ನಾನು ಸುಪ್ರೀತನಾಗಿರುವೆನು. ನಿನಗೆ ಕಲ್ಯಾಣವಾಗಲಿ. ನಿನ್ನ ಯೌವನವನ್ನು ನೀನು ಸ್ವೀಕರಿಸು.

ರಾಜ್ಯಂ ಚ ತ್ವಂ ಗೃಹಾಣೇದಂ ತ್ವಂ ಹಿ ಮೇ ಪ್ರಿಯಕೃತ್ಸುತಃ ।
ಪ್ರತಿಪೇದೇ ಜರಾಂ ರಾಜಾ ಯಯಾತಿರ್ನಹುಷಾತ್ಮಜಃ ॥ ೭೫ ॥

ಯೌವನಂ ಪ್ರತಿಪೇದೇ ಚ ಪೂರುಃ ಸ್ವಂ ಪುನರಾತ್ಮನಃ ।
ಅಭಿಷೇಕ್ತುಕಾಮಂ ಚ ನೃಪಂ ಪೂರುಂ ಪುತ್ರಂ ಕನೀಯಸಮ್
॥ ೭೬ ॥

ಬ್ರಾಹ್ಮಣಪ್ರಮುಖಾ ವರ್ಣಾ ಇದಂ ವಚನಮಬ್ರುವನ್ ।
ಕಥಂ ಶುಕ್ರಸ್ಯ ನಪ್ತಾರಂ ದೇವಯಾನ್ಯಾಃ ಸುತಂ ಪ್ರಭೋ ॥ ೭೭ ॥

ಜ್ಯೇಷ್ಠಂ ಯದುಮತಿಕ್ರಮ್ಯ ರಾಜ್ಯಂ ದಾಸ್ಯಸಿ ಪೂರವೇ ।
ಯದುರ್ಜ್ಯೇಷ್ಠಸ್ತವ ಸುತೋ ಜಾತಸ್ತಮನು ತುರ್ವಸುಃ ॥ ೭೮ ॥

ಶರ್ಮಿಷ್ಠಾಯಾಃ ಸುತೋ ದ್ರುಹ್ಯುಸ್ತತೋಽನುಃ ಪೂರುರೇವ ಚ ।
ಕಥಂ ಜ್ಯೇಷ್ಠಾನತಿಕ್ರಮ್ಯ ಕನೀಯಾನ್ ರಾಜ್ಯಮರ್ಹತಿ ।
ಸುತಃ ಸಂಬೋಧಯಾಮಸ್ತ್ವಾಂ ಧರ್ಮಂ ಸಮನುಪಾಲಯ ॥ ೭೯ ॥

---

೭೫ ನೀನು ಈ ರಾಜ್ಯವನ್ನೂ ಸ್ವೀಕರಿಸು, ನೀನು ಒಬ್ಬನು ನನಗೆ ಪ್ರಿಯವನ್ನು ಮಾಡಿದ ಪುತ್ರನಾಗಿದ್ದೀಯೆ; ಹೀಗೆಂದು ಹೇಳಿ ನಹುಷರಾಜನ ಪುತ್ರನಾದ ಯಯಾತಿರಾಜನು ತನ್ನ ಜರೆಯನ್ನು ತೆಗೆದುಕೊಂಡನು.

೭೬. ಪೂರುವು ತನ್ನ ಯೌವನವನ್ನು ಮತ್ತೆ ಹಿಂದಕ್ಕೆ ತೆಗೆದುಕೊಂಡನು. ಆಗ ಯಯಾತಿರಾಜನು ಕಿರಿಯ ಮಗನಾದ ಪೂರುವನ್ನು ರಾಜ್ಯಾಸನದಲ್ಲಿ ಪಟ್ಟಾಭಿಷೇಕ ಮಾಡುವ ಇಷ್ಟವನ್ನು ಹೊಂದಿದನು.

೭೭. ಆಗ ಬ್ರಾಹ್ಮಣ ಮುಂತಾದ ಅನೇಕ ಮಂದಿ ವರ್ಣಗಳು ರಾಜನಿಗೆ ಈ ಮಾತನ್ನು ಹೇಳಿದರು. ಪ್ರಭುವಾದ ರಾಜನೆ! ಈ ಸಂದರ್ಭದಲ್ಲಿ ಶುಕ್ರಾಚಾರ್ಯನ ಮೊಮ್ಮಗನೂ ದೇವಯಾನಿಯ ಪುತ್ರನೂ ಆದ ಜ್ಯೇಷ್ಠಪುತ್ರನನ್ನು ಹೇಗೆ ಬಿಡುತ್ತೀಯೆ?

೭೮. ಅಂತಹ ಜ್ಯೇಷ್ಠಪುತ್ರನನ್ನು ಉಲ್ಲಂಘಿಸಿ ಪೂರುವಿಗೆ ರಾಜ್ಯವನ್ನು ಕೊಡಲು ಇಷ್ಟಪಡುತ್ತಲಿದ್ದೀಯೆ. ನಿನಗೆ ಯದುವು ಜ್ಯೇಷ್ಠಪುತ್ರನಾಗಿ ಜನಿಸಿರುವನು. ಅವನಿಗೆ ಒಡಹುಟ್ಟಿದವನು ತುರ್ವಸುವು.

೭೯. ತರುವಾಯ ಶರ್ಮಿಷ್ಠೆಯ ಪುತ್ರರಲ್ಲಿ ದ್ರುಹ್ಯು, ಅನು ಇಬ್ಬರು ಜನಿಸಿ ಕಡೆಯಲ್ಲಿ ಪೂರುವು ಜನಿಸಿರುವನು. ಹೀಗಿರಲು ಜ್ಯೇಷ್ಠಪುತ್ರರನ್ನು ಅತಿಕ್ರಮಿಸಿ ಕನಿಷ್ಠಪುತ್ರನಾದ ಪೂರುವು ಹೇಗೆ ರಾಜ್ಯಕ್ಕೆ ಭಾಗಿಯಾಗುವನು? ರಾಜನೆ! ನಿನಗೆ ನಾವು ಬೋಧಿಸುತ್ತೇವೆ. ಧರ್ಮವನ್ನು ಪಾಲಿಸು.

**ಯಯಾತಿರುವಾಚ :—**

**ಬ್ರಾಹ್ಮಣಪ್ರಮುಖಾ ವರ್ಣಾಃ ಸರ್ವೇ ಶೃಣ್ವಂತು ಮೇ ವಚಃ ॥ ೮೦ ॥**

**ಜ್ಯೇಷ್ಠಂ ಪ್ರತಿ ಯಥಾ ರಾಜ್ಯಂ ನ ದೇಯಂ ಮೇ ಕಥಂಚನ ।**
**ಮಾತಾಪಿತ್ರೋರ್ವಚನಕೃದ್ವೀರಃ ಪುತ್ರಃ ಪ್ರಶಸ್ಯತೇ ॥ ೮೧ ॥**

**ಮಮ ಜ್ಯೇಷ್ಠೇನ ಯದುನಾ ನಿಯೋಗೋ ನಾನುಪಾಲಿತಃ ।**
**ಪ್ರತಿಕೂಲಃ ಪಿತುರ್ಯಶ್ಚ ನ ಸ ಪುತ್ರಃ ಸತಾಂ ಮತಃ ॥ ೮೨ ॥**

**ಸ ಪುತ್ರಃ ಪುತ್ರವದ್ಯಶ್ಚ ವರ್ತತೇ ಪಿತೃಮಾತೃಷು ।**
**ಯದುನಾಹಮವಜ್ಞಾತಸ್ತಥಾ ತುರ್ವಸುನಾಪಿ ಚ ॥ ೮೩ ॥**

**ದ್ರುಹ್ಯುನಾ ಚಾನುನಾ ಚೈವ ಮಯ್ಯವಜ್ಞಾ ಕೃತಾ ಭೃಶಮ್ ।**
**ಪೂರುಣಾ ತು ಕೃತಂ ವಾಕ್ಯಂ ಮಾನಿತಶ್ಚ ವಿಶೇಷತಃ ॥ ೮೪ ॥**

---

೮೦. ಯಯಾತಿರಾಜನು ಹೀಗೆ ಹೇಳಿದನು :—ಬ್ರಾಹ್ಮಣ ಮುಂತಾದ ಸಮಸ್ತ ವರ್ಣಗಳೆ! ನೀವೆಲ್ಲರೂ ನನ್ನ ವಚನವನ್ನು ಕೇಳಿರಿ.

೮೧. ಜ್ಯೇಷ್ಠಪುತ್ರರಿಗೆ ನಾನು ರಾಜ್ಯವನ್ನು ಸರ್ವ ಪ್ರಕಾರದಿಂದಲೂ ಕೊಡಲು ಇಚ್ಛಿಸದಿರಲು ಕಾರಣವನ್ನು ಕೇಳಿರಿ. ಲೋಕದಲ್ಲಿ ಮಾತಾಪಿತೃಗಳ ಆಜ್ಞಾವಚನ ವನ್ನು ಪಾಲಿಸಿದ ವೀರಕುಮಾರನು ಪ್ರಶಸ್ತನಾಗಿರುವನು.

೮೨. ನನ್ನ ಜ್ಯೇಷ್ಠಪುತ್ರನಾದ ಯದುವಿನಿಂದ ನನ್ನ ನಿಯೋಗವು ಪಾಲಿಸಲ್ಪಡ ಲಿಲ್ಲ. ತಂದೆಗೆ ಪ್ರತಿಕೂಲನಾದವನು ನಿಜವಾದ ಪುತ್ರನು; ಎಂಬುದು ಸಾಧುಗಳಿಗೆ ಸಮ್ಮತವಲ್ಲ.

೮೩. ಯಾವ ಪುತ್ರನು ಮಾತಾಪಿತೃಗಳ ವಿಷಯದಲ್ಲಿ ಪುತ್ರನಂತೆ ಇರುವನೊ ಅವನೆ ನಿಜವಾದ ಪುತ್ರನು, ಯದುವಿನಿಂದ ನಾನು ತಿರಸ್ಕರಿಸಲ್ಪಟ್ಟಿರುವೆನು. ಹಾಗೆ ತುರ್ವಸುವೂ ನನ್ನ ವಚನವನ್ನು ಪಾಲಿಸದೆ ನನ್ನನ್ನು ಅನಾದರಮಾಡಿದನು.

೮೪. ಹಾಗೆಯೇ ದ್ರುಹ್ಯು, ಅನು-ಇವರಿಂದಲೂ ಮತ್ತೆ ಮತ್ತೆ ನನ್ನಲ್ಲಿ ತಿರಸ್ಕಾರವು ತೋರಿಸಲ್ಪಟ್ಟಿತು. ಪೂರುವಿನಿಂದ ನಾನು ವಿಶೇಷವಾಗಿ ಗೌರವಿಸಲ್ಪಟ್ಟು ನನ್ನ ಆಜ್ಞಾವಚನವು ಆಚರಿಸಲ್ಪಟ್ಟಿತು.

ಕನೀಯಾನ್ ಮಮ ದಾಯಾದೋ ಜರಾ ಯೇನ ಧೃತಾ ಮಮ ।
ಸರ್ವೇ ಕಾಮಾ ಮಮ ಕೃತಾಃ ಪೂರುಣಾ ಪುಣ್ಯಕಾರಿಣಾ ॥ ೮೫ ॥

ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಮ್ ।
ಪುತ್ರೋ ಯಸ್ತ್ವಾನುವರ್ತೇತ ಸ ರಾಜಾ ತು ಮಹಾಮತೇ ॥ ೮೬ ॥

ಪ್ರಜಾ ಊಚುಃ :—

ಭವತೋಽನುಮತೋಽಪ್ಯೇವಂ ಪೂರುರ್ರಾಜ್ಯೇಽಭಿಷಿಚ್ಯತಾಮ್ ।
ಯಃ ಪುತ್ರೋ ಗುಣಸಂಪನ್ನೋ ಮಾತಾಪಿತ್ರೋರ್ಹಿತಸ್ಸದಾ ॥ ೮೭ ॥

ಸರ್ವಮರ್ಹತಿ ಕಲ್ಯಾಣಂ ಕನೀಯಾನಪಿ ಸ ಪ್ರಭುಃ ।
ಅರ್ಹೋಽಸ್ಯ ಪೂರುರ್ರಾಜ್ಯಸ್ಯ ಯಃ ಪ್ರಿಯಃ ಪ್ರಿಯಕೃತ್ತವ॥ ೮೮ ॥

ವರದಾನೇನ ಶುಕ್ರಸ್ಯ ನ ಶಕ್ಯಂ ವಕ್ತುಮುತ್ತರಮ್ ।
ಪೌರಜಾನಪದೈಸ್ತುಷ್ಟೈರಿತ್ಯುಕ್ತೋ ನಾಹುಷಸ್ತದಾ ॥ ೮೯ ॥

---

೮೫. ನನ್ನ ಜರೆಯನ್ನು ಧರಿಸಿ ಕನಿಷ್ಠಪುತ್ರನಾದ ಪೂರುವು ನನ್ನನ್ನು ಮಾನಿಸಿದನು. ಮತ್ತು ಪುಣ್ಯವನ್ನು ಮಾಡಿರುವ ಪೂರುವಿನಿಂದ ನನ್ನ ಸಕಲ ಇಷ್ಟ ಕರ್ತವ್ಯಗಳು ನೆರವೇರಿಸಲ್ಪಟ್ಟುವು

೮೬. ಕಾವ್ಯ-ಉಶನಾ ಎಂಬ ಪರ್ಯಾಯನಾಮಾಂಕಿತನಾದ ಶುಕ್ರಾಚಾರ್ಯನಿಂದ ನನಗೆ ಈ ರೀತಿಯಾಗಿ ವರವು ಕೊಡಲ್ಪಟ್ಟಿದೆ, ಮಹಾಪ್ರಾಜ್ಞನೆ! ಯಾವ ಪುತ್ರನು ನಿನ್ನನ್ನು ಅನುಸರಿಸಿ ಇರುವನೊ ಅವನು ರಾಜನಾಗುವನು.

೮೭. ಇದನ್ನು ಕೇಳಿದ ಪ್ರಜೆಗಳು ಇಂತೆಂದರು :—ಹೀಗೆ ಪೂರುವು ನಿನಗೆ ಅನುಮತವಾಗಿರುವುದರಿಂದ ಅವನು ರಾಜ್ಯದಲ್ಲಿ ಅಭಿಷಿಕ್ತನಾಗಲಿ. ಯಾವ ಪುತ್ರನು ಗುಣಶಾಲಿಯಾಗಿ ಮಾತಾಪಿತೃಗಳಿಗೆ ಹಿತಕರನಾಗಿರುವನೋ ಅವನು ಶ್ಲಾಘನೀಯನಾಗಿರುವನು.

೮೮. ಅವನು ಕನಿಷ್ಠನಾಗಿದ್ದರೂ ಪ್ರಭುವಾಗಿ ಸಮಸ್ತ ಕಲ್ಯಾಣಗಳಿಗೆ ಭಾಗಿಯಾಗುವನು. ಆದ್ದರಿಂದ ನಿನಗೆ ಪ್ರಿಯಕಾರಿಯಾಗಿ ಬಲು ಪ್ರಿಯನಾಗಿರುವ ಪೂರುವು ಈ ರಾಜ್ಯಕ್ಕೆ ಅಧಿಪತಿಯಾಗಲು ಅರ್ಹನು.

೮೯. ಶುಕ್ರಾಚಾರ್ಯನು ಈ ರೀತಿಯಾಗಿ ವರವನ್ನು ಕೊಟ್ಟಿರುವುದರಿಂದ ಇದರಲ್ಲಿ ನಮ್ಮಿಂದ ಬೇರೆ ಯಾವ ಉತ್ತರವನ್ನೂ ಹೇಳಲಾಗುವುದಿಲ್ಲ. ಪುರ-ಗ್ರಾಮವಾಸಿಗಳೆಲ್ಲರೂ ಯಯಾತಿರಾಜನ ಸನ್ನಿಧಿಯಲ್ಲಿ ಸಂತುಷ್ಟರಾಗಿ ಈ ರೀತಿಯಾಗಿ ನುಡಿದರು.

ಅಭಿಷಿಚ್ಯ ತತಃ ಪೂರುಂ ಸ ರಾಜ್ಯೇ ಸುತಮಾತ್ಮನಃ ।
ದಿಶಿ ದಕ್ಷಿಣಪೂರ್ವಸ್ಯಾಂ ತುರ್ವಸುಂ ತು ನ್ಯವೇಶಯತ್ ॥ ೯೦ ॥

ದಕ್ಷಿಣಾಪರತೋ ರಾಜಾ ಯದುಂ ಜ್ಯೇಷ್ಠಂ ನ್ಯವೇಶಯತ್ ।
ಪ್ರತೀಚ್ಯಾಮುತ್ತರಸ್ಯಾಂ ಚ ದ್ರುಹ್ಯುಂ ಚಾನುಂ ಚ ತಾವುಭೌ ॥ ೯೧ ॥

ಸಪ್ತದ್ವೀಪಾಂ ಯಯಾತಿಸ್ತು ಜಿತ್ವಾ ಪೃಥ್ವೀಂ ಸಸಾಗರಾಮ್ ।
ವ್ಯಭಜತ್ ಪಂಚಧಾ ರಾಜಾ ಪುತ್ರೇಭ್ಯೋ ನಾಹುಷಸ್ತದಾ ॥ ೯೨ ॥

ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ।
ಯಥಾಪ್ರದೇಶಂ ಧರ್ಮಜ್ಞೈರ್ಧರ್ಮೇಣ ಪ್ರತಿಪಾಲ್ಯತೇ ॥ ೯೩ ॥

ಏವಂ ವಿಭಜ್ಯ ಪೃಥಿವೀಂ ಪುತ್ರೇಭ್ಯೋ ನಾಹುಷಸ್ತದಾ ।
ಪುತ್ರಸಂಕ್ರಾಮಿತಶ್ರೀಸ್ತು ಪ್ರೀತಿಮಾನಭವನ್ನೃಪಃ ॥ ೯೪ ॥

---

೯೦. ತರುವಾಯ ರಾಜನು ಪೂರುವೆಂಬ ತನ್ನ ಪುತ್ರನನ್ನು ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿ ದಕ್ಷಿಣ-ಪೂರ್ವದಿಕ್ಕುಗಳ ಅಂತರಾಳದಲ್ಲಿ ತುರ್ವಸುವನ್ನು ಪ್ರಭುವನ್ನಾಗಿ ಇರಿಸಿದನು.

೯೧. ಹಾಗೆಯೆ ದಕ್ಷಿಣ-ಪಶ್ಚಿಮಗಳ ಅಂತರದಲ್ಲಿ ಜ್ಯೇಷ್ಠಪುತ್ರನಾದ ಯದುವನ್ನು ಸ್ಥಾಪಿಸಿದನು. ಮತ್ತು ದ್ರುಹ್ಯು, ಅನು ಎಂಬ ಇಬ್ಬರು ಪುತ್ರರನ್ನು ಪಶ್ಚಿಮ-ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ ನಿಯಮಿಸಿದನು.

೯೨. ನಹುಷಪುತ್ರನಾದ ಯಯಾತಿರಾಜನು ಏಳು ದ್ವೀಪಗಳಿಂದಲೂ ಸಾಗರಗಳಿಂದಲೂ ಕೂಡಿದ ಸಂಪೂರ್ಣ ಪೃಥಿವಿಯನ್ನು ಗೆದ್ದು ಆಗ ಅದನ್ನು ತನ್ನ ಪುತ್ರರಿಗೋಸ್ಕರ ಐದು ಭಾಗವಾಗಿ ವಿಂಗಡಿಸಿದನು.

೯೩. ಧರ್ಮಜ್ಞರಾದ ಆ ಯಯಾತಿಪುತ್ರರಿಂದ ಸಪ್ತ ದ್ವೀಪಗಳಿಂದಲೂ ಅನೇಕ ಪಟ್ಟಣಗಳಿಂದಲೂ ಕೂಡಿದ ಸಂಪೂರ್ಣ ಪೃಥಿವಿಯು ಆಯಾಯ ಪ್ರದೇಶಗಳಲ್ಲಿ ಧರ್ಮದಿಂದ ಪಾಲಿಸಲ್ಪಡುತ್ತಿದೆ.

೯೪. ನಹುಷರಾಜಪುತ್ರನಾದ ಯಯಾತಿರಾಜನು ಪುತ್ರರಿಗೆ ಪೃಥಿವಿಯನ್ನು ಈ ರೀತಿಯಾಗಿ ವಿಂಗಡಿಸಿಕೊಟ್ಟು ಆಗ ಪುತ್ರರಲ್ಲಿ ಇರಿಸಿದ ರಾಜ್ಯಲಕ್ಷ್ಮಿಯುಳ್ಳವನಾಗಿ ಹೆಚ್ಚಾಗಿ ಸಂತೋಷಗೊಂಡನು.

ಧನುರ್ನ್ಯಸ್ಯ ಪೃಷತ್ಕಾಂಶ್ಚ ರಾಜ್ಯಂ ಚೈವ ಸುತೇಷು ತು ।
ಪ್ರೀತಿಮಾನಭವದ್ರಾಜಾ ಭಾರಮಾವೇಶ್ಯ ಬಂಧುಷು ॥ ೯೫ ॥

ಅತ್ರ ಗಾಥಾ ಮಹಾರಾಜ್ಞಾ ಪುರಾ ಗೀತಾ ಯಯಾತಿನಾ ।
ಯಾಭಿಃ ಪ್ರತ್ಯಾಹರೇತ್ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ
॥ ೯೬ ॥

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೯೭ ॥

ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।
ನಾಲಮೇಕಸ್ಯ ತತ್ಸರ್ವಮಿತಿ ಪಶ್ಯನ್ನ ಮುಹ್ಯತಿ ॥ ೯೮ ॥

ಯದಾ ನ ಕುರುತೇ ಭಾವಂ ಸರ್ವಭೂತೇಷ್ವಮಂಗಲಮ್ ।
ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥ ೯೯ ॥

---

೯೫. ಮತ್ತು ತನ್ನ ಬಿಲ್ಲು, ಬಾಣ, ರಾಜ್ಯ-ಇವುಗಳನ್ನು ತನ್ನ ಪುತ್ರರಲ್ಲಿ ಇರಿಸಿ ತನ್ನಲ್ಲಿದ್ದ ರಾಜ್ಯಭಾರನನ್ನು ಬಂಧುವರ್ಗದಲ್ಲಿ ಇಳಿಸಿಕೊಂಡವನಾಗಿ ಯಯಾತಿ ರಾಜನು ಆನಂದವುಳ್ಳವನಾದನು.

೯೬. ಮಹಾರಾಜನಾದ ಯಯಾತಿಯಿಂದ ತನ್ನ ಜೀವನಮಾರ್ಗದಲ್ಲಿ ಪೂರ್ವದಲ್ಲಿ ಅನೇಕ ಗಾಥಾ ಶ್ಲೋಕಗಳು ಪಠಿಸಲ್ಪಟ್ಟಿವೆ. ಅವುಗಳ ಅನುಸಂಧಾನದಿಂದ ಆಮೆಯು ತನ್ನ ಅವಯವಗಳನ್ನು ಸಂಕೋಚಪಡಿಸಿಕೊಳ್ಳುವಂತೆ ಮಾನವನು ಸರ್ವ ಕಾಮ್ಯ ವಸ್ತುಗಳಿಂದ ಕಾಮುಗಳನ್ನು ಸೆಳೆದುಕೊಳ್ಳುವನು.

೯೭. ಕಾಮ್ಯವಸ್ತುಗಳ ಉಪಭೋಗದಿಂದ ಕಾಮವು ಎಂದಿಗೂ ಅಡಗುವುದಿಲ್ಲ. ಆಜ್ಯಾಹುತಿಯಿಂದ ಅಗ್ನಿಯು ಪ್ರಜ್ವಲಿಸುವಂತೆ ಮತ್ತಷ್ಟು ವೃದ್ಧಿಹೊಂದುತ್ತದೆ.

೯೮. ಪೃಥಿವಿಯಲ್ಲಿ ವ್ರೀಹಿ-ಯವಧಾನ್ಯ. ಹಿರಣ್ಯ, ಪಶು, ಮತ್ತು ವನಿತೆ ಮುಂತಾದ ಭೋಗ್ಯವಸ್ತುಗಳು ಎಷ್ಟಿವೆಯೊ, ಎಲ್ಲ ಭೋಗ್ಯವಸ್ತುಗಳ ರಾಶಿಯು ಒಬ್ಬನ ಕಾಮುವನ್ನು ತೃಪ್ತಿಪಡಿಸಲು ಸಾಕಾಗುವುದಿಲ್ಲ, ಎಂಬುದನ್ನು ತಿಳಿದ ಮಾನವನು ಮೋಹವಶನಾಗುವುದಿಲ್ಲ.

೯೯. ಯಾವಾಗ ಸರ್ವಭೂತಗಳಲ್ಲಿಯೂ ಕಾಯ, ವಾಕ್, ಮಾನಸಗಳಿಂದ ಅಮಂಗಲವಾದ ಅನಿಷ್ಟ ಭಾವನೆಯನ್ನು ತೋರಿಸದಂತಿರುವನೊ ಆಗ ಮಾನವನು ಬ್ರಹ್ಮಭಾವವನ್ನು ಹೊಂದುವನು.

ಯದಾ ಪರಾನ್ನ ಬಿಭೇತಿ ಯದಾನ್ಯಸ್ಮಾನ್ನ ಬಿಭ್ಯತಿ ।
ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥ ೧೦೦ ॥

ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।
ಯೈಷಾ ಪ್ರಾಣಾಂತಿಕೋ ರೋಗಸ್ತಾಂ ತೃಷ್ಣಾಂ ತ್ಯಜತಃ ಸುಖಮ್ ॥ ೧೦೧ ॥

ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ ।
ಜೀವಿತಾಶಾ ಧನಾಶಾ ಚ ಜೀರ್ಯತೋಽಪಿ ನ ಜೀರ್ಯತಿ ॥ ೧೦೨ ॥

ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ ।
ತೃಷ್ಣಾಕ್ಷಯಸುಖಸ್ಯೈತೇ ಕಲಾಂ ನಾರ್ಹಂತಿ ಷೋಡಶೀಮ್॥ ೧೦೩ ॥

ಏವಮುಕ್ತ್ವಾ ಸ ರಾಜರ್ಷಿಃ ಸದಾರಃ ಪ್ರಸ್ಥಿತೋ ವನಮ್ ।
ಭೃಗುತುಂಗೇ ತಪಸ್ತಪ್ತ್ವಾ ತತ್ರೈವ ಚ ಮಹಾಯಶಾಃ ॥ ೧೦೪ ॥

---

೧೦೦. ಮತ್ತು ಪರರನ್ನು ಬೆದರಿಸದಿರುವನೂ ಇನ್ನೊಂದು ವಸ್ತುವಿನಿಂದ ಭಯಪಡದಿರುವನೂ, ಮತ್ತು ಇಚ್ಛಾ-ದ್ವೇಷ ಮೊದಲಾದ ಮಾನಸವಿಕಾರಗಳನ್ನು ಬಿಟ್ಟವನೂ ಆದ ಪುರುಷನು ಬ್ರಹ್ಮ ಸಂಪತ್ತಿಯನ್ನು ಹೊಂದುವನು.

೧೦೧. ಆಸೆಯೆಂಬುದು ದುರ್ಬುದ್ಧಿ ಜನರಿಂದ ಬಿಡಲಾಗುವುದಿಲ್ಲ, ತನ್ನ ಆಶ್ರಯ ವ್ಯಕ್ತಿಯು ಜೀರ್ಣವಾಗುತ್ತಿದ್ದರೂ ತಾನು ಜೀರ್ಣವಾಗುವುದಿಲ್ಲ. ಮತ್ತು ಪ್ರಾಣಾಂತಕರವಾದ ರೋಗರೂಪವಾಗಿರುವುದು, ಅಂತಹ ಆಸೆಯನ್ನು ಬಿಟ್ಟವನಿಗೆ ಸುಖವು ಲಭಿಸುವುದು.

೧೦೨. ವ್ಯಕ್ತಿಯು ಜೀರ್ಣನಾಗುತ್ತ ಬಂದಂತೆ ಅವನ ಕೂದಲುಗಳು ಮತ್ತು ಹಲ್ಲುಗಳು ಜೀರ್ಣವಾಗುತ್ತವೆ. ಜೀವನದ ಆಶೆ ಮತ್ತು ಧನದ ಆಶೆ ಮಾತ್ರ ವ್ಯಕ್ತಿಯು ಜೀರ್ಣವಾದರೂ ಜೀರ್ಣವಾಗುವುದಿಲ್ಲ.

೧೦೩. ಲೋಕದಲ್ಲಿ ವಿಷಯಭೋಗದಿಂದ ಲಭಿಸುವ ಕಾಮಸುಖವೂ, ದೇವ ಲೋಕದಲ್ಲಿ ಲಭಿಸುವ ಮಹಾಸುಖವೂ ಇವುಗಳೆಲ್ಲವೂ ತೃಷ್ಣಾಕ್ಷಯಸುಖದ ಹದಿನಾರನೆಯ ಒಂದಂಶಕ್ಕೆ ಕೂಡ ಸರಿಯಾಗಲಾರವು.

೧೦೪. ಹೀಗೆಂದು ಹೇಳಿ ಮಹಾ ಯಶಸ್ವಿಯಾದ ಆ ರಾಜರ್ಷಿಯು ಪತ್ನೀ ಸಹಿತನಾಗಿ ವನಕ್ಕೆ ತೆರಳಿದನು. ಉನ್ನತವಾದ ಭೃಗುತುಂಗ ಪ್ರದೇಶದಲ್ಲಿ ತಪವನ್ನು ಆಚರಿಸಿದನು.

ಪಾಲಯಿತ್ವಾ ವ್ರತಂ ಚಾರ್ಷಂ ತತ್ರೈವ ಸ್ವರ್ಗಮಾಪ್ತವಾನ್ ।
ತಸ್ಯ ವಂಶಾಸ್ತು ಪಂಚೈತೇ ಪುಣ್ಯಾ ದೇವರ್ಷಿಸತ್ಕೃತಾಃ ॥ ೧೦೫ ॥

ಯೈರ್ವ್ಯಾಪ್ತಾ ಪೃಥಿವೀ ಕೃತ್ಸ್ನಾ ಸೂರ್ಯಸ್ಯೇವ ಗಭಸ್ತಿಭಿಃ ।
ಧನ್ಯಃ ಪ್ರಜಾವಾನಾಯುಷ್ಮಾನ್ ಕೀರ್ತಿಮಾಂಶ್ಚ ಭವೇನ್ನರಃ ॥ ೧೦೬ ॥

ಯಯಾತೇಶ್ಚರಿತಂ ಸರ್ವಂ ಪಠನ್ ಶೃಣ್ವನ್ ದ್ವಿಜೋತ್ತಮಾಃ
॥ ೧೦೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಅಷ್ಟಷಷ್ಟಿತಮೋಽಧ್ಯಾಯಃ

---

೧೦೫. ಮತ್ತು ಅಲ್ಲಿಯೆ ಋಷಿಜನಯೋಗ್ಯವಾದ ವ್ರತವನ್ನು ಆಚರಿಸಿ ಸ್ವರ್ಗವನ್ನು ಹೊಂದಿದನು. ಅವನಿಂದ ಪವಿತ್ರವಾದುವುಗಳೂ ಮತ್ತು ದೇವ-ಋಷಿಗಳಿಂದ ಸತ್ಕರಿಸಲ್ಪಟ್ಟವುಗಳೂ ಆದ ಐದು ವಂಶಗಳು ಬೆಳೆದಿವೆ.

೧೦೬. ಸೂರ್ಯನ ಕಿರಣಗಳಂತೆ ಆ ವಂಶಕ್ಕೆ ಸೇರಿದ ರಾಜರಿಂದ ಸಮಸ್ತ ಪೃಥಿವಿಯು ವ್ಯಾಪಿಸಲ್ಪಟ್ಟಿರುತ್ತದೆ. ಈ ಚರಿತ್ರದ ಶ್ರವಣವು ಧನ, ಪ್ರಜಾ, ಆಯುಷ್ಯ ಮತ್ತು ಕೀರ್ತಿ ಮುಂತಾದ ಫಲಗಳನ್ನು ಕೊಡುವುದು.

೧೦೭. ದ್ವಿಜೋತ್ತಮರೆ! ಯಯಾತಿ ರಾಜನ ಈ ಸಮಸ್ತ ಚರಿತ್ರವನ್ನು ಯಾವ ಮಾನವನು ಶ್ರವಣಮಾಡುವನೊ, ಅವನು ಧನ ಮುಂತಾದ ಸತ್ಫಲಗಳಿಗೆ ಭಾಗಿಯಾಗುವನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೆಂಟನೆಯ ಅಧ್ಯಾಯವು ಸಮಾಪ್ತವು.

---

# ಏಕೋನಸಪ್ತತಿತಮೋಽಧ್ಯಾಯಃ

---

**ಸೂತ ಉವಾಚ :—**

**ಯದೋರ್ವರ್ಂಶಂ ಪ್ರವಕ್ಷ್ಯಾಮಿ ಜ್ಯೇಷ್ಠಸ್ಯೋತ್ತಮತೇಜಸಃ ।**
**ವಿಸ್ತರೇಣಾನುಪೂರ್ವ್ಯಾ ಚ ಗದತೋ ಮೇ ನಿಬೋಧತ ॥ ೧ ॥**

**ಯದೋಃ ಪುತ್ರಾ ಬಭೂವುರ್ಹಿ ಪಂಚ ದೇವಸುತೋಪಮಾಃ ।**
**ಸಹಸ್ರಜಿದಥ ಶ್ರೇಷ್ಠಃ ಕ್ರೋಷ್ಟುರ್ನೀಲೋಽಂಜಿಕೋ ಲಘುಃ ॥ ೨ ॥**

**ಸಹಸ್ರಜಿತ್ಸುತಃ ಶ್ರೀಮಾನ್ ಶತಜಿನ್ನಾಮ ಪಾರ್ಥಿವಃ ।**
**ಶತಜಿತ್ತನಯಾಃ ಖ್ಯಾತಾಸ್ತ್ರಯಃ ಪರಮಧಾರ್ಮಿಕಾಃ ॥ ೩ ॥**

**ಹೈಹಯಶ್ಚ ಹಯಶ್ಚೈವ ರಾಜಾ ವೇಣುಹಯಸ್ತಥಾ ।**
**ಹೈಹಯಸ್ಯ ತು ದಾಯಾದೋ ಧರ್ಮನೇತ್ರ ಇತಿ ಶ್ರುತಃ ॥ ೪ ॥**

---

೧. ಸೂತಮುನಿಯು ಇಂತೆಂದನು :—ಉತ್ತಮತೇಜಸ್ವಿಯೂ ಜ್ಯೇಷ್ಠಪುತ್ರನೂ ಆದ ಯದುರಾಜನ ವಂಶಾವಳಿಯನ್ನು ಕ್ರಮವಾಗಿಯೂ, ವಿಸ್ತಾರವಾಗಿಯೂ ಹೇಳುತ್ತೇನೆ, ನನ್ನ ವಚನವನ್ನು ಶ್ರವಣಮಾಡಿರಿ.

೨. ಯದುವಿಗೆ ಸಹಸ್ರಜಿತ, ಕ್ರೋಷ್ಟು, ನೀಲ, ಅಂಜಿಕ ಮತ್ತು ಲಘು ಎಂಬ ಶ್ರೇಷ್ಠರೂ ದೇವಪುತ್ರರಿಗೆ ಸಮಾನರೂ ಆದ ಐದು ಮಂದಿ ಪುತ್ರರು ಇದ್ದರು.

೩. ಶ್ರೀಮಂತನಾದ ಶತಜಿತ ಎಂಬ ರಾಜನು ಸಹಸ್ರಜಿತರಾಜನ ಮಗನಾಗಿದ್ದನು. ಶತಜಿತನಿಗೆ ಪರಮಧಾರ್ಮಿಕರೆಂದು ಪ್ರಸಿದ್ಧರಾದ ಮೂರುಮಂದಿ ಪುತ್ರರಿದ್ದರು.

೪. ಅವರು ಹೈಹಯ, ಹಯ, ಮತ್ತು ವೇಣುಹಯ ಎಂದು ಪ್ರಸಿದ್ಧರಾದ ರಾಜರಾಗಿದ್ದರು. ಹೈಹಯನಿಗೆ ಧರ್ಮನೇತ್ರ ಎಂದು ಪ್ರಸಿದ್ಧಿಹೊಂದಿದ ಪುತ್ರನಿದ್ದನು.

ಧರ್ಮನೇತ್ರಸ್ಯ ಕುಂತಿಸ್ತು ಸಂಜ್ಞೇಯಸ್ತಸ್ಯ ಚಾತ್ಮಜಃ ।
ಸಂಜ್ಞೇಯಸ್ಯ ತು ದಾಯಾದೋ ಮಹಿಷ್ಮಾನ್ನಾಮ ಪಾರ್ಥಿವಃ ॥ ೫ ॥

ಆಸೀನ್ಮಹಿಷ್ಮತಃ ಪುತ್ರೋ ಭದ್ರಸೇನಃ ಪ್ರತಾಪವಾನ್ ।
ವಾರಾಣಸ್ಯಧಿಪೋ ರಾಜಾ ಕಥಿತಃ ಪೂರ್ವ ಏವ ತು ॥ ೬ ॥

ಭದ್ರಸೇನಸ್ಯ ದಾಯಾದೋ ದುರ್ಮದೋ ನಾಮ ಪಾರ್ಥಿವಃ ।
ದುರ್ಮದಸ್ಯ ಸುತೋ ಧೀಮಾನ್ ಕನಕೋ ನಾಮ ವಿಶ್ರುತಃ ॥ ೭ ॥

ಕನಕಸ್ಯ ತು ದಾಯಾದಾಶ್ಚತ್ವಾರೋ ಲೋಕವಿಶ್ರುತಾಃ ।
ಕೃತವೀರ್ಯಃ ಕೃತಾಗ್ನಿಶ್ಚ ಕೃತವರ್ಮಾ ತಥೈವ ಚ ॥ ೮ ॥

ಕೃತೌಜಾಶ್ಚ ಚತುರ್ಥೋಽಭೂತ್ ಕೃತವೀರ್ಯಾತ್ಮಜೋಽರ್ಜುನಃ ।
ಜಜ್ಞೇ ಬಾಹುಸಹಸ್ರೇಣ ಸಪ್ತದ್ವೀಪೇಶ್ವರೋ ನೃಪಃ ॥ ೯ ॥

---

೫. ಧರ್ಮನೇತ್ರನಿಗೆ ಕುಂತೀ ಎಂಬ ಪುತ್ರನೂ ಕುಂತಿಗೆ ಸಂಜ್ಞೇಯ ಎಂಬ ಪುತ್ರನೂ ಮತ್ತು ಸಂಜ್ಞೇಯನಿಗೆ ಮಹಿಷ್ಮಾನ್ ರಾಜನೆಂಬ ಪುತ್ರನೂ ಇದ್ದರು.

೬. ಮಹಿಷ್ಮಂತನಿಗೆ ಪ್ರತಾಪಶಾಲಿಯಾದ ಭದ್ರಸೇನನು ಪುತ್ರನಾಗಿದ್ದನು. ಅವನು ವಾರಾಣಸೀನಗರಿಗೆ ಅಧಿಪತಿಯಾದ ರಾಜನಾಗಿದ್ದನೆಂದು ಮೊದಲು ಹೇಳಲ್ಪಟ್ಟಿರುವನು.

೭. ಭದ್ರಸೇನನಿಗೆ ದುರ್ಮದನೆಂಬ ರಾಜನು ಪುತ್ರನಾಗಿ ಜನಿಸಿದನು. ದುರ್ಮದನ ಜ್ಞಾನಿಯಾದ ಪುತ್ರನು ಕನಕ ಎಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿದ್ದನು.

೮. ಕನಕನಿಗೆ ತ್ರಿಲೋಕ ಪ್ರಸಿದ್ಧರಾದ ನಾಲ್ಕುಮಂದಿ ಪುತ್ರರು ಜನಿಸಿದರು. ಅವರಲ್ಲಿ ಮೂವರು ಕೃತವೀರ್ಯ, ಕೃತಾಗ್ನಿ, ಕೃತವರ್ಮ ಎಂಬ ನಾಮಾಂಕಿತರಾಗಿದ್ದರು.

೯. ಕೃತೌಜ ಎಂಬುವನು ಅವರಲ್ಲಿ ನಾಲ್ಕನೆಯವನು. ಕೃತವೀರ್ಯನಿಗೆ ಸಹಸ್ರ ಬಾಹುಗಳಿಂದ ಕೂಡಿ ಸಪ್ತದ್ವೀಪಗಳಿಗೆ ಅಧಿಪತಿಯಾಗಿರುವ ಅರ್ಜುನನೆಂಬ ರಾಜನು ಪುತ್ರನಾಗಿ ಜನಿಸಿದನು.

ಸ ಹಿ ವರ್ಷಾಯುತಂ ತಪ್ತ್ವಾ ತಪಃ ಪರಮದುಶ್ಚರಮ್ ।
ದತ್ತಮಾರಾಧಯಾಮಾಸ ಕಾರ್ತವೀರ್ಯೋಽತ್ರಿಸಂಭವಮ್ ॥ ೧೦ ॥

ತಸ್ಮೈ ದತ್ತೋ ವರಾನ್ ಪ್ರಾದಾಚ್ಚತುರೋ ಭೂರಿತೇಜಸಃ ।
ಪೂರ್ವಂ ಬಾಹುಸಹಸ್ರಂ ತು ಸ ವವ್ರೇ ಪ್ರಥಮಂ ವರಮ್ ॥ ೧೧ ॥

ಅಧರ್ಮಂ ಧ್ಯಾಯಮಾನಸ್ಯ ಸಹಸಾಸ್ಮಾನ್ನಿವಾರಣಮ್ ।
ಧರ್ಮೇಣ ಪೃಥಿವೀಂ ಜಿತ್ವಾ ಧರ್ಮೇಣೈವಾನುಪಾಲನಮ್ ॥ ೧೨ ॥

ಸಂಗ್ರಾಮಾಂಸ್ತು ಬಹೂನ್ ಜಿತ್ವಾ ಹತ್ವಾ ಚಾರೀನ್ ಸಹಸ್ರಶಃ ।
ಸಂಗ್ರಾಮೇ ಯುಧ್ಯಮಾನಸ್ಯ ವಧಃ ಸ್ಯಾತ್ ಪ್ರಧನೇ ಮಮ ॥ ೧೩ ॥

ತೇನೇಯಂ ಪೃಥಿವೀ ಕೃತ್ಸ್ನಾ ಸಪ್ತದ್ವೀಪಾ ಸಪತ್ತನಾ ।
ಸಪ್ತೋದಧಿಪರಿಕ್ಷಿಪ್ತಾ ಕ್ಷಾತ್ರೇಣ ವಿಧಿನಾ ಜಿತಾ ॥ ೧೪ ॥

---

೧೦. ಆ ಕಾರ್ತವೀರ್ಯಾರ್ಜುನನು ಅಯುತವರ್ಷಗಳ ವರೆಗೆ ಅತ್ಯುಗ್ರವಾದ ತಪಸ್ಸನ್ನಾಚರಿಸಿ ಅತ್ರಿಮುನಿಯ ಪುತ್ರನಾದ ದತ್ತಮುನಿಯನ್ನು ಆರಾಧಿಸಿದನು.

೧೧. ದತ್ತಮುನಿಯು ಆ ಕಾರ್ತವೀರ್ಯಾರ್ಜುನನಿಗೆ ಪ್ರಸನ್ನನಾಗಿ ಅತ್ಯಂತ ತೇಜಸ್ಸಿನಿಂದ ಗರ್ಭಿತವಾದ ನಾಲ್ಕು ವರಗಳನ್ನು ಕೊಟ್ಟನು. ಅವುಗಳಲ್ಲಿ ಸಹಸ್ರ ಬಾಹುಗಳು ಉಂಟಾಗಲೆಂದು ಮೊದಲನೆಯ ವರವನ್ನು ಕೇಳಿಕೊಂಡನು.

೧೨. ಅಧರ್ಮ ಮಾರ್ಗವನ್ನು ಧ್ಯಾನಿಸುವಾಗ ಅಕಸ್ಮಾತ್ತಾಗಿ ಆ ಅಧರ್ಮವು ನಶಿಸಿಹೋಗುವುದಾಗಿಯೂ ಧರ್ಮದಿಂದ ಪೃಥಿವಿಯನ್ನು ಜಯಿಸಿ ಧರ್ಮದಿಂದ ಸಮಸ್ತ ಪೃಥ್ವಿಯ ಪಾಲನವು ನಡೆಯುತ್ತ ಇರುವುದಾಗಿಯೂ ವರವು ಲಭಿಸಿತು.

೧೩. ಅನೇಕ ಸಂಗ್ರಾಮಗಳಲ್ಲಿ ಜಯಶಾಲಿಗಳಾಗಿ ಸಾವಿರಾರು ಶತ್ರುಗಳನ್ನು ಕೊಂದು ಮತ್ತೆ ರಣರಂಗದಲ್ಲಿ ಯುದ್ಧ ಹೂಡಿದ ನನಗೆ ಯುದ್ಧಭೂಮಿಯಲ್ಲಿಯೇ ವಧವು ದೊರೆಯಬೇಕು ಎಂಬ ವರಗಳು ಕೇಳಲ್ಪಟ್ಟವು.

೧೪. ಆ ಕಾರ್ತವೀರ್ಯಾರ್ಜುನನಿಂದ ಸಪ್ತದ್ವೀಪ, ಸಪ್ತಸಾಗರ ಮತ್ತು ಅನೇಕ ನಗರಗಳಿಂದ ಕೂಡಿದ ಸಂಪೂರ್ಣ ಭೂಮಿಯು ಕ್ಷತ್ರಿಯ ಜಾತಿಗೆ ಉಚಿತ ವಾದ ಧರ್ಮದಿಂದ ಜಯಿಸಲ್ಪಟ್ಟಿತು.

ತಸ್ಯ ಬಾಹುಸಹಸ್ರಂ ತು ಯುಧ್ಯತಃ ಕಿಲ ಯೋಗತಃ ।
ಯೋಗೋ ಯೋಗೇಶ್ವರಸ್ಯೈವ ಪ್ರಾದುರ್ಭವತಿ ಮಾಯಯಾ॥ ೧೫ ॥

ತೇನ ಸಪ್ತಸು ದ್ವೀಪೇಷು ಸಪ್ತಯಜ್ಞಶತಾನಿ ವೈ ।
ಕೃತಾನಿ ವಿಧಿನಾ ರಾಜ್ಞಾ ಶ್ರೂಯತೇ ಮುನಿಸತ್ತಮಾಃ ॥ ೧೬ ॥

ಸರ್ವೇ ಯಜ್ಞಾ ಮಹಾಬಾಹೋಸ್ತಸ್ಯಾಸನ್ ಭೂರಿತೇಜಸಃ ।
ಸರ್ವೇ ಕಾಂಚನವೇದೀಕಾಃ ಸರ್ವೇ ಯೂಪೈಶ್ಚ ಕಾಂಚನೈಃ ॥ ೧೭ ॥

ಸರ್ವೈರ್ದೇವೈರ್ಮಹಾಭಾಗೈರ್ವಿಮಾನಸ್ಥೈರಲಂಕೃತಾಃ
ಗಂಧರ್ವೈರಪ್ಸರೋಭಿಶ್ಚ ನಿತ್ಯಮೇವೋಪಶೋಭಿತಾಃ ॥ ೧೮ ॥

ತಸ್ಯ ರಾಜ್ಞೋ ಜಗೌ ಗಾಥಾಂ ಗಂಧರ್ವೋ ನಾರದಸ್ತಥಾ ।
ಚರಿತಂ ತಸ್ಯ ರಾಜರ್ಷೇರ್ಮಹಿಮಾನಂ ನಿರೀಕ್ಷ್ಯ ಚ । ॥ ೧೯ ॥

---

೧೫. ಅವನಿಗೆ ಯೋಗಬಲದಿಂದ ಯುದ್ಧ ಮಾಡುತ್ತಿರುವಾಗ ಯೋಗೇಶ್ವರನಾದ ವಿಷ್ಣು ಪರಮಾತ್ಮನಿಗೆ ಯೋಗಮಾಯೆಯು ಆವಿರ್ಭವಿಸುವಂತೆ ಮಾಯೆಯಿಂದ ಸಹಸ್ರ ಬಾಹುಗಳು ಉಂಟಾಗುವುವು.

೧೬. ಮುನೀಂದ್ರರೇ! ಆ ರಾಜನಿಂದ ಏಳು ದ್ವೀಪಗಳಲ್ಲಿ ಏಳುನೂರು ಮಹಾ ಯಜ್ಞಗಳು ಯಥಾವಿಧಿಯಾಗಿ ಆಚರಿಸಲ್ಪಟ್ಟಿರುವುವೆಂದು ಕೇಳಲ್ಪಟ್ಟಿದೆ.

೧೭. ಮಹಾಬಾಹು ಬಲಶಾಲಿಯಾದ ಮತ್ತು ಅಧಿಕ ತೇಜಸ್ವಿಯಾದ ಆ ರಾಜನು ಮಾಡಿದ ಎಲ್ಲ ಯಜ್ಞಗಳೂ ಯಶಸ್ವಿಯಾಗಿದ್ದುವು. ಮತ್ತು ಎಲ್ಲ ಯಜ್ಞಗಳೂ ಸುವರ್ಣದಿಂದ ರಚಿಸಲ್ಪಟ್ಟ ವೇದಿಕೆಗಳಿಂದಲೂ ಸುವರ್ಣದಯೂಪಸ್ತಂಭಗಳಿಂದಲೂ ಕೂಡಿದ್ದುವು.

೧೮. ಮತ್ತು ಆ ಯಜ್ಞಗಳು ಮಹಾಮಹಿಮೆಯುಳ್ಳ ವಿಮಾನಾರೂಢರಾಗಿ ಬಂದ ಎಲ್ಲಾ ದೇವತೆಗಳಿಂದ ಅಲಂಕರಿಸಲ್ಪಟ್ಟವುಗಳೂ ಹಾಗು ಗಂಧರ್ವ, ಅಪ್ಸರಾಂಗನೆಯರಿಂದ ಯಾವಾಗಲೂ ಶೋಭಿಸಲ್ಪಟ್ಟವುಗಳೂ ಆಗಿ ಜರುಗಿದುವು.

೧೯. ಆ ರಾಜನ ವಿಷಯದಲ್ಲಿ ಗಾಯಕನಾದ ನಾರದಮುನಿಯು ಆ ರಾಜರ್ಷಿಯ ಮಹಿಮೆಯಿಂದ ಕೂಡಿದ ಚರಿತ್ರೆಯನ್ನು ನೋಡಿ ಗಾಥಾಶ್ಲೋಕರೂಪವಾಗಿ ಗಾನ ಮಾಡಿರುವನು.

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಮಾನವಾಃ ।
ಯಜ್ಞೈರ್ದಾನೈಸ್ತಪೋಭಿಶ್ಚ ವಿಕ್ರಮೇಣ ಶ್ರುತೇನ ಚ ॥ ೨೦ ॥

ದ್ವೀಪೇಷು ಸಪ್ತಸು ಸ ವೈ ಧನ್ವೀ ಖಡ್ಗೀ ಶರಾಸನೀ ।
ರಥೀ ರಾಜಾ ಸಾನುಚರೋ ಯೋಗಾಚ್ಚೈವಾನುದೃಶ್ಯತೇ ॥ ೨೧ ॥

ಅನಷ್ಟದ್ರವ್ಯತಾ ಚಾಸೀನ್ನ ಕ್ಲೇಶೋ ನ ಚ ವಿಭ್ರಮಃ ।
ಪ್ರಭಾವೇಣ ಮಹಾರಾಜ್ಞಃ ಪ್ರಜಾ ಧರ್ಮೇಣ ರಕ್ಷತಃ ॥ ೨೨ ॥

ಪಂಚಾಶೀತಿಸಹಸ್ರಾಣಿ ವರ್ಷಾಣಾಂ ಸ ನರಾಧಿಪಃ ।
ಸ ಸರ್ವರತ್ನಭಾಕ್ ಸಮ್ರಾಟ್ ಚಕ್ರವರ್ತೀ ಬಭೂವ ಹ ॥ ೨೩ ॥

ಸ ಏವ ಪಶುಪಾಲೋಽಭೂತ್ ಕ್ಷೇತ್ರಪಾಲಸ್ತಥೈವ ಚ ।
ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋಽಭವತ್ ॥ ೨೪ ॥

---

೨೦. ಮಾನವರು ಯಜ್ಞ, ದಾನ, ತಪಶ್ಚರ್ಯೆ, ವಿಕ್ರಮ ಮತ್ತು ಶಾಸ್ತ್ರಾಧ್ಯಯನಗಳಿಂದ ಕಾರ್ತವೀರ್ಯಾರ್ಜುನನು ಹೊಂದಿರುವ ಮಹತ್ವಗತಿಯನ್ನು ನಿಜವಾಗಿ ಹೊಂದಲಾರರು.

೨೧. ಆ ರಾಜನು ಯೋಗಬಲದಿಂದ ಸಪ್ತದ್ವೀಪಗಳಲ್ಲಿಯೂ ಬಿಲ್ಲು, ಬಾಣ, ಖಡ್ಗ ಮುಂತಾದ ಆಯುಧಧಾರಿಯಾಗಿಯೂ ರಥಾರೂಢನಾಗಿಯೂ ಮತ್ತು ಸೇವಕರಿಂದ ಕೂಡಿರುವನಾಗಿಯೂ ಕಾಣಲ್ಪಡುವನು.

೨೨. ಇಂತಹ ರಾಜನ ಪ್ರಭಾವದಿಂದ ಧರ್ಮದಿಂದ ರಕ್ಷಿಸಲ್ಪಟ್ಟ ಪ್ರಜೆಗಳಿಗೆ ಚೌರ್ಯಾದಿಗಳಿಂದ ದ್ರವ್ಯನಾಶವೂ, ಕ್ಲೇಶವೂ ಮತ್ತು ಭ್ರಾಂತಿಯೂ ಯಾವುದೊಂದು ಅನರ್ಥವೂ ಇರಲಿಲ್ಲ.

೨೩. ಆ ರಾಜನು ಸಮಸ್ತ ರತ್ನಗಳನ್ನು ಅನುಭವಿಸುವವನೂ ಸಾಮ್ರಾಜ್ಯ ಸೌಖ್ಯಭೋಗಿಯೂ ಆಗಿ ಎಂಭತ್ತೈದು ಸಹಸ್ರ ವರ್ಷಗಳ ವರೆಗೆ ಚಕ್ರವರ್ತಿಯಾಗಿದ್ದನು.

೨೪. ಆ ಕಾರ್ತವೀರ್ಯಾರ್ಜುನನು ಯೋಗಮಹಿಮೆಯಿಂದ ಪಶುಸಂರಕ್ಷಕನೂ ಕ್ಷೇತ್ರಗಳನ್ನು ಪಾಲಿಸುವವನೂ ಮತ್ತು ವೃಷ್ಟಿಯನ್ನು ಕೊಡುವುದರಿಂದ ಪರ್ಜನ್ಯಸ್ವರೂಪನೂ ಆಗಿದ್ದನು.

ಸ ವೈ ಬಾಹುಸಹಸ್ರೇಣ ಜ್ಯಾಘಾತಕಠಿನೇನ ಚ ।
ಭಾತಿ ರಶ್ಮಿಸಹಸ್ರೇಣ ಶಾರದೇನೈವ ಭಾಸ್ಕರಃ ॥ ೨೫ ॥

ಸ ಹಿ ನಾಗಸಹಸ್ರೇಣ ಮಾಹಿಷ್ಮತ್ಯಾಂ ನರಾಧಿಪಃ ।
ಕರ್ಕೋಟಕಸಭಾಂ ಜಿತ್ವಾ ಪುರೀಂ ತತ್ರ ನ್ಯವೇಶಯತ್ ॥ ೨೬ ॥

ಸ ವೈ ವೇಗಂ ಸಮುದ್ರಸ್ಯ ಪ್ರಾವೃಟ್ಕಾಲೇಽಂಬುಜೇಕ್ಷಣಃ ।
ಕ್ರೀಡನ್ನೇವ ಸುಖೋದ್ವಿಗ್ನಃ ಪ್ರಾವೃಟ್ಕಾಲಂ ಚಕಾರ ಹ ॥ ೨೭ ॥

ಲಲಿತಾ ಕ್ರೀಡತಾ ತೇನ ಹೇಮಸ್ರಗ್ದಾಮಮಾಲಿನೀ ।
ಊರ್ಮಿಮುಕ್ತಾರ್ತಸನ್ನಾದಾ ಶಂಕಿತಾಭ್ಯೇತಿ ನರ್ಮದಾ ॥ ೨೮ ॥

ಪುರಾ ಭುಜಸಹಸ್ರೇಣ ಸ ಜಗಾಹೇ ಮಹಾರ್ಣವಮ್ ।
ಚಕಾರೋದ್ವೃತ್ತವೇಲಂ ತಮಕಾಲೇ ಮಾರುತೋದ್ಧತಮ್ ॥ ೨೯ ॥

---

೨೫. ಆ ರಾಜನು ಶರದೃತುವಿನಲ್ಲಿ ನಿರ್ಮಲವಾದ ಸಹಸ್ರ ಕಿರಣಗಳಿಂದ ಸೂರ್ಯನು ಉಜ್ವಲನಾಗಿರುವಂತೆ ಮೌರ್ವಿಹುರಿಯ ಏಟನಿಂದ ಕಠಿಣವಾದ ಸಹಸ್ರ ಬಾಹುಗಳಿಂದ ಪ್ರಕಾಶಿಸಿದನು.

೨೬. ಆ ಕಾರ್ತವೀರ್ಯಾರ್ಜುನ ರಾಜನು ಸಹಸ್ರ ನಾಗಗಳಿಂದ ಕೂಡಿದ ಕರ್ಕೋಟಕ ಸಭೆಯನ್ನು ಜಯಿಸಿ ಮಾಹಿಷ್ಮತಿಯಲ್ಲಿ ನಗರವನ್ನು ಸ್ಥಾಪಿಸಿದನು.

೨೭. ಕಮಲದಂತೆ ಸುಂದರವಾದ ನೇತ್ರಗಳುಳ್ಳ ಆ ರಾಜನು ವರ್ಷಋತುವಿನಲ್ಲಿ ಸಮುದ್ರಶಾಯಿಯಾದ ಪುಂಡರೀಕಾಕ್ಷನಂತೆ ಸಮುದ್ರದ ವೇಗವನ್ನು ತಡೆದು ಸುಖಮಯನಾಗಿ ಕ್ರೀಡಿಸುತ್ತ ವರ್ಷಾಕಾಲವನ್ನು ಕಳೆದನು.

೨೮. ಸುವರ್ಣಮಯ ಪುಷ್ಪಗಳ ಮಾಲಿಕೆಯನ್ನು ಧರಿಸಿರುವ ನರ್ಮದಾ ನದಿಯು ಕ್ರೀಡಿಸುತ್ತಿದ್ದ ಆ ರಾಜನಿಂದ ಕಲುಕಲ್ಪಟ್ಟವಳಾಗಿ ಭೀತಿಗೊಂಡಿರುವಂತೆ ತರಂಗಗಳಿಂದ ಮಾಡಿದ ಆರ್ತನಾದವುಳ್ಳವಳಾಗಿ ಸಮೀಪಕ್ಕೆ ಬರುವುದು.

೨೯. ಪೂರ್ವದಲ್ಲಿ ಆ ರಾಜನು ಮಹಾಸಮುದ್ರವನ್ನು ಪ್ರವೇಶಿಸಿ ತನ್ನ ಸಹಸ್ರ ಭುಜಗಳಿಂದ ಕ್ಷೋಭವನ್ನುಂಟುಮಾಡಿ ವಾಯುವೇಗದಿಂದ ಕ್ಷೋಭಗೊಳಿಸಲ್ಪಟ್ಟ ಅಕಾಲದಲ್ಲಿ ಸೀಮೆಯನ್ನು ಮೀರಿಬರುವಂತೆ ಮಾಡಿದನು.

ತಸ್ಯ ಬಾಹುಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ।
ಭವಂತಿ ಲೀನಾ ನಿಶ್ಚೇಷ್ಟಾಃ ಪಾತಾಲಸ್ಥಾ ಮಹಾಸುರಾಃ ॥ ೩೦ ॥

ಚೂರ್ಣೀಕೃತಮಹಾವೀಚಿಲೀನಮೀನಮಹಾವಿಷಮ್ ।
ಪತಿತಾವಿದ್ಧಫೇನೌಘಮಾವರ್ತಕ್ಷಿಪ್ತದುಸ್ಸಹಮ್ ॥ ೩೧ ॥

ಚಕಾರ ಕ್ಷೋಭಯನ್ ರಾಜಾ ದೋಃಸಹಸ್ರೇಣ ಸಾಗರಮ್ ।
ದೇವಾಸುರಪರಿಕ್ಷಿಪ್ತಂ ಕ್ಷೀರೋದಮಿವ ಸಾಗರಮ್ ॥ ೩೨ ॥

ಮಂದರಕ್ಷೋಭಣಭ್ರಾಂತಮಮೃತೋತ್ಪತ್ತಿಹೇತವೇ ।
ಸಹಸಾ ವಿದ್ರುತಾ ಭೀತಾ ಭೀಮಂ ದೃಷ್ಟ್ವಾ ನೃಪೋತ್ತಮಮ್ ॥ ೩೩ ॥

ನಿಶ್ಚಿತಂ ನತಮೂರ್ಧಾನೋ ಬಭೂವುಶ್ಚ ಮಹೋರಗಾಃ ।
ಸಾಯಾಹ್ನೇ ಕದಲೀಖಂಡಾ ನಿವಾತೇಽಸ್ತಮಿತಾ ಇವ ॥ ೩೪ ॥

---

೩೦. ಮಹೋದಧಿಯು ಕಾರ್ತವೀರ್ಯಾರ್ಜುನನ ಸಹಸ್ರ ಬಾಹುಗಳಿಂದ ಕ್ಷೋಭಗೊಳ್ಳುವುದರಿಂದ ಪಾತಾಳಲೋಕದಲ್ಲಿರುವ ಮಹಾ ಅಸುರರು ಭಯದಿಂದ ಅದೃಶ್ಯರಾಗಿ ನಿಶ್ಚೇಷ್ಟರಾಗುವರು.

೩೧. ಸಮುದ್ರವು ಇವನ ಕ್ರೀಡಾವಿನೋದದಿಂದ ಚೂರ್ಣವಾಗಿ ಭೇದಿಸಿದ ಮಹಾ ತರಂಗಗಳಲ್ಲಿ ಲಯಹೊಂದಿದ ಮೀನುಗಳ ಮಹಾ ವಿಷವುಳ್ಳದ್ದಾಗಿಯೂ ಕೆಳಕ್ಕೆಬಿದ್ದು ಪ್ರಸರಿಸಿದ ಫೇನಜಾಲವುಳ್ಳದ್ದಾಗಿಯೂ ಮತ್ತು ಸುಳಿಗಳ ಭ್ರಮಣ ಗಳಿಂದ ಸಹಿಸಲಾರದ ಅವಸ್ಥೆಯುಳ್ಳದ್ದಾಗಿಯೂ ಇತ್ತು.

೩೨. ಆ ರಾಜನು ಬಾಹು ಸಹಸ್ರದಿಂದ ಸಾಗರಕ್ಕೆ ಕ್ಷೋಭವನ್ನು ಉಂಟು ಮಾಡಿ ಅಮೃತಮಥನ ಸಮಯದಲ್ಲಿ ದೇವದಾನವರಿಂದ ಕ್ಷೋಭಗೊಂಡ ಕ್ಷೀರ ಸಮುದ್ರದಂತೆ ಮಾಡಿದನು.

೩೩. ಅಂತಹ ಸಾಗರವು ಅಮೃತದ ಪ್ರಾಪ್ತಿಗೋಸ್ಕರ ಮಂದರಪರ್ವತವೆಂಬ ಕಡಗೋಲಿನ ಭ್ರಮಣದಿಂದ ಸ್ಫುರಿಸುವ ಕ್ಷೀರಸಾಗರಕ್ಕೆ ತುಲ್ಯವಾಯಿತು. ಆಗ ಭಯಂಕರ ಮೂರ್ತಿಯುಳ್ಳ ರಾಜನನ್ನು ಕಂಡು ಸರ್ಪಗಳು ಶೀಘ್ರವಾಗಿ ಧಾವಿಸಿದುವು.

೩೪. ಆ ಮಹಾ ಸರ್ಪಗಳು ಭಯದಿಂದ ನಿಶ್ಚಲವಾಗಿ ನಮ್ರವಾದ ಶಿರವುಳ್ಳವುಗಳಾಗಿ ಸಾಯಂಕಾಲದಲ್ಲಿ ಮಾರುತವಿಲ್ಲದ ಸ್ಥಳದಲ್ಲಿರುವ ಬಾಳೆಯ ಗಿಡಗಳಂತೆ ಕಣ್ಣಿಗೆ ಕಾಣದಂತಾದುವು.

ಜ್ಯಾಮಾರೋಪ್ಯ ದೃಢೇ ಚಾಪೇ ಸಾಯಕೈಃ ಪಂಚಭಿಃ ಶತೈಃ ।
ಲಂಕೇಶಂ ಮೋಹಯಿತ್ವಾ ತು ಸಬಲಂ ರಾವಣಂ ಬಲಾತ್ ॥ ೩೫ ॥

ನಿರ್ಜಿತ್ಯ ವಶಮಾನೀಯ ಮಾಹಿಷ್ಮತ್ಯಾಂ ಬಬಂಧ ತಮ್ ।
ತತೋ ಗತ್ವಾ ಪುಲಸ್ತ್ಯಸ್ತಮರ್ಜುನಂ ಚ ಪ್ರಸಾಧಯತ್ ॥ ೩೬ ॥

ಮುಮೋಚ ರಾಜಾ ಪೌಲಸ್ತ್ಯಂ ಪುಲಸ್ತ್ಯೇನಾನುಯಾಚಿತಃ ।
ತಸ್ಯ ಬಾಹುಸಹಸ್ರಸ್ಯ ಬಭೂವ ಜ್ಯಾತಲಸ್ವನಃ ॥ ೩೭ ॥

ಯುಗಾಂತೇಽಂಬುದವೃಂದಸ್ಯ ಸ್ಫುಟಿತಸ್ಯಾಶನೇರಿವ ।
ಅಹೋ ಮೃಧೇ ಮಹಾವೀರ್ಯೋ ಭಾರ್ಗವಸ್ತಸ್ಯ ಯೋಽಚ್ಛಿನತ್ ॥ ೩೮ ॥

ಮೃಧೇ ಸಹಸ್ರಂ ಬಾಹೂನಾಂ ಹೇಮತಾಲವನಂ ಯಥಾ ।
ತೃಷಿತೇನ ಕದಾಚಿತ್ಸ ಭಿಕ್ಷಿತಶ್ಚಿತ್ರಭಾನುನಾ ॥ ೩೯ ॥

---

೩೫. ಅಂತಹ ರಾಜನು ತನ್ನ ದೃಢವಾದ ಬಿಲ್ಲಿನಲ್ಲಿ ಹುರಿಯನ್ನು ಕಟ್ಟಿ ಹೆದೆಯೇರಿಸಿ ಐದುನೂರು ಬಾಣಗಳಿಂದ ಲಂಕೇಶ್ವರನಾದ ರಾವಣಾಸುರನನ್ನು ಅವನ ಸೈನ್ಯಸಹಿತವಾಗಿ ಮೋಹಗೊಳಿಸಿದನು.

೩೬. ಅಂತಹ ರಾವಣಾಸುರನನ್ನು ಜಯಿಸಿ ಸೆರೆಹಿಡಿದು ಅವನನ್ನು ಮಾಹಿಷ್ಮತಿ ನಗರದಲ್ಲಿ ಬಂಧಿಸಿದನು. ಆಗ ಪುಲಸ್ತ್ಯ ಪ್ರಜಾಪತಿಯು ಅಲ್ಲಿಗೆ ಬಂದು ಕಾರ್ತವೀರ್ಯಾರ್ಜುನನನ್ನು ಸಮಾಧಾನಗೊಳಿಸಿದನು.

೩೭. ಆಗ ರಾಜನು ಪುಲಸ್ತ್ಯ ವಂಶದಲ್ಲಿ ಹುಟ್ಟಿದ ರಾವಣಾಸುರನನ್ನು ಪುಲಸ್ತ್ಯಮುನಿಯ ಪ್ರಾರ್ಥನೆಯಿಂದ ಬಂಧನದಿಂದ ಬಿಟ್ಟನು. ಅವನ ಸಹಸ್ರ ಬಾಹು ಪ್ರದೇಶಗಳಲ್ಲಿ ಮೌರ್ವೀಹುರಿಯ ಸ್ಪರ್ಶದಿಂದ ಭಯಂಕರವಾದ ಶಬ್ದವು ಉಂಟಾಯಿತು.

೩೮. ಆ ಶಬ್ದವು ಪ್ರಲಯ ಕಾಲದಲ್ಲಿ ಮಹಾ ಮೇಘವೃಂದದಿಂದ ಒಡೆದು ಬಿದ್ದ ಸಿಡಿಲಿನ ಶಬ್ದದಂತೆ ಭಯಂಕರವಾಯಿತು. ಇಂತಹ ರಾಜನ ಬಾಹು ಸಹಸ್ರವನ್ನು ಮಹಾವೀರ್ಯನಾದ ಭಾರ್ಗವರಾಮನು ಯುದ್ಧದಲ್ಲಿ ಛೇದಿಸಿದನು. ಆಶ್ಚರ್ಯವು!

೩೯. ವೀರ್ಯವಂತನಾದ ಭಾರ್ಗವೇಂದ್ರನು ಯುದ್ಧದಲ್ಲಿ ಸುವರ್ಣಮಯವಾದ ತಾಲವೃಕ್ಷಗಳ ವನವನ್ನು ಕತ್ತರಿಸಿದಂತೆ ಅರ್ಜುನನ ಸಹಸ್ರ ಬಾಹುಗಳನ್ನು ಛೇದಿಸಿರುವನು. ಒಂದು ಸಮಯದಲ್ಲಿ ತೃಷಾರ್ತನಾದ ಸೂರ್ಯದೇವನು ರಾಜನಲ್ಲಿ ಭಿಕ್ಷೆ ಬೇಡಿದನು.

ಸಪ್ತದ್ವೀಪಾಂಶ್ಚಿತ್ರಭಾನೋಃ ಪ್ರಾದಾದ್ಭಿಕ್ಷಾಂ ವಿಶಾಂಪತಿಃ ।
ಪುರಾಣಿ ಘೋಷಾನ್ ಗ್ರಾಮಾಂಶ್ಚ ಪತ್ತನಾನಿ ಚ ಸರ್ವಶಃ ॥ ೪೦ ॥

ಜಜ್ವಾಲ ತಸ್ಯ ಬಾಣೇಷು ಚಿತ್ರಭಾನುರ್ದಿಧಕ್ಷಯಾ ।
ಸ ತಸ್ಯ ಪುರುಷೇಂದ್ರಸ್ಯ ಪ್ರತಾಪೇನ ಮಹಾಯಶಾಃ ॥ ೪೧ ॥

ದದಾಹ ಕಾರ್ತವೀರ್ಯಸ್ಯ ಶೈಲಾಂಶ್ಚಾಪಿ ವನಾನಿ ಚ ।
ಸ ಶೂನ್ಯಮಾಶ್ರಮಂ ಸರ್ವಂ ವರುಣಸ್ಯಾತ್ಮಜಸ್ಯ ವೈ ॥ ೪೨ ॥

ದದಾಹ ಸವನಾಟೋಪಂ ಚಿತ್ರಭಾನುಃ ಸಹೈಹಯಃ ।
ಯಂ ಲೇಭೇ ವರುಣಃ ಪುತ್ರಂ ಪುರಾ ಭಾಸ್ವಂತಮುತ್ತಮಮ್ ॥ ೪೩ ॥

ವಸಿಷ್ಠನಾಮಾ ಸ ಮುನಿಃ ಖ್ಯಾತ ಆಪವ ಇತ್ಯುತ ।
ತತ್ರಾಪವಸ್ತದಾ ಕ್ರೋಧಾದರ್ಜುನಂ ಶಪ್ತವಾನ್ ವಿಭುಃ ॥ ೪೪ ॥

---

೪೦. ಆಗ ರಾಜನು ಸಪ್ತದ್ವೀಪಗಳನ್ನು ಭಿಕ್ಷೆಯನ್ನಾಗಿ ಒಪ್ಪಿಸಿದನು. ಅವುಗಳಲ್ಲಿ ಅನೇಕ ದೇಶ, ನಗರ, ಗ್ರಾಮ ಮತ್ತು ಪಾಳ್ಯಗಳು ಸೇರಿಕೊಂಡಿದ್ದುವು.

೪೧. ಅವುಗಳನ್ನು ದಹಿಸಬೇಕೆಂಬ ಆಶೆಯಿಂದ ಸೂರ್ಯನು ಅರ್ಜುನ ರಾಜನ ಬಾಣಾಗ್ರಗಳಲ್ಲಿ ಜ್ವಲಿಸಿದನು. ಮಹಾ ಯಶಸ್ವಿಯಾದ ಸೂರ್ಯದೇವನು ವನದಹನಕ್ಕೆ ಪುರುಷ ಶ್ರೇಷ್ಠನಾದ ಅರ್ಜುನ ರಾಜನ ಪ್ರತಾಪವನ್ನು ಸಹಾಯ ತೆಗೆದುಕೊಂಡನು.

೪೨. ಹೀಗೆ ಕಾತಾವೀರ್ಯನ ಸಹಾಯದಿಂದ ಸೂರ್ಯನು ಗಿರಿಗಳನ್ನೂ ವನಗಳನ್ನೂ ದಹಿಸಿದನು. ಮತ್ತು ವರುಣಪುತ್ರನ ಶೂನ್ಯವಾಗಿದ್ದ ಆಶ್ರಮವನ್ನೂ ಸಂಪೂರ್ಣವಾಗಿ ದಹಿಸಿದನು.

೪೩. ಈ ರೀತಿಯಾಗಿ ಹೈಹಯ ರಾಜನಿಂದೊಡಗೂಡಿ ಸೂರ್ಯನು ಗಂಭೀರವಾದ ವನ ಶ್ರೇಣಿಯನ್ನು ಭಸ್ಮಮಾಡಿದನು. ಪೂರ್ವದಲ್ಲಿ ವರುಣನು ತೇಜಸ್ವಿಯಾದ ಉತ್ತಮ ಪುತ್ರನನ್ನು ಹೊಂದಿದ್ದನು.

೪೪. ವರುಣನ ಪುತ್ರನಾದ ಮುನಿಯು ವಸಿಷ್ಠ ಎಂಬ ನಾಮಾಂಕಿತನೂ ಆಪವ ಎಂಬ ಪರ್ಯಾಯನಾಮದಿಂದ ಪ್ರಸಿದ್ಧನೂ ಆಗಿದ್ದನು. ಸರ್ವಶಕ್ತನಾದ ಆ ಆಪವ ಮುನಿಯು ಆಗ ಕ್ರೋಧದಿಂದ ಅರ್ಜುನ ರಾಜನನ್ನು ಶಪಿಸಿದನು.

ಯಸ್ಮಾನ್ನ ವರ್ಜಿತಮಿದಂ ವನಂ ತೇ ಮಮ ಹೈಹಯ ।
ತಸ್ಮಾತ್ತೇ ದುಷ್ಕರಂ ಕರ್ಮ ಕೃತಮನ್ಯೋ ಹನಿಷ್ಯತಿ ॥ ೪೫ ॥

ಅರ್ಜುನೋ ನಾಮ ಕೌಂತೇಯಃ ಸ ಚ ರಾಜಾ ಭವಿಷ್ಯತಿ ।
ಅರ್ಜುನಂ ಚ ಮಹಾವೀರ್ಯೋ ರಾಮಃ ಪ್ರಹರತಾಂ ವರಃ ॥ ೪೬ ॥

ಛಿತ್ವಾ ಬಾಹುಸಹಸ್ರಂ ವೈ ಪ್ರಮಥ್ಯ ತರಸಾ ಬಲೀ ।
ತಪಸ್ವೀ ಬ್ರಾಹ್ಮಣಶ್ಚೈವ ವಧಿಷ್ಯತಿ ಮಹಾಬಲಃ ॥ ೪೭ ॥

ತಸ್ಯ ರಾಮಸ್ತದಾ ಹ್ಯಾಸೀನ್ಮೃತ್ಯುಃ ಶಾಪೇನ ಧೀಮತಃ
ರಾಜ್ಞಾ ತೇನ ವರಶ್ಚೈವ ಸ್ವಯಮೇವ ವೃತಃ ಪುರಾ ॥ ೪೮ ॥

ತಸ್ಯ ಪುತ್ರಶತಂ ತ್ವಾಸೀತ್ಪಂಚ ತತ್ರ ಮಹಾರಥಾಃ ।
ಕೃತಾಸ್ತ್ರಾ ಬಲಿನಃ ಶೂರಾ ಧರ್ಮಾತ್ಮಾನೋ ಯಶಸ್ವಿನಃ ॥ ೪೯ ॥

---

೪೫. ಹೈಹಯ ರಾಜನೆ! ನೀನು ನನ್ನ ಈ ತಪೋವನವನ್ನು ಬಿಡದೆ ದಹಿಸಿದ್ದೀಯೆ! ಆದಕಾರಣದಿಂದ ನಿನ್ನ ದುಷ್ಕರ ಕರ್ಮವನ್ನು ಮತ್ತೊಬ್ಬನು ಭಂಗಪಡಿಸಿ ನಿನ್ನನ್ನು ತಿರಸ್ಕರಿಸುತ್ತಾನೆ.

೪೬. ಕುಂತಿಯ ಪುತ್ರನಾಗಿ ಜನಿಸಿದ ಅರ್ಜುನನೆಂಬುವನು ನಿನ್ನನ್ನು ತಿರಸ್ಕರಿಸುವವನಾಗಿ ರಾಜನಾಗಿರುವನು. ಕಾರ್ತವೀರ್ಯಾರ್ಜುನನನ್ನು ಮಹಾವೀರ್ಯ ಸಂಪನ್ನನೂ ಧನುರ್ಧಾರಿಗಳಲ್ಲಿ ಶ್ರೇಷ್ಠನೂ ಆದ ಭಾರ್ಗವರಾಮನು ವಧಿಸುವನು.

೪೭. ತಪಸ್ವಿಯೂ, ಬ್ರಹ್ಮಿಷ್ಠನೂ ಮತ್ತು ಮಹಾ ಬಲಶಾಲಿಯೂ ಆದ ರಾಮನು ಬಲಾತ್ಕಾರವಾಗಿ ಆಕ್ರಮಿಸಿ ಕಾರ್ತವೀರ್ಯರಾಜನ ಬಾಹು ಸಹಸ್ರವನ್ನು ಛೇದಿಸಿ ಸಂಹಾರಮಾಡುವನು.

೪೮. ಆಗ ಕಾರ್ತವೀರ್ಯಾರ್ಜುನ ರಾಜನಿಗೆ ಜ್ಞಾನಿಯಾದ ಮುನಿಯ ಶಾಪದಿಂದ ರಾಮನು ಮೃತ್ಯುರೂಪನಾದನು. ಆ ರಾಜನಿಂದ ತಾನಾಗಿಯೇ ಇಂತಹ ಮೃತ್ಯುವು ವರವಾಗಿ ಹೊಂದಲ್ಪಟ್ಟಿರುವುದು.

೪೯. ಆ ರಾಜನಿಗೆ ಒಂದುನೂರು ಮಂದಿ ಪುತ್ರರಿದ್ದರು. ಅವರಲ್ಲಿ ಐದು ಮಂದಿಯು ಅಸ್ತ್ರವಿದ್ಯಾಕುಶಲರೂ, ಬಲಶಾಲಿಗಳೂ, ಶೂರರೂ, ಧರ್ಮಾತ್ಮರೂ, ಕೀರ್ತಿವಂತರೂ ಮತ್ತು ಮಹಾರಥಿಕರೂ ಆಗಿದ್ದರು.

ಶೂರಶ್ಚ ಶೂರಸೇನಶ್ಚ ವೃಷಾಸ್ಯೋ ವೃಷ ಏವ ಚ ।
ಜಯಧ್ವಜೋ ವಂಶಕರ್ತಾ ಅವಂತಿಷು ವಿಶಾಂ ಪತಿಃ ॥ ೫೦ ॥

ಜಯಧ್ವಜಸ್ಯ ಪುತ್ರಸ್ತು ತಾಲಜಂಘಃ ಪ್ರತಾಪವಾನ್ ।
ತಸ್ಯ ಪುತ್ರಶತಂ ತ್ವೇವಂ ತಾಲಜಂಘಾ ಇತಿ ಶ್ರುತಮ್ ॥ ೫೧ ॥

ತೇಷಾಂ ಪಂಚ ಗಣಾಃ ಖ್ಯಾತಾ ಹೈಹಯಾನಾಂ ಮಹಾತ್ಮನಾಮ್ ।
ವೀತಿಹೋತ್ರಾಶ್ಚ ಸಂಜಾತಾ ಭೋಜಾಶ್ಚಾವಂತಯಸ್ತಥಾ ॥ ೫೨ ॥

ತುಂಡಿಕೇರಾಶ್ಚ ವಿಕ್ರಾಂತಾಸ್ತಾಲಜಂಘಾಸ್ತಥೈವ ಚ ।
ವೀತಿಹೋತ್ರಸುತಶ್ಚಾಪಿ ಅನಂತೋ ನಾಮ ಪಾರ್ಥಿವಃ ॥ ೫೩ ॥

ದುರ್ಜಯಸ್ತಸ್ಯ ಪುತ್ರಸ್ತು ಬಭೂವಾಮಿತ್ರಕರ್ಶನಃ ।
ಅನಷ್ಟದ್ರವ್ಯತಾ ಚೈವ ತಸ್ಯ ರಾಜ್ಞೋ ಬಭೂವ ಹ ॥ ೫೪ ॥

---

೫೦. ಅವರಲ್ಲಿ ಶೂರ, ಶೂರಸೇನ, ವೃಷಾಸ್ಯ ಮತ್ತು ವೃಷ ಎಂಬ ನಾಮಾಂಕಿತರಾಗಿ ನಾಲ್ಕುಮಂದಿ ಇದ್ದರು. ಜಯಧ್ವಜನೆಂಬುವನು ಅವಂತಿ ದೇಶದಲ್ಲಿ ರಾಜನಾಗಿ ವಂಶಪ್ರತಿಷ್ಠಾಪಕನಾಗಿದ್ದನು.

೫೧. ಜಯಧ್ವಜನಿಗೆ ಪ್ರತಾಪಶಾಲಿಯಾದ ತಾಲಜಂಘ ಎಂಬ ಪುತ್ರನಿದ್ದನು. ತಾಲಜಂಘನಿಗೆ ಜನಿಸಿದ ಒಂದುನೂರು ಮಂದಿ ಪುತ್ರರು ತಾಲಜಂಘ ಎಂಬ ಉಪನಾಮಾಂಕಿತರಾಗಿರುವರೆಂದು ಪ್ರಸಿದ್ಧವಾಗಿದೆ.

೫೨. ಮಹಾತ್ಮರಾದ ಹೈಹಯರಲ್ಲಿ ಹುಟ್ಟಿದ ವೀರ ಪ್ರಜೆಗಳು ಐದು ಗಣಗಳಾಗಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ವೀತಿಹೋತ್ರ, ಭೋಜ ಮತ್ತು ಆವಂತಿ ಎಂಬುವು ಮೂರು ಗಣಗಳು.

೫೩. ಮತ್ತು ತುಂಡಿಕೇರ, ವಿಕ್ರಮಶಾಲಿಗಳಾದ ತಾಲಜಂಘ ಎಂಬ ಎರಡು ಗಣಗಳು ಸೇರಿ ಒಟ್ಟಾಗಿ ಐದು ಹೈಹಯ ರಾಜರ ಗಣಗಳಾಗಿವೆ. ವೀತಿಹೋತ್ರನಿಗೆ ಅನಂತ ಎಂಬ ಪಾರ್ಥಿವನು ಪುತ್ರನಾಗಿರುವನು.

೫೪. ಅಂತರಾಜನಿಗೆ ಶತ್ರುಗಳನ್ನು ಸದೆಬಡಿಯುವ ದುರ್ಜಯ ಎಂಬ ಪುತ್ರನು ಇದ್ದನು. ಕಾರ್ತವೀರ್ಯ ರಾಜನಲ್ಲಿ ದ್ರವ್ಯ ನಾಶವಾಗುವುದನ್ನು ಪ್ರತಿಬಂಧಿಸುವ ಮಹಿಮೆಯು ಇತ್ತು.

ಪ್ರಭಾವೇಣ ಮಹಾರಾಜಃ ಪ್ರಜಾಸ್ತಾಃ ಪರ್ಯಪಾಲಯತ್ ।
ನ ತಸ್ಯ ವಿತ್ತನಾಶಃ ಸ್ಯಾನ್ನಷ್ಟಂ ಪ್ರತಿಲಭೇಚ್ಚ ಸಃ ॥ ೫೫ ॥

ಕಾರ್ತವೀರ್ಯಸ್ಯ ಯೋ ಜನ್ಮ ಕಥಯೇದಿಹ ಧೀಮತಃ ।
ವರ್ಧಂತೇ ವಿಭವಾಃ ಶಶ್ವದ್ಧರ್ಮಶ್ಚಾಸ್ಯ ವಿವರ್ಧತೇ ॥ ೫೬ ॥

ಯಥಾ ಯಷ್ಟಾ ಯಥಾ ದಾತಾ ತಥಾ ಸ್ವರ್ಗೇ ಮಹೀಯತೇ ॥ ೫೭ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕೋನ-
ಸಪ್ತತಿತಮೋಽಧ್ಯಾಯಃ

---

೫೫. ಆ ಮಹಾರಾಜನು ಪ್ರಭಾವದಿಂದ ತನ್ನ ಪ್ರಜೆಗಳನ್ನು ಪಾಲಿಸಿದನು. ಅವನ ರಾಜ್ಯದಲ್ಲಿ ಧನಕ್ಕೆ ನಾಶವು ಒದಗುತ್ತಿರಲಿಲ್ಲ. ಹಾಗೆ ನಷ್ಟವಸ್ತುವು ಲಭಿಸುತ್ತಲಿತ್ತು.

೫೬. ಜ್ಞಾನಿಯಾದ ಕಾರ್ತವೀರ್ಯಾರ್ಜುನನ ಈ ಜನ್ಮಚರಿತ್ರೆಯನು ಯಾವ ಮಾನವನು ಕೀರ್ತನ ಮಾಡುವನೊ ಅವನಿಗೆ ಸಂಪತ್ತಿಗಳು ವೃದ್ಧಿಯಾಗುತ್ತವೆ. ಮತ್ತು ಪುಣ್ಯವು ಅಭಿವೃದ್ಧಿಯಾಗುವುದು.

೫೭. ಹಾಗು ಈ ಪುಣ್ಯ ಚರಿತ್ರಶ್ರವಣವೆಂಬ ಸತ್ಕರ್ಮದಿಂದ ಯಾಗ-ದಾನ ಮುಂತಾದ ಪುಣ್ಯಕರ್ಮಗಳನ್ನು ಮಾಡಿದವನಂತೆ ಉತ್ತಮವಾದ ಸ್ವರ್ಗವನ್ನು ಹೊಂದಿ ಅಲ್ಲಿ ಪೂಜ್ಯನಾಗುತ್ತಾನೆ.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

---

# ಸಪ್ತತಿತಮೋಽಧ್ಯಾಯಃ

ಋಷಯ ಊಚುಃ :—

ಕಿಮರ್ಥಂ ತು ವನಂ ದಗ್ಧಮಾಪವಸ್ಯ ಮಹಾತ್ಮನಃ ।
ಕಾರ್ತವೀರ್ಯೇಣ ವಿಕ್ರಮ್ಯ ತನ್ನಃ ಪ್ರಬ್ರೂಹಿ ಪೃಚ್ಛತಾಮ್ ॥ ೧ ॥

ರಕ್ಷಿತಾ ಸ ತು ರಾಜರ್ಷಿಃ ಪ್ರಜಾನಾಮಿತಿ ನಃ ಶ್ರುತಮ್ ।
ಕಥಂ ಸ ರಕ್ಷಿತಾ ಭೂತ್ವಾ ನಾಶಯೇತ ತಪೋವನಮ್ ॥ ೨ ॥

ಸೂತ ಉವಾಚ :—

ಆದಿತ್ಯೋ ವಿಪ್ರರೂಪೇಣ ಕಾರ್ತವೀರ್ಯಮುಪಸ್ಥಿತಃ ।
ತೃಪ್ತಿಕಾಮಃ ಪ್ರಯಚ್ಛಾನ್ನಮಾದಿತ್ಯೋಽಹಂ ನ ಸಂಶಯಃ ॥ ೩ ॥

ರಾಜೋವಾಚ :—

ಭಗವನ್ ಕೇನ ತೇ ತೃಪ್ತಿರ್ಭವೇದ್ಬ್ರೂಹಿ ದಿವಾಕರ ।
ಕೀದೃಶಂ ಭೋಜನಂ ದದ್ಮಿ ಶ್ರುತ್ವಾ ಚ ವಿದಧಾಮ್ಯಹಮ್ ॥ ೪ ॥

---

೧. ಮುನಿಗಳು ಇಂತೆಂದರು :—ಮಹಾತ್ಮನಾದ ಆಪವ ಮುನಿಯ ವನವು ಕಾರ್ತವೀರ್ಯ ರಾಜನಿಂದ ವಿಕ್ರಮವನ್ನು ತೋರಿಸಿ ಏಕೆ ದಹಿಸಲ್ಪಟ್ಟಿತು ? ಕುತೂಹಲದಿಂದ ಶ್ರವಣಮಾಡುವ ನಮಗೆ ಅದನ್ನು ಉಪದೇಶಿಸು.

೨. ಆ ರಾಜರ್ಷಿಯು ಪ್ರಜೆಗಳಿಗೆ ರಕ್ಷಕನೆಂದು ನಮ್ಮಿಂದ ಕೇಳಲ್ಪಟ್ಟಿದೆ. ಹೀಗೆ ತಾನು ರಕ್ಷಕನಾಗಿದ್ದು ತಪೋವನವನ್ನು ಏಕೆ ನಾಶಮಾಡಿರುವನು ?

೩. ಸೂತಮುನಿಯು ಇಂತೆಂದನು :—ಒಂದು ಸಮಯದಲ್ಲಿ ಸೂರ್ಯದೇವನು ವಿಪ್ರನ ವೇಷದಿಂದ ಕಾರ್ತವೀರ್ಯಾರ್ಜುನನ ಸಮೀಪಕ್ಕೆ ಬಂದನು. ಮತ್ತು ತೃಪ್ತಿಕಾಮನೆಯಿಂದ ಇಲ್ಲಿಗೆ ಬಂದ ಆದಿತ್ಯನು ನಾನು ; ಸಂಶಯವಿಲ್ಲ. ನನಗೆ ಅನ್ನವನ್ನು ಕೊಡು ಎಂದು ಕೇಳಿದನು.

೪. ರಾಜನು ಇಂತೆಂದನು :—ಪೂಜ್ಯನಾದ ಸೂರ್ಯದೇವನೇ ! ನಿನಗೆ ಯಾವ ಅನ್ನದಿಂದ ತೃಪ್ತಿಯಾಗುವುದು ? ಹೇಳು. ಎಂತಹ ಭೋಜನವನ್ನು ನಿನಗೆ ಮಾಡಿಸಲಿ ? ಅದನ್ನು ಕೇಳಿಕೊಂಡು ಅದನ್ನು ಸಿದ್ಧಪಡಿಸುವೆನು.

**ಸೂರ್ಯ ಉವಾಚ :—**

ಸ್ಥಾವರಂ ದೇಹಿ ಮೇ ಸರ್ವಮಾಹಾರಂ ದದತಾಂ ವರ ।
ತೇನ ತೃಪ್ತೋ ಭವೇಯಂ ವೈ ನ ತೃಪ್ಯೇಽನ್ಯೇನ ಪಾರ್ಥಿವ ॥ ೫ ॥

ರಾಜೋವಾಚ :—

ನ ಶಕ್ಯಾಃ ಸ್ಥಾವರಾಃ ಸರ್ವಸ್ತೇಜಸಾ ಮಾನುಷೇಣ ತು ।
ನಿರ್ದಗ್ಧುಂ ತಪಸಾಂ ಶ್ರೇಷ್ಠ ತ್ವಾಮೇವ ಪ್ರಣಮಾಮ್ಯಹಮ್ ॥ ೬ ॥

ಆದಿತ್ಯ ಉವಾಚ :—

ತುಷ್ಟಸ್ತೇಽಹಂ ಶರಾನ್ ದದ್ಮಿ ಅಕ್ಷಯಾನ್ ಸರ್ವತೋಮುಖಾನ್ ।
ಯೇ ಕ್ಷಿಪ್ತಾಃ ಪ್ರಜ್ವಲಿಷ್ಯಂತಿ ಮಮ ತೇಜಃಸಮನ್ವಿತಾಃ ॥ ೭ ॥

ಆವಿದ್ಧಂ ತೇಜಸಾ ಮೇಽದ್ಯ ಸ್ಥಾವರಂ ಶೋಷಮೇಷ್ಯತಿ ।
ಶುಷ್ಕಂ ಭಸ್ಮ ಕರಿಷ್ಯಾಮಿ ಕ್ಷಣೇನೈವ ನರಾಧಿಪ ॥ ೮ ॥

ತತಃ ಶರಾನಥಾದಿತ್ಯಸ್ತ್ವರ್ಜುನಾಯಾದದಾತ್ ಪ್ರಭುಃ ।
ತತಃ ಸಂಪ್ರಾಪ್ಯ ಸ ಶರಾನ್ ಸ್ಥಾವರಂ ಸರ್ವಮೇವ ಹಿ ॥ ೯ ॥

---

೫. ಸೂರ್ಯನು ಇಂತೆಂದನು :— ದಾನಶೀಲರಲ್ಲಿ ಶೂರನಾದ ರಾಜನೆ ! ಸ್ಥಾವರವನ್ನೆಲ್ಲ ನನಗೆ ಆಹಾರವನ್ನಾಗಿ ಕೊಡು. ಆದರಿಂದ ನಾನು ತೃಪ್ತನಾಗುವೆನು. ಇನ್ನಾವುದರಿಂದಲೂ ನನಗೆ ತೃಪ್ತಿಯಾಗಲಾರದು.

೬. ರಾಜನು ಹೀಗೆ ಹೇಳಿದನು :—ತಪಿಸುವ ತೇಜಸ್ಸುಗಳಲ್ಲಿ ಶ್ರೇಷ್ಠನೆ ! ಮಾನುಷ ಪ್ರಭಾವದಿಂದ ಸಕಲ ಸ್ಥಾವರ ವಸ್ತುಗಳನ್ನು ದಹಿಸಲು ಸಾಧ್ಯವಿಲ್ಲ. ಇದಕ್ಕಾಗಿ ನಾನು ನಿನ್ನನ್ನು ನಮಸ್ಕರಿಸಿ ಬೇಡಿಕೊಳ್ಳುವೆನು.

೭. ಸೂರ್ಯನು ಇಂತೆಂದನು :—ನಿನ್ನಲ್ಲಿ ಸಂತುಷ್ಟನಾದ ನಾನು ನಿನಗೆ ಅಕ್ಷಯವೂ ಸರ್ವತೋಮುಖವೂ ಆದ ಬಾಣಗಳನ್ನು ಕೊಡುತ್ತೇನೆ. ಆ ಬಾಣಗಳನ್ನು ಪ್ರಯೋಗಿಸಲು ಅವುಗಳು ನನ್ನ ತೇಜಸ್ಸಿನಿಂದ ಕೂಡಿ ಪ್ರಜ್ವಲಿಸುತ್ತವೆ.

೮. ಹಾಗೆ ನನ್ನ ತೇಜಸ್ಸಿನಿಂದ ವ್ಯಾಪಿಸಲ್ಪಟ್ಟ ಸಕಲ ಸ್ಥಾವರ ವಸ್ತುಜಾಲವು ಈಗಲೆ ಒಣಗಿಹೋಗುವುದು. ರಾಜನೆ ! ಹಾಗೆ ಶುಷ್ಕವಾದುದನ್ನೆಲ್ಲ ಒಂದು ಕ್ಷಣದಲ್ಲಿ ಭಸ್ಮಮಾಡುವೆನು.

೯. ತರುವಾಯ ಪ್ರಭುವಾದ ಸೂರ್ಯನು ಅರ್ಜುನನಿಗೆ ಬಾಣಗಳನ್ನು ಕೊಟ್ಟನು. ಅರ್ಜುನ ರಾಜನು ಆ ಬಾಣಗಳನ್ನು ತೆಗೆದುಕೊಂಡು ಸಕಲ ಸ್ಥಾವರ ಜಾತಿಯನ್ನು ಸುಟ್ಟುಹಾಕಿದನು.

ಆಶ್ರಮಾನಥ ಗ್ರಾಮಾಂಶ್ಚ ಘೋಷಾಂಶ್ಚ ನಗರಾಣಿ ಚ ।
ತಪೋವನಾನಿ ರಮ್ಯಾಣಿ ವನಾನ್ಯುಪವನಾನಿ ಚ ॥ ೧೦ ॥

ತಚ್ಚಾಪಕ್ಷಿಪ್ತಬಾಣೌಘಾ ಅದಹನ್ ಸ್ಥಾವರಾನ್ನೃಪ ।
ನಿರ್ವೃಕ್ಷಾ ನಿಸ್ತೃಣಾ ಭೂಮಿರ್ದಗ್ಧಾ ಸೌರೇಣ ತೇಜಸಾ ॥ ೧೧ ॥

ಏತಸ್ಮಿನ್ನೇವ ಕಾಲೇ ತು ಆಪವೋಽನಲಮಾಶ್ರಿತಃ ।
ದಶವರ್ಷಸಹಸ್ರಾಣಿ ಜಲವಾಸಾನ್ ಮಹಾನೃಷಿಃ ॥ ೧೨ ॥

ಪೂರ್ಣೇ ವ್ರತೇ ಮಹಾತೇಜಾ ಉದತಿಷ್ಠತ್ತಪೋಧನಃ ।
ಸೋಽಪಶ್ಯದಾಶ್ರಮಂ ದಗ್ಧಮರ್ಜುನೇನ ಮಹಾನೃಷಿಃ ॥ ೧೩॥

ಕ್ರೋಧಾಚ್ಛಶಾಪ ರಾಜರ್ಷಿಂ ಕೀರ್ತಿತಂ ವೋ ಯಥಾ ಮಯಾ ।
ಕ್ರೋಷ್ಟೋಃ ಶೃಣುತ ರಾಜರ್ಷೇರ್ವಂಶಮುತ್ತಮಪೂರುಷಮ್ ॥೧೪॥

---

೧೦. ಆಶ್ರಮ, ಗ್ರಾಮ, ಪಾಳ್ಯ, ನಗರ, ತಪೋವನ, ರಮ್ಯೋದ್ಯಾನ, ಮತ್ತು ಉಪವನ ಮುಂತಾದ ಎಲ್ಲ ಸ್ಥಾವರ ಪ್ರದೇಶಗಳನ್ನು ನಿಶ್ಶೇಷವಾಗಿ ದಹಿಸಿದನು.

೧೧. ರಾಜನೆ! ಆ ರಾಜನು ಬಿಲ್ಲಿನಲ್ಲಿ ಸಂಧಾನಮಾಡಿ ಪ್ರಯೋಗಿಸಿದ ಬಾಣಗಳ ಪಂಕ್ತಿಗಳು ಎಲ್ಲ ಸ್ಥಾವರ ಭೂಮಿಯನ್ನು ದಹಿಸಿದುವು. ಆಗ ಸೂರ್ಯನ ತೇಜಸ್ಸಿನಿಂದ ದಹಿಸಲ್ಪಟ್ಟ ಭೂಮಿಯು ವೃಕ್ಷ, ತೃಣ ಮುಂತಾದುವುಗಳಿಂದ ಶೂನ್ಯ ವಾಯಿತು.

೧೨. ಇದೇ ಸಮಯದಲ್ಲಿ ಅಪವನೆಂಬ ಮಹಾಮುನಿಯು ಹತ್ತು ಸಹಸ್ರ ವರ್ಷಗಳ ವರೆಗೆ ಜಲವಾಸ ಮಾಡಬೇಕೆಂಬ ವ್ರತವನ್ನು ಧರಿಸಿ ಅದರಂತೆ ಜಲವನ್ನು ಆಶ್ರಯಿಸಿದ್ದನು.

೧೩. ಮಹಾ ತೇಜಸ್ವಿಯೂ ತಪೋಧನನೂ ಆದ ಮುನಿಯು ವ್ರತವು ಪೂರ್ಣ ವಾಗಲಾಗಿ ಜಲದಿಂದ ಮೇಲಕ್ಕೆ ಬಂದನು. ಆಗ ಮಹಾಮುನಿಯು ಆಶ್ರಮವು ಅರ್ಜುನ ರಾಜನಿಂದ ದಗ್ಧವಾದುದನ್ನು ಕಂಡನು.

೧೪. ಆಗ ಕ್ರೋಧದಿಂದ ರಾಜರ್ಷಿಯಾದ ಅರ್ಜುನನ್ನು ನಾನು ಹಿಂದೆ ಹೇಳಿರುವಂತೆ ಶಪಿಸಿದನು. ಮುಂದೆ ಉತ್ತಮ ಪುರುಷರಿಂದ ಕೂಡಿದ ಕ್ರೋಷ್ಟು ಎಂಬುವನ ವಂಶವನ್ನು ಶ್ರವಣಮಾಡಿರಿ.

ಯಸ್ಯಾನ್ವವಾಯೇ ಸಂಭೂತೋ ವೃಷ್ಣಿರ್ವೃಷ್ಣಿಕುಲೋದ್ಭವಃ ।
ಕ್ರೋಷ್ಟೋರೇಕೋಽಭವತ್ಪುತ್ರೋ ವೃಜಿನೀವಾನ್ ಮಹಾಯಶಾಃ ॥ ೧೫ ॥

ವಾರ್ಜಿನೀವತಮಿಚ್ಛಂತಿ ಸ್ವಾಹಿಂ ಸ್ವಾಹಾವತಾಂ ವರಮ್ ।
ಸ್ವಾಹೇಃ ಪುತ್ರೋ-ಭವದ್ರಾಜಾ ರುಶೇಕುರ್ವದತಾಂ ವರಃ ॥ ೧೬ ॥

ಸುತಪ್ರಸೂತಿಮಿಚ್ಛಂಸ್ತು ರುಶೇಕುಃ ಪ್ರಯತಾತ್ಮವಾನ್ ।
ಮಹಾಕ್ರತುಭಿರೀಜೇ ಸ ವಿವಿಧೈರಾಪ್ತದಕ್ಷಿಣೈಃ ॥ ೧೭ ॥

ಜಜ್ಞೇ ಚಿತ್ರರಥಸ್ತಸ್ಯ ಪುತ್ರಃ ಕರ್ಮಭಿರನ್ವಿತಃ ।
ಜಜ್ಞೇ ಚೈತ್ರರಥಿರ್ವೀರೋ ಯಜ್ವಾ ವಿಪುಲದಕ್ಷಿಣಃ ॥ ೧೮ ॥

ಶಶಬಿಂದುಃ ಪರಂ ವೃತ್ತಂ ರಾಜರ್ಷೀಣಾಮನುಷ್ಠಿತಮ್ ।
ಚಕ್ರವರ್ತೀ ಮಹಾಸತ್ತ್ವೋ ಮಹಾವೀರ್ಯೋ ಬಹುಪ್ರಜಃ ॥ ೧೯ ॥

---

೧೫. ಯಾದವ ವಂಶವನ್ನು ಬೆಳಗಿರುವ ಶ್ರೀ ಕೃಷ್ಣನು ಆ ಕ್ರೋಷ್ಟು ವಂಶದಲ್ಲಿ ಅವತರಿಸಿರುವನು. ಕ್ರೋಷ್ಟುವಿಗೆ ಮಹಾಕೀರ್ತಿ ಸಂಪನ್ನನಾದ ವೃಜಿನೀವಾನ್ ಎಂಬ ಒಬ್ಬ ಪುತ್ರನು ಇದ್ದನು.

೧೬. ವೃಜಿನೀವಾನ್ ಎಂಬುವನಿಂದ ಹೋಮಕರ್ಮವನ್ನು ಆಚರಿಸುವವರಲ್ಲಿ ಶ್ರೇಷ್ಠನೆನಿಸಿರುವ ಸ್ವಾಹಿ ಎಂಬುವನು ಜನ್ಮವೆತ್ತಿದನು, ಎಂದು ಪ್ರಾಜ್ಞರು ಹೇಳಿರುವರು. ಸ್ವಾಹಿಗೆ ವಾಗ್ಮಿಗಳಲ್ಲಿ ಶ್ರೇಷ್ಠನಾದ ರುಶೇಕು ಎಂಬ ರಾಜನು ಪುತ್ರನಾಗಿದ್ದನು.

೧೭. ಆ ರುಶೇಕು ರಾಜನು ಪವಿತ್ರವಾದ ಅಂತಃಕರಣವುಳ್ಳವನಾಗಿ ಸಂತತಿಯಾಗಬೇಕೆಂದು ಬಯಸಿ ಅನೇಕ ದಕ್ಷಿಣಾದಾನಗಳಿಂದ ಕೂಡಿದ ಬಹುವಿಧವಾದ ಮಹಾ ಯಜ್ಞಗಳನ್ನು ಆಚರಿಸಿದನು.

೧೮. ರುಶೇಕು ರಾಜನಿಗೆ ಅನೇಕ ಸತ್ಕರ್ಮಗಳಿಂದ ಕೂಡಿದ, ಯಾಗಗಳಲ್ಲಿ ಬಹು ದಕ್ಷಿಣಾದಾನ ಮಾಡುವ ಶೀಲವುಳ್ಳ ಮತ್ತು ವೀರನಾದ ಒಬ್ಬ ಪುತ್ರನು ಜನಿಸಿದನು. ಚಿತ್ರರಥನ ಪುತ್ರನಾದುದರಿಂದ ಅವನು ಚೈತ್ರರಥಿ ಎಂದು ಪ್ರಸಿದ್ಧನಾಗಿರುವನು.

೧೯. ಚೈತ್ರರಥಿಯು ಶಶಬಿಂದು ಎಂದು ನಿಜನಾಮದಿಂದ ಪ್ರಸಿದ್ಧನೂ, ಮಹಾ ಸತ್ತ್ವವಂತನೂ, ಮಹಾ ವೀರ್ಯಶಾಲಿಯೂ, ಬಹುಪ್ರಜೆಯುಳ್ಳವನೂ ಮತ್ತು ರಾಜರ್ಷಿಗಳ ಉತ್ತಮವಾದ ಮಾರ್ಗವನ್ನು ಅವಲಂಬಿಸಿದವನೂ ಆದ ಚಕ್ರವರ್ತಿಯಾಗಿದ್ದನು.

ತತ್ರಾನುವಂಶಶ್ಲೋಕೋಽಯಂ ಯಸ್ಮಿನ್ ಗೀತಃ ಪುರಾತನೈಃ ।
ಶತಬಿಂದೋಸ್ತು ಪುತ್ರಾಣಾಂ ಶತಾನಾಮುಭವಚ್ಛತಮ್ ॥ ೨೦ ॥

ಶ್ರೀಮತಾಮನುರೂಪಾಣಾಂ ಭೂರಿದ್ರವಿಣತೇಜಸಾಮ್ ।
ತೇಷಾಂ ಷಡ್ ವೈ ಪ್ರಧಾನಾಸ್ತು ಪೃಥುಸ್ವಾಹಾ ಮಹಾಬಲಾಃ ॥ ೨೧ ॥

ಪೃಥುಶ್ರವಾಃ ಪೃಥುಯಶಾಃ ಪೃಥುಕರ್ಮಾ ಪೃಥುಂಜಯಃ ।
ಪೃಥುಕೀರ್ತಿಃ ಪೃಥುದಾರ್ನಂತೋ ರಾಜಾನಃ ಶತಬಿಂದವಃ ॥ ೨೨ ॥

ಶಂಸಂತಿ ಚ ಪುರಾಣಜ್ಞಾಃ ಪಾರ್ಥಶ್ರವಸಮಕ್ಷರಮ್ ।
ಅಕ್ಷರಸ್ಯ ಸುಯಜ್ಞಸ್ತು ಉಶನಾಸ್ತತ್ಸುತೋಽಭವತ್ ॥ ೨೩ ॥

ಉಶನಾಃ ಸ ತು ಧರ್ಮಾತ್ಮಾ ಅವಾಪ್ಯ ಪೃಥಿವೀಮಿಮಾಮ್ ।
ಆಜಹಾರಾಶ್ವಮೇಧಾನಾಂ ಶತಮುತ್ತಮದಕ್ಷಿಣಮ್ ॥ ೨೪ ॥

---

೨೦. ಆ ಶಶಬಿಂದುವಿನ ವಿಷಯದಲ್ಲಿ ಪುರಾಣಜ್ಞರಿಂದ ಗಾನಮಾಡಲ್ಪಟ್ಟ ಆ ವಂಶದಲ್ಲಿ ಜನಿಸಿದ ವ್ಯಕ್ತಿಗಳನ್ನು ವರ್ಣಿಸುವ ಶ್ಲೋಕವು ಇರುವುದು, ಶಶಬಿಂದುವಿನಿಂದ ಜನಿಸಿದ ಪುತ್ರಸಂತತಿಯು ಸಹಸ್ರ ಸಂಖ್ಯೆಯಿಂದ ಸಮೃದ್ಧವಾಗಿರುವುದು.

೨೧. ಅತಿಶಯವಾದ ಶ್ರೀಮಂತರೂ ಅನುರೂಪರೂ ಮತ್ತು ಹೆಚ್ಚಾದ ಧನ–ತೇಜಸ್ಸುಗಳಿಂದ ಕೂಡಿದವರೂ ಆದ ಶಶಬಿಂದು ಪುತ್ರರಲ್ಲಿ ಆರುಮಂದಿಯು ಪ್ರಧಾನರೂ ಅಧಿಕವಾಗಿ ಹೋಮಿಾಯಹವಿರ್ದಾನ ಮಾಡುವರೂ. ಮಹಾ ಬಲಶಾಲಿಗಳೂ ಆಗಿದ್ದರು,

೨೨. ಶಶಬಿಂದು ಪುತ್ರರಲ್ಲಿ ಪ್ರಧಾನರಾದ ಆರುಮಂದಿ ರಾಜರು ಪೃಥುಶ್ರವ, ಪೃಥುಯಶ, ಪೃಥುಕರ್ಮ, ಪೃಥುಂಜಯ, ಪೃಥುಕೀರ್ತಿ ಮತ್ತು ಪೃಥುದಾರ್ನಂತ ಎಂಬ ನಾಮಾಂಕಿತರಾಗಿದ್ದರು.

೨೩. ಪುರಾಣಜ್ಞರು ಪೃಥುಶ್ರವಸನ ಪುತ್ರನನ್ನು ಅಕ್ಷರ ಎಂಬುದಾಗಿ ಹೇಳುತ್ತಾರೆ. ಅಕ್ಷರನಿಗೆ ಸುಯಜ್ಞನೆಂಬುವನೂ, ಸುಯಜ್ಞನಿಗೆ ಉಶನ ಎಂಬುವನೂ ಪುತ್ರರಾಗಿದ್ದರು.

೨೪. ಇವರಲ್ಲಿ ಧರ್ಮಾತ್ಮನಾದ ಉಶನಾ ಎಂಬುವನು ಈ ಭೂಮಂಡಲಕ್ಕೆ ಅಧಿಪತಿಯಾಗಿ ಅತಿಶಯವಾದ ದಕ್ಷಿಣಾದಾನದಿಂದ ಕೂಡಿದ ಒಂದುನೂರು ಅಶ್ವಮೇಧ ಯಾಗಗಳನ್ನು ಆಚರಿಸಿದನು.

ಮರುತ್ತಸ್ತಸ್ಯ ತನಯೋ ರಾಜರ್ಷೀಣಾಮನುವ್ರತಃ ।
ವೀರಕಂಬಲಬರ್ಹಿಸ್ತು ಮರುತ್ತತನಯಃ ಸ್ಮೃತಃ ॥ ೨೫ ॥

ಪುತ್ರಸ್ತು ರುಕ್ಮಕವಚೋ ವಿದ್ವಾನ್ ಕಂಬಲಬರ್ಹಿಷಃ ।
ನಿಹತ್ಯ ರುಕ್ಮಕವಚಃ ಪುರಾ ಕವಚಿನೋ ರಣೇ ॥ ೨೬ ॥

ಧನ್ವಿನೋ ನಿಶಿತೈರ್ಬಾಣೈರವಾಪ ಶ್ರಿಯಮುತ್ತಮಾಮ್ ।
ಬ್ರಾಹ್ಮಣೇಭ್ಯೋ ದದೌ ವಿತ್ತಮಶ್ವಮೇಧೇ ಮಹಾಯಶಾಃ ॥ ೨೭ ॥

ರಾಜ್ಞಸ್ತು ರುಕ್ಮಕವಚಾತ್ ಪರಾವಿತ್ ಪರವೀರಹಾ ।
ಜಜ್ಞಿರೇ ಪಂಚ ಪುತ್ರಾಸ್ತು ಮಹಾಸತ್ತ್ವಾ ಮಹಾಬಲಾಃ ॥ ೨೮ ॥

ರುಕ್ಮೇಷುಃ ಪೃಥುರುಕ್ಮಶ್ಚ ಜ್ಯಾಮಘಃ ಪರಿಘೋ ಹರಿಃ ।
ಪರಿಘಂ ಚ ಹರಿಂ ಚೈವ ವಿದೇಹೇಽಸ್ಥಾಪಯತ್ ಪಿತಾ ॥ ೨೯ ॥

---

೨೫. ಆ ಉಶನನಿಗೆ ರಾಜರ್ಷಿಗಳ ಸನ್ಮಾರ್ಗವನ್ನು ಅನುಸರಿಸುವ ಮರುತ್ತನೆಂಬ ಪುತ್ರನಿದ್ದನು. ಮರುತ್ತನ ವೀರನಾದ ಪುತ್ರನು ಕಂಬಲಬರ್ಹಿ ಎಂದು ಸ್ಮರಿಸಲ್ಪಟ್ಟು ಇರುವನು.

೨೬. ಕಂಬಲಬರ್ಹಿ ಎಂಬುವನಿಗೆ ರುಕ್ಮಕವಚನೆಂಬ ವಿದ್ವಾಂಸನಾದ ಪುತ್ರನು ಜನಿಸಿದನು. ಆ ರುಕ್ಮಕವಚನು ಪೂರ್ವದಲ್ಲಿ ರಣರಂಗದಲ್ಲಿ ಕವಚಧಾರಿಗಳಾದ ಅನೇಕ ಶತ್ರುಗಳನ್ನು ಸಂಹರಿಸಿದನು.

೨೭. ತನ್ನ ತೀಕ್ಷ್ಣವಾದ ಬಾಣಗಳನ್ನು ಧನುರ್ಧಾರಿಗಳ ಮೇಲೆ ಪ್ರಯೋಗಿಸಿ ಶತ್ರುಗಳ ಅತ್ಯುತ್ತಮವಾದ ಸಂಪತ್ತಿಯನ್ನು ವಶಮಾಡಿಕೊಂಡನು. ಮತ್ತು ಮಹಾ ಯಶಸ್ವಿಯಾದ ಆ ರಾಜನು ಅಶ್ವಮೇಧ ಯಜ್ಞದಲ್ಲಿ ಬ್ರಾಹ್ಮಣರಿಗೆ ಆ ಧನವನ್ನು ದಾನಮಾಡಿದನು.

೨೮. ರುಕ್ಮಕವಚ ರಾಜನಿಂದ ಶತ್ರು ವೀರರನ್ನು ಭೇದಿಸಿ ಸಂಹರಿಸಲು ದಕ್ಷರೂ ಮಹಾ ಸತ್ತ್ವವಂತರೂ ಮತ್ತು ಬಲಿಷ್ಠರೂ ಆದ ಐದು ಮಂದಿ ಪುತ್ರರು ಜನಿಸಿದರು.

೨೯. ಅವರಿಗೆ ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ ಮತ್ತು ಹರಿ ಎಂಬ ಹೆಸರುಗಳಿದ್ದುವು. ಇವರಲ್ಲಿ ಜ್ಯಾಮಘ ಮತ್ತು ಹರಿ ಎಂಬ ಇಬ್ಬರನ್ನು ತಂದೆಯು ವಿದೇಹರಾಜ್ಯದಲ್ಲಿ ಸ್ಥಾಪಿಸಿದನು.

ರುಕ್ಮೇಷುರಭವದ್ರಾಜಾ ಪೃಥುರುಕ್ಮಸ್ತದಾಶ್ರಯಃ ।
ತೇಭ್ಯಃ ಪರಾಜಿತೋ ರಾಜಾ ಜ್ಯಾಮಘೋಽವಸದಾಶ್ರಮೇ ॥ ೩೦ ॥

ಪ್ರಶಾಂತಸ್ತು ವನೇ ಘೋರೇ ಬ್ರಾಹ್ಮಣೇನ ವಿರೋಧಿತಃ ।
ಜಗಾಮ ಧನುರಾದಾಯ ದೇಶಮನ್ಯಂ ರಥೀ ಧ್ವಜೀ ॥ ೩೧ ॥

ನರ್ಮದಾಂ ನೃಪ ಏಕಾಕೀ ಮೇಕಲಾನ್ಮಿರಿಕಾವನಮ್ ।
ಋಕ್ಷವಂತಂ ಗಿರಿಂ ಗತ್ವಾ ಮುಕ್ತಿಮಂತಮಥಾವಿಶತ್ ॥ ೩೨ ॥

ಜ್ಯಾಮಘಸ್ಯಾಭವದ್ಭಾರ್ಯಾ ಶೈಬ್ಯಾ ಬಲವತೀ ಭೃಶಮ್ ।
ಅಪುತ್ರೋಽಪಿ ಸ ವೈ ರಾಜಾ ಭಾರ್ಯಾಮನ್ಯಾಂ ನ ವಿಂದತಿ ॥ ೩೩ ॥

ತಸ್ಯಾಸೀದ್ವಿಜಯೋ ಯುದ್ಧೇ ತತಃ ಕನ್ಯಾಮವಾಪ ಸಃ ।
ಭಾರ್ಯಾಮುವಾಚ ಭೀತಃ ಸನ್ ಸ್ನುಷೇತಿ ತು ನರೇಶ್ವರಃ ॥ ೩೪ ॥

---

೩೦. ರುಕ್ಮೇಷುವು ರಾಜನಾಗಿಯೂ ಪೃಥುರುಕ್ಮನು ರುಕ್ಮೇಷುರಾಜನಿಗೆ ಆಶ್ರಿತನಾಗಿಯೂ ಇದ್ದರು, ಜ್ಯಾಮಘನೆಂಬ ರಾಜನು ಅವರೆಲ್ಲರಿಂದ ಪರಾಜಯವನ್ನು ಹೊಂದಿ ಆಶ್ರಮವಾಸಿಯಾದನು.

೩೧. ಜ್ಯಾಮಘನು ಘೋರವನದಲ್ಲಿ ಶಾಂತಿಗುಣದಿಂದ ಇದ್ದು ಒಬ್ಬ ಬ್ರಹ್ಮಿಷ್ಠನಿಂದ ವಿರೋಧ ಹೊಂದಿದವನಾಗಿ ರಥ-ಧ್ವಜ ಮುಂತಾದ ಉಪಕರಣ ಸಹಿತನಾಗಿ ಬಿಲ್ಲನ್ನು ತೆಗೆದುಕೊಂಡು ಅಲ್ಲಿಂದ ಪ್ರಯಾಣ ಮಾಡಿದನು.

೩೨. ತರುವಾಯ ಏಕಾಕಿಯಾದ ರಾಜನು ನರ್ಮದಾ ನದಿಯನ್ನೂ, ಮೇಕಲ ಗಿರಿಯ ಮಿರಿಕಾವನವನ್ನೂ, ಋಕ್ಷವಂತವೆಂಬ ಗಿರಿಯನ್ನೂ ಭ್ರಮಿಸಿ ಕಡೆಯಲ್ಲಿ ಮುಕ್ತಿಮಂತವೆಂಬ ಪ್ರದೇಶವನ್ನು ಪ್ರವೇಶ ಮಾಡಿದನು.

೩೩. ಜ್ಯಾಮಘನಿಗೆ ಅತಿಬಲವತಿಯಾದ ಶೈಬ್ಯಾ ಎಂಬ ಭಾರ್ಯೆಯು ಇದ್ದಳು. ಆ ರಾಜನು ಆ ಭಾರ್ಯೆಯಲ್ಲಿ ಸಂತತಿಯನ್ನು ಹೊಂದದಿದ್ದರೂ ಬೇರೊಬ್ಬಳು ಭಾರ್ಯೆಯನ್ನು ಹೊಂದಿರಲಿಲ್ಲ.

೩೪. ಹೀಗಿರಲು ಅವನಿಗೆ ಒಂದುಸಲ ಯುದ್ಧದಲ್ಲಿ ಜಯವು ಲಭಿಸಿತು, ಆಗ ಒಬ್ಬಳು ಕನ್ಯೆಯನ್ನು ಹೊಂದಿದನು, ಆ ಕನ್ಯೆಯನ್ನು ತಂದು ಇವಳು ನಿನಗೆ ಸೊಸೆ ಎಂದು ರಾಜನು ತನ್ನ ಪತ್ನಿಗೆ ಭೀತಿಯಿಂದ ಹೇಳಿದನು.

ಏವ ಮುಕ್ತಾಬ್ರವೀದೇವಂ ಕಸ್ಯೇಯಂ ತೇ ಸ್ನುಷೇತಿ ಸಾ ।
ಯಸ್ತೇ ಜನಿಷ್ಯತೇ ಪುತ್ರಸ್ತಸ್ಯ ಭಾರ್ಯಾ ಭವಿಷ್ಯತಿ ॥ ೩೫ ॥

ತಸ್ಯಾಃ ಸಾ ತಪಸೋಗ್ರೇಣ ಶೈಬ್ಯಾ ಚೈವ ಹ್ಯಸೂಯತ ।
ಪುತ್ರಂ ವಿದರ್ಭಂ ಸುಭಗಾ ಶೈಬ್ಯಾ ಪರಿಣತಾ ಸತೀ ॥ ೩೬ ॥

ರಾಜಪುತ್ರಸ್ತು ವಿದ್ವಾಂಸೌ ಸ್ನುಷಾಯಾಂ ಕ್ರಥಕೈಶಿಕೌ ।
ಪುತ್ರೌ ವಿದರ್ಭೋಽಜನಯತ್ ಶೂರೌ ರಣವಿಶಾರದೌ ॥ ೩೭ ॥

ಲೋಮಪಾದಂ ತೃತೀಯಂ ತು ಪಶ್ಚಾಜ್ಜಜ್ಞೇ ಸುಧಾರ್ಮಿಕವ್ ।
ಲೋಮಪಾದಸುತೋ ಬಭ್ರುರಾಕೃತಿಸ್ತಸ್ಯ ಚಾತ್ಮಜಃ ॥ ೩೮ ॥

ಕೌಶಿಕಸ್ಯ ಚಿದಿಃ ಪುತ್ರಸ್ತಸ್ಮಾಚ್ಚೈದ್ಯಾ ನೃಪಾಃ ಸ್ಮೃತಾಃ ।
ಕ್ರಥೋ ವಿದರ್ಭಪುತ್ರಸ್ತು ಕುಂತಿಸ್ತಸ್ಯಾತ್ಮಜೋಽಭವತ್ ॥ ೩೯ ॥

---

೩೫. ರಾಜನಿಂದ ಈ ರೀತಿಯಾಗಿ ಹೇಳಲ್ಪಟ್ಟ ಶೈಬ್ಯಳು ಹೇಗೆ ಇವಳು ನಿನಗೆ ಸೊಸೆಯಾಗುವಳು ? ಎಂದು ಪ್ರಶ್ನಿಸಿದಳು, ಆಗ ರಾಜನು " ನಿನ್ನಲ್ಲಿ ಯಾವ ಪುತ್ರನು ಜನಿಸುವನೋ ಅವನಿಗೆ ಪತ್ನಿಯಾಗುವಳು " ಹೀಗೆಂದು ಉತ್ತರ ಕೊಟ್ಟನು.

೩೬. ಆ ಕನ್ಯೆಯು ಉಗ್ರವಾದ ತಪೋಬಲದಿಂದ ಸೌಭಾಗ್ಯದಿಂದ ಕೂಡಿದ ಶೈಬ್ಯೆಯು ಗರ್ಭಿಣಿಯಾಗಿ ವಿದರ್ಭನೆಂಬ ಪುತ್ರನನ್ನು ಪ್ರಸವಿಸಿದಳು.

೩೭. ರಾಜಪುತ್ರನಾದ ವಿದರ್ಭನು ತನ್ನ ಭಾರ್ಯೆಯಲ್ಲಿ ವಿದ್ವಾಂಸರೂ ವೀರರೂ ಮತ್ತು ರಣದಲ್ಲಿ ವಿಶಾರದರೂ ಆದ ಕ್ರಥ, ಕೈಶಿಕ ಎಂಬ ಇಬ್ಬರು ಪುತ್ರರನ್ನು ಹೊಂದಿದನು.

೩೮. ತರುವಾಯ ಧಾರ್ಮಿಕನಾದ ಲೋಮಪಾದ ಎಂಬ ತೃತೀಯ ಪುತ್ರನು ಜನಿಸಿದನು, ಲೋಮಪಾದನಿಗೆ ಬಭ್ರು ಎಂಬ ಪುತ್ರನೂ, ಮತ್ತು ಬಭ್ರುವಿಗೆ ಆಕೃತಿ ಎಂಬ ಪುತ್ರನೂ ಜನಿಸಿದರು.

೩೯. ಕೌಶಿಕನಿಗೆ ಚಿದಿ ಎಂಬ ಪುತ್ರನು ಜನಿಸಿದನು, ಚಿದಿ ಎಂಬುವನಿಂದ ಜನಿಸಿದ ಪುತ್ರರು ಚೈದ್ಯರಾಜರೆಂದು ಸ್ಮರಿಸಲ್ಪಟ್ಟಿರುವರು. ವಿದರ್ಭ ಪುತ್ರನಾದ ಕ್ರಥ ಎಂಬುವನಿಗೆ ಕುಂತಿ ಎಂಬ ಪುತ್ರನಿದ್ದನು.

ಕುಂತೇರ್ಧೃಷ್ಟಃ ಸುತೋ ಜಜ್ಞೇ ರಣೇ ಧೃಷ್ಟಃ ಪ್ರತಾಪವಾನ್ ।
ಧೃಷ್ಟಸ್ಯ ಪುತ್ರೋ ಧರ್ಮಾತ್ಮಾ ನಿರ್ವೃತಿಃ ಪರವೀರಹಾ ॥ ೪೦ ॥

ತಸ್ಯ ಪುತ್ರೋ ದಶಾರ್ಹಸ್ತು ಮಹಾಬಲಪರಾಕ್ರಮಃ ।
ದಶಾರ್ಹಸ್ಯ ಸುತೋ ವ್ಯೋಮಸ್ತತೋ ಜೀಮೂತ ಉಚ್ಯತೇ ॥ ೪೧ ॥

ಜೀಮೂತಪುತ್ರೋ ವಿಕೃತಿಸ್ತಸ್ಯ ಭೀಮರಥಃ ಸುತಃ ।
ಅಥ ಭೀಮರಥಸ್ಯಾಸೀತ್ಪುತ್ರೋ ರಥವರಃ ಕಿಲ ॥ ೪೨ ॥

ದಾನಧರ್ಮರತೋ ನಿತ್ಯಂ ಶೀಲಶ್ರುತಪರಾಯಣಃ ।
ತಸ್ಯ ಪುತ್ರೋ ನವರಥಸ್ತತೋ ದಶರಥಃ ಸ್ಮೃತಃ ॥ ೪೩ ॥

ತಸ್ಯ ಚೈಕಾದಶರಥಃ ಶಕುನಿಸ್ತಸ್ಯ ಚಾತ್ಮಜಃ ।
ತಸ್ಮಾತ್ ಕರಂಭಕೋ ಧನ್ವೀ ದೇವರಾತೋಽಭವತ್ತತಃ ॥ ೪೪ ॥

---

೪೦. ಕುಂತಿಗೆ ರಣದಲ್ಲಿ ಧೀರನಾಗಿಯೂ ಪ್ರತಾಪಶಾಲಿಯಾಗಿಯೂ ಇರುವ ಧೃಷ್ಟನೆಂಬ ಪುತ್ರನು ಹುಟ್ಟಿದನು. ಧೃಷ್ಟನಿಗೆ ವೀರಶತ್ರುಗಳನ್ನು ನಿಗ್ರಹಿಸಬಲ್ಲ ಮತ್ತು ಧರ್ಮಾತ್ಮನಾದ ನಿರ್ವೃತಿ ಎಂಬ ಪುತ್ರನು ಜನಿಸಿದನು.

೪೧. ಆ ನಿರ್ವೃತಿ ಎಂಬುವನಿಗೆ ಹೆಚ್ಚಾದ ಬಲ, ಪರಾಕ್ರಮಗಳಿಂದ ಕೂಡಿದ ದಶಾರ್ಹನೆಂಬ ಪುತ್ರನಿದ್ದನು. ದಶಾರ್ಹನಿಗೆ ವ್ಯೋಮ ಎಂಬ ಪುತ್ರನೂ ಅವನಿಗೆ ಜೀಮೂತನೆಂಬ ಪುತ್ರನೂ ಇದ್ದರು.

೪೨. ಜೀಮೂತ ಎಂಬುವನಿಗೆ ವಿಕೃತಿ ಎಂಬ ಪುತ್ರನೂ, ವಿಕೃತಿಗೆ ಭೀಮರಥ ನೆಂಬ ಪುತ್ರನೂ, ಮತ್ತು ಭೀಮರಥನಿಗೆ ರಥವರನೆಂಬ ಪುತ್ರನೂ ಇದ್ದರು.

೪೩. ರಥವರನಿಗೆ ದಾನ-ಧರ್ಮಗಳಲ್ಲಿ ಅಭಿರುಚಿಯುಳ್ಳವನೂ, ಶೀಲ ಅಧ್ಯಯನಗಳಲ್ಲಿ ತತ್ಪರನೂ, ಆದ ನವರಥನೆಂಬ ಪುತ್ರನಿದ್ದನು. ಅವನಿಗೆ ದಶರಥನೆಂಬ ಪುತ್ರನಿದ್ದನೆಂದು ಸ್ಮರಿಸಲ್ಪಟ್ಟಿರುವನು.

೪೪. ದಶರಥನಿಗೆ ಏಕಾದಶರಥನೂ, ಏಕಾದಶರಥನಿಗೆ ಶಕುನಿ ಎಂಬುವನೂ ಶಕುನಿಗೆ ಧನ್ವಿಯಾದ ಕರಂಭಕನೂ ಮತ್ತು ಕರಂಭಕನಿಗೆ ದೇವರಾತನೆಂಬುವನೂ ಪುತ್ರರಾಗಿದ್ದರು.

ದೇವಕ್ಷತ್ರೋಽಭವದ್ರಾಜಾ ದೈವರಾತಿರ್ಮಹಾಯಶಾಃ ।
ದೇವಕ್ಷತ್ರಸುತೋ ಜಜ್ಞೇ ದೇವನಃ ಕ್ಷತ್ರನಂದನಃ ॥ ೪೫ ॥

ದೇವನಾತ್ಸ ಮಧುರ್ಜಜ್ಞೇ ಯಸ್ಯ ಮೇಧಾರ್ಥಸಂಭವಃ ।
ನಂದನಶ್ಚ ಮಹಾತೇಜಾ ಮಧೋಃ ಪುರುವಸುಸ್ತಥಾ ॥ ೪೬ ॥

ಆಸೀತ್ ಪುರುವಸೋಃ ಪುತ್ರಃ ಪುರುದ್ವಾನ್ ಪುರುಷೋತ್ತಮಃ ।
ಜಜ್ಞೇ ಪುರುದ್ವತಃ ಪುತ್ರೋ ಭದ್ರವತ್ಯಾಂ ಪುರೂದ್ವಹಃ ॥ ೪೭ ॥

ಐಕ್ಷ್ವಾಕೀ ತ್ವಭವದ್ಭಾರ್ಯಾ ಸತ್ತ್ವಸ್ತಸ್ಯಾಮಜಾಯತ ।
ತಸ್ಮಾತ್ ಸತ್ತ್ವಗುಣೋಪೇತಃ ಸಾತ್ತ್ವತಃ ಕೀರ್ತಿವರ್ಧನಃ ॥ ೪೮ ॥

---

೪೫. ದೇವರಾತನಿಗೆ ಮಹಾ ಕೀರ್ತಿಸಂಪನ್ನನಾದ ದೇವಕ್ಷತ್ರನೆಂಬ ರಾಜನು ಪುತ್ರನಾಗಿದ್ದನು. ಆ ದೇವಕ್ಷತ್ರನಿಗೆ ಕ್ಷತ್ರ ಜಾತಿಯನ್ನು ಆನಂದಗೊಳಿಸುವ ದೇವನನೆಂಬ ಪುತ್ರನು ಜನಿಸಿದನು.

೪೬. ದೇವನನಿಂದ ಮೇಧಾ–ಮತ್ತು ಅರ್ಥಗಳಿಗೆ ಆಶ್ರಯನಾದ ಮಧು ಎಂಬ ಪುತ್ರನು ಜನಿಸಿದನು. ಮಹಾತೇಜಸ್ವಿಯಾದ ಪುರುವಸು ಎಂಬುವನು ಮಧುವಿಗೆ ಪುತ್ರನಾಗಿ ಜನಿಸಿದನು.

೪೭. ಪುರುವಸುವಿಗೆ ಪುರುಷರಲ್ಲಿ ಉತ್ತಮನಾದ ಪುರುದ್ವಾನ್ ಎಂಬ ಪುತ್ರನು ಹುಟ್ಟಿದನು. ಪುರುದ್ವತನಿಗೆ ಭದ್ರವತೀ ಎಂಬ ಭಾರ್ಯೆಯಲ್ಲಿ ಪುರೂದ್ವಹ ಪುತ್ರನು ಜನಿಸಿದನು.

೪೮. ಪುರೂದ್ವಹನಿಗೆ ಇಕ್ಷ್ವಾಕುವಂಶೋತ್ಪನ್ನಳಾದ ಭಾರ್ಯೆಯಿದ್ದಳು ಆಕೆಯಲ್ಲಿ ಸತ್ತ್ವ ಎಂಬ ಮಗನು ಹುಟ್ಟಿದನು, ಸತ್ತ್ವ ಎಂಬುವನಿಂದ ಸತ್ತ್ವಗುಣದಿಂದ ಕೂಡಿದವನೂ, ವಂಶಕೀರ್ತಿಯನ್ನು ವೃದ್ಧಿಗೊಳಿಸುವವನೂ ಆದ ಸಾತ್ತ್ವತನೆಂಬ ಪುತ್ರನು ಜನಿಸಿದನು.

**ಇಮಾಂ ವಿಸೃಷ್ಟಿಂ ವಿಜ್ಞಾಯ ಜ್ಯಾಮಘಸ್ಯ ಮಹಾತ್ಮನಃ ।**
**ಪ್ರಜಾವಾನೇತಿ ಸಾಯುಜ್ಯಂ ರಾಜ್ಞಃ ಸೋಮಸ್ಯ ಧೀಮತಃ ॥ ೪೯ ॥**

**ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ**
**ಸಪ್ತತಿತಮೋಽಧ್ಯಾಯಃ**

---

೪೯. ಮಹಾತ್ಮನಾದ ಜ್ಯಾಮಘನ ಈ ಸೃಷ್ಟಿಪರಂಪರೆಯನ್ನು ಕೇಳಿದ ಮಾನವನು ಪ್ರಜಾವಂತನಾಗಿ ಜ್ಞಾನಿಯಾದ ಸೋಮರಾಜನ ಸಾಯುಜ್ಯ ಮುಕ್ತಿಯನ್ನು ಹೊಂದುವನು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಎಪ್ಪತ್ತನೆಯ
ಅಧ್ಯಾಯವು ಸಮಾಪ್ತವು.

---

# ಏಕಸಪ್ತತಿತಮೋಽಧ್ಯಾಯಃ

**ಸೂತ ಉವಾಚ :—**

**ಸಾತ್ತ್ವತಾಜ್ಜಜ್ಞಿರೇ ಪುತ್ರಾಃ ಕೌಶಲ್ಯಾಯಾಂ ಮಹಾಬಲಾಃ ।**
**ಭಜಮಾನೋ ಭಜಿರ್ದಿವ್ಯೋ ವೃಷ್ಣಿರ್ದೇವಾವೃಧೋಽಂಧಕಃ ॥ ೧ ॥**

**ಮಹಾಭೋಜಶ್ಚ ವಿಖ್ಯಾತೋ ಬ್ರಹ್ಮಣ್ಯಃ ಸತ್ಯಸಂಗರಃ ।**
**ತೇಷಾಂ ಹಿ ಸರ್ಗಾಶ್ಚತ್ವಾರಃ ಶೃಣುಧ್ವಂ ವಿಸ್ತರೇಣ ವೈ ॥ ೨ ॥**

**ಭಜಮಾನಸ್ಯ ಸೃಂಜಯ್ಯೋಽಬಾಹ್ಯಕಾ ಚೋಪಬಾಹ್ಯಕಾ ।**
**ಸೃಂಜಯಸ್ಯ ಸುತೇ ದ್ವೇ ತು ಬಾಹ್ಯಕೇ ತೇ ಉದಾವಹತ್ ॥ ೩ ॥**

**ತಸ್ಯ ಭಾರ್ಯೇ ಭಗಿನ್ಯೌ ತೇ ಪ್ರಸೂತೇ ತು ಸುತಾನ್ ಬಹೂನ್ ।**
**ನಿಮ್ಲೋಚಿಃ ಕಿಂಕಣಶ್ಚೈವ ಧೃಷ್ಟಿಃ ಪರಪುರಂಜಯಃ ॥ ೪ ॥**

---

೧. ಸೂತಮುನಿಯು ಇಂತೆಂದನು :—ಸಾತ್ವತನಿಂದ ಕೌಶಲ್ಯಾ ಎಂಬ ಭಾರ್ಯೆಯಲ್ಲಿ ಮಹಾಬಲಶಾಲಿಗಳಾದ ಅನೇಕ ಪುತ್ರರು ಜನಿಸಿದರು. ಅವರಿಗೆ ಭಜಮಾನ, ಭಜಿ, ದಿವ್ಯ, ವೃಷ್ಣಿ, ದೇವಾವೃಧೆ ಮತ್ತು ಅಂಧಕ ಎಂಬ ಈ ಪವಿತ್ರನಾಮುಗಳಿದ್ದುವು.

೨. ಮತ್ತು ಮಹಾಭೋಜನೆಂಬುವನು ಬ್ರಹ್ಮಿಷ್ಠನೂ ಸತ್ಯವಾದ ಪ್ರತಿಜ್ಞೆ ಉಳ್ಳವನೂ ಆಗಿ ಪ್ರಸಿದ್ಧನಾಗಿದ್ದನು. ಅವರಿಂದ ನಾಲ್ಕು ಸೃಷ್ಟಿಗಳು ಪ್ರಸರಿಸಿವೆ. ಅವುಗಳಲ್ಲಿ ಭಜಮಾನನ ಸರ್ಗವನ್ನು ವಿಸ್ತಾರವಾಗಿ ಶ್ರವಣಮಾಡಿರಿ.

೩. ಅವನು ಸೃಂಜಯನ ಪುತ್ರಿಯರಾದ ಇಬ್ಬರು ಬಾಹ್ಯಕೆಯರನ್ನು ಮದುವೆಯಾದನು ಅವರಿಬ್ಬರು ಸೃಂಜಯನ ಪುತ್ರಿಯರು ಬಾಹ್ಯಕಾ ಉಪಬಾಹ್ಯಕಾ ಎಂದು ನಾಮಾಂಕಿತರಾಗಿದ್ದರು.

೪. ಭಜಮಾನನ ಪತ್ನಿಯರಾದ ಆ ಸಹೋದರಿಯರು ಅನೇಕ ಮಂದಿ ಪುತ್ರರನ್ನು ಪ್ರಸವಿಸಿದಳು. ಇವರಲ್ಲಿ ಕೆಲವರು ನಿಮ್ಲೋಚಿ, ಕಿಂಕಣ, ಧೃಷ್ಟಿ ಮತ್ತು ಪರಪುರಂಜಯ ಎಂದು ಪ್ರಸಿದ್ಧರಾಗಿದ್ದರು.

ತೇ ಬಾಹ್ಯಕಾಯಾಂ ಸೃಂಜಯ್ಯಾ ಭಜಮಾನಾದ್ವಿಜಜ್ಞಿರೇ ।
ಅಯುತಾಜಿತ್ಸಹಸ್ರಾಜಿಚ್ಛತಾಜಿದಿತಿ ನಾಮತಃ ॥ ೫ ॥

ಬಾಹ್ಯಕಾಯಾಂ ಭಗಿನ್ಯಾಂ ತೇ ಭಜಮಾನಾದ್ವಿಜಜ್ಞಿರೇ ।
ತೇಷಾಂ ದೇವಾವೃಧೋ ರಾಜಾ ಚಚಾರ ಪರಮಂ ತಪಃ ।
ಪುತ್ರಃ ಸರ್ವಗುಣೋಪೇತೋ ಮಮ ಭೂಯಾದಿತಿ ಸ್ಮ ಹ ॥ ೬ ॥

ಸಂಯೋಜ್ಯಾತ್ಮಾನಮೇವಂ ಸ ಪರ್ಣಾಶಜಲಮುಸ್ಪೃಶತ್ ॥ ೭ ॥

ಸಾ ಚೋಪಸ್ಪರ್ಶನಾತ್ತಸ್ಯ ಚಕಾರ ಪ್ರಿಯಮಾಪಗಾ ।
ಕಲ್ಯಾಣತ್ವಾನ್ನರಪತೇಸ್ತಸ್ಯ ಸಾ ನಿಮ್ನಗೋತ್ತಮಾ ॥ ೮ ॥

ಚಿಂತಯಾಭಿಪರೀತಾಂಗೀ ಜಗಾಮಾಥ ವಿನಿಶ್ಚಯಮ್ ।
ನಾಭಿಗಚ್ಛಾಮಿ ತಾಂ ನಾರೀಂ ಯಸ್ಯಾಮೇವಂವಿಧಃ ಸುತಃ ॥ ೯ ॥

---

೫. ಅವರು ಸೃಂಜಯನ ಜೇಷ್ಠ ಪುತ್ರಿಯಾದ ಬಾಹ್ಯಕೆಯಲ್ಲಿ ಭಜಮಾನನಿಂದ ಉತ್ಪನ್ನರಾಗಿರುವರು. ಮತ್ತು ಕೆಲವರು ಅಯುತಾಜಿತ, ಸಹಸ್ರಾಜಿತ, ಶತಾಜಿತ ಎಂಬ ನಾಮಾಂಕಿತರಾಗಿದ್ದರು.

೬. ಅವರು ಭಗಿನಿಯಾದ ಬಾಹ್ಯಕೆಯಲ್ಲಿ ಭಜಮಾನನಿಂದ ಜನಿಸಿರುವರು. ಅವರಲ್ಲಿ ದೇವಾವೃಧನೆಂಬ ರಾಜನು ತನಗೆ ಸಮಸ್ತ ಗುಣಗಳಿಂದ ಕೂಡಿದ ಸುಪುತ್ರನು ಹುಟ್ಟಬೇಕೆಂಬ ಆಕಾಂಕ್ಷೆಯಿಂದ ಕಠಿಣವಾದ ತಪವನ್ನು ಆಚರಿಸಿದನು.

೭. ಅವನು ತನ್ನ ಅಂತಃಕರಣವನ್ನು ಸಮಾಧಿಯಲ್ಲಿರಿಸಿ ಯೋಗಾಭ್ಯಾಸದಿಂದ ಜಿತಾಹಾರನಾಗಿ ಪರ್ಣಾಶ ನದಿಯ ಜಲವನ್ನು ಆಚಮನ ಮಾಡುತ್ತಿದ್ದನು.

೮. ನದಿಗಳಲ್ಲೆಲ್ಲಾ ಉತ್ತಮವಾದ ಆ ನದಿಯು ಆ ರಾಜನ ಸ್ಪರ್ಶದಿಂದಲೂ ಮತ್ತು ಆ ರಾಜನ ಕಲ್ಯಾಣ ಮಹಿಮೆಯಿಂದಲೂ ಅವನಿಗೆ ಪ್ರಿಯವನ್ನು ಆಚರಿಸಿತು.

೯. ಆಗ ನದಿಯು ಚಿಂತೆಯಿಂದ ವ್ಯಾಪ್ತವಾದ ದೇಹ ಉಳ್ಳವಳಾಗಿ ಕಡೆಗೆ ಈ ರೀತಿಯಾಗಿ ನಿಶ್ಚಯಿಸಿದಳು, ಯಾವ ನಾರಿಯಲ್ಲಿ ಈ ವಿಧನಾದ ಪುತ್ರನು ಜನಿಸುವನೋ ಅಂತಹ ನಾರಿಯನ್ನು ನಾನು ಅರಿಯೆನು.

ಭವೇತ್ ಸರ್ವಗುಣೋಪೇತೋ ರಾಜ್ಞೋ ದೇವಾವೃಧಸ್ಯ ಹಿ ।
ತಸ್ಮಾದಸ್ಯ ಸ್ವಯಂ ಚಾಹಂ ಭವಾಮ್ಯದ್ಯ ಸಹವ್ರತಾ ॥ ೧೦ ॥

ಜಜ್ಞೇ ತಸ್ಯಾಃ ಸ್ವಯಂ ಹೃತ್ಸ್ಥೋ ಭಾವಸ್ತಸ್ಯ ಯಥೇರಿತಃ ।
ಅಥ ಭೂತ್ವಾ ಕುಮಾರೀ ತು ಸಾ ಚಿಂತಾಪರಮೇವ ಚ ॥ ೧೧ ॥

ವರಯಾಮಾಸ ರಾಜಾನಂ ತಾಮಿಯೇಷ ಸ ಪಾರ್ಥಿವಃ ।
ತಸ್ಯಾಮಾಧತ್ತ ಗರ್ಭೇ ಸ ತೇಜಸ್ವಿನಮುದಾರಧೀಃ ॥ ೧೨ ॥

ಅಥ ಸಾ ನವಮೇ ಮಾಸಿ ಸುಷುವೇ ಸರಿತಾಂ ವರಾ ।
ಪುತ್ರಂ ಸರ್ವಗುಣೋಪೇತಂ ಬಭ್ರುಂ ದೇವಾವೃಧಾತ್ತದಾ ॥ ೧೩ ॥

ತತ್ರ ವಂಶೇ ಪುರಾಣಜ್ಞಾ ಗಾಥಾಂ ಗಾಯಂತಿ ವೈ ದ್ವಿಜಾಃ ।
ಗುಣಾನ್ ದೇವಾವೃಧಸ್ಯಾಪಿ ಕೀರ್ತಯಂತೋ ಮಹಾತ್ಮನಃ ॥ ೧೪ ॥

---

೧೦. ದೇವಾವೃಧರಾಜನಿಗೆ ಸರ್ವಗುಣಸಂಪನ್ನನಾದ ಪುತ್ರನು ಜನಿಸಬೇಕೆಂದು ಸಂಕಲ್ಪವಿರುವುದು. ಆದುದರಿಂದ ಇವನಿಗೆ ನಾನು ಸಹಧರ್ಮಿಣಿಯು ಆಗುವೆನು.

೧೧. ಆ ನದಿಗೆ ಹಿಂದೆ ಹೇಳಿದಂತೆ ಮನಸ್ಸಿನ ಭಾವವು ತಾನಾಗಿ ಉಂಟಾಯಿತು. ತರುವಾಯ ಆ ನದಿಯು ಕನ್ಯೆಯ ರೂಪವನ್ನು ಧರಿಸಿ ಚಿಂತಿಸುತ್ತಿದ್ದ ರಾಜನ ಸಮೀಪಕ್ಕೆ ಬಂದಳು.

೧೨. ಮತ್ತು ಆ ದೇವಾವೃಧ ರಾಜನನ್ನು ಪತಿಯನ್ನಾಗಿ ವರಿಸಿದಳು. ಆ ರಾಜನು ಆಕೆಯನ್ನು ಕಾಮಿಸಿದನು. ಆಗ ಉದಾರವಾದ ಬುದ್ಧಿಯುಳ್ಳ ರಾಜನು ಆಕೆಯ ಗರ್ಭದಲ್ಲಿ ಅತಿತೇಜಸ್ವಿಯಾದ ಪುತ್ರನನ್ನು ಹೊಂದಿದನು.

೧೩. ತರುವಾಯ ಉತ್ತಮ ನದಿಯರೂಪಳಾದ ಆಕೆಯು ದೇವಾವೃಧನೆಂಬ ಪತಿಯ ಸಂಗದಿಂದ ಸರ್ವಗುಣಪೂರ್ಣನಾದ ಬಭ್ರುವೆಂಬ ಪುತ್ರನನ್ನು ನವಮ ಮಾಸದಲ್ಲಿ ಪ್ರಸವಿಸಿದಳು.

೧೪. ಪುರಾಣಜ್ಞರಾದ ದ್ವಿಜರು ಮಹಾತ್ಮನಾದ ದೇವಾವೃಧರಾಜನ ಗುಣಗಳನ್ನು ಕೀರ್ತನೆಮಾಡುತ್ತಾ ಅವನ ವಂಶದ ವಿಷಯದಲ್ಲಿ ಪದ್ಯಗಳನ್ನು ಗಾನ ಮಾಡುತ್ತಿದ್ದಾರೆ.

ಯಥೈವ ಶೃಣುಮೋ ದೂರಾತ್ ಸಂಪಶ್ಯಾಮಸ್ತಥಾಂತಿಕಾತ್ ।
ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ॥ ೧೫ ॥

ಪುರುಷಾಃ ಪಂಚಷಷ್ಟಿಶ್ಚ ಸಹಸ್ರಾಣಿ ಚ ಸಪ್ತತಿಃ ।
ಯೇಽಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ॥ ೧೬ ॥

ಯಜ್ವಾ ದಾನಪತಿರ್ಧೀರೋ ಬ್ರಹ್ಮಣ್ಯಃ ಸತ್ಯವಾಗ್ಬುಧಃ ।
ಕೀರ್ತಿಮಾಂಶ್ಚ ಮಹಾಭೋಜಃ ಸಾತ್ತ್ವತಾನಾಂ ಮಹಾರಥಃ ॥ ೧೭ ॥

ತಸ್ಯಾನ್ವವಾಯಃ ಸುಮಹಾನ್ ಭೋಜಾ ಯೇ ಭುವಿ ವಿಶ್ರುತಾಃ ।
ಗಾಂಧಾರೀ ಚೈವ ಮಾದ್ರೀ ಚ ಧೃಷ್ಟೇ ರ್ಭಾರ್ಯೇ ಬಭೂವತುಃ ॥ ೧೮ ॥

ಗಾಂಧಾರೀ ಜನಯಾಮಾಸ ಸುಮಿತ್ರಂ ಮಿತ್ರನಂದನಮ್ ।
ಮಾದ್ರೀ ಯುಧಾಜಿತಂ ಪುತ್ರಂ ತತೋ ಮೀಢ್ವಾಂಸಮೇವ ಚ॥ ೧೯ ॥

---

೧೫. ಮನುಷ್ಯರಲ್ಲೆಲ್ಲಾ ಶ್ರೇಷ್ಠನಾದ, ದೇವಾವೃಧ ಪುತ್ರನಾದ ಬಭ್ರುವು ದೇವತೆಗಳಿಗೆ ಸದೃಶನಾಗಿರುವನು. ಅವನನ್ನು ದೂರದಿಂದ ಹೇಗೆ ಕೇಳುವೆವೋ ಹಾಗೆಯೇ ಸಮೀಪದಲ್ಲಿ ನೋಡುತ್ತಿರುವೆವು.

೧೬. ದೇವಾವೃಧನ ಪುತ್ರನಾದ ಬಭ್ರುವಿನಿಂದ ಸನ್ಮಾರ್ಗದಲ್ಲಿದ್ದು ಎಪ್ಪತ್ತು ಸಾವಿರದ ಅರವತ್ತೈದು ಮಂದಿ ಪುರುಷರು ಅಮೃತತ್ವ ರೂಪವಾದ ಮುಕ್ತಿಯನ್ನು ಹೊಂದಿರುವರು.

೧೭. ಆ ಬಭ್ರುವು ಮಹಾಪೂಜ್ಯನೂ, ಯಾಗಮಾಡುವವನೂ, ದಾನಪರನೂ, ಧೀರನೂ, ಬ್ರಹ್ಮನಿಷ್ಠನೂ, ಸತ್ಯವಚನವನ್ನು ನುಡಿಯುವವನೂ, ವಿದ್ವಾಂಸನೂ, ಕೀರ್ತಿವಂತನೂ, ಮತ್ತು ಸಾತ್ವತರಲ್ಲಿ ಮಹಾರಥಿಕನೂ ಆಗಿದ್ದನು.

೧೮. ಭೂಮಿಯಲ್ಲಿ ಭೋಜ ಎಂಬ ಉಪನಾಮದಿಂದ ಪ್ರಸಿದ್ಧರಾದ ಪ್ರಜೆಗಳಿಂದ ಆ ಮಹಾಭೋಜನ ವಂಶವು ವಿಶಾಲವಾಗಿತ್ತು. ಧೃಷ್ಟಿ ಎಂಬುವನಿಗೆ ಗಾಂಧಾರಿ, ಮಾದ್ರಿ ಎಂಬ ಇಬ್ಬರು ಪತ್ನಿಯರಿದ್ದರು.

೧೯. ಗಾಂಧಾರಿಯು ಮಿತ್ರರನ್ನು ಆನಂದಗೊಳಿಸುವ ಸುಮಿತ್ರನೆಂಬ ಪುತ್ರನನ್ನು ಹೊಂದಿದಳು. ಮಾದ್ರಿಯು ಯುಧಾಜಿತ ಮತ್ತು ಮೀಢ್ವಾಂಸ ಎಂಬ ಪುತ್ರರನ್ನು ಹೊಂದಿದಳು.

ಅನಮಿತ್ರಂ ಶಿನಂ ಚೈವ ತಾವುಭೌ ಪುರುಷೋತ್ತಮೌ ।
ಅನಮಿತ್ರಸುತೋ ನಿಘ್ನೋ ನಿಘ್ನಸ್ಯ ದ್ವೌ ಬಭೂವತುಃ ॥ ೨೦ ॥

ಪ್ರಸೇನಶ್ಚ ಮಹಾಭಾಗಃ ಸತ್ರಾಜಿಚ್ಚ ಸುತಾವುಭೌ ।
ತಸ್ಯ ಸತ್ರಾಜಿತಃ ಸೂರ್ಯಃ ಸಖಾ ಪ್ರಾಣಸಮೋಽಭವತ್ ॥ ೨೧ ॥

ಸ ಕದಾಚಿನ್ನಿಶಾಪಾಯೇ ರಥೇನ ರಥಿನಾಂ ವರಃ ।
ತೋಯಂ ಕೂಲಾತ್ ಸಮುದ್ಧರ್ತುಮುಪಸ್ಥಾತುಂ ಯಯೌ ರವಿಮ್ ॥ ೨೨ ॥

ತಸ್ಯೋಪತಿಷ್ಠತಃ ಸೂರ್ಯಂ ವಿವಸ್ವಾನಗ್ರತಃ ಸ್ಥಿತಃ ।
ಸುಸ್ಪಷ್ಟಮೂರ್ತಿರ್ಭಗವಾಂಸ್ತೇಜೋಮಂಡಲವಾನ್ ವಿಭುಃ ॥ ೨೩ ॥

ಅಥ ರಾಜಾ ವಿವಸ್ವಂತಮುವಾಚ ಸ್ಥಿತಮಗ್ರತಃ ।
ಯಥೈವ ವ್ಯೋಮ್ನಿ ಪಶ್ಯಾಮಿ ತ್ವಾಮಹಂ ಜ್ಯೋತಿಷಾಂ ಪತೇ ॥ ೨೪ ॥

---

೨೦. ಮತ್ತು ಅನಮಿತ್ರ, ಶಿನ ಎಂಬ ಪುರುಷೋತ್ತಮರಾದ ಇಬ್ಬರು ಪುತ್ರರು ಮಾದ್ರಿಯಲ್ಲಿ ಹುಟ್ಟಿದರು. ಅನಮಿತ್ರನಿಗೆ ನಿಘ್ನನೆಂಬ ಪುತ್ರನಿದ್ದನು. ನಿಘ್ನನಿಗೆ ಇಬ್ಬರು ಪುತ್ರರಿದ್ದರು.

೨೧. ಆ ಇಬ್ಬರು ಪುತ್ರರು ಮಹಾ ಭಾಗ್ಯಶಾಲಿಯಾದ ಪ್ರಸೇನ ಮತ್ತು ಸತ್ರಾಜಿತ ಎಂದು ಕರೆಯಲ್ಪಟ್ಟಿದ್ದರು. ಆ ಸತ್ರಾಜಿತನಿಗೆ ಸೂರ್ಯದೇವನು ಪ್ರಾಣಗಳಿಗೆ ಸಮಾನನಾದ ಮಿತ್ರನಾಗಿದ್ದನು.

೨೨. ಆ ರಥಿಕರಲ್ಲಿ ಶ್ರೇಷ್ಠನಾದ ಸತ್ರಾಜಿತರಾಜನು ರಾತ್ರಿಯ ಅವಸಾನದಲ್ಲಿ ಒಂದುವೇಳೆ ನದಿಯ ದಡದಿಂದ ನೀರನ್ನು ಎತ್ತಿ ಸೂರ್ಯನನ್ನು ಉಪಸ್ಥಾನ ಮಾಡಲು ರಥದಿಂದ ಪ್ರಯಾಣಮಾಡಿದನು.

೨೩. ಆಗ ಸೂರ್ಯನನ್ನು ಸ್ತೋತ್ರಮಾಡುತ್ತಿದ್ದ ಆ ರಾಜನ ಎದುರಿಗೆ ಸ್ಪಷ್ಟವಾದ ವಿಗ್ರಹವುಳ್ಳವನೂ, ಪೂಜ್ಯನೂ, ಮಂಡಲಾಕಾರವಾದ ತೇಜಃಪುಂಜವುಳ್ಳವನೂ, ಮತ್ತು ಸರ್ವನಿಯಾಮಕನೂ ಆದ ಸೂರ್ಯನು ಆವಿರ್ಭವಿಸಿದನು.

೨೪. ಅನಂತರದಲ್ಲಿ ರಾಜನು ಮುಂದೆ ನಿಂತಿರುವ ಸೂರ್ಯನನ್ನು ಕುರಿತು ಹೀಗೆ ಹೇಳಿದನು :—ತೇಜೋಮಂಡಲಕ್ಕೆ ಸ್ವಾಮಿಯಾದ ಸೂರ್ಯನೆ! ಆಕಾಶದಲ್ಲಿ ನಿನ್ನನ್ನು ನೋಡುವಂತೆಯೇ ಇಲ್ಲಿಯೂ ನಿನ್ನನ್ನು ನೋಡುತ್ತಿರುವೆನು.

ತೇಜೋಮಂಡಲಿನಂ ಚೈವ ತಥೈವಾಪ್ಯಗ್ರತಃ ಸ್ಥಿತಮ್ ।
ಕೋ ವಿಶೇಷೋ ವಿವಸ್ವಂಸ್ತೇ ಸಖ್ಯೇನೋಪಗತಸ್ಯ ವೈ ॥ ೨೫ ॥

ಏತಚ್ಛ್ರುತ್ವಾ ಸ ಭಗವಾನ್ ಮಣಿರತ್ನಂ ಸ್ಯಮಂತಕಮ್
ಸ್ವಕಂಠಾದವಮುಚ್ಯಾಥ ಬಬಂಧ ನೃಪತೇಸ್ತದಾ ॥ ೨೬ ॥

ತತೋ ವಿಗ್ರಹವಂತಂ ತಂ ದದರ್ಶ ನೃಪತಿಸ್ತದಾ ।
ಪ್ರೀತಿಮಾನಥ ತಂ ದೃಷ್ಟ್ವಾ ಮುಹೂರ್ತಂ ಕೃತವಾನ್ ಕಥಾಮ್
॥ ೨೭ ॥

ತಮಭಿಪ್ರಸ್ಥಿತಂ ಭೂಯೋ ವಿವಸ್ವಂತಂ ಸ ಸತ್ರಾಜಿತ್ ।
ಪ್ರೋವಾಚಾಗ್ನಿಸವರ್ಣಂ ತ್ವಾಂ ಯೇನ ಲೋಕಃ ಪ್ರಪಶ್ಯತಿ ॥ ೨೮ ॥

ತದೇತನ್ಮಣಿರತ್ನಂ ಮೇ ಭಗವನ್ ದಾತುಮರ್ಹಸಿ ।
ಸ್ಯಮಂತಕಂ ನಾಮ ಮಣಿಂ ದತ್ತವಾಂಸ್ತಸ್ಯ ಭಾಸ್ಕರಃ ॥ ೨೯ ॥

---

೨೫. ಆಕಾಶದಲ್ಲಿ ತೇಜೋಮಂಡಲ ರೂಪದಿಂದಲೂ ಮುಂದುಗಡೆ ನಿಂತಿರುವ ಈ ರೂಪದಿಂದಲೂ ನಿನ್ನ ದರ್ಶನವು ತುಲ್ಯವಾಗಿದೆ. ಸೂರ್ಯದೇವನೆ! ಮೈತ್ರೀ ಭಾವದಿಂದ ಬಂದ ನಿನ್ನಲ್ಲಿ ಏನು ವಿಶೇಷವಿರುವುದು ?

೨೬. ಪೂಜ್ಯನಾದ ಸೂರ್ಯನು ಇದನ್ನು ಕೇಳಿ ತನ್ನ ಕಂಠದಿಂದ ಸ್ಯಮಂತಕ ವೆಂಬ ರತ್ನವನ್ನು ತೆಗೆದು ಆ ರಾಜನ ಕಂಠದಲ್ಲಿ ಕಟ್ಟಿದನು.

೨೭. ತರುವಾಯ ಆ ರಾಜನು ವಿಗ್ರಹದಿಂದ ಕೂಡಿದ ಆ ಸೂರ್ಯನನ್ನು ಸಾಕ್ಷಾತ್ಕರಿಸಿದನು. ಆಗ ಸೂರ್ಯನನ್ನು ನೋಡಿ ಹರ್ಷಗೊಂಡಿರುವ ರಾಜನು ಒಂದು ಮುಹೂರ್ತಕಾಲ ಅವನೊಡನೆ ಸಲ್ಲಾಪವನ್ನು ಮಾಡಿದನು.

೨೮. ಆ ಸತ್ರಾಜಿತರಾಜನು ಮತ್ತೆ ಪ್ರಯಾಣಸಿದ್ಧನಾದ ಸೂರ್ಯನನ್ನು ಕುರಿತು ಈ ವಚನವನ್ನು ಹೇಳಿದನು. ಸೂರ್ಯನೇ! ಈ ಮಣಿರತ್ನದಿಂದ ಎಲ್ಲ ಜನರು ನಿನ್ನನ್ನು ಅಗ್ನಿಯಂತೆ ಜ್ವಲಿಸುವ ಆಕಾರದಿಂದ ನೋಡುವರು.

೨೯. ಭಗವಂತನೆ! ಅಂತಹ ಸ್ಯಮಂತಕವೆಂಬ ಈ ಮಣಿರತ್ನವನ್ನು ನನಗೆ ಕೊಡಲು ಅರ್ಹನಾಗಿರುತ್ತೀ, ಹೀಗೆಂದು ಕೇಳಲು ಸೂರ್ಯದೇವನು ಅವನಿಗೆ ಅದನ್ನು ಕೊಟ್ಟನು.

ಸ ತಮಾಮುಚ್ಯ ನಗರೀಂ ಪ್ರವಿವೇಶ ಮಹೀಪತಿಃ ।
ವಿಸ್ಮಾಪಯಿತ್ವಾಥ ತತಃ ಪುರೀಮಂತಃಪುರಂ ಯಯೌ ॥ ೩೦ ॥

ಸ ಪ್ರಸೇನಾಯ ತದ್ದಿವ್ಯಂ ಮಣಿರತ್ನಂ ಸ್ಯಮಂತಕಮ್ ।
ದದೌ ಭ್ರಾತ್ರೇ ನರಪತಿಃ ಪ್ರೇಮ್ಣಾ ಸತ್ರಾಜಿದುತ್ತಮಮ್ ॥ ೩೧ ॥

ಸ್ಯಮಂತಕೋ ನಾಮ ಮಣಿರ್ಯಸ್ಮಿನ್ ರಾಷ್ಟ್ರೇ ಸ್ಥಿತೋ ಭವೇತ್ ।
ಕಾಮವರ್ಷೀ ಚ ಪರ್ಜನ್ಯೋ ನ ಚ ವ್ಯಾಧಿಭಯಂ ತಥಾ ॥ ೩೨ ॥

ಲಿಪ್ಸಾಂ ಚಕ್ರೇ ಪ್ರಸೇನಾತ್ತು ಮಣಿರತ್ನಂ ಸ್ಯಮಂತಕಮ್ ।
ಗೋವಿಂದೋ ನ ಚ ತಂ ಲೇಭೇ ಶಕ್ತೋಽಪಿ ನ ಜಹಾರ ಚ ॥ ೩೩ ॥

ಕದಾಚಿನ್ಮೃಗಯಾಂ ಯಾತಃ ಪ್ರಸೇನಸ್ತೇನ ಭೂಷಿತಃ ।
ಸ್ಯಮಂತಕಕೃತೇ ಸಿಂಹಾದ್ವಧಂ ಪ್ರಾಪ ಸುದಾರುಣಮ್ ॥ ೩೪ ॥

---

೩೦. ಆ ರಾಜನು ಆ ಮಣಿರತ್ನವನ್ನು ಕಟ್ಟಿಕೊಂಡು ನಗರವನ್ನು ಪ್ರವೇಶ ಮಾಡಿದನು. ತರುವಾಯ ನಗರವಾಸಿಗಳನ್ನು ಆಶ್ಚರ್ಯಪಡಿಸಿ ಅಂತಃಪುರವನ್ನು ಸೇರಿದನು.

೩೧. ಆ ಸತ್ರಾಜಿತರಾಜನು ದಿವ್ಯವೂ ಉತ್ತಮವೂ ಆದ ಸ್ಯಮಂತಕ ಮಣಿ ರತ್ನವನ್ನು ತನ್ನ ಭ್ರಾತೃವಾದ ಪ್ರಸೇನನಿಗೆ ಪ್ರೇಮದಿಂದ ಕೊಟ್ಟನು.

೩೨. ಸ್ಯಮಂತಕವೆಂಬ ಮಣಿರತ್ನವು ಯಾವ ರಾಷ್ಟ್ರದಲ್ಲಿರುತ್ತದೆಯೊ ಆ ರಾಷ್ಟ್ರದಲ್ಲಿ ಪರ್ಜನ್ಯವು ಇಷ್ಟದಂತೆ ಸರಿಯಾದ ವೃಷ್ಟಿಯನ್ನು ಸುರಿಸುವುದು, ಮತ್ತು ಆ ರಾಷ್ಟ್ರದಲ್ಲಿ ರೋಗಭಯವು ಇರುವುದಿಲ್ಲ.

೩೩. ಆ ಸ್ಯಮಂತಮಣಿರತ್ನವನ್ನು ಪ್ರಸೇನನಿಂದ ತೆಗೆದುಕೊಳ್ಳಬೇಕೆಂದು ಶ್ರೀ ಕೃಷ್ಣನು ಕುತೂಹಲಪಟ್ಟನು. ಆದರೆ ಅದನ್ನು ಹೊಂದಲಿಲ್ಲ. ಆಗ ಅದನ್ನು ಅಪ ಹರಿಸಲು ಶಕ್ತನಾದರೂ ಶ್ರೀ ಕೃಷ್ಣನು ಅಪಹರಿಸಲು ಯತ್ನಿಸಲಿಲ್ಲ.

೩೪. ಒಂದು ಸಮಯದಲ್ಲಿ ಆ ರತ್ನದಿಂದ ಅಲಂಕರಿಸಲ್ಪಟ್ಟವನಾಗಿ ಪ್ರಸೇ ನನು. ಬೇಟೆಯಾಡುತ್ತ ವನಕ್ಕೆ ಹೋದನು. ಆಗ ಮಣಿರತ್ನವನ್ನು ಹೊಂದುವ ನಿಮಿತ್ತದಿಂದ ಒಂದು ಸಿಹ್ಮದಿಂದ ಭಯಂಕರವಾದ ಮರಣವನ್ನು ಹೊಂದಿದನು.

ಜಾಂಬದಾನ್ನೃಕ್ಷರಾಜಸ್ತು ತಂ ಸಿಹ್ಮಂ ನಿಜಘಾನ ವೈ ।
ಆದಾಯ ಚ ಮಣಿಂ ದಿವ್ಯಂ ಸ್ವಬಿಲಂ ಪ್ರವಿವೇಶ ಹ ॥ ೩೫ ॥

ತತ್ಕರ್ಮ ಕೃಷ್ಣಸ್ಯ ತತೋ ವೃಷ್ಣ್ಯಂಧಕಮಹತ್ತರಾಃ ।
ಮಣಿಂ ಗೃಧ್ನೋಸ್ತು ಮನ್ವಾನಾಸ್ತಮೇವ ವಿಶಶಂಕಿರೇ ॥ ೩೬ ॥

ಮಿಥ್ಯಾಪವಾದಂ ತೇಭ್ಯಸ್ತಂ ಬಲವಾನರಿಸೂದನಃ ।
ಅಮೃಷ್ಯಮಾಣೋ ಭಗವಾನ್ ವನಂ ಸ ವಿಚಚಾರ ಹ ॥ ೩೭ ॥

ಸ ತು ಪ್ರಸೇನೋ ಮೃಗಯಾಮಚರದ್ಯತ್ರ ಚಾಪ್ಯಥ ।
ಪ್ರಸೇನಸ್ಯ ಪದಂ ಗ್ರಾಹ್ಯಂ ಪುರಂ ಪೌರಾಪ್ತಕಾರಿಭಿಃ ॥ ೩೮ ॥

ಋಕ್ಷವಂತಂ ಗಿರಿವರಂ ವಿಂಧ್ಯಂ ಚ ನಗಮುತ್ತಮಮ್ ।
ಅನ್ವೇಷಯನ್ ಪರಿಶ್ರಾಂತಃ ಸ ದದರ್ಶ ಮಹಾಮನಾಃ ॥ ೩೯ ॥

---

೩೫. ಭಲ್ಲೂಕ (ಕರಡಿ) ರಾಜನಾದ ಜಾಂಬವಂತನು ಆ ಸಿಹ್ಮವನ್ನು ಕೊಂದನು. ಮತ್ತು ದಿವ್ಯವಾದ ಆ ಮಣಿರತ್ನವನ್ನು ತೆಗೆದುಕೊಂಡು ತನ್ನ ಗವಿಯನ್ನು ಪ್ರವೇಶಮಾಡಿದನು.

೩೬. ತರುವಾಯ ಮಣಿರತ್ನವನ್ನು ಆಶಿಸುತ್ತಿದ್ದ ಕೃಷ್ಣನು ಪ್ರಸೇನನನ್ನು ಕೊಂದನೆಂದು ವೃಷ್ಣಿ-ಅಂಧಕ ಜನಾಂಗದಲ್ಲಿ ವೃದ್ಧರಾದವರು ತಿಳಿದುಕೊಂಡು ಅವನಲ್ಲಿ ಸಂಶಯಪಟ್ಟವರಾದರು.

೩೭. ಪೂಜ್ಯನೂ ಪರಾಕ್ರಮಶಾಲಿಯೂ ಆದ ಶ್ರೀ ಕೃಷ್ಣನು ಅವರಿಂದ ತನಗೆ ಉಂಟಾದ ಮಿಥ್ಯಾಪವಾದವನ್ನು ಸಹಿಸಲಾರದೆ ವನವನ್ನು ಪ್ರವೇಶಿಸಿ ಭ್ರಮಿಸಿದನು.

೩೮. ಆ ಪ್ರಸೇನ ರಾಜನು ಯಾವ ಸ್ಥಳದಲ್ಲಿ ಬೇಟೆಯಾಡಿದ್ದನೋ ಅಲ್ಲಿ ಪುರವಾಸಿಗಳಾದ ಆಪ್ತೇಷ್ಟರಿಂದ ಪ್ರಸೇನನ ಹೆಜ್ಜೆಯ ಚಿಹ್ನವು ಹುಡುಕಲ್ಪಟ್ಟಿತು.

೩೯. ಆಗ ಮಹಾಮಾನಿಯಾದ ಆ ಶ್ರೀಕೃಷ್ಣನು ಪ್ರಸೇನನನ್ನು ಹುಡುಕುತ್ತ ಋಕ್ಷವಂತವೆಂಬ ಶ್ರೇಷ್ಠ ಪರ್ವತವನ್ನೂ ವಿಂಧ್ಯವೆಂಬ ಪರ್ವತೋತ್ತಮವನ್ನೂ ಸಂಚರಿಸಿ ಶ್ರಮಹೊಂದಿದನು.

ಸಾಶ್ವಂ ಹತಂ ಪ್ರಸೇನಂ ತಂ ನಾವಿಂದತ್ತತ್ರ ವೈ ಮಣಿಮ್ ।
ಅಥ ಸಿಹ್ಮಃ ಪ್ರಸೇನಸ್ಯ ಶರೀರಸ್ಯಾವಿದೂರತಃ ॥ ೪೦ ॥

ಋಕ್ಷೇಣ ನಿಹತೋ ದೃಷ್ಟಃ ಪದೈರ್ಋಕ್ಷಸ್ಯ ಸೂಚಿತಃ ।
ಪದೈರನ್ವೇಷಯಾಮಾಸ ಗುಹಾಮೃಕ್ಷಸ್ಯ ಯಾದವಃ ॥ ೪೧ ॥

ಮಹತ್ಯಂತರ್ಬಿಲೇ ವಾಣೀಂ ಶುಶ್ರಾವ ಪ್ರಮದೇರಿತಾಮ್ ।
ಧಾತ್ರ್ಯಾ ಕುಮಾರಮಾದಾಯ ಸುತಂ ಜಾಂಬವತೋ ದ್ವಿಜಾಃ ।
ಕ್ರೀಡಯಂತ್ಯಾಥ ಮಣಿನಾ ಮಾ ರೋದೀರಿತ್ಯುದೀರಿತಮ್ ॥ ೪೨ ॥

ಧಾತ್ರ್ಯುವಾಚ :—
ಪ್ರಸೇನಮವಧೀತ್ ಸಿಹ್ಮಃ ಸಿಹ್ಮೋ ಜಾಂಬವತಾ ಹತಃ ॥ ೪೩ ॥

ಸುಕುಮಾರಕ ಮಾ ರೋದೀಸ್ತವ ಹ್ಯೇಷ ಸ್ಯಮಂತಕಃ ।
ವ್ಯಕ್ತೀಕೃತಶ್ಚ ಶಬ್ದಃ ಸ ತೂರ್ಣಂ ಚಾಪಿ ಯಯೌ ಬಿಲಮ್ ॥ ೪೪ ॥

---

೪೦. ಆಗ ಅಲ್ಲಿ ವಾಹನವಾದ ಅಶ್ವವೂ, ಪ್ರಸೇನನೂ ಸತ್ತುಬಿದ್ದಿರುವುದನ್ನು ಕಂಡನು. ಆದರೆ ಅಲ್ಲಿ ಮಣಿಯನ್ನು ಕಾಣಲಿಲ್ಲ. ಸತ್ತು ಬಿದ್ದಿರುವ ಪ್ರಸೇನ ರಾಜನ ಶರೀರ ಸಮೀಪದಲ್ಲಿ ಸಿಹ್ಮವು ಕಾಣಿಸಿತು.

೪೧. ಆ ಸಿಹ್ಮವು ಕರಡಿಯಿಂದ ಕೊಲ್ಲಲ್ಪಟ್ಟು ಸತ್ತಿರುವುದಾಗಿ ಅಲ್ಲಿದ್ದ ಕರಡಿಯ ಹೆಜ್ಜೆಯ ಚಿಹ್ನಗಳಿಂದ ಕಂಡಿತು. ಆಗ ಶ್ರೀಕೃಷ್ಣನು ಕರಡಿಯ ಹೆಜ್ಜೆ ಗುರ್ತುಗಳ ಸಾಲಿನಿಂದ ಅದರ ಗವಿಯನ್ನು ಹುಡುಕಿದನು.

೪೨. ಜಾಂಬವಂತನ ಪುತ್ರನಾದ ಬಾಲಕನನ್ನು ಎತ್ತಿಕೊಂಡು ಆ ಮಣಿರತ್ನದಿಂದ ಆಡಿಸುತ್ತಿದ್ದ ದಾದಿಯಿಂದ "ಮಗು! ಅಳಬೇಡ" ಎಂದು ಹೇಳಲ್ಪಡುತ್ತಲಿತ್ತು. ಆ ಗವಿಯ ಸಮೀಪಕ್ಕೆ ಬಂದ ಕೃಷ್ಣನು ಮಹಾಗುಹೆಯ ಒಳಭಾಗದಲ್ಲಿ ನಾರಿಯಿಂದ ಉಚ್ಚರಿಸಲ್ಪಟ್ಟ ಆ ವಾಣಿಯನ್ನು ಕೇಳಿದನು.

೪೩. ಮಗುವನ್ನು ಆಡಿಸುತ್ತಿದ್ದ ದಾದಿಯು ಇಂತೆಂದಳು !—ಸಿಹ್ಮವು ಪ್ರಸೇನ ರಾಜನನ್ನು ಸಂಹರಿಸಿತು. ಅಂತಹ ಸಿಹ್ಮವನ್ನು ಜಾಂಬವಂತನು ಕೊಂದಿರುವನು.

೪೪. ಕುಮಾರನೆ! ಅಳಬೇಡ; ಈ ಸ್ಯಮಂತಕರತ್ನವು ನಿನ್ನದಾಗಿರುವುದು, ಹೀಗೆ ದಾದಿಯು ಆಡಿರುವ ಶಬ್ದವು ಸ್ಪಷ್ಟವಾಗಿ ಕೇಳಿಸಿತು, ಕೂಡಲೆ ಕೃಷ್ಣನು ಆ ಬಿಲದ ಸಮೀಪಕ್ಕೆ ಬಂದನು.

ಅಪಶ್ಯಚ್ಚ ಬಿಲಾಭ್ಯಾಶೇ ಪ್ರಸೇನಮುವದಾರಿತಮ್ ।
ಪ್ರವಿಶ್ಯ ಚಾಪಿ ಭಗವಾನ್ ಸ ಋುಕ್ಷಬಿಲಮಂಜಸಾ ॥ ೪೫ ॥

ದದರ್ಶ ಋುಕ್ಷರಾಜಾನಂ ಜಾಂಬವಂತಮುದಾರಧೀಃ ।
ಯುಯುಧೇ ವಾಸುದೇವಸ್ತು ಬಿಲೇ ಜಾಂಬವತಾ ಸಹ ॥ ೪೬ ॥

ಬಾಹುಭ್ಯಾಮೇವ ಗೋವಿಂದೋ ದಿವಸಾನೇಕವಿಂಶತಿಮ್ ।
ಪ್ರವಿಷ್ಟೇ ಚ ಬಿಲಂ ಕೃಷ್ಣೇ ವಸುದೇವಪುರಃಸರಾಃ ॥ ೪೭ ॥

ಪುನರ್ದ್ವಾರವತೀಂ ಚೈತ್ಯ ಹತಂ ಕೃಷ್ಣಂ ನ್ಯವೇದಯನ್ ।
ವಾಸುದೇವಸ್ತು ನಿರ್ಜಿತ್ಯ ಜಾಂಬವಂತಂ ಮಹಾಬಲಮ್ ॥ ೪೮ ॥

ಲೇಭೇ ಜಾಂಬವತೀಂ ಕನ್ಯಾಮೃಕ್ಷರಾಜಸ್ಯ ಸಮ್ಮತಾತ್ ।
ಭಗವತ್ತೇಜಸಾ ಗ್ರಸ್ತೋ ಜಾಂಬವಾನ್ ಪ್ರಸಭಂ ಮಣಿಮ್ ॥ ೪೯ ॥

---

೪೫. ಆ ಬಿಲದ ಸಮೀಪದಲ್ಲಿ ಸೀಳಿ ಹಾಕಿರುವ ಪ್ರಸೇನ ರಾಜನ ಶವವನ್ನು ನೋಡಿದನು, ಆಗ ಭಗವಂತನಾದ ಕೃಷ್ಣನು ಶೀಘ್ರವಾಗಿ ಜಾಂಬವಂತನ ಗುಹೆಯನು ಪ್ರವೇಶಮಾಡಿದನು.

೪೬. ಅಲ್ಲಿ ಉದಾರವಾದ ಬುದ್ಧಿಯುಳ್ಳ ಶ್ರೀ ಕೃಷ್ಣನು ಋುಕ್ಷರಾಜನಾದ ಜಾಂಬವಂತನನ್ನು ಕಂಡನು. ವಾಸುದೇವನು ಆ ಬಿಲದಲ್ಲಿ ಜಾಂಬವಂತನ ಸಂಗಡ ಯುದ್ಧ ಮಾಡಿದನು.

೪೭. ಆಗ ಗೋವಿಂದನು ತನ್ನ ಬಾಹುಗಳಿಂದ ಜಾಂಬವಂತನ ಸಂಗಡ ಇಪ್ಪತ್ತೊಂದು ದಿನಗಳವರೆಗೆ ಯುದ್ಧ ಮಾಡಿದನು, ವಸುದೇವ ಮುಂತಾದವರು ಹೊರ ಭಾಗದಲ್ಲಿ ನೋಡುತ್ತಿರಲು ಕೃಷ್ಣನು ಗುಹೆಯನ್ನು ಪ್ರವೇಶಮಾಡಿದನು.

೪೮. ಆಗ ಆ ವಸುದೇವ ಮುಂತಾದವರು ಮತ್ತೆ ದ್ವಾರಕಾವತಿಗೆ ಬಂದು ಕೃಷ್ಣನು ಸಂಹರಿಸಲ್ಪಟ್ಟನೆಂದು ತಿಳಿಸಿದರು. ಆದರೆ ವಾಸುದೇವನು ಮಹಾಬಲಿಷ್ಠನಾದ ಜಾಂಬವಂತನನ್ನು ಯುದ್ಧದಲ್ಲಿ ಜಯಿಸಿದನು.

೪೯. ತರುವಾಯ ಕೃಷ್ಣನು ಋುಕ್ಷರಾಜನಾದ ಜಾಂಬವಂತನ ಸಮ್ಮತಿಯಂತೆ ಜಾಂಬವತಿ ಎಂಬ ಕನ್ಯೆಯನ್ನು ಹೊಂದಿದನು. ಭಗವಂತನಾದ ಕೃಷ್ಣನ ತೇಜೋರೂಪದಿಂದ ಜಾಂಬವಂತನು ತಿರಸ್ಕರಿಸಲ್ಪಟ್ಟನು.

ಸುತಾಂ ಜಾಂಬವತೀಮಾಶು ವಿಷ್ವಕ್ಸೇನಾಯ ದತ್ತವಾನ್ ।
ಮಣಿಂ ಸ್ಯಮಂತಕಂ ಚೈವ ಜಗ್ರಾಹಾತ್ಮವಿಶುದ್ಧಯೇ　　|| ೫೦ ||

ಅನುನೀಯರ್ಕ್ಷರಾಜಂ ತಂ ನಿರ್ಯಯೌ ಚ ತದಾ ಬಿಲಾತ್ ।
ಏವಂ ಸ ಮಣಿಮಾಹೃತ್ಯ ವಿಶೋಧ್ಯಾತ್ಮಾನಮಾತ್ಮನಾ　　|| ೫೧ ||

ದದೌ ಸತ್ರಾಜಿತೇ ರತ್ನಂ ಮಣಿಂ ಸಾತ್ತ್ವತಸನ್ನಿಧೌ ।
ಕನ್ಯಾಂ ಪುನರ್ಜಾಂಬವತೀಮುವಾಹ ಮಧುಸೂದನಃ　　|| ೫೨ ||

ತಸ್ಮಾನ್ಮಿಥ್ಯಾಭಿಶಾಪಾತ್ತು ವ್ಯಶುಧ್ಯನ್ಮಧುಸೂದನಃ ।
ಇಮಾಂ ಮಿಥ್ಯಾಭಿಶಪ್ತಿಂ ಯಃ ಕೃಷ್ಣಸ್ಯೇಹ ವ್ಯಪೋಹಿತಾಮ್ || ೫೩ ||

ವೇದ ಮಿಥ್ಯಾಭಿಶಪ್ತಿಂ ಸ ನಾಭಿಸ್ಪೃಶತಿ ಕರ್ಹಿಚಿತ್ ।
ದಶ ತ್ವಾಸನ್ ಸತ್ರಜಿತೋ ಭಾರ್ಯಾಸ್ತಸ್ಯಾಯುತಂ ಸುತಾಃ || ೫೪ ||

---

೫೦. ಆ ಜಾಂಬವಂತನು ಸ್ಯಮಂತಕ ಮಣಿಯನ್ನೂ, ಜಾಂಬವತೀ ಕನ್ಯೆಯನ್ನೂ ಕೃಷ್ಣನ ಮಹಿಮೆಯ ಪರತಂತ್ರನಾಗಿ ಕೃಷ್ಣನಿಗೆ ಕೊಟ್ಟನು. ಶ್ರೀ ಕೃಷ್ಣನು ಲೋಕಾಪವಾದದಿಂದ ತನ್ನನ್ನು ಬಿಡಿಸಿಕೊಳ್ಳುವುದಕ್ಕೋಸ್ಕರ ಸ್ಯಮಂತಕ ಮಣಿಯನ್ನು ತೆಗೆದುಕೊಂಡನು.

೫೧. ಆಗ ಋಕ್ಷರಾಜನನ್ನು ಸಮಾಧಾನ ಮಾಡಿ ಶ್ರೀ ಕೃಷ್ಣನು ಆ ಬಿಲದಿಂದ ಹೊರಗೆ ಬಂದನು. ಈ ರೀತಿಯಾಗಿ ಆ ಮಣಿರತ್ನವನ್ನು ತಂದು ತಾನೇ ತನ್ನ ಅಪವಾದವನ್ನು ಕಳೆದುಕೊಂಡನು.

೫೨. ಮಧು ರಾಕ್ಷಸನನ್ನು ಸಂಹರಿಸಿದ ಕೃಷ್ಣನು ಸಾತ್ತ್ವತ ರಾಜರ ಸನ್ನಿಧಿಯಲ್ಲಿ ಆ ರತ್ನವನ್ನು ಸತ್ರಾಜಿತರಾಜನಿಗೆ ಕೊಟ್ಟನು ಮತ್ತು ಜಾಂಬವತೀ ಕನ್ಯೆಯನ್ನು ಪಾಣಿಗ್ರಹಣ ಮಾಡಿಕೊಂಡನು.

೫೩. ಹೀಗೆ ಮಧು ಅಸುರನನ್ನು ಕೊಂದ ಕೃಷ್ಣನು ತನಗೆ ಉಂಟಾದ ಮಿಥ್ಯಾಪವಾದದಿಂದ ಬಿಡುಗಡೆಯಾದನು. ಮಾನವನು ಶ್ರೀ ಕೃಷ್ಣನಿಗೆ ಮಿಥ್ಯಾ ಅಪವಾದ ಬಂದು ಬಿಡುಗಡೆಯಾದುದನ್ನು ತಿಳಿಯುವುದು ಶ್ರೇಯಸ್ಕರವಾದುದು.

೫೪. ಇದನ್ನು ತಿಳಿದಿರುವ ಮಾನವನು ಯಾವಾಗಲೂ ಮಿಥ್ಯಾಪವಾದವನ್ನು ಸ್ಪರ್ಶಿಸುವುದಿಲ್ಲ. ಆ ಸತ್ರಜಿತರಾಜನಿಗೆ ಹತ್ತುಮಂದಿ ಭಾರ್ಯೆಯರಿದ್ದರು. ಮತ್ತು ಅಯುತಸಂಖ್ಯೆಯ ಪುತ್ರರಿದ್ದರು.

ಖ್ಯಾತಿಮಂತಸ್ತ್ರಯಸ್ತೇಷಾಂ ಭಂಗಕಾರಸ್ತು ಪೂರ್ವಜಃ ।
ವೀರೋ ವಾತಪತಿಶ್ಚೈವ ತಪಸ್ವೀ ಚ ಬಹುಪ್ರಿಯಃ ॥ ೩೩ ॥

ಅಥ ವೀರವತೀ ನಾಮ ಭಂಗಕಾರಸ್ಯ ತು ಪ್ರಸೂಃ।
ಸುಷುವೇ ಸಾ ಕುಮಾರೀಸ್ತು ತಿಸ್ರೋ ರೂಪಗುಣಾನ್ವಿತಾಃ ॥ ೩೬ ॥

ಸತ್ಯಭಾಮೋತ್ತಮಾ ಸ್ತ್ರೀಣಾಂ ವ್ರತಿನೀ ಚ ಧೃಢವ್ರತಾ ।
ತಥಾ ತಪಸ್ವಿನೀ ಚೈವ ಪಿತಾ ಕೃಷ್ಣಾಯ ತಾಂ ದದೌ ॥ ೩೭ ॥

ನ ಚ ಸತ್ರಾಜಿತಃ ಕೃಷ್ಣೋ ಮಣಿರತ್ನಂ ಸ್ಯಮಂತಕಮ್ ।
ಆದತ್ತ ತದುಪಶ್ರುತ್ಯ ಭೋಜೇನ ಶತಧನ್ವನಾ ॥ ೩೮ ॥

ತದಾ ಹಿ ಪ್ರಾರ್ಥಯಾಮಾಸ ಸತ್ಯಭಾಮಾಮನಿಂದಿತಾಮ್ ।
ಅಕ್ರೂರೋ ಧನಮನ್ವಿಚ್ಛನ್ ಮಣಿಂ ಚೈವ ಸ್ಯಮಂತಕಮ್ ॥ ೩೯ ॥

---

೩೫. ಆ ಪುತ್ರರಲ್ಲಿ ಮೂರುಮಂದಿಯು ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದರು. ಅವರಲ್ಲಿ ಜ್ಯೇಷ್ಠನು ಭಂಗಕಾರನೆಂಬ ನಾಮಾಂಕಿತನಾಗಿದ್ದನು, ಮತ್ತು ವೀರನಾದ ವಾತಪತಿಯು ದ್ವಿತೀಯನೂ, ಅನೇಕರಿಗೆ ಇಷ್ಟನಾದ ತಪಸ್ವಿ ಎಂಬುವನು ತೃತೀಯ ಪುತ್ರನೂ ಆಗಿದ್ದರು.

೩೬. ತರುವಾಯ ಭಂಗಕಾರನೆಂಬುವನ ಜನನಿಯಾದ ವೀರವತಿಯೆಂಬುವಳು, ಸೌಂದರ್ಯದಿಂದಲೂ, ಸದ್ಗುಣಗಳಿಂದಲೂ ಕೂಡಿದ ಮೂರುಮಂದಿ ಕನ್ಯೆಯರನ್ನು ಪ್ರಸವಿಸಿದಳು.

೩೭. ಆ ಕನ್ಯೆಯರಲ್ಲಿ ಮೊದಲನೆಯವಳು ನಾರಿಯರಲ್ಲಿ ಉತ್ತಮಳಾದ ಸತ್ಯಭಾಮೆಯು, ಎರಡನೆಯವಳು ಅಖಂಡಿತವಾದ ವ್ರತಾಚರಣೆಯುಳ್ಳ ವ್ರತಿನಿಯು ಮತ್ತು ಮೂರನೆಯವಳು ತಪಸ್ವಿನಿಯು, ತಂದೆಯು ಅವರನ್ನು ಕೃಷ್ಣನಿಗೆ ಪ್ರದಾನ ಮಾಡಿದನು.

೩೮. ಕೃಷ್ಣನು ಸತ್ರಾಜಿತನಿಂದ ಸ್ಯಮಂತಕಮಣಿರತ್ನವನ್ನು ಮಾತ್ರ ಸ್ವೀಕರಿಸಲಿಲ್ಲ. ಅಕ್ರೂರನು ಆ ರತ್ನದಲ್ಲಿ ಆಸೆಯನ್ನಿಟ್ಟಿರುವನೆಂದು ಶತಧನ್ವ ಎಂಬ ಭೋಜನಿಂದ ಕೃಷ್ಣನು ತಿಳಿದಿದ್ದನು.

೩೯. ಆಗ ಅಕ್ರೂರನು ವಿಶೇಷ ಧನಲಾಭವನ್ನು ಹೊಂದಬೇಕೆಂಬ ಇಷ್ಟವುಳ್ಳವನಾಗಿ ಆ ಸ್ಯಮಂತಕ ಮಣಿಯನ್ನೂ, ಶ್ಲಾಘ್ಯಳಾದ ಸತ್ಯಭಾಮೆಯನ್ನೂ ತನಗೆ ಕೊಡುವಂತೆ ಪ್ರಾರ್ಥಿಸಿದನು.

ಸತ್ರಾಜಿತಂ ತತೋ ಹತ್ವಾ ಶತಧನ್ವಾ ಮಹಾಬಲಃ ।
ರಾತ್ರೌ ತಂ ಮಣಿಮಾದಾಯ ತತೋಽಕ್ರೂರಾಯ ದತ್ತವಾನ್ ॥ ೬೦ ॥

ಅಕ್ರೂರಸ್ತು ತದಾ ರತ್ನಮಾದಾಯ ಸ ನರರ್ಷಭಃ ।
ಸಮಯಂ ಕಾರಯಾಂಚಕ್ರೇ ಬೋಧ್ಯೋ ನಾನ್ಯಸ್ಯ ಚೇತ್ಯುತ ॥ ೬೧ ॥

ವಯಮಭ್ಯುಪಯೋತ್ಸ್ಯಾಮಃ ಕೃಷ್ಣೇನ ತ್ವಾಂ ಪ್ರಧರ್ಷಿತಮ್ ।
ಮಮ ವೈ ದ್ವಾರಕಾ ಸರ್ವಾ ವಶೇ ತಿಷ್ಠತ್ಯಸಂಶಯಮ್ ॥ ೬೨ ॥

ಹತೇ ಪಿತರಿ ದುಃಖಾರ್ತಾ ಸತ್ಯಭಾಮಾ ಯಶಸ್ವಿನೀ ।
ಪ್ರಯಯೌ ರಥಮಾರುಹ್ಯ ನಗರಂ ವಾರಣಾವತಮ್ ॥ ೬೩ ॥

ಸತ್ಯಭಾಮಾ ತು ತದ್ವೃತ್ತಂ ಭೋಜಸ್ಯ ಶತಧನ್ವನಃ
ಭರ್ತುರ್ನಿವೇದ್ಯ ದುಃಖಾರ್ತಾ ಪಾರ್ಶ್ವಸ್ಥಾಶ್ರೂಣ್ಯವರ್ತಯತ್ ॥ ೬೪ ॥

---

೬೦. ತರುವಾಯ ಮಹಾಬಲಿಯಾದ ಶತಧನ್ವನೆಂಬುವನು ರಾತ್ರಿಯಲ್ಲಿ ಸತ್ರಾಜಿತನನ್ನು ಕೊಂದು ಆ ರತ್ನವನ್ನು ತಂದು ಅದನ್ನು ಆಕಾಂಕ್ಷಿಸುತ್ತಿದ್ದ ಅಕ್ರೂರನಿಗೆ ಕೊಟ್ಟನು.

೬೧. ಅಕ್ರೂರನೆಂಬ ಆ ರಾಜನು ಆಗ ಸ್ಯಮಂತಕ ರತ್ನವನ್ನು ತೆಗೆದುಕೊಂಡು "ಈ ವಿಷಯವನ್ನು ಮತ್ತಾರಿಗೂ ತಿಳಿಸಲಾಗದು" ಎಂದು ಶತಧನ್ವನೊಡನೆ ಶಪಥವನ್ನು ಮಾಡಿದನು.

೬೨. ಮತ್ತು ಸಮಸ್ತ ದ್ವಾರಕಾನಗರಿಯು ನನ್ನ ವಶದಲ್ಲಿ ಇರುವುದರಿಂದ ಈ ಅಪರಾಧದಿಂದ ಶ್ರೀ ಕೃಷ್ಣನು ನಿನ್ನನ್ನು ಎದುರಿಸುವುದಾದರೆ ಆ ಸಮಯದಲ್ಲಿ ನಾವೆಲ್ಲರೂ ನಿಸ್ಸಂಶಯವಾಗಿ ಪ್ರತಿಯುದ್ಧವನ್ನು ಹೂಡುವೆವು.

೬೩. ತಂದೆಯು ಮರಣವನ್ನೈದಲು ಕೀರ್ತಿವಂತಳಾದ ಸತ್ಯಭಾಮೆಯು ದುಃಖದಿಂದ ಪೀಡಿತಳಾಗಿ ರಥವನ್ನು ಏರಿಕೊಂಡು ವಾರಣಾವತವೆಂಬ ನಗರಕ್ಕೆ ಬಂದಳು.

೬೪. ಅಲ್ಲಿ ಸತ್ಯಭಾಮೆಯು ಶತಧನ್ವನೆಂಬ ಭೋಜರಾಜನ ಆ ನಿಂದ್ಯಕರ್ಮವನ್ನು ಪತಿಗೆ ತಿಳಿಸಿ ಪತಿಯ ಪಾರ್ಶ್ವದಲ್ಲಿ ದುಃಖಾತಿರೇಕದಿಂದ ಕಣ್ಣೀರನ್ನು ಸುರಿಸಿದಳು.

ಪಾಂಡವಾನಾಂ ತು ದಗ್ಧಾನಾಂ ಹರಿಃ ಕೃತ್ವೋದಕಕ್ರಿಯಾಮ್ ।
ಕುಲ್ಯಾರ್ಥೇ ಚೈವ ಭ್ರಾತೃಣಾಂ ನ್ಯಯೋಜಯತ ಸಾತ್ಯಕಿಮ್ ॥೬೫॥

ತತಸ್ತ್ವರಿತಮಾಗತ್ಯ ದ್ವಾರಕಾಂ ಮಧುಸೂದನಃ ।
ಪೂರ್ವಜಂ ಹಲಿನಂ ಶ್ರೀಮಾನಿದಂ ವಚನಮಬ್ರವೀತ್ ॥ ೬೬ ॥

ಹತಃ ಪ್ರಸೇನಃ ಸಿಂಹೇನ ಸತ್ರಾಜಿಚ್ಛತಧನ್ವನಾ ।
ಸ್ಯಮಂತಕೋ ಮಾರ್ಗಣೀಯಸ್ತಸ್ಯ ಪ್ರಭುರಹಂ ಪ್ರಭೋ ॥ ೬೭ ॥

ತದಾರೋಹ ರಥಂ ಶೀಘ್ರಂ ಭೋಜಂ ಹತ್ವಾ ಮಹಾಬಲಮ್ ।
ಸ್ಯಮಂತಕಂ ಮಹಾಬಾಹೋ ಸಾಮಾನ್ಯಂ ವೋ ಭವಿಷ್ಯತಿ ॥ ೬೮ ॥

ತತಃ ಪ್ರವೃತ್ತೇ ಯುದ್ಧೇ ತು ತುಮುಲೇ ಭೋಜಕೃಷ್ಣಯೋಃ ।
ಶತಧನ್ವಾ ತಮಕ್ರೂರಮವೈಕ್ಷತ್ ಸರ್ವತೋದಿಶಮ್ ॥ ೬೯ ॥

---

೬೫. ಆಗ ಕೃಷ್ಣನು ದಗ್ಧರಾದ ಪಾಂಡುಪುತ್ರರಿಗೆ ಜಲಾಂಜಲಿಯನ್ನು ಕೊಟ್ಟು ಆ ಭ್ರಾತೃಗಳ ಕುಲರಕ್ಷಣೆಗೋಸ್ಕರ ಸಾತ್ಯಕಿಯನ್ನು ನಿಯಮಿಸಿದನು.

೬೬. ತರುವಾಯ ಸರ್ವಸಮೃದ್ಧಿಯಿಂದ ಕೂಡಿದ ಶ್ರೀ ಕೃಷ್ಣನು ವೇಗವಾಗಿ ದ್ವಾರಕಾಪಟ್ಟಣಕ್ಕೆ ಬಂದು ತನ್ನ ಅಗ್ರಜನಾದ, ನೇಗಿಲೆಂಬ ಆಯುಧವನ್ನು ಧರಿಸಿದ ಬಲರಾಮನಿಗೆ ಈ ವಚನವನ್ನು ಹೇಳಿದನು.

೬೭. ಪ್ರಭುವಾದ ಅಗ್ರಜನೆ! ಸಿಂಹದಿಂದ ಪ್ರಸೇನರಾಜನು ಕೊಲ್ಲಲ್ಪಟ್ಟನು. ಹಾಗೆ ಸತ್ರಾಜಿತನು ಶತಧನ್ವನಿಂದ ಸಂಹರಿಸಲ್ಪಟ್ಟಿರುವನು. ಈಗ ಆ ಸ್ಯಮಂತಕ ರತ್ನವನ್ನು ಹುಡುಕಬೇಕು. ನಾನು ಆ ರತ್ನದ ಅಧಿಪತಿಯು.

೬೮. ಮಹಾಬಾಹುವಾದ ಅಗ್ರಜನೆ! ಆದ್ದರಿಂದ ಬೇಗ ನೀನು ರಥವನ್ನು ಏರು ಮಹಾ ಬಲಿಷ್ಠನಾದ ಶತಧನ್ವಭೋಜರಾಜನನ್ನು ಕೊಂದು ರತ್ನವನ್ನು ತರಬೇಕು. ಆ ರತ್ನವು ನಿಮ್ಮೆಲ್ಲರಿಗೆ ಸಾಮಾನ್ಯವಾಗಿರಲಿ.

೬೯. ಅನಂತರದಲ್ಲಿ ಶತಧನ್ವ ಮತ್ತು ಕೃಷ್ಣರಿಗೆ ಭಯಂಕರವಾದ ಸಂಗ್ರಾಮವು ಜರುಗುತ್ತಿರಲು ಶತಧನ್ವನು ತನ್ನ ಸಹಾಯಕ್ಕೆ ಅಕ್ರೂರನು ಬರುವನೆಂದು ಭಾವಿಸಿ ಎಲ್ಲ ದಿಕ್ಕುಗಳ ಕಡೆಗೆ ನೋಡಿದನು.

ಅನಾಲಬ್ಧಾವಹಾರೌ ತು ಕೃತ್ವಾ ಭೋಜಜನಾರ್ದನೌ ।
ಶಕ್ತೋಽಪಿ ಶಾಠ್ಯಾದ್ಧಾರ್ದಿಕ್ಯೋ ನಾಕ್ರೂರೋಽಭ್ಯುಪಪದ್ಯತ ॥ ೭೦ ॥

ಅಪಯಾತೇ ತತೋ ಬುದ್ಧಿಂ ಭೂಯಶ್ಚಕ್ರೇ ಭಯಾನ್ವಿತಃ ।
ಯೋಜನಾನಾಂ ಶತಂ ಸಾಗ್ರಂ ಹೃದಯಾ ಪ್ರತ್ಯಪದ್ಯತ ॥ ೭೧ ॥

ವಿಖ್ಯಾತಾ ಹೃದಯಾ ನಾಮ ಶತಯೋಜನಗಾಮಿನೀ ।
ಭೋಜಸ್ಯ ವಡವಾ ದಿವ್ಯಾ ಯಯಾ ಕೃಷ್ಣಮಯೋಧಯತ್ ॥ ೭೨ ॥

ಕ್ಷೀಣಾಂ ಜವೇನ ಹೃದಯಾಮಧ್ವನಃ ಶತಯೋಜನೇ ।
ದೃಷ್ಟ್ವಾ ರಥಸ್ಯ ತಾಮೃದ್ಧಿಂ ಶತಧನ್ವಾ ಸಮುದ್ರವತ್ ॥ ೭೩ ॥

ತತಸ್ತಸ್ಯಾ ಹಯಾಯಾಸ್ತು ಶ್ರಮಾತ್ ಖೇದಾಚ್ಚ ವೈ ದ್ವಿಜಾಃ ।
ಖಮುತ್ಪೇತುರಥ ಪ್ರಾಣಾಃ ಕೃಷ್ಣೋ ರಾಮಮಥಾಬ್ರವೀತ್ ॥ ೭೪ ॥

---

೭೦. ಹಾರ್ದಿಕ್ಯನಾದ ಅಕ್ರೂರನು ಭೋಜ-ಜನಾರ್ದನರಿಬ್ಬರನ್ನು ಪರಸ್ಪರ ಗ್ರಹಣಮಾಡಲಾರದೆ ಬಹಳಹೊತ್ತು ಯುದ್ಧಮಾಡುವಂತೆ ಮಾಡಿ ತಾನು ಶಕ್ತನಾಗಿದ್ದರೂ ವಂಚಕಬುದ್ಧಿಯಿಂದ ಯುದ್ಧಕ್ಕೆ ಸಿದ್ಧನಾಗಲಿಲ್ಲ.

೭೧. ಆಗ ಶತಧನ್ವನು ಭಯಗ್ರಸ್ತನಾಗಿ ಮತ್ತೆ ಅಲ್ಲಿಂದ ಪಲಾಯನಮಾಡುವುದನ್ನು ಯೋಚಿಸಿದನು. ಆಗ ವಾಹನವಾದ ಹೃದಯಾ ಎಂಬ ಅಶ್ವವು ಸಂಪೂರ್ಣವಾಗಿ ಶತಯೋಜನಗಳ ವರೆಗೆ ಧಾವಿಸಿತು.

೭೨. ಭೋಜರಾಜನಲ್ಲಿ ನೂರು ಯೋಜನದೂರ ಓಡಬಲ್ಲ, ದಿವ್ಯವಾದ ಹೃದಯಾ ಎಂಬ ಸಂಜ್ಞಾಂಕಿತವಾದ ಒಂದು ಅಶ್ವವು ಪ್ರಸಿದ್ಧವಾಗಿತ್ತು. ಅದರಿಂದ ಕೃಷ್ಣನು ಅವನೊಡನೆ ಯುದ್ಧ ಮಾಡಿದವನಾದನು.

೭೩. ಶತಯೋಜನ ಮಾರ್ಗವನ್ನು ಲಂಘಿಸಿದ ಮೇಲೆ ವೇಗದಲ್ಲಿ ಹೃದಯಾಶ್ವವು ಕ್ಷೀಣವಾದುದರಿಂದ ಹಿಂದಟ್ಟಿಕೊಂಡು ಬಂದ ಕೃಷ್ಣನ ರಥದ ವೇಗದ ಸ್ಥಿತಿಯನ್ನು ಕಂಡು ಶತಧನ್ವನು ಪಲಾಯನಮಾಡಿದನು.

೭೪. ದ್ವಿಜರೆ! ತರುವಾಯ ಆ ಹೃದಯಾ ಎಂಬ ಅಶ್ವಾಂಗನೆಗೆ ಶ್ರಮವೂ ಖೇದವೂ ಅತಿಶಯವಾಗಿ ಬಾಧಿಸಿ ಅದರ ಪ್ರಾಣವಾಯುಗಳು ಆಕಾಶಕ್ಕೆ ಹಾರಿಹೋದುವು. ಆಗ ಕೃಷ್ಣನು ರಾಮನಿಗೆ ಹೀಗೆ ಹೇಳಿದನು.

ತಿಷ್ಠಸ್ವೇಹ ಮಹಾಬಾಹೋ ದೃಷ್ಟದೋಷಾ ಮಯಾ ಹಯಾ ।
ಪದ್ಭ್ಯಾಂ ಗತ್ವಾ ಹರಿಷ್ಯಾಮಿ ಮಣಿರತ್ನಂ ಸ್ಯಮಂತಕಮ್ ॥ ೭೫ ॥

ಪದ್ಭ್ಯಾಮೇವ ತತೋ ಗತ್ವಾ ಶತಧನ್ವಾನಮಚ್ಯುತಃ ।
ಮಿಥಿಲೋಪವನೇ ತಂ ವೈ ಜಘಾನ ಪರಮಾಸ್ತ್ರವಿತ್ ॥ ೭೬ ॥

ಸ್ಯಮಂತಕಂ ನ ಚಾಪಶ್ಯದ್ಧತ್ವಾ ಭೋಜಂ ಮಹಾಬಲಮ್ ।
ನಿವೃತ್ತಂ ಚಾಬ್ರವೀತ್ ಕೃಷ್ಣಂ ರತ್ನಂ ದೇಹೀತಿ ಲಾಂಗಲೀ ॥ ೭೭ ॥

ನಾಸ್ತೀತಿ ಕೃಷ್ಣಶ್ಚೋವಾಚ ತತೋ ರಾಮೋ ರುಷಾನ್ವಿತಃ ।
ಧಿಕ್‌ಶಬ್ದಪೂರ್ವಮಸಕೃತ್ ಪ್ರತ್ಯುವಾಚ ಜನಾರ್ದನಮ್ ॥ ೭೮ ॥

ಭ್ರಾತೃತ್ವಾನ್ಮರ್ಷಯಾಮ್ಯೇಷ ಸ್ವಸ್ತಿ ತೇಽಸ್ತು ವ್ರಜಾಮ್ಯಹಮ್ ।
ಕೃತ್ಯಂ ನ ಮೇ ದ್ವಾರಕಯಾ ನ ತ್ವಯಾ ನ ಚ ವೃಷ್ಣಿಭಿಃ ॥ ೭೯ ॥

---

೭೫. ಮಹಾಬಾಹು ಬಲಶಾಲಿಯೆ! ನೀನು ಇಲ್ಲಿಯೇ ನಿಲ್ಲು, ನಾನು ಅಶ್ವಾಂಗನೆಯಲ್ಲಿ ದೋಷವನ್ನು ಕಂಡಿರುವೆನು. ಆದ್ದರಿಂದ ಪಾದಚಾರದಿಂದ ಹೋಗಿ ಅವನಿಂದ ಸ್ಯಮಂತಕಮಣಿರತ್ನವನ್ನು ಗ್ರಹಿಸುವೆನು.

೭೬. ಆ ಮೇಲೆ ಪರಮಾಸ್ತ್ರ ವಿದ್ಯೆಯನ್ನು ತಿಳಿದಿರುವ ಅಚ್ಯುತನು ಪಾದಚಾರದಿಂದ ಹೋಗಿ ಮಿಥಿಲಾನಗರದ ಉಪವನದಲ್ಲಿ ಶತಧನ್ವರಾಜನನ್ನು ಸಂಹರಿಸಿದನು

೭೭. ಆಗ ಮಹಾ ಬಲಿಷ್ಠನಾದ ಭೋಜನನ್ನು ಕೊಂದು ನೋಡಲಾಗಿ ಶ್ರೀ ಕೃಷ್ಣನು ಅವನಲ್ಲಿ ಸ್ಯಮಂತಕಮಣಿಯನ್ನು ಕಾಣಲಿಲ್ಲ. ಅಲ್ಲಿಂದ ಹಿಂತಿರುಗಿ ಬಂದ ಕೃಷ್ಣನನ್ನು ನೋಡಿ ಬಲರಾಮನು ರತ್ನವನ್ನು ಕೊಡೆಂದು ಕೇಳಿದನು.

೭೮. ಕೃಷ್ಣನು ರತ್ನವಿಲ್ಲವೆಂದು ಹೇಳಿದನು. ಆಗ ಬಲರಾಮನು ಕೋಪಗೊಂಡವನಾಗಿ ಧಿಕ್ಕಾರವಚನಗಳನ್ನು ಅನೇಕಾವರ್ತಿ ಹೇಳಿ ಜನಾರ್ದನನನ್ನು ಕುರಿತು ಪ್ರತಿ ವಚನವನ್ನು ಆಡಿದನು.

೭೯. ನಾನು ಭ್ರಾತೃಪ್ರೇಮದಿಂದ ನಿನ್ನ ವಂಚನೆಯನ್ನು ಸಹಿಸಿರುವೆನು. ನಿನಗೆ ಕಲ್ಯಾಣವಾಗಲಿ, ನಾನು ಪ್ರಯಾಣಮಾಡುವೆನು. ನನಗೆ ದ್ವಾರಕೆಯಿಂದಲೂ ನಿನ್ನಿಂದಲೂ ಅಥವಾ ಯಾದವರಿಂದಲೂ ಆಗಬೇಕಾದ ಪ್ರಯೋಜನವಿಲ್ಲ.

ಪ್ರವಿವೇಶ ತತೋ ರಾಮೋ ಮಿಥಿಲಾಮರಿಮರ್ದನಃ ।
ಸರ್ವಕಾಮೈರುಪಹೃತೈರ್ಮೈಥಿಲೇನೈವ ಪೂಜಿತಃ ॥ ೮೦ ॥

ಏತಸ್ಮಿನ್ನೇವ ಕಾಲೇ ತು ಬಭ್ರುರ್ಮತಿಮತಾಂ ವರಃ ।
ನಾನಾರೂಪಾನ್ ಕ್ರತೂನ್ ಸರ್ವಾನಾಜಹಾರ ನಿರರ್ಗಲಾನ್ ॥ ೮೧ ॥

ದೀಕ್ಷಾಮಯಂ ಸಕವಚಂ ರಕ್ಷಾರ್ಥಂ ಪ್ರವಿವೇಶ ಹ ।
ಸ್ಯಮಂತಕಕೃತೇ ಪ್ರಾಜ್ಞೋ ಗಾಂದಿನೀಜೋ ಮಹಾಮನಾಃ ॥ ೮೨ ॥

ಅಕ್ರೂರಯಜ್ಞಾ ಇತಿ ತೇ ಖ್ಯಾತಾಸ್ತಸ್ಯ ಮಹಾತ್ಮನಃ ।
ಬಹ್ವನ್ನದಕ್ಷಿಣಾಃ ಸರ್ವೇ ಸರ್ವಕಾಮಪ್ರದಾಯಿನಃ ॥ ೮೩ ॥

ಅಥ ದುರ್ಯೋಧನೋ ರಾಜಾ ಗತ್ವಾಥ ಮಿಥಿಲಾಂ ಪ್ರಭುಃ ।
ಗದಾಶಿಕ್ಷಾಂ ತತೋ ದಿವ್ಯಾಂ ಬಲಭದ್ರಾದವಾಪ್ತವಾನ್ ॥ ೮೪ ॥

೮೦. ತರುವಾಯ ಶತ್ರುಮರ್ದಕನಾದ ಬಲರಾಮನು ಮಿಥಿಲಾನಗರಿಯನ್ನು ಪ್ರವೇಶಮಾಡಿದನು. ಆಗ ಮೈಥಿಲರಾಜನಿಂದ ಸಕಲೇಷ್ಟಾರ್ಥಗಳಿಂದ ಕೂಡಿ ಅನೇಕ ಕಾಣಿಕೆಗಳನ್ನು ತಂದು ರಾಮನು ಸತ್ಕರಿಸಲ್ಪಟ್ಟನು.

೮೧. ಜ್ಞಾನವಂತರಲ್ಲಿ ಶ್ರೇಷ್ಠನಾದ ಬಭ್ರುರಾಜನು ಇದೇ ಸಮಯದಲ್ಲಿ ಅನೇಕ ರೀತಿಗಳಿಂದ ಕೂಡಿದ ಸಕಲ ಯಜ್ಞಗಳನ್ನು ನಿರರ್ಗಲವಾಗಿ ಆಚರಿಸಿದನು.

೮೨. ಪ್ರಾಜ್ಞನೂ ಮಹಾಮಾನಿಯೂ ಆದ ಗಾಂದಿನೀಪುತ್ರನಾದ ಅಕ್ರೂರನು ಸ್ಯಮಂತಕರತ್ನಕ್ಕೋಸ್ಕರ ವಿಪತ್ತಿನಿಂದ ತನ್ನನ್ನು ರಕ್ಷಿಸಿಕೊಳ್ಳಲು ಯಜ್ಞದೀಕ್ಷಾ ರೂಪವಾದ ಕವಚವನ್ನು ಧರಿಸಿದನು.

೮೩. ಮಹಾತ್ಮನಾದ ಅಕ್ರೂರನು ವಿಜೃಂಭಣೆಯಿಂದ ಮಾಡಿದ ಆ ಯಜ್ಞಗಳು ಅಕ್ರೂರನ ಯಜ್ಞಗಳೆಂದು ಪ್ರಸಿದ್ಧವಾಗಿದ್ದುವು. ಆ ಯಜ್ಞಗಳೆಲ್ಲವೂ ಅತಿಶಯವಾದ ಅನ್ನದಾನ, ದಕ್ಷಿಣಾದಾನಗಳಿಂದ ಕೂಡಿದುವುಗಳೂ, ಅರ್ಥಿಗಳ ಸಕಲ ಕಾಮಗಳನ್ನು ಪೂರ್ಣಮಾಡುವುವೂ ಆಗಿದ್ದುವು.

೮೪. ಅನಂತರದಲ್ಲಿ ಪ್ರಭುವಾದ ದುರ್ಯೋಧನ ರಾಜನು ಮಿಥಿಲಾನಗರಕ್ಕೆ ಹೋಗಿ ಆ ಬಲರಾಮನಿಂದ ದಿವ್ಯವಾದ ಗದಾಯುದ್ಧದ ಶಿಕ್ಷಣವನ್ನು ಹೊಂದಿದನು.

ಪ್ರಸಾದ್ಯ ತು ತತೋ ರಾಮೋ ವೃಷ್ಣ್ಯಂಧಕಮಹಾರಥೈಃ ।
ಆನೀತೋ ದ್ವಾರಕಾಮೇವ ಕೃಷ್ಣೇನ ಚ ಮಹಾತ್ಮನಾ ॥ ೮೫ ॥

ಅಕ್ರೂರಶ್ಚಾಂಧಕೈಃ ಸಾರ್ಧಮಭ್ಯಾಯಾತ್ಪುರುಷರ್ಷಭಃ ।
ಯುದ್ಧೇ ಹತ್ವಾ ತು ಶತ್ರುಘ್ನಂ ಸಹ ಬಂಧುಮತಾ ಬಲೀ ॥ ೮೬ ॥

ಸುಯಜ್ಞ ತನಯಾಯಾಂ ತು ನರಾಯಾಂ ನರಸತ್ತಮ್ ।
ಭಂಗಕಾರಸ್ಯ ತನಯೌ ವಿಶ್ರುತೌ ಸುಮಹಾಬಲೌ ॥ ೮೭ ॥

ಜಜ್ಞಾತೇಽಂಧಕಮುಖ್ಯಸ್ಯ ಶತ್ರುಘ್ನೋ ಬಂಧುಮಾಂಶ್ಚ ತೌ ।
ವಧೇ ಚ ಭಂಗಕಾರಸ್ಯ ಕೃಷ್ಣೋ ನ ಪ್ರೀತಿಮಾನಭೂತ್ ॥ ೮೮ ॥

ಜ್ಞಾತಿಭೇದಭಯಾದ್ಭೀತಸ್ತಮುಪೇಕ್ಷಿತವಾನಥ ।
ಅಪಯಾತೇ ತತೋಽಕ್ರೂರೇ ನಾವರ್ಷತ್ಪಾಕಶಾಸನಃ ॥ ೮೯ ॥

---

೮೫. ತರುವಾಯ ವೃಷ್ಣಿ. ಅಂಧಕರಲ್ಲಿ ಮಹಾ ರಥಿಕರಾಗಿರುವ ಮಹಾಜನರಿಂದಲೂ ಮಹಾತ್ಮನಾದ ಕೃಷ್ಣನಿಂದಲೂ ಸಮಾಧಾನಮಾಡಿ ಬಲರಾಮನು ದ್ವಾರಕಾಪಟ್ಟಣಕ್ಕೆ ತರಲ್ಪಟ್ಟನು.

೮೬. ಅನಂತರದಲ್ಲಿ ಪುರುಷಶ್ರೇಷ್ಠನೂ, ಬಲಿಷ್ಠನೂ ಆದ ಅಕ್ರೂರನು ಯುದ್ಧದಲ್ಲಿ ಶತ್ರುಘ್ನನನ್ನು ಕೊಂದು ಬಂಧುಮಾನ್ ಮತ್ತು ಅಂಧಕರಿಂದ ಕೂಡಿ ಅಲ್ಲಿಗೆ ಬಂದನು

೮೭. ಭಂಗಕಾರನಿಗೆ ಸುಯಜ್ಞನ ಪುತ್ರಿಯಾದ ನರಾ ಎಂಬುವಳಲ್ಲಿ ಜನಿಸಿದ ಮಹಾಬಲಯುತರಾದ ಮತ್ತು ಪುರುಷೋತಮರಾದ ಇಬ್ಬರು ಪುತ್ರರು ಪ್ರಸಿದ್ಧರಾಗಿರುವರು.

೮೮. ಅಂಧಕರಲ್ಲಿ ಮುಖ್ಯನಾದ ಭಂಗಕಾರನಿಂದ ಹುಟ್ಟಿದ ಪುತ್ರರಿಬ್ಬರು ಶತ್ರುಘ್ನ, ಬಂಧುಮಾನ್ ಎಂದು ನಾಮಾಂಕಿತರಾಗಿದ್ದರು. ಶ್ರೀ ಕೃಷ್ಣನು ಭಂಗಕಾರನ ವಧದಲ್ಲ ಪ್ರೀತಿಯನ್ನು ತೋರಿಸಲಿಲ್ಲ.

೮೯. ಆ ಮೇಲೆ ಕೃಷ್ಣನು ಜ್ಞಾತಿಗಳಲ್ಲಿ ಪರಸ್ಪರವಾಗಿ ಭೇದವುಂಟಾಗುವುದೆಂದು ಅವನನ್ನು ಉಪೇಕ್ಷಿಸಿದರು. ಅಕ್ರೂರನು ದ್ವಾರಕೆಯಿಂದ ಹೊರಗೆ ಪ್ರವಾಸ ಮಾಡಿದ ಮೇಲೆ ಅಲ್ಲಿ ಇಂದ್ರನು ಮಳೆಯನ್ನು ಕೊಡಲಿಲ್ಲ.

ಅನಾವೃಷ್ಟ್ಯಾ ಹತಂ ರಾಷ್ಟ್ರಮಭವದ್ಬಹುಧಾ ಯತಃ ।
ತತಃ ಪ್ರಸಾದಯಾಮಾಸುರಕ್ರೂರಂ ಕುಕುರಾಂಧಕಾಃ ॥ ೯೦ ॥

ಪುನರ್ದ್ವಾರವತೀಂ ಪ್ರಾಪ್ತೇ ತದಾ ದಾನಪತೌ ತಥಾ ।
ಪ್ರವವರ್ಷ ಸಹಸ್ರಾಕ್ಷಃ ಕುಕ್ಷೌ ಜಲನಿಧೇಸ್ತತಃ ॥ ೯೧ ॥

ಕನ್ಯಾಂ ವೈ ವಾಸುದೇವಾಯ ಸ್ವಸಾರಂ ಶೀಲಸಮ್ಮತಾಮ್ ।
ಅಕ್ರೂರಃ ಪ್ರದದೌ ಶ್ರೀಮಾನ್ ಪ್ರೀತ್ಯರ್ಥಂ ಮುನಿಪುಂಗವಾಃ ॥ ೯೨ ॥

ಅಥ ವಿಜ್ಞಾಯ ಯೋಗೇನ ಕೃಷ್ಣೋ ಬಭ್ರುಗತಂ ಮಣಿಮ್
ಸಭಾಮಧ್ಯೇ ತದಾ ಪ್ರಾಹ ತಮಕ್ರೂರಂ ಜನಾರ್ದನಃ ॥ ೯೩ ॥

ಯತ್ತದ್ರತ್ನಂ ಮಣಿವರಂ ತವ ಹಸ್ತಗತಂ ಪ್ರಭೋ।
ತತ್ಪ್ರಯಚ್ಛಸ್ವ ಮಾನಾರ್ಹ ಮಯಿ ಮಾನಾರ್ಯಕಂ ಕೃಥಾಃ॥ ೯೪ ॥

---

೯೦. ಆಗ ಆ ರಾಷ್ಟ್ರವು ಅನಾವೃಷ್ಟಿಯಿಂದ ಅನೇಕವಿಧವಾಗಿ ಪೀಡಿತವಾಗಿರುವುದರಿಂದ ವೃಷ್ಣಿ ಮತ್ತು ಅಂಧಕರು ಅಕ್ರೂರನನ್ನು ಸಮಾಧಾನ ಮಾಡಿದರು.

೯೧. ದಾನಕರ್ಮಕ್ಕೆ ಅಧಿಪತಿಯೆಂದು ಪ್ರಸಿದ್ಧನಾದ ಅಕ್ರೂರನು ಮತ್ತೆ ದ್ವಾರವತಿಗೆ ಬರಲಾಗಿ ಇಂದ್ರನು ಸಮುದ್ರದ ಮಧ್ಯದಲ್ಲಿದ್ದ ಆ ರಾಷ್ಟ್ರದಲ್ಲಿ ಮಳೆಯನ್ನು ಸುರಿಸಿದನು.

೯೨. ಮುನೀಂದ್ರರೆ! ಸಂಪತ್ತಿಯಿಂದ ಕೂಡಿದ ಅಕ್ರೂರನು ಶೀಲದಲ್ಲಿ ವೃದ್ಧಸಮ್ಮತಳೂ, ತನ್ನ ತಂಗಿಯೂ ಆದ ಕನ್ಯೆಯನ್ನು ಪ್ರೀತಿಯು ಬೆಳೆಯುವುದಕ್ಕೋಸ್ಕರ ವಾಸುದೇವನಿಗೆ ಅರ್ಪಿಸಿದನು.

೯೩. ತರುವಾಯ ಶ್ರೀ ಕೃಷ್ಣನು ಯೋಗದೃಷ್ಟಿಯ ಮಹಿಮೆಯಿಂದ ಸ್ಯಮಂತಕ ರತ್ನವು ಅಕ್ರೂರನಲ್ಲಿರುವುದೆಂದು ತಿಳಿದನು. ಆಗ ಕೃಷ್ಣನು ಸಭೆಯ ಮಧ್ಯದಲ್ಲಿ ಆ ಅಕ್ರೂರನನ್ನು ಕುರಿತು ಹೇಳಿದನು.

೯೪. ಪ್ರಭುವೆ! ರತ್ನಶ್ರೇಷ್ಠವಾದ ಯಾವ ಸ್ಯಮಂತಕಮಣಿಯು ನಿನ್ನ ಕರಗತವಾಗಿದೆಯೊ, ಅದನ್ನು ನನಗೆ ಕೊಡು, ಮಾನ್ಯನಾದ ಅಕ್ರೂರನೆ! ನನ್ನಲ್ಲಿ ಕೆಟ್ಟತನವನ್ನು ಮಾಡಬೇಡ.

ಷಷ್ಟಿವರ್ಷಗತೇ ಕಾಲೇ ಯದ್ರೋಷೋಽಭೂತ್ತದಾ ಮಮ ।
ಸುಸಂರೋಧೋಽಸಕೃತ್ಪ್ರಾಪ್ತಸ್ತದಾ ಕಾಲಾತ್ಯಯೋ ಮಹಾನ್ ॥ ೯೫ ॥

ತತಃ ಕೃಷ್ಣಸ್ಯ ವಚನಾತ್ ಸರ್ವಸಾತ್ತ್ವತಸಂಸದಿ ।
ಪ್ರದದೌ ತಂ ಮಣಿಂ ಬಭ್ರುರಕ್ಲೇಶೇನ ಮಹಾಮತಿಃ ॥ ೯೬ ॥

ತತಸ್ತಮಾರ್ಜವಪ್ರಾಪ್ತಂ ಬಭ್ರೋರ್ಹಸ್ತಾದರಿಂದಮಃ ।
ದದೌ ಹೃಷ್ಟಮನಾಸ್ತುಷ್ಟಸ್ತಂ ಮಣಿಂ ಬಭ್ರವೇ ಪುನಃ ॥ ೯೭ ॥

ಸ ಕೃಷ್ಣಹಸ್ತಾತ್ ಸಂಪ್ರಾಪ್ಯ ಮಣಿರತ್ನಂ ಸ್ಯಮಂತಕಮ್ ।
ಆಬಧ್ಯ ಗಾಂದಿನೀಪುತ್ರೋ ವಿರರಾಜಾಂಶುಮಾನಿವ ॥ ೯೮ ॥

ಇಮಾಂ ಮಿಥ್ಯಾಭಿಶಪ್ತಿಂ ಯೋ ವಿಶುದ್ಧಿಮಪಿ ಚೋತ್ತಮಾಮ್ ।
ವೇದ ಮಿಥ್ಯಾಭಿಶಪ್ತಿಂ ಸ ನ ಲಭೇತ ಕಥಂ ಚನ ॥ ೯೯ ॥

---

೯೫. ಅರವತ್ತು ವರ್ಷಗಳ ಹಿಂದೆ ಒಂದು ನಿಮಿತ್ತದಿಂದ, ನನಗೆ ಯಾವ ರೋಷವು ಉದ್ರಿಕ್ತವಾಗಿತ್ತೋ ಅದು ಈಗ ಮತ್ತೆ ಅದಕ್ಕಿಂತಲೂ ಹೆಚ್ಚಾಗಿ ಉದ್ರೇಕವಾಗುವುದು. ಹಾಗಾದರೆ ದೊಡ್ಡ ಕಲ್ಪಾಂತಸಮಯವು ಒದಗುವಂತಾಗುವುದು.

೯೬. ತರುವಾಯ ಕೃಷ್ಣನ ವಚನವನ್ನು ಅಂಗೀಕರಿಸಿ ಮಹಾ ಬುದ್ಧಿಶಾಲಿಯಾದ ಅಕ್ರೂರನು ಎಲ್ಲ ಸಾತ್ತ್ವತರ ಸನ್ನಿಧಿಯಲ್ಲಿ ಆ ಮಣಿಯನ್ನು ಕೃಷ್ಣನಿಗೆ ಅನಾಯಾಸವಾಗಿ ಕೊಟ್ಟನು.

೯೭. ಅನಂತರದಲ್ಲಿ ಶತ್ರುಗಳನ್ನು ದಂಡಿಸುವ ಕೃಷ್ಣನು ಸಂತೋಷಗೊಂಡ ಮಾನಸವುಳ್ಳವನಾಗಿ ಅಕ್ರೂರನ ಹಸ್ತದಿಂದ ಅನಾಯಾಸವಾಗಿ ಋಜುರೀತಿಯಿಂದ ಬಂದ ಸ್ಯಮಂತಕಮಣಿಯನ್ನು ಮತ್ತೆ ಅಕ್ರೂರನಿಗೆ ಹಿಂದಕ್ಕೆ ಕೊಟ್ಟನು.

೯೮. ಆ ಮೇಲೆ ಗಾಂದಿನಿಯ ಪುತ್ರನಾದ ಅಕ್ರೂರನು ಕೃಷ್ಣನ ಹಸ್ತದಿಂದ ಸ್ಯಮಂತಕಮಣಿಯನ್ನು ತೆಗೆದುಕೊಂಡು ಅದನ್ನು ಕಂಠದಲ್ಲಿ ಕಟ್ಟಿಕೊಂಡು ಅದರ ತೇಜಸ್ಸಿನಿಂದ ಸೂರ್ಯನಂತೆ ಪ್ರಕಾಶಿಸಿದನು.

೯೯. ಯಾವ ಮಾನವನು ಈ ಮಿಥ್ಯಾಪವಾದವನ್ನೂ ಉತ್ತಮವಾದ ಅಪವಾದ ಮುಕ್ತಿಯನ್ನೂ ತಿಳಿಯುವನೊ, ಅವನು ಯಾವಾಗಲೂ ಸುಳ್ಳಾದ ಲೋಕಾಪವಾದಕ್ಕೆ ಗುರಿಯಾಗುವುದಿಲ್ಲ.

ಅನಮಿತ್ರಾಚ್ಛಿನಿರ್ಜಜ್ಞೇ ಕನಿಷ್ಠಾದ್ವೃಷ್ಣಿನಂದನಾತ್ ।
ಸತ್ಯವಾನ್ ಸತ್ಯಸಂಪನ್ನಃ ಸತ್ಯಕಸ್ತಸ್ಯ ಚಾತ್ಮಜಃ　|| ೧೦೦ ||

ಸಾತ್ಯಕಿರ್ಯುಯುಧಾನಶ್ಚ ತಸ್ಯ ಭೂತಿಃ ಸುತೋಽಭವತ್ ।
ಭೂತೇರ್ಯುಗಂಧರಃ ಪುತ್ರ ಇತಿ ಭೌತ್ಯಃ ಪ್ರಕೀರ್ತಿತಃ　|| ೧೦೧ ||

ಮಾಡ್ರ್ಯಾಃ ಸುತಸ್ಯ ಜಜ್ಞೇ ತುಸುತೋ ವೃಷ್ಣಿರ್ಯುಧಾಜಿತಃ ।
ಜಜ್ಞಾತೇ ತನಯೌ ವೃಷ್ಣೇಃ ಶ್ವಫಲ್ಕಶ್ಚಿತ್ರಕಶ್ಚ ಯಃ　|| ೧೦೨ ||

ಶ್ವಫಲ್ಕಸ್ತು ಮಹಾರಾಜೋ ಧರ್ಮಾತ್ಮಾ ಯತ್ರ ವರ್ತತೇ ।
ನಾಸ್ತಿ ವ್ಯಾಧಿಭಯಂ ತತ್ರ ನ ಚಾವೃಷ್ಟಿಭಯಂ ತಥಾ　|| ೧೦೩ ||

ಕದಾಚಿತ್ಕಾಶಿರಾಜಸ್ಯ ವಿಭೋಸ್ತು ದ್ವಿಜಸತ್ತಮಾಃ ।
ತ್ರೀಣಿ ವರ್ಷಾಣಿ ವಿಷಯೇ ನಾವರ್ಷತ್ಪಾಕಶಾಸನಃ　|| ೧೦೪ ||

---

೧೦೦. ವೃಷ್ಣಿಯ ಕನಿಷ್ಠ ಪುತ್ರನಾದ ಅನಮಿತ್ರನಿಂದ ಸತ್ಯವಂತನಾದ ಶಿನಿ ಎಂಬುವನು ಜನಿಸಿದನು. ಸತ್ಯಸಂಪನ್ನನಾದ ಸತ್ಯಕನೆಂಬುವನು ಶಿನಿಯ ಪುತ್ರನಾಗಿ ಹುಟ್ಟಿದನು.

೧೦೧. ಸತ್ಯಕನಿಗೆ ಯುಯುಧಾನ ಎಂಬ ಪುತ್ರನೂ ಅವನಿಗೆ ಭೂತಿ ಎಂಬ ಪುತ್ರನೂ ಹುಟ್ಟಿದರು. ಭೂತಿಗೆ ಪುತ್ರನಾಗಿ ಹುಟ್ಟಿದ ಯುಗಂಧರ ಎಂಬುವನು ಭೌತ್ಯ ಎಂದು ಕರೆಯಲ್ಪಟ್ಟಿರುವನು.

೧೦೨. ಮಾಡೀ ಎಂಬುವಳ ಪುತ್ರನಾದ ಯುಧಾಜಿತನಿಗೆ ವೃಷ್ಣಿ ಎಂಬ ಪುತ್ರನು ಹುಟ್ಟಿದನು, ವೃಷ್ಣಿಗೆ ಶ್ವಫಲ್ಕ, ಚಿತ್ರಕ ಎಂಬ ಇಬ್ಬರು ಪುತ್ರರು ಜನಿಸಿದರು

೧೦೩. ಧರ್ಮಾತ್ಮನಾದ ಶ್ವಫಲ್ಕನು ಯಾವ ದೇಶದಲ್ಲಿ ಮಹಾರಾಜನಾಗಿ ಆಳುವನೋ ಅಲ್ಲಿ ರೋಗದ ಭಯವಾಗಲೀ ಅನಾವೃಷ್ಟಿಯ ಭೀತಿಯಾಗಲೀ ಉಂಟಾಗುವುದಿಲ್ಲ.

೧೦೪. ಬ್ರಾಹ್ಮಣೋತ್ತಮರೇ! ಒಂದು ಸಮಯದಲ್ಲಿ ಪ್ರಭುವಾದ ಕಾಶಿರಾಜನ ರಾಜ್ಯದಲ್ಲಿ ಮೂರುವರ್ಷಗಳ ವರೆಗೆ ಪಾಕಾಸುರನನ್ನು ಕೊಂದ ಇಂದ್ರನು ಮಳೆಯನ್ನು ಸುರಿಸಲಿಲ್ಲ.

ಸ ತತ್ರ ವಾಸಯಾಮಾಸ ಶ್ವಫಲ್ಕಂ ಪರಮಾರ್ಚಿತಮ್ ।
ಶ್ವಫಲ್ಕಪರಿವಾಸೇನ ಪ್ರಾವರ್ಷತ್ಪಾಕಶಾಸನಃ ॥ ೧೦೫ ॥

ಶ್ವಫಲ್ಕಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ ।
ಗಾಂದಿನೀಂ ನಾಮ ಗಾಂ ಸಾ ಹಿ ದದೌ ವಿಪ್ರಾಯ ನಿತ್ಯಶಃ ॥ ೧೦೬ ॥

ಸಾ ಮಾತುರುದರಸ್ಥಾ ವೈ ಬಹೂನ್ ವರ್ಷಶತಾನ್ ಕಿಲ ।
ನಿವಸಂತೀ ನ ವೈ ಜಜ್ಞೇ ಗರ್ಭಸ್ಥಾಂ ತಾಂ ಪಿತಾಬ್ರವೀತ್ ॥ ೧೦೭ ॥

ಜಾಯಸ್ವ ಶೀಘ್ರಂ ಭದ್ರಂ ತೇ ಕಿಮರ್ಥಂ ವಾಪಿ ತಿಷ್ಠತಿ ।
ಪ್ರೋವಾಚ ಚೈನಂ ಗರ್ಭಸ್ಥಾ ಸಾ ಕನ್ಯಾ ಗಾಂ ದಿನೇ ದಿನೇ ॥ ೧೦೮ ॥

ಯದಿ ದದ್ಯಾಸ್ತತೋ ಗರ್ಭಾದ್ಬಹಿಃ ಸ್ಯಾಂ ಹಾಯನೈಸ್ತ್ರಿಭಿಃ ।
ತಥೇತ್ಯುವಾಚ ತಾಂ ತಸ್ಯಾಃ ಪಿತಾ ಕಾಮಪೂರಯತ್ ॥ ೧೦೯ ॥

---

೧೦೫. ಆಗ ಆ ಕಾಶಿರಾಜನು ಶ್ವಫಲ್ಕ ರಾಜನನ್ನು ತನ್ನ ರಾಜ್ಯದಲ್ಲಿ ಉತ್ತಮವಾದ ಸತ್ಕಾರದಿಂದ ವಾಸಮಾಡಿಸಿದನು. ಆಗ ಶ್ವಫಲ್ಕನ ವಾಸದಿಂದ ಆ ರಾಜ್ಯದಲ್ಲಿ ಇಂದ್ರನು ಮಳೆಯನ್ನು ಕೊಟ್ಟನು.

೧೦೬. ಆ ಶ್ವಫಲ್ಕ ರಾಜನು ಕಾಶಿರಾಜನ ಮಗಳಾದ ಗಾಂದಿನೀ ಎಂಬಾಕೆಯನ್ನು ಪತ್ನಿಯನ್ನಾಗಿ ಹೊಂದಿದನು. ಅವಳು ಪ್ರತಿದಿನವೂ ವಿಪ್ರನಿಗೆ ಒಂದು ಗೋವನ್ನು ದಾನಮಾಡುತ್ತಿದ್ದಳು.

೧೦೭. ಅವಳು ತನ್ನ ಜನನಿಯ ಉದರದಲ್ಲಿ ಗರ್ಭರೂಪದಿಂದ ಅನೇಕ ನೂರು ಸಂಖ್ಯೆಯ ವರ್ಷಗಳವರೆಗೆ ವಾಸಮಾಡಿದ್ದರೂ ಜನ್ಮವನ್ನು ಎತ್ತಲಿಲ್ಲ. ಆಗ ತಂದೆಯು ಗರ್ಭದಲ್ಲಿರುವವಳನ್ನು ಕುರಿತು ಹೇಳಿದನು.

೧೦೮. ಪುತ್ರಿಯೇ ! ಶೀಘ್ರವಾಗಿ ಜನಿಸು. ನಿನಗೆ ಕಲ್ಯಾಣವಾಗಲಿ, ಏಕೆ ಉದರದಲ್ಲಿ ನಿಂತಿದ್ದೀ ? ಇದನ್ನು ಕೇಳಿ ಗರ್ಭದಲ್ಲಿದ್ದ ಕನ್ಯೆಯು ತನ್ನ ತಂದೆಯನ್ನು ಕುರಿತು ಈ ರೀತಿಯಾಗಿ ಹೇಳಿದಳು.

೧೦೯. ಜನಕನೇ ! ನೀನು ಪ್ರತಿದಿನವೂ ಒಂದೊಂದು ಗೋವನ್ನು ದಾನ ಮಾಡುವುದಾದರೆ ಮೂರು ವರ್ಷಗಳಲ್ಲಿ ಗರ್ಭದಿಂದ ಹೊರಗೆ ಜನಿಸುವೆನು ತಂದೆಯು ಇದನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿದನು. ಮತ್ತು ಅವಳ ಇಷ್ಟವನ್ನು ಪೂರ್ತಿಗೊಳಿಸಿದನು.

ದಾತಾ ಯಜ್ವಾ ಚ ಶೂರಶ್ಚ ಶ್ರುತವಾನತಿಥಿಪ್ರಿಯಃ ।
ತಸ್ಯಾಃ ಪುತ್ರಃ ಸ್ಮೃತೋಽಕ್ರೂರಃ ಶ್ವಾಫಲ್ಕೋ ಭೂರಿದಕ್ಷಿಣಃ॥ ೧೧೦॥

ಉಪಮಂಗುಸ್ತಥಾ ಮಂಗುರ್ಮೃದುರಶ್ಚಾರಿಮೇಜಯಃ ।
ಗಿರಿರಕ್ಷಸ್ತತೋ ಯಕ್ಷಃ ಶತ್ರುಘ್ನೋಽಥಾರಿಮರ್ದನಃ ॥ ೧೧೧ ॥

ಧರ್ಮವೃದ್ಧಃ ಸುಕರ್ಮಾ ಚ ಗಂಧಮಾದಸ್ತಥಾಪರಃ ।
ಆವಾಹಪ್ರತಿವಾಹೌ ಚ ವಸುದೇವಾ ವರಾಂಗನಾ ॥ ೧೧೨ ॥

ಅಕ್ರೂರಾದೌಗ್ರ್ಯಸೇನ್ಯಾಂ ತು ಸುತೌ ದ್ವೌ ಕುಲನಂದಿನೌ ।
ದೇವವಾನುಪದೇವಶ್ಚ ಜಜ್ಞಾತೇ ದೇವಸನ್ನಿಭೌ ॥ ೧೧೩ ॥

ಚಿತ್ರಕಸ್ಯಾಭವನ್ಪುತ್ರಾಃ ಪೃಥುರ್ವಿಪೃಥುರೇವ ಚ ।
ಅಶ್ವಗ್ರೀವೋಽಶ್ವವಾಹಶ್ಚ ಸುಪಾರ್ಶ್ವಕಗವೇಷಣೌ ॥ ೧೧೪ ॥

---

೧೧೦. ಆ ಶ್ವಫಲ್ಕನಿಂದ ಗಾಂದಿನಿಯಲ್ಲಿ ಹುಟ್ಟಿದ ಅಕ್ರೂರನು ದಾನಶೀಲ, ಯಜ್ಞಪರ. ಶೂರ, ಅಧ್ಯಯನ ಸಂಪನ್ನ, ಅತಿಥಿಗಳಲ್ಲಿ ಪ್ರೇಮಿ ಮತ್ತು ಹೆಚ್ಚಾದ ದಕ್ಷಿಣಾದಾನಮಾಡುವ ಶೀಲವುಳ್ಳವನೆಂದು ಸ್ಮರಿಸಲ್ಪಟ್ಟಿರುವನು.

೧೧೧. ಮತ್ತು ಗಾಂದಿನಿಯಲ್ಲಿ ಉಪಮಂಗು, ಮಂಗು ಮೃದುರ, ಅರಿಮೇಜಯ, ಗಿರಿರಕ್ಷ, ಯಕ್ಷ, ಶತ್ರುಘ್ನ ಮತ್ತು ಅರಿಮರ್ದನ ಎಂಬ ಅನೇಕ ಪುತ್ರರು ಹುಟ್ಟಿರುವರು.

೧೧೨. ಧರ್ಮವೃದ್ಧ, ಸುಕರ್ಮಾ, ಗಂಧಮಾದ, ಆವಾಹ ಮತ್ತು ಪ್ರತಿವಾಹ, ಎಂಬ ಪುತ್ರರೂ ವಸುದೇವಾ ಎಂಬ ವರಾಂಗನೆಯೂ ಆ ಪುತ್ರಶ್ರೇಣಿಯಲ್ಲಿ ಜನಿಸಿರುವರು.

೧೧೩. ಉಗ್ರಸೇನನ ಪುತ್ರಿಯಾದ ಪತ್ನಿಯಲ್ಲಿ ಅಕ್ರೂರನಿಂದ ವಂಶವನ್ನು ಆನಂದಪಡಿಸುವವರೂ ದೇವತೆಗಳಿಗೆ ತುಲ್ಯರೂ ಆದ ದೇವವಾನ್, ಉಪದೇವ ಎಂಬ ಇಬ್ಬರು ಪುತ್ರರು ಜನಿಸಿದರು

೧೧೪. ಚಿತ್ರಕನಿಗೆ ಪೃಥು, ವಿಪೃಥು, ಅಶ್ವಗ್ರೀವ, ಅಶ್ವವಾಹ, ಸುಪಾರ್ಶ್ವಕ ಮತ್ತು ಗವೇಷಣ ಎಂಬ ಅನೇಕ ಸುತರು ಜನ್ಮವೆತ್ತಿರುವರು.

ಅರಿಷ್ಟನೇಮಿ"ಶ್ಚಾಸ್ಯಃ ಸುವರ್ಮಾ ಮರ್ಮಭೃತ್ತಥಾ ।
ಅಭೂಮಿರ್ಬಹುಭೂಮಿಶ್ಚ ಶ್ರವಿಷ್ಠಾಶ್ರವಣೇ ಸ್ತ್ರಿಯೌ ॥ ೧೧೫ ॥

ಸತ್ಯಕಾತ್ ಕಾಶಿದುಹಿತಾ ಲೇಭೇ ಯಾ ಚತುರಃ ಸುತಾನ್ ।
ಕುಕುರಂ ಭಜಮಾನಂ ಚ ಶುಚಿಂ ಕಂಬಲಬರ್ಹಿಷಮ್ ॥ ೧೧೬ ॥

ಕುಕುರಸ್ಯ ಸುತೋ ವೃಷ್ಣಿರ್ವೃಷ್ಣೇಸ್ತು ತನಯೋಽಭವತ್ ।
ಕಪೋತರೋಮಾ ತಸ್ಯಾಥ ವಿಲೋಮಾಭವದಾತ್ಮಜಃ ॥ ೧೧೭ ॥

ತಸ್ಯಾಸೀತ್ತುಂಬುರುಸಖಾ ವಿದ್ವಾನ್ ಪುತ್ರೋಽಂಧಕಃ ಕಿಲ ।
ಖ್ಯಾಯತೇ ಯಸ್ಯ ನಾಮಾನ್ಯಚ್ಚಂದನೋದಕದುಂದುಭಿಃ ॥ ೧೧೮ ॥

ತಸ್ಯಾಭಿಜಿತ್ತತಃ ಪುತ್ರ ಉತ್ಪನ್ನಸ್ತು ಪುನರ್ವಸುಃ ।
ಅಶ್ವಮೇಧಂ ತು ಪುತ್ರಾರ್ಥಮಾಜಹಾರ ನರೋತ್ತಮಃ ॥ ೧೧೯ ॥

---

೧೧೫ ಮತ್ತು ಅರಿಷ್ಟನೇಮಿ, ಅಶ್ವಾಸ್ಯ, ಸುವರ್ಮ, ಮರ್ಮ ಭೃತ, ಅಭೂಮಿ ಮತ್ತು ಬಹುಭೂಮಿ ಎಂಬ ಪುತ್ರರೂ ಶ್ರವಿಷ್ಠಾ, ಶ್ರವಣಾ ಎಂಬ ಕನ್ಯೆಯರೂ ಚಿತ್ರಕನ ಸಂತತಿಯಲ್ಲಿ ಹುಟ್ಟಿರುವರು.

೧೧೬. ಸತ್ಯಕನ ಪತ್ನಿಯಾದ ಕಾಶಿರಾಜನ ಮಗಳು ಕುಕುರ, ಭಜಮಾನ ಶುಚಿ, ಕಂಬಲಬರ್ಹಿ, ಎಂಬ ನಾಲ್ಕುಮಂದಿ ಪುತ್ರರನ್ನು ಹೊಂದಿದಳು.

೧೧೭. ಕುಕುರನಿಗೆ ವೃಷ್ಣಿ ಎಂಬುವನೂ ವೃಷ್ಣಿಗೆ ಕಪೋತರೋಮಾ ಎಂಬುವನೂ ಮತ್ತು ಕಪೋತರೋಮನಿಗೆ ವಿಲೋಮ ಎಂಬುವನೂ ಪುತ್ರರಾಗಿ ಜನಿಸಿದರು,

೧೧೮. ವಿಲೋಮನಿಗೆ ತುಂಬುರು ಎಂಬ ಗಂಧರ್ವನಿಗೆ ಮಿತ್ರನೂ ಜ್ಞಾನಿಯೂ ಆದ ಅಂಧಕನೆಂಬ ಪುತ್ರನಿದ್ದನು. ಅವನಿಗೆ ಚಂದನೋದಕ ದುಂದುಭಿ ಎಂಬ ಮತ್ತೊಂದು ಪರ್ಯಾಯನಾಮವಿತ್ತು.

೧೧೯. ಅವನಿಗೆ ಅಭಿಜಿತ ಎಂಬ ಪುತ್ರನಿದ್ದನು. ಅವನ ಅನಂತರದಲ್ಲಿ ಪುನರ್ವಸು ವೆಂಬ ಪುತ್ರನು ಹುಟ್ಟಿದನು. ಆ ರಾಜಶ್ರೇಷ್ಠನು ಸಂತತಿಗೋಸ್ಕರ ಒಂದು ಅಶ್ವಮೇಧ ಯಾಗವನ್ನು ಆಚರಿಸಿದನು.

ತಸ್ಯ ಮಧ್ಯೇತಿರಾತ್ರಸ್ಯ ಸದೋಮಧ್ಯಾತ್ಸಮುತ್ಥಿತಃ ।
ತತಸ್ತು ವಿದ್ವಾನ್ ಧರ್ಮಜ್ಞೋ ದಾತಾ ಯಜ್ವಾ ಪುನರ್ವಸುಃ॥ ೧೨೦ ॥

ತಸ್ಯಾಥ ಪುತ್ರಮಿಥುನಂ ಬಭೂವಾಭಿಜಿತಃ ಕಿಲ ।
ಆಹುಕಶ್ಚಾಹುಕೀ ಚೈವ ಖ್ಯಾತೌ ಮತಿಮತಾಂ ವರೌ ॥ ೧೨೧ ॥

ಇಮಾಂಶ್ಚೋದಾಹರಂತ್ಯತ್ರ ಶ್ಲೋಕಾನ್ ಪ್ರತಿ ತಮಾಹುಕಮ್ ।
ಸೋಪಾಸಾಂಗಾನುಕರ್ಷಾಣಾಂ ಸಧ್ವಜಾಸಾಂ ವರೂಥಿನಾಮ್ ॥ ೧೨೨॥

ರಥಾನಾಂ ಮೇಘಘೋಷಾಣಾಂ ಸಹಸ್ರಾಣಿ ದಶೈವ ತು ।
ನಾಸತ್ಯವಾದೀ ಚಾಸೀತ್ತು ನಾಯಜ್ಞೋ ನಾಸಹಸ್ರದಃ ॥ ೧೨೩ ॥

ನಾಶುಚಿರ್ನಾಪ್ಯಧರ್ಮಾತ್ಮಾ ನಾವಿದ್ವಾನ್ನ ಕೃಶೋಽಭವತ್ ।
ಆದ್ರ್ಯಕಸ್ಯ ಧೃತಿಃ ಪುತ್ರ ಇತ್ಯೇವಮನುಶುಶ್ರುಮ ॥ ೧೨೪ ॥

---

೧೨೦. ಆ ಅಶ್ವಮೇಧಯಾಗದ ಮಧ್ಯದಲ್ಲಿ ಅತಿರಾತ್ರವೆಂಬ ಸೋಮ ಯಾಗದ ಸದೋಮಂಟಪ ಮಧ್ಯದಿಂದ ಜ್ಞಾನಿ, ಧರ್ಮಜ್ಞ, ದಾನಶೀಲ ಮತ್ತು ಯಜ್ಞಾನುಷ್ಠಾನವಂತನಾಗಿರುವ ಪುನರ್ವಸು ಎಂಬ ಪುತ್ರನು ಹುಟ್ಟಿದನು.

೧೨೧. ಆ ಅಭಿಜಿತ್ ಎಂಬುವನಿಗೆ ಜ್ಞಾನವಂತರಲ್ಲಿ ಶ್ರೇಷ್ಠನೆಂದೆನಿಸಿದ ಆಹುಕ, ಆಹುಕೀ ಎಂಬ ಪುತ್ರಯುಗ್ಮವು ಹುಟ್ಟಿತು.

೧೨೨. ಆ ಆಹುಕನನ್ನು ಕುರಿತು ಪುರಾಣಜ್ಞರು ಈ ಪ್ರಶಂಸಾ ಪದ್ಯಗಳನ್ನು ಪಠಿಸುತ್ತಾರೆ. ಈ ಆಹುಕ ರಾಜನು ಧ್ವಜ, ವರೂಥಾಸನ ಉತ್ತಮವಾದ ಚಕ್ರ ಈ ಉಪಕರಣಗಳಿಂದ ಕೂಡಿದ ಅನೇಕ ರಥವೆಂಬ ಸೇನಾಂಗಕ್ಕೆ ಪ್ರಭುವಾಗಿ ಇರುವನು.

೧೨೩. ಮತ್ತು ಮೇಘದಂತೆ ಗಂಭೀರವಾಗಿ ಧ್ವನಿಮಾಡುವ ಹತ್ತು ಸಹಸ್ರ ರಥಗಳ ಪ್ರಭುವೂ ಅನೃತವಾದವನ್ನು ತ್ಯಜಿಸಿದವನೂ, ಯಜ್ಞಾಚರಣೆಯನ್ನು ಬಿಡದಿರುವವನೂ ಮತ್ತು ಸಹಸ್ರಕ್ಕಿಂತ ಅಲ್ಪದಕ್ಷಿಣೆಯನ್ನು ಕೊಡದಿರುವವನೂ ಆದ ಮಹಾತ್ಮನಾಗಿರುವನು.

೧೨೪, ಮತ್ತು ಶುಚಿಯೂ, ಧರ್ಮಾತ್ಮನೂ, ಜ್ಞಾನಿಯೂ ಮತ್ತು ಪರಿಪೂರ್ಣನೂ ಆಗಿ ಯಾವಾಗಲೂ ರಾಜಿಸಿದನು. ಆ ಆಹುಕನಿಗೆ ಧೃತಿ ಎಂಬ ಪುತ್ರನಿದ್ದನೆಂದು ವಂಶಾನುಕ್ರಮದಿಂದ ಕೇಳುತ್ತೇವೆ.

ಸ ತೇನ ಪರಿವಾರೇಣ ಕಿಶೋರಪ್ರತಿಮಾನ್ ಹಯಾನ್ ।
ಅಶೀತಿಮುಶ್ವನಿಯುತಾನ್ಯಾಹುಕೋಽಪ್ರತಿಮೋ ವ್ರಜನ್ ॥ ೧೨೫ ॥

ಪೂರ್ವಸ್ಯಾಂ ದಿಶಿ ನಾಗಾನಾಂ ಭೋಜಸ್ಯ ತ್ವತಿಭಾವಯನ್ ।
ರೂಪ್ಯಕಾಂಚನಕಕ್ಷ್ಯಾಣಾಂ ಸಹಸ್ರಾಣ್ಯೇಕವಿಂಶತಿಃ ॥ ೧೨೬ ॥

ತಾವಂತ್ಯೇವ ಸಹಸ್ರಾಣಿ ಉತ್ತರಸ್ಯಾಂ ತಥಾ ದಿಶಿ ।
ಭೂಮಿಪಾಲಸ್ಯ ಭೋಜಸ್ಯ ಉತ್ತಿಷ್ಠೇತ್ಕಿಂಕಿಣೀ ಕಿಲ ॥ ೧೨೭ ॥

ಆಹುಕಶ್ಚಾಪ್ಯವಂತೀಷು ಸ್ವಸಾರಂ ತ್ವಾಹುಕೀಂ ದದೌ ।
ಆಹುಕಾತ್ಕಾಶ್ಯದುಹಿತುರ್ದ್ವೌ ಪುತ್ರೌ ಸಂಬಭೂವತುಃ ॥ ೧೨೮ ॥

ದೇವಕಶ್ಚೋಗ್ರಸೇನಶ್ಚ ದೇವಗರ್ಭಸಮಾವುಭೌ
ದೇವಕಸ್ಯ ಸುತಾ ವೀರಾ ಜಜ್ಞಿರೇ ತ್ರಿದಶೋಪಮಾಃ ॥ ೧೨೯ ॥

---

೧೨೫. ಆಹುಕನು ಶಿಶುವಂತಿರುವ ಎಂಭತ್ತು ನಿಯುತ ಸಂಖ್ಯೆಯ ಅಶ್ವ ಸೈನ್ಯವನ್ನು ಮಹಾ ಪರಿವಾರದಿಂದ ಕೂಡಿ ನಿರುಪಮವಾದ ಕೌಶಲದಿಂದ ನಡೆಸುತ್ತಿದ್ದನು.

೧೨೬. ಹಾಗೆ ಪೂರ್ವದಿಕ್ಕಿನಲ್ಲಿ ಭೋಜರಾಜನನ್ನು ತಿರಸ್ಕರಿಸಿ ರಜತ ಸುವರ್ಣ ಬಂಧನಪಾಶಗಳಿಂದ ಕೂಡಿದ ಇಪ್ಪತ್ತೊಂದುಸಹಸ್ರ ಗಜಗಳ ಸೈನ್ಯವನ್ನು ನಡೆಸಿದನು.

೧೨೭. ಹಾಗೆ ಮತ್ತೆ ಇಪ್ಪತ್ತೊಂದು ಸಹಸ್ರಗಜಸೈನ್ಯವನ್ನು ಉತ್ತರದಿಕ್ಕಿನಲ್ಲಿ ತೆಗೆದುಕೊಂಡು ಹೋದನು. ಆಗ ಭೋಜರಾಜನಿಗೆ ಒಂದು ಸಣ್ಣಗಂಟೆಯ ಸಣ್ಣ ನಾದವು ಆವಿರ್ಭವಿಸಿತು.

೧೨೮. ಆ ಆಹುಕನು ಅವಂತಿದೇಶದಲ್ಲಿ ತನ್ನ ತಂಗಿಯಾದ ಆಹುಕಿಯನ್ನು ಕೊಟ್ಟನು ಕಾಶಿರಾಜನ ಪುತ್ರಿಯಾದ ಆಹುಕಿಯಲ್ಲಿ ಇಬ್ಬರು ಪುತ್ರರು ಜನಿಸಿದರು.

೧೨೯. ಅವರು ದೇವಕ ಮತ್ತು ಉಗ್ರಸೇನ ಎಂಬ ನಾಮಾಂಕಿತರೂ ಮತ್ತು ದೇವತೆಗಳ ಗರ್ಭಕ್ಕೆ ಪ್ರಿಯವಾದ ಮಹಿಮೆಯುಳ್ಳವರೂ ಆಗಿದ್ದರು. ದೇವಕನಿಗೆ ದೇವತೆಗಳಿಗೆ ಸಮಾನರಾದ ಅನೇಕಮಂದಿ ವೀರ ಪುತ್ರರು ಜನಿಸಿದರು.

ದೇವವಾನುಪದೇವಶ್ಚ ಸುದೇವೋ ದೇವರಕ್ಷಿತಃ ।
ತೇಷಾಂ ಸ್ವಸಾರಃ ಸಪ್ತಾಸನ್ ವಾಸುದೇವಾಯ ತಾ ದದೌ ॥ ೧೩೦ ॥

ಧೃತದೇವೋಪದೇವಾ ಚ ತಥಾನ್ಯಾ ದೇವರಕ್ಷಿತಾ ।
ಶ್ರೀದೇವಾ ಶಾಂತಿದೇವಾ ಚ ಸಹದೇವಾ ತಥಾಪರಾ ॥ ೧೩೧ ॥

ಸಪ್ತಮೀ ದೇವಕೀ ತಾಸಾಂ ಸಾನುಜಾ ಚಾರುದರ್ಶನಾ ।
ನವೋಗ್ರಸೇನಸ್ಯ ಸುತಾಃ ಕಂಸಸ್ತೇಷಾಂ ತು ಪೂರ್ವಜಃ ॥ ೧೩೨ ॥

ನ್ಯಗ್ರೋಧಶ್ಚ ಸುನಾಮಾ ಚ ಕಂಕಶಂಕುಸುಭೂಮಯಃ ।
ಸುತನೂ ರಾಷ್ಟ್ರಪಾಲಶ್ಚ ಯುದ್ಧತುಷ್ಟಶ್ಚ ತುಷ್ಟಿಮಾನ್ ॥ ೧೩೩ ॥

ತೇಷಾಂ ಸ್ವಸಾರಃ ಪಂಚೈವ ಕಂಸಾ ಕಂಸವತೀ ತಥಾ ।
ಸುತನೂ ರಾಷ್ಟ್ರಪಾಲೀ ಚ ಕಂಕಾಚೈವ ವರಾಂಗನಾ ॥ ೧೩೪ ॥

---

೧೩೦. ಅವರು ದೇವವಾನ್, ಉಪದೇವ, ಸುದೇವ ಮತ್ತು ದೇವರಕ್ಷಿತ ಎಂಬ ನಾಮಾಂಕಿತರಾಗಿದ್ದರು. ಅವರಿಗೆ ಏಳು ಮಂದಿ ಸಹೋದರಿಯರಿದ್ದರು. ಅವರನ್ನು ವಸುದೇವನಿಗೆ ಪಾಣಿಗ್ರಹಣಮಾಡಿಕೊಟ್ಟನು.

೧೩೧. ಅವರಲ್ಲಿ ಆರು ಮಂದಿ ಕನ್ಯೆಯರು ಧೃತದೇವಾ, ಉಪದೇವಾ, ದೇವರಕ್ಷಿತಾ, ಶ್ರೀದೇವಾ, ಶಾಂತಿದೇವಾ ಮತ್ತು ಸಹದೇವಾ ಎಂಬ ಮಂಗಳ ನಾಮಾಂಕಿತರಾಗಿದ್ದರು.

೧೩೨. ಅವರಲ್ಲಿ ಸುಂದರವಾದ ದರ್ಶನವುಳ್ಳ ದೇವಕಿ ಎಂಬಾಕೆಯು ಏಳನೆಯವಳಾಗಿ ಅವಳು ಕಿರಿಯ ಭಗಿನಿಯಾಗಿದ್ದಳು. ಉಗ್ರಸೇನನಿಗೆ ಒಂಭತ್ತು ಮಂದಿ ಪುತ್ರರಿದ್ದರು. ಅವರಲ್ಲಿ ಕಂಸನು ಜ್ಯೇಷ್ಠ ಪುತ್ರನಾಗಿದ್ದನು.

೧೩೩. ಕಂಸನ ಸಹೋದರರಾಗಿ ನ್ಯಗ್ರೋಧ, ಸುನಾಮಾ, ಕಂಕ, ಶಂಕು, ಸುಭೂಮಿ, ಸುತನು, ರಾಷ್ಟ್ರಪಾಲ, ಮತ್ತು ರಣಗಳಲ್ಲಿ ಹೆಚ್ಚಾಗಿ ಪ್ರೀತಿಯಿರುವ ತುಷ್ಟಿಮಾನ್ ಎಂಬ ನಾಮಾಂಕಿತರು ಜನಿಸಿದರು.

೧೩೪. ಆ ಪುತ್ರರಿಗೆ ಕಂಸಾ, ಕಂಸವತೀ, ಸುತನು, ರಾಷ್ಟ್ರಪಾಲೀ, ಮತ್ತು ಉತ್ತಮಾಂಗನೆಯಾದ ಕಂಕಾ ಎಂಬ ಸಂಜ್ಞೆಗಳಿಂದ ಪ್ರಸಿದ್ಧರಾದ ಐದು ಮಂದಿ ಸಹೋದರಿಯರಿದ್ದರು.

14

ಉಗ್ರಸೇನೋ ಮಹಾಪತ್ಯೋ ವ್ಯಾಖ್ಯಾತಃ ಕುಕುರೋದ್ಭವಃ ।
ಕುಕುರಾಣಾಮಿಮಂ ವಂಶಂ ಧಾರಯನ್ನಮಿತೌಜಸಾಮ್ ॥ ೧೩೫ ॥

ಆತ್ಮನೋ ವಿಪುಲಂ ವಂಶಂ ಪ್ರಜಾವಾಂಶ್ಚ ಭವೇನ್ನರಃ ।
ಭಜಮಾನಸ್ಯ ಪುತ್ರಸ್ತು ರಥಿಮುಖ್ಯೋ ವಿದೂರಥಃ ॥ ೧೩೬ ॥

ರಾಜಾಧಿದೇವಃ ಶೂರಶ್ಚ ವಿದೂರಥಸುತೋಽಭವತ್ ।
ತಸ್ಯ ಶೂರಸ್ಯ ತು ಸುತಾ ಜಜ್ಞಿರೇ ಬಲವತ್ತರಾಃ ॥ ೧೩೭ ॥

ವಾತಶ್ಚೈವ ನಿವಾತಶ್ಚ ಶೋಣಿತಃ ಶ್ವೇತವಾಹನಃ ।
ಶಮೀ ಚ ಗದವರ್ಮಾ ಚ ನಿದಾಂತಃ ಖಲು ಶತ್ರುಜಿತ್ ॥ ೧೩೮ ॥

ಶಮೀಪುತ್ರಃ ಪ್ರತಿಕ್ಷತ್ರಃ ಪ್ರತಿಕ್ಷತ್ರಸ್ಯ ಚಾತ್ಮಜಃ ।
ಸ್ವಯಂಭೋಜಃ ಸ್ವಯಂಭೋಜಾದ್ಧೃದಿಕಃ ಸಂಬಭೂವ ಹ ॥೧೩೯॥

---

೧೩೫. ಕುಕುರ ಸಂತತಿಯಲ್ಲಿ ಹುಟ್ಟಿದ ಉಗ್ರಸೇನನ ವಂಶಾವಳಿಯು ವ್ಯಾಖ್ಯಾನಮಾಡಲ್ಪಟ್ಟಿತು. ಇಲ್ಲಿ ವರ್ಣಿಸಿರುವ, ಅಪಾರವಾದ ತೇಜಸ್ಸನ್ನು ಧರಿಸಿರುವ ಕುಕುರರಾಜರ ವಂಶವನ್ನು ಗ್ರಹಣಮಾಡಬೇಕು.

೧೩೬. ಈ ಪವಿತ್ರವಂಶವನ್ನು ಶ್ರವಣ–ಧಾರಣಮಾಡಿದ ಮಾನವನು ಪ್ರಜಾವಂತನಾಗಿ ತಾನು ವಿಸ್ತಾರವಾದ ವಂಶವನ್ನು ಹೊಂದುವನು. ಭಜಮಾನನಿಗೆ ರಥಿಕರಲ್ಲಿ ಮುಖ್ಯನಾಗಿರುವ ವಿದೂರಥ ಎಂಬ ಪುತ್ರನಿದ್ದನು.

೧೩೭. ವಿದೂರಥನಿಗೆ ರಾಜಾಧಿರಾಜನಾದ, ಶೂರ ಎಂಬ ನಾಮಾಂಕಿತನಾದ ಪುತ್ರನಿದ್ದನು. ಆ ಶೂರನೆಂಬುವನಿಗೆ ಮಹಾಬಲಸಂಪನ್ನರಾದ ಅನೇಕ ಪುತ್ರರು ಹುಟ್ಟಿದರು.

೧೩೮. ಆ ಪುತ್ರರೆಲ್ಲರು ವಾತ, ನಿವಾತ, ಶೋಣಿತ, ಶ್ವೇತವಾಹನ, ಶಮೀ, ಗದವರ್ಮಾ, ನಿದಾಂತ ಮತ್ತು ಶತ್ರುಜಿತ್ ಎಂಬ ನಾಮಾಂಕನವನ್ನು ಹೊಂದಿದ್ದರು.

೧೩೯. ಇವರಲ್ಲಿ ಶಮೀ ಎಂಬುವನಿಗೆ ಪ್ರತಿಕ್ಷತ್ರ ಎಂಬ ಪುತ್ರನಿದ್ದನು. ಪ್ರತಿಕ್ಷತ್ರನಿಗೆ ಸ್ವಯಂಭೋಜ ಎಂಬ ಪುತ್ರನು ಜನಿಸಿದನು, ಮತ್ತು ಸ್ವಯಂಭೋಜನಿಂದ ಹೃದಿಕ ಎಂಬುವನು ಪುತ್ರನಾಗಿ ಜನಿಸಿದನು.

ಹೃದಿಕಸ್ಯ ಸುತಾಸ್ತ್ವಾಸನ್ ದಶ ಭೀಮಪರಾಕ್ರಮಾಃ ।
ಕೃತವರ್ಮಾಗ್ರಜಸ್ತೇಷಾಂ ಶತಧನ್ವಾ ತು ಮಧ್ಯಮಃ ॥ ೧೪೦ ॥

ದೇವಬಾಹುಃ ಸುಬಾಹುಶ್ಚ ಭಿಷಕ್ ಶ್ವೇತರಥಶ್ಚ ಯಃ ।
ಸುದಾಂತಶ್ಚಾಧಿದಾಂತಶ್ಚ ಕನಕಃ ಕನಕೋದ್ಭವಃ ॥ ೧೪೧ ॥

ದೇವಬಾಹೋಃ ಸುತೋ ವಿದ್ವಾಞ್ಜಜ್ಞೇ ಕಂಬಲಬರ್ಹಿಷಃ ।
ಅಸಮೌಜಾಃ ಸುತಸ್ತಸ್ಯ ಸುಸಮೌಜಾಶ್ಚ ವಿಶ್ರುತಃ ॥ ೧೪೨ ॥

ಅಜಾತಪುತ್ರಾಯ ತತಃ ಪ್ರಪದಾವಸಮೌಜಸೇ ।
ಸುಚಂದ್ರಂ ವಸುರೂಪಂ ಚ ಕೃಷ್ಣ ಇತ್ಯಂಧಕಾಃ ಸ್ಮೃತಾಃ ॥ ೧೪೩ ॥

ಅಂಧಕಾನಾಮಿಮಂ ವಂಶಂ ಕೀರ್ತಯೇದ್ಯಸ್ತು ನಿತ್ಯಶಃ ।
ಆತ್ಮನೋ ವಿಪುಲಂ ವಂಶಂ ಲಭತೇ ನಾತ್ರ ಸಂಶಯಃ ॥ ೧೪೪ ॥

---

೧೪೦. ಹೃದಿಕ ಎಂಬುವನಿಗೆ ಭಯಂಕರವಾದ ಪ್ರತಾಪವುಳ್ಳ ಹತ್ತು ಮಂದಿ ಪುತ್ರರು ಹುಟ್ಟಿದ್ದರು, ಆ ಪುತ್ರರಲ್ಲಿ ಕೃತವರ್ಮಾ ಎಂಬುವನು ಅಗ್ರಜನೂ ಶತಧನ್ವಾ ಎಂಬುವನು ಮಧ್ಯಮ ಪುತ್ರನೂ ಆಗಿದ್ದರು.

೧೪೧. ಹಿಂದೆ ಹೇಳಿದ ಹತ್ತು ಮಂದಿ ಪುತ್ರರಲ್ಲಿ ಕೃತವರ್ಮಾ, ಶತಧನ್ವಾ, ಎಂಬುವ ಜ್ಯೇಷ್ಠಪುತ್ರರಲ್ಲದೆ ದೇವಬಾಹು, ಸುಬಾಹು, ಭಿಷಕ್, ಶ್ವೇತರಥ, ಸುದಾಂತ, ಕನಕ ಮತ್ತು ಕನಕೋದ್ಭವ ಎಂಬ ಎಂಟು ಮಂದಿ ಪುತ್ರರಿದ್ದರು.

೧೪೨. ದೇವಬಾಹುವಿಗೆ ಜ್ಞಾನವಂತನಾದ ಕಂಬಲಬರ್ಹಿಷ ಎಂಬ ಸುತನು ಹುಟ್ಟಿದನು, ಕಂಬಲಬರ್ಹಿಷನಿಗೆ ಅಸಮೌಜ, ಸುಸಮೌಜ ಎಂಬ ಪುತ್ರರು ಪ್ರಸಿದ್ಧರಾಗಿದ್ದರು.

೧೪೩. ಇವರಲ್ಲಿ ಪುತ್ರಸಂತತಿಯು ಹುಟ್ಟದೆ ಇರುವ ಅಸಮೌಜನಿಗೆ ಕೃಷ್ಣನು ಸುಚಂದ್ರ, ವಸುರೂಪ ಎಂಬ ಪುತ್ರರನ್ನು ಕೊಟ್ಟನು, ಈ ರೀತಿಯಾಗಿ ಅಂಧಕ ಎಂಬ ಗಣದ ಪ್ರಜೆಗಳು ಸ್ಮರಿಸಲ್ಪಟ್ಟಿರುವರು.

೧೪೪. ಯಾವ ಮಾನವನು ಅಂಧಕ ಪ್ರಜೆಗಳ ಈ ವಂಶಾವಳಿಯನ್ನು ಪ್ರತಿ ನಿತ್ಯದಲ್ಲಿ ಕೀರ್ತನ ಮಾಡುವನೊ, ಅವನು ವಿಸ್ತಾರವಾದ ವಂಶಸಮೃದ್ಧಿಯನ್ನು ಹೊಂದುವನು. ಈ ಅಂಶದಲ್ಲಿ ಸಂದೇಹವಿಲ್ಲ.

ಅಶ್ಮಕ್ಯಾಂ ಜನಯಾಮಾಸ ಶೂರಂ ವೈ ದೇವಮೀಢುಷಮ್ ।
ಮಾರಿಷ್ಯಾಂ ಜಜ್ಞಿರೇ ಶೂರಾದ್ಭೋಜಾಯಾಂ ಪುರುಷಾ ದಶ॥ ೧೪೫ ॥

ವಸುದೇವೋ ಮಹಾಬಾಹುಃ ಪೂರ್ವಮಾನಕದುಂದುಭಿಃ ।
ಜಜ್ಞೇ ತಸ್ಯ ಪ್ರಸೂತಸ್ಯ ದುಂದುಭಿಃ ಪ್ರಾಣದದ್ದಿವಿ ॥ ೧೪೬ ॥

ಆನಕಾನಾಂ ಚ ಸಂಹ್ರಾದಃ ಸುಮಹಾನಭವದ್ದಿವಿ ।
ಪಪಾತ ಪುಷ್ಪವರ್ಷಂ ಚ ಶೂರಸ್ಯ ಭವನೇ ಮಹತ್ ॥ ೧೪೭ ॥

ಮನುಷ್ಯಲೋಕೇ ಕೃತ್ಸ್ನೇಽಪಿ ರೂಪೇ ನಾಸ್ತಿ ಸಮೋ ಭುವಿ ।
ಯಸ್ಯಾಸೀತ್ ಪುರುಷಾಗ್ರ್ಯಸ್ಯ ಕಾಂತಿಶ್ಚಂದ್ರಮಸೋ ಯಥಾ ॥೧೪೮॥

ದೇವಭಾಗಸ್ತತೋ ಜಜ್ಞೇ ತತೋ ದೇವಶ್ರವಾಃ ಪುನಃ ।
ಅನಾಧೃಷ್ಟಿರ್ವೃಕಶ್ಚೈವ ನಂದನಶ್ಚೈವ ಸೃಂಜಯಃ ॥ ೧೪೯ ॥

---

೧೪೫. ದೇವಮೀಢುಷ ಎಂಬುವನು ಅಶ್ಮಕಿ ಎಂಬ ತನ್ನ ಭಾರ್ಯೆಯಲ್ಲಿ ಶೂರ ಎಂಬ ಪುತ್ರನನ್ನು ಹೊಂದಿದನು. ಶೂರನಿಗೆ ಮಾರಿಷ ಪುತ್ರಿಯಾದ ಭೋಜಾ ಎಂಬ ತನ್ನ ಪತ್ನಿಯಲ್ಲಿ ಹತ್ತು ಮಂದಿ ಪುತ್ರರು ಜನಿಸಿದರು.

೧೪೬. ಇವರಲ್ಲಿ ಮಹಾ ಬಾಹುಬಲ ಸಂಪನ್ನನಾದ ವಸುದೇವ ಅಥವಾ ಆನಕ ದುಂದುಭಿ ಎಂಬುವನು ಅಗ್ರಜನಾದನು. ಅವನು ಜನ್ಮವೆತ್ತಿದ ಕೂಡಲೆ ಸ್ವರ್ಗದಲ್ಲಿ ದುಂದುಭಿಯು ಶಬ್ದ ಮಾಡಿತು.

೧೪೭. ಹಾಗು ಸ್ವರ್ಗದಲ್ಲಿ ಪಟಹವಾದ್ಯಗಳ ಧ್ವನಿಯು ಮಹತ್ತರವಾಗಿ ಉಂಟಾಯಿತು. ಆಗ ಶೂರನ ಮನೆಯಲ್ಲಿ ಅತಿಶಯವಾದ ಪುಷ್ಪವೃಷ್ಟಿಯು ಸ್ವರ್ಗದಿಂದ ಬಿದ್ದಿತು.

೧೪೮. ಭೂಮಿಯಲ್ಲಿ ಸಮಗ್ರ ಮನುಷ್ಯರ ವರ್ಗದಲ್ಲಿಯೂ ರೂಪದಲ್ಲಿ ವಸುದೇವನಿಗೆ ತುಲ್ಯನಾದವನು ಮತ್ತೊಬ್ಬನು ಇರಲಿಲ್ಲ. ರತ್ನಪ್ರಾಯನಾದ ವಸುದೇವನಿಗೆ ಚಂದ್ರನಂತೆ ಕಾಂತಿಯು ಹೊಳೆಯುತ್ತಿತ್ತು.

೧೪೯. ವಸುದೇವನು ಜನಿಸಿದ ತರುವಾಯ ದೇವಭಾಗ, ದೇವಶ್ರವ, ಅನಾಧೃಷ್ಟಿ, ವೃಕ, ನಂದನ, ಮತ್ತು ಸೃಂಜಯ ಎಂಬ ಪುತ್ರರು ಕ್ರಮವಾಗಿ ಅವನಿಗೆ ಅನುಜರಾಗಿ ಜನಿಸಿದರು.

ಶ್ಯಾಮಃ ಶಮೀಕೋ ಗಂಡೂಷಃ ಸ್ವಸಾರಸ್ತು ವರಾಂಗನಾಃ ।
ಪೃಥಾ ಚ ಶ್ರುತದೇವಾ ಚ ಶ್ರುತಕೀರ್ತಿಃ ಶ್ರುತಶ್ರವಾಃ ॥ ೧೫೦ ॥

ರಾಜಾಧಿದೇವೀ ಚ ತಥಾ ಪಂಚೈತಾ ವೀರಮಾತರಃ ।
ಪೃಥಾಂ ದುಹಿತರಂ ಶೂರಃ ಕುಂತೀಭೋಜಾಯ ವೈ ದದೌ ॥ ೧೫೧ ॥

ತಸ್ಮಾತ್ ಸಾ ತು ಸ್ಮೃತಾ ಕುಂತೀ ಕುಂತಿಭೋಜಾತ್ಮಜಾ ಪೃಥಾ ।
ಕುರುವೀರಃ ಪಾಂಡುಮುಖ್ಯಸ್ತಸ್ಮಾದ್ಭಾರ್ಯಾಮವಿಂದತ ॥ ೧೫೨ ॥

ಪೃಥಾ ಜಜ್ಞೇ ತತಃ ಪುತ್ರಾಂಸ್ತ್ರೀನಗ್ನಿಸಮತೇಜಸಃ ।
ಲೋಕೇಽಪ್ರತಿರಥಾನ್ ವೀರಾಞ್ಛಕ್ರತುಲ್ಯಪರಾಕ್ರಮಾನ್ ॥ ೧೫೩ ॥

ಧರ್ಮಾದ್ಯುಧಿಷ್ಠಿರಂ ಪುತ್ರಂ ಮಾರುತಾಚ್ಚ ವೃಕೋದರಮ್ ।
ಇಂದ್ರಾದ್ಧನಂಜಯಂ ಚೈವ ಪೃಥಾ ಪುತ್ರಾನಜೀಜನತ್ ॥ ೧೫೪ ॥

---

೧೫೦. ಮತ್ತು ಶ್ಯಾಮ, ಶಮೀಕ, ಗಂಡೂಷ ಎಂಬುವರು ಸೇರಿ ಹತ್ತು ಮಂದಿಯಾಗಿದ್ದರು, ಅಲ್ಲದೆ ಉತ್ತಮ ವನಿತೆಯರಾದ ಭಗಿನಿಯರು ಇದ್ದರು. ಅವರಲ್ಲಿ ನಾಲ್ಕು ಮಂದಿಗೆ ಪೃಥಾ, ಶ್ರುತದೇವಾ, ಶ್ರುತಕೀರ್ತಿ ಮತ್ತು ಶ್ರುತಶ್ರವಾ ಎಂಬ ಹೆಸರುಗಳಿದ್ದುವು.

೧೫೧. ಐದನೆಯವಳು ರಾಜಾಧಿದೇವಿ ಎಂಬನಾಮಾಂಕಿತಳಾಗಿದ್ದಳು. ಹೀಗೆ ಐದು ಮಂದಿ ಸ್ತ್ರೀಯರು ವೀರಮಾತೆಯರಾಗಿದ್ದರು, ಇವರಲ್ಲಿ ಪೃಥಾ ಎಂಬ ಕನ್ಯೆಯನ್ನು ಶೂರನು ಕುಂತಿಭೋಜನಿಗೆ ಅಪತ್ಯರೂಪದಿಂದ ಕೊಟ್ಟನು.

೧೫೨. ಆದುದರಿಂದ ಪೃಥೆಯು ಕುಂತಿಭೋಜನ ಪುತ್ರಿಯಾಗಿ ಕುಂತಿ ಎಂದು ಸ್ಮರಿಸಲ್ಪಟ್ಟಿರುವಳು. ಕುರುರಾಜ ವಂಶದಲ್ಲಿ ವೀರನೂ ಮುಖ್ಯನೂ ಆದ ಪಾಂಡುರಾಜನು ಕುಂತಿಭೋಜನಿಂದ ಕುಂತಿಯನ್ನು ಪತ್ನಿಯನ್ನಾಗಿ ಹೊಂದಿದನು.

೧೫೩. ಪೃಥೆಯು ಅಗ್ನಿಯಂತೊಪ್ಪುವ ತೇಜಸ್ವಿಗಳೂ ಲೋಕದಲ್ಲಿ ಪ್ರತಿರಥರಿಲ್ಲದವರೂ, ವೀರರೂ ಮತ್ತು ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವರೂ ಆದ ಮೂರು ಮಂದಿ ಪುತ್ರರನ್ನು ಹೊಂದಿದಳು.

೧೫೪. ಈ ಪೃಥಾದೇವಿಯು ಯಮಧರ್ಮರಾಜನಿಂದ ಯುಧಿಷ್ಠಿರನನ್ನೂ ವಾಯುದೇವನಿಂದ ಭೀಮಸೇನನನ್ನೂ, ಮತ್ತು ಇಂದ್ರನಿಂದ ಅರ್ಜುನನನ್ನೂ ಪುತ್ರರನ್ನಾಗಿ ಹೊಂದಿದಳು.

ಮಾದ್ರವತ್ಯಾಂ ತು ಜನಿತಾವಶ್ವಿನಾವಿತಿ ವಿಶ್ರುತಮ್ ।
ನಕುಲಃ ಸಹದೇವಶ್ಚ ರೂಪಸತ್ತ್ವಗುಣಾನ್ವಿತೌ ॥ ೧೫೫ ॥

ಜಜ್ಞೇ ತು ಶ್ರುತದೇವಾಯಾಂ ತನಯೋ ವೃದ್ಧಶರ್ಮಣಃ ।
ಕರೂಷಾಧಿಪತೇರ್ವೀರೋ ದಂತವಕ್ತ್ರೋ ಮಹಾಬಲಃ ॥ ೧೫೬ ॥

ಕೈಕೇಯಾಚ್ಛ್ರುತಕೀರ್ತ್ಯಾಂ ತು ಜಜ್ಞೇ ಸಂತರ್ದನೋ ಬಲೀ ।
ಚೇಕಿತಾನಬೃಹತ್ಕ್ಷತ್ರೌ ತಥೈವಾನ್ಯೌ ಮಹಾಬಲೌ ॥ ೧೫೭ ॥

ವಿಂದಾನುವಿಂದಾವಾವಂತ್ಯೌ ಭ್ರಾತರೌ ಸುಮಹಾಬಲೌ ।
ಶ್ರುತಶ್ರವಾಯಾಂ ಚೈದ್ಯಸ್ತು ಶಿಶುಪಾಲೋ ಬಭೂವ ಹ ॥ ೧೫೮ ॥

ದಮಘೋಷಸ್ಯ ರಾಜರ್ಷೇಃ ಪುತ್ರೋ ವಿಖ್ಯಾತಪೌರುಷಃ ।
ಯಃ ಪುರಾ ಸ ದಶಗ್ರೀವಃ ಸಂಬಭೂವಾರಿಮರ್ದನಃ ॥ ೧೫೯ ॥

---

೧೫೫. ಮಾದ್ರವತಿಯಲ್ಲಿ ರೂಪ, ವಿಕ್ರಮ ಗುಣಗಳಿಂದ ಕೂಡಿದ ನಕುಲ, ಸಹದೇವರೆಂಬ ಇಬ್ಬರು ಪುತ್ರರು ಅಶ್ವಿನಿದೇವತೆಗಳಿಂದ ಜನಿಸಿದರೆಂದು ಪ್ರಸಿದ್ಧವಾಗಿರುವುದು.

೧೫೬. ಕರೂಷದೇಶಾಧಿಪತಿಯಾದ ವೃದ್ಧಶರ್ಮನಿಗೆ ಪತ್ನಿಯಾದ ಶ್ರುತದೇವಾ ಎಂಬಾಕೆಯಲ್ಲಿ ಮಹಾ ಬಲಶಾಲಿಯಾದ ದಂತವಕ್ತ್ರನು ಪುತ್ರನಾಗಿ ಜನಿಸಿದನು.

೧೫೭. ಹಾಗೆ ಕೇಕಯ ದೇಶದ ರಾಜನಿಂದ ಶ್ರುತಕೀರ್ತಿ ಎಂಬ ಭಾರ್ಯೆಯಲ್ಲಿ ವಿಕ್ರಮಶಾಲಿಯಾದ ಸಂತರ್ದನನೂ ಮತ್ತಿಬ್ಬರು ಬಲಿಷ್ಠರಾದ ಚೇಕಿತಾನ, ಬೃಹತ್ಕ್ಷತ್ರ ಎಂಬ ಪುತ್ರರೂ ಜನಿಸಿದರು.

೧೫೮. ಅಲ್ಲದೆ ಅವಂತಿದೇಶಾಧಿಪರಾದ ವಿಂದ, ಅನುವಿಂದ ಎಂಬ ಮಹಾ ಬಲಿಷ್ಠರಾದ ಸಹೋದರರಿಬ್ಬರು ಜನಿಸಿದರು. ಶ್ರುತಶ್ರವಾ ಎಂಬುವಳಲ್ಲಿ ಚೇದಿದೇಶ ರಾಜನ ಪುತ್ರನಾದ ಶಿಶುಪಾಲನು ಹುಟ್ಟಿದನು.

೧೫೯. ಆ ಶಿಶುಪಾಲನು ರಾಜರ್ಷಿಯಾದ ದಮಘೋಷ ಎಂಬುವನ ಪುತ್ರನೂ ವಿಖ್ಯಾತಿ ಹೊಂದಿದ ಪೌರುಷವುಳ್ಳವನೂ ಆಗಿದ್ದನು, ಮತ್ತು ಅವನು ಪೂರ್ವ ಜನ್ಮದಲ್ಲಿ ಶತ್ರುಗಳನ್ನು ಮರ್ದನಮಾಡುವ ರಾವಣಾಸುರನಾಗಿ ಜನಿಸಿದ್ದನು.

ವೈಶ್ರವಣಾನುಜಸ್ತಸ್ಯ ಕುಂಭಕರ್ಣೋಽನುಜಸ್ತಥಾ ।
ಪತ್ನ್ಯಸ್ತು ವಸುದೇವಸ್ಯ ತ್ರಯೋದಶ ವರಾಂಗನಾಃ ॥ ೧೬೦ ॥

ಪೌರವೀ ರೋಹಿಣೀ ಚೈವ ಮದಿರಾ ಚಾಪರಾ ತಥಾ ।
ತಥೈವ ಭದ್ರವೈಶಾಖೀ ಸುನಾಮ್ನಾ ಪಂಚಮೀ ತಥಾ ॥ ೧೬೧ ॥

ಸಹದೇವಾ ಶಾಂತಿದೇವಾ ಶ್ರೀದೇವಾ ದೇವರಕ್ಷಿತಾ ।
ಧೃತದೇವೋಪದೇವಾ ಚ ದೇವಕೀ ಸಪ್ತಮೀ ತಥಾ ॥ ೧೬೨ ॥

ಸುಗಂಧಾ ವನರಾಜೀ ಚ ದ್ವೇ ಚಾನ್ಯೇ ಪರಿಚಾರಿಕೇ ।
ರೋಹಿಣೀ ಪೌರವೀ ಚೈವ ಬಾಹ್ಲೀಕಸ್ಯಾನುಜಾಭವತ್ ॥ ೧೬೩ ॥

ಜ್ಯೇಷ್ಠಾ ಪತ್ನೀ ಮಹಾಭಾಗ ದಯಿತಾನಕದುಂದುಭೇಃ ।
ಜ್ಯೇಷ್ಠಂ ಲೇಭೇ ಸುತಂ ರಾಮಂ ಸಾರಣಂ ಹಿ ಶಠಂ ತಥಾ ॥ ೧೬೪ ॥

---

೧೬೦ ಆ ರಾಣಾಸುರನು ಕುಬೇರನಿಗೆ ಅನುಜನಾಗಿದ್ದನು. ರಾವಣನಿಗೆ ಕುಂಭಕರ್ಣನು ಅನುಜನಾಗಿ ಹುಟ್ಟಿದನು. ವಸುದೇವನಿಗೆ ಹದಿನಾಲ್ಕು ಮಂದಿ ಉತ್ತಮಾಂಗನೆಯರಾದ ಪತ್ನಿಯರಿದ್ದರು.

೧೬೧. ಅವರಲ್ಲಿ ಐದುಮಂದಿಯು ಪುರುರಾಜನ ಸಂತತಿಯಲ್ಲಿ ಹುಟ್ಟಿದ ರೋಹಿಣೀ, ಮದಿರಾ, ಭದ್ರಾ, ವೈಶಾಖೀ ಮತ್ತು ಸುನಾಮ್ನೀ ಎಂಬ ಮಂಗಳ ನಾಮಧೇಯಗಳಿಂದ ಅಂಕಿತರಾಗಿದ್ದರು.

೧೬೨. ಮತ್ತು ಸಹದೇವಾ ಶಾಂತಿದೇವಾ, ದೇವರಕ್ಷಿತಾ, ಧೃತದೇವಾ, ಉಪದೇವಾ ಮತ್ತು ದೇವಕೀ ಎಂಬ ನಾಮಾಂಕಿತರಾಗಿ ಏಳು ಮಂದಿಯು ಇದ್ದರು.

೧೬೩. ಹಾಗು ಸುಗಂಧಾ ವನರಾಜಿ ಎಂಬುವರು ಮತ್ತಿಬ್ಬರು ಪತಿಯ ಪರಿಚರ್ಯಾಸಕ್ತರಾದ ಭಾರ್ಯೆಯರಾಗಿದ್ದರು. ಇವರಲ್ಲಿ ಪೌರವಿಯಾದ ರೋಹಿಣಿಯು ಬಾಹ್ಲೀಕರಾಜನ ಭಗಿನಿಯಾಗಿದ್ದಳು.

೧೬೪. ಮಹಾಭಾಗ್ಯಸಂತರೆ! ಆನಕದುಂದುಭಿ ಅಥವಾ ವಸುದೇವನ ಪ್ರಿಯತಮೆಯಾಗಿರುವ ಜ್ಯೇಷ್ಠ ಭಾರ್ಯೆಯಾದ ರೋಹಿಣಿಯು ರಾಮನೆಂಬ ಜ್ಯೇಷ್ಠ ಪುತ್ರನನ್ನೂ ಹಾಗೆಯೇ ಸಾರಣ, ಶಠ, ಎಂಬ ಪುತ್ರರನ್ನೂ ಪ್ರಸವಿಸಿದಳು.

**ದುರ್ದಮಂ ದಮನಂ ಶುಭ್ರಂ ಪಿಂಡಾರಕಕುಶೀರಕೌ ।**
**ಚಿತ್ರಾಂ ನಾಮ ಕುಮಾರೀಂ ಚ ರೋಹಿಣ್ಯಷ್ಟೌ ವ್ಯಜಾಯತ ॥ ೧೬೫ ॥**

**ಪುತ್ರೌ ರಾಮಸ್ಯ ಜಜ್ಞಾತೇ ವಿಜ್ಞಾತೌ ನಿಶಠೋಲ್ಮುಕೌ ।**
**ಪಾರ್ಶ್ವೀ ಚ ಪಾರ್ಶ್ವಮರ್ದೀ ಚ ಶಿಶುಃ ಸತ್ಯಧೃತಿಸ್ತಥಾ ॥ ೧೬೬ ॥**

**ಮಂದಬಾಹ್ಯೋಽಥ ರಾಮಾಣಾಂ ಗಿರಿಕೋ ಗಿರಿರೇವ ಚ ।**
**ಶುಕ್ಲಗುಲ್ಮೋಽತಿಗುಲ್ಮಶ್ಚ ದರಿದ್ರಾಂತಕ ಏವ ಚ ॥ ೧೬೭ ॥**

**ಕುಮಾರ್ಯಶ್ಚಾಪಿ ಪಂಚಾನ್ಯಾ ನಾಮತಸ್ತಾ ನಿಬೋಧತ ।**
**ಅರ್ಚಿಷ್ಮತೀ ಸುನಂದಾ ಚ ಸುರಸಾ ಸುವಚಾಸ್ತಥಾ ॥ ೧೬೮ ॥**

**ತಥಾ ಶತಬಲಾ ಚೈವ ಸಾರಣಸ್ಯ ಸುತಾಸ್ತ್ವಿಮಾಃ ।**
**ಭದ್ರಾಶ್ವೋ ಭದ್ರಗುಪ್ತಿಶ್ಚ ಭದ್ರವಿಷ್ಟಸ್ತಥೈವ ಚ ॥ ೧೬೯ ॥**

---

೧೬೫. ಮತ್ತು ನಿಗ್ರಹಿಸಲಾಗದ ದಮನ, ಶುಭ್ರ, ಪಿಂಡಾರಕ, ಕುಶೀತಕ ಎಂಬ ಪುತ್ರರನ್ನೂ ಚಿತ್ರಾ ಎಂದು ಪ್ರಸಿದ್ಧಳಾದ ಕನ್ಯೆಯನ್ನೂ ಒಟ್ಟು ಸೇರಿ ಎಂಟು ಮಂದಿ ಪುತ್ರರನ್ನು ರೋಹಿಣಿಯು ಹೊಂದಿದಳು.

೧೬೬. ರಾಮನಿಗೆ ನಿಶಠ, ಉಲ್ಮುಕ, ಎಂಬ ಪ್ರಸಿದ್ಧರಾದ ಇಬ್ಬರು ಪುತ್ರರು ಜನಿಸಿದರು. ಮತ್ತು ಪಾರ್ಶ್ವೀ, ಪಾರ್ಶ್ವಮರ್ದಿ, ಶಿಶು, ಸತ್ಯಧೃತಿ, ಎಂಬ ನಾಮಾಂಕಿತರಾದ ಪುತ್ರರು ಪ್ರಸಿದ್ಧರಾಗಿದ್ದರು.

೧೬೭. ಮತ್ತು ಮಂದಬಾಹ್ಯ, ಗಿರಿಕ, ಗಿರಿ, ಶುಕ್ಲಗುಲ್ಮ, ಅತಿಗುಲ್ಮ, ದರಿದ್ರಾಂತಕ, ಎಂಬ ಸುಂದರನಾಮಾಂಕಿತರಾದ ಅನೇಕ ಮಂದಿ ಪುತ್ರರಿದ್ದರು.

೧೬೮. ಮತ್ತು ಬೇರೆ ಐದು ಮಂದಿ ಕನ್ಯೆಯರು ಇದ್ದರು. ಅವರ ಹೆಸರುಗಳನ್ನು ಕೇಳಿರಿ, ಅರ್ಚಿಷ್ಮತೀ, ಸುನಂದಾ, ಸುರಸಾ ಮತ್ತು ಸುವರ್ಚಾ ಎಂದು ನಾಲ್ಕು ಮಂದಿಯ ಹೆಸರುಗಳಿದ್ದುವು.

೧೬೯. ಐದನೆಯವಳು ಶತಬಲಾ ಎಂಬ ನಾಮಾಂಕಿತಳಾಗಿದ್ದಳು, ಹೀಗೆ ಇವರೆಲ್ಲರೂ ಸಾರಣನೆಂಬುವನ ಪುತ್ರರಾಗಿರುವರು. ಮುಂದೆ ಶಠನ ಪುತ್ರರನ್ನು ಹೇಳುವೆನು. ಭದ್ರಾಶ್ವ, ಭದ್ರವಿಷ್ಟ ಎಂಬ ಮೂರು ಮಂದಿ ಪುತ್ರರು ಇದ್ದರು.

ಭದ್ರಬಾಹುರ್ಭದ್ರರಥೋ ಭದ್ರಕಲ್ಪಸ್ತಥೈವ ಚ ।
ಸುಪಾರ್ಶ್ವಕಃ ಕೀರ್ತಿಮಾಂಶ್ಚ ರೋಹಿತಾಶ್ವಃ ಶಠಾತ್ಮಜಾಃ ॥ ೧೭೦ ॥

ದುರ್ಮದಸ್ಯಾಭಿಭೂತಶ್ಚ ರೋಹಿಣ್ಯಾಃ ಕುಲಜಾಃ ಸ್ಮೃತಾಃ ।
ನಂದೋಪನಂದೌ ಮಿತ್ರಶ್ಚ ಕುಕ್ಷಿಮಿತ್ರಸ್ತಥಾ ಬಲಃ ॥ ೧೭೧ ॥

ಚಿತ್ರೋಪಚಿತ್ರೌ ಕೃತಕಸ್ತುಷ್ಟಿಃ ಪುಷ್ಟಿರಥಾಪರಃ
ಮದಿರಾಯಾಃ ಸುತಾ ಏತೇ ವಸುದೇವಾದ್ವಿಜಜ್ಞಿರೇ ॥ ೧೭೨ ॥

ಉಪಬಿಂಬೋಽಥ ಬಿಂಬಶ್ಚ ಸತ್ತ್ವದಂತಮಹೌಜಸೌ ।
ಚತ್ವಾರ ಏತೇ ವಿಖ್ಯಾತಾ ಭದ್ರಾಪುತ್ರಾ ಮಹಾಬಲಾಃ ॥ ೧೭೩ ॥

ವೈಶಾಲ್ಯಾಮದಧಾಚ್ಛೌರಿಃ ಪುತ್ರಂ ಕೌಶಿಕಮುತ್ತಮಮ್ ।
ದೇವಕ್ಯಾಂ ಜಜ್ಞಿರೇ ಶೌರೇಃ ಸುಷೇಣಃ ಕೀರ್ತಿಮಾನಪಿ ॥ ೧೭೪ ॥

---

೧೭೦. ಹಾಗು ಭದ್ರಬಾಹು, ಭದ್ರರಥ, ಭದ್ರಕಲ್ಪ, ಸುಪಾರ್ಶ್ವಕ, ಕೀರ್ತಿಮಾನ್, ಮತ್ತು ರೋಹಿತಾಶ್ವ ಎಂಬುವರು ಶಠನಿಂದ ಹುಟ್ಟಿದ ಪುತ್ರಾವಳಿಯಲ್ಲಿ ಸೇರಿದವರಾಗಿದ್ದನು.

೧೭೧. ದುರ್ಮದನಿಗೆ ಅಭಿಭೂತನೆಂಬ ಪುತ್ರನಿದ್ದನು. ಇವರೆಲ್ಲರೂ ರೋಹಿಣಿಯ ಸಂತತಿ ಪರಂಪರೆಯಲ್ಲಿ ಹುಟ್ಟಿದವರಾಗಿ ಸ್ಮರಿಸಲ್ಪಟ್ಟವರು. ನಂದ, ಉಪನಂದ, ಮಿತ್ರ, ಕುಕ್ಷಿಮಿತ್ರ ಮತ್ತು ಬಲ ಎಂಬುವರು ಮದಿರೆಯ ಪುತ್ರರೆಂದು ಪ್ರಸಿದ್ಧರಾಗಿರುವರು.

೧೭೨. ಮತ್ತು ಚಿತ್ರ, ಉಪಚಿತ್ರ, ಕೃತಕ, ತುಷ್ಟಿ, ಪುಷ್ಟಿ, ಎಂಬ ಸಂಜ್ಞಾಂಕಿತರಾದ ಸಮಸ್ತ ಪುತ್ರರು ವಸುದೇವನಿಂದ ಮದಿರಾ ಎಂಬಾಕೆಯಲ್ಲಿ ಜನಿಸಿರುವರು.

೧೭೩. ಉಪಬಿಂಬ, ಬಿಂಬ, ಸತ್ತ್ವದಂತ, ಮತ್ತು ಮಹೌಜಸ ಎಂಬ ನಾಮಾಂಕಿತರಾದ. ಮತ್ತು ಮಹಾಬಲಿಷ್ಠರಾದ ನಾಲ್ಕು ಮಂದಿಯು ಭದ್ರಾ ಎಂಬುವಳ ಪುತ್ರರೆಂದು ಪ್ರಸಿದ್ಧರಾಗಿರುವರು.

೧೭೪. ವಸುದೇವನು ವೈಶಾಖೀ ಎಂಬ ಪತ್ನಿಯಲ್ಲಿ ಕೌಶಿಕನೆಂಬ ಉತ್ತಮನಾದ ಪುತ್ರನನ್ನು ಹೊಂದಿದನು, ಮತ್ತು ವಸುದೇವನಿಂದ ದೇವಕೀ ಎಂಬ ಪತ್ನಿಯಲ್ಲಿ ಈ ಪುತ್ರರು ಕ್ರಮವಾಗಿ ಜನಿಸಿದರು, ಅವರಲ್ಲ ಸುಷೇಣ, ಕೀರ್ತಿಮಾನ್ ಎಂಬುವರು ಇಬ್ಬರಾಗಿದ್ದರು.

ಉದರ್ಷಿರ್ಭದ್ರಸೇನಶ್ಚ ಋಜುದಾಯಶ್ಚ ಪಂಚಮಃ ।
ಷಷ್ಠೋ ಹಿ ಭದ್ರದೇವಶ್ಚ ಕಂಸಃ ಸರ್ವಾಞ್ಜಘಾನ ತಾನ್ ॥ ೧೭೫ ॥

ಅಥ ತಸ್ಯಾಮವಸ್ಥಾಯಾಂ ಆಯುಷ್ಮಾನ್ ಸಂಬಭೂವ ಹ ।
ಲೋಕನಾಥಃ ಪುನರ್ವಿಷ್ಣುಃ ಪೂರ್ವಂ ಕೃಷ್ಣಃ ಪ್ರಜಾಪತಿಃ ॥ ೧೭೬ ॥

ಅನುಜಾತಾಽಭವತ್ ಕೃಷ್ಣಾತ್ ಸುಭದ್ರಾ ಭದ್ರಭಾಷಿಣೀ ।
ಕೃಷ್ಣಾ ಸುಭದ್ರೇತಿ ಪುನರ್ವ್ಯಾಖ್ಯಾತಾ ವೃಷ್ಣಿನಂದಿನೀ ॥ ೧೭೭ ॥

ಸುಭದ್ರಾಯಾಂ ರಥೀ ಪಾರ್ಥಾದಭಿಮನ್ಯುರಜಾಯತ ।
ವಸುದೇವಸ್ಯ ಭಾರ್ಯಾಸು ಮಹಾಭಾಗಾಸು ಸಪ್ತಸು ॥ ೧೭೮ ॥

ಯೇ ಪುತ್ರಾ ಜಜ್ಞಿರೇ ಶೂರಾ ನಾಮತಸ್ತಾನ್ನಿಬೋಧತ ।
ಪೂರ್ವಾದ್ಯಾಃ ಸಹದೇವಾಯಾಂ ಶೂರಾದ್ವೈ ಜಜ್ಞಿರೇ ಸುತಾಃ ॥ ೧೭೯ ॥

---

೧೭೫. ಮತ್ತು ಉದರ್ಷಿ, ಭದ್ರಸೇನ, ಋಜುದಾಯ, ಎಂಬ ಪುತ್ರರೂ ಭದ್ರದೇವನು ಆರನೆಯ ಪುತ್ರನಾಗಿಯೂ ಜನಿಸಿದರು, ಕಂಸನು ಅವರೆಲ್ಲರನ್ನೂ ಕೊಂದು ಹಾಕಿದನು.

೧೭೬. ತರುವಾಯ ಆ ಅವಸ್ಥೆಯಲ್ಲಿ ಲೋಕಗಳಿಗೆ ಪ್ರಭುವೂ, ಪ್ರಜೆಗಳ ಪರಿಪಾಲಕನೂ ಆದ ವಿಷ್ಣುವು ಕೃಷ್ಣನ ರೂಪದಿಂದ ದೀರ್ಘಾಯುಷ್ಮಂತನಾದ ಪುತ್ರನಾಗಿ ಜನಿಸಿದನು.

೧೭೭. ಆ ಕೃಷ್ಣನಿಗೆ ಮಂಗಳ ವಚನಗಳನ್ನು ನುಡಿಯುವ ಸುಭದ್ರಾ ಅಥವಾ ಕೃಷ್ಣಾ ಎಂಬ ನಾಮಾಂಕಿತಳಾದ ಭಗಿನಿಯು ಹುಟ್ಟಿದಳು. ವೃಷ್ಣಿವಂಶವನ್ನು ಆನಂದಗೊಳಿಸುವ ಕೃಷ್ಣೆಯು ಭದ್ರವಚನಗಳ ಭಾಷಣದಿಂದ ಸುಭದ್ರಾ ಎಂದು ವ್ಯಾಖ್ಯಾನಮಾಡಲ್ಪಟ್ಟಳು.

೧೭೮. ಅರ್ಜುನನ ಪತ್ನಿಯಾದ ಸುಭದ್ರೆಯಲ್ಲಿ ಮಹಾ ರಥಿಕನಾದ ಅಭಿಮನ್ಯು ಎಂಬ ಕುಮಾರನು ಹುಟ್ಟಿದನು. ವಸುದೇವನ ಮಹಾಭಾಗ್ಯವತಿಯರಾದ ಏಳು ಮಂದಿ ಪತ್ನಿಯರು ಬಹುಮಂದಿ ಪುತ್ರರನ್ನು ಹೊಂದಿದ್ದರು.

೧೭೯. ಅವರಲ್ಲಿ ಹುಟ್ಟಿರುವ ಶೂರರಾದ ಪುತ್ರರ ಹೆಸರನ್ನು ಶ್ರವಣಮಾಡಿರಿ. ವಸುದೇವನಿಂದ ಸಹದೇವಾ ಎಂಬಾಕೆಯಲ್ಲಿ ಪೂರು ಮುಂತಾದ ಪುತ್ರರು ಜನಿಸಿ ಇರುವರು.

ಶಾಂತಿದೇವಾ ಜನಸ್ತಂಬಂ ಸೌರೇರ್ಜಜ್ಞೇ ಕುಲೋದ್ವಹಮ್ ।
ಆಗಾವಹೋ ಮಹಾತ್ಮಾ ಚ ವೃಕದೇವ್ಯಾಮಜಾಯತ　॥ ೧೮೦ ॥

ಶ್ರೀದೇವಾಯಾಂ ಸ್ವಯಂ ಜಜ್ಞೇ ಮಂದಕೋ ನಾಮ ನಾಮತಃ ।
ಉಪಾಸಂಗಂ ವಸುಂ ಚಾಪಿ ತನಯೌ ದೇವರಕ್ಷಿತಾ　॥ ೧೮೧ ॥

ಏವಂ ದಶ ಸುತಾಸ್ತಸ್ಯ ಕಂಸಸ್ತಾನಪ್ಯಘಾತಯತ್ ।
ವಿಜಯಂ ರೋಚನಂ ಚೈವ ವರ್ಧಮಾನಂ ಚ ದೇವಲಿಮ್　॥ ೧೮೨ ॥

ಏತಾನ್ಮಹಾತ್ಮನಃ ಪುತ್ರಾನ್ ಸುಷಾವ ಶಿಶಿರಾವತೀ ।
ಸಪ್ತಮೀ ದೇವಕೀ ಪುತ್ರಂ ಸುನಾಮಾನಮಸೂಯತ　॥ ೧೮೩ ॥

ಗವೇಷಣಂ ಮಹಾಭಾಗಂ ಸಂಗ್ರಾಮೇ ಚಿತ್ರಯೋಧಿನಮ್ ।
ಶ್ರಾದ್ಧದೇವ್ಯಾಂ ಪುರೋದ್ಯಾನೇ ವನೇ ತು ವಿಚರನ್ ದ್ವಿಜಾಃ ॥ ೧೮೪ ॥

---

೧೮೦. ಶಾಂತಿದೇವಾ ಎಂಬುವಳು ವಸುದೇವನ ಸಂಗದಿಂದ ವಂಶಸ್ಥಾಪಕನಾದ ಜನಸ್ತಂಬ ಎಂಬ ಪುತ್ರನನ್ನು ಪ್ರಸವಿಸಿದಳು. ಆಗಾವಹನೆಂಬ ಮಹಾತ್ಮನಾದ ಪುತ್ರನು ಧೃತದೇವಾ ಎಂಬುವಳಲ್ಲಿ ಜನಿಸಿರುವನು.

೧೮೧. ಮಂದಕ ಎಂಬ ನಾಮದಿಂದ ಪ್ರಸಿದ್ಧನಾದ ಪುತ್ರನು ಶ್ರೀದೇವಾ ಎಂಬುವಳಲ್ಲಿ ತಾನಾಗಿ ಜನಿಸಿದನು. ದೇವ ರಕ್ಷಿತಾ ಎಂಬುವಳು ಉಪಾಸಂಗ ವಸು ಎಂಬ ಇಬ್ಬರು ಪುತ್ರರನ್ನು ಪ್ರಸವಿಸಿದಳು.

೧೮೨. ಈ ರೀತಿಯಾಗಿ ವಸುದೇವನಿಗೆ ಹತ್ತುಮಂದಿ ಪುತ್ರರಿದ್ದರು. ಕಂಸನು ಅವರನ್ನು ಕೂಡ ಕೊಲ್ಲಿಸಿದನು. ವಿಜಯ, ರೋಚನ, ವರ್ಧಮಾನ, ಮತ್ತು ದೇವಲ ಎಂಬುವರು ಶಿಶಿರಾವತಿಯ ಪುತ್ರರಾಗಿದ್ದರು.

೧೮೩. ಶಿಶಿರಾವತಿಯು ಮಹಾತ್ಮರಾದ ಈ ನಾಲ್ಕು ಜನ ಪುತ್ರರನ್ನು ಪ್ರಸವಿಸಿದಳು, ಏಳನೆಯವಳಾದ ದೇವಕಿಯು ಸುನಾಮ ಎಂಬ ಪುತ್ರನನ್ನು ಹಡೆದಳು.

೧೮೪. ದ್ವಿಜರೆ! ಉದ್ಯಾನ ವನದಲ್ಲಿ ವಿಚರಿಸುತ್ತಿರಲು ವಸುದೇವನು ಶ್ರಾದ್ಧದೇವ ಪುತ್ರಿಯಾದ ತನ್ನ ಭಾರ್ಯೆಯಲ್ಲಿ ಸಂಗ್ರಾಮದಲ್ಲಿ ವಿಚಿತ್ರವಾಗಿ ಯುದ್ಧ ಮಾಡುವ ಮಹಾತ್ಮನಾದ ಗವೇಷಣನನ್ನು ಹೊಂದಿದನು.

ವೈಶಾಖ್ಯಾಮುದಪಾದಯಚ್ಚೌರಿಃ ಪುತ್ರಂ ಕೌಶಿಕಮುವ್ಯಯಮ್ ।
ಸುಗಂಧೀ ವನರಾಜೀ ಚ ಶೌರೇರಾಸ್ತಾಂ ಪರಿಗ್ರಹೌ ॥ ೧೮೫ ॥

ಪುಂಡ್ರಶ್ಚ ಕಪಿಲಶ್ಚೈವ ಸುಗಂಧ್ಯಾಶ್ಚಾತ್ಮಜೌ ತು ತೌ ।
ತಯೋಃ ರಾಜಾಭವತ್ಪುಂಡ್ರಃ ಕಪಿಲಸ್ತು ವನಂ ಯಯೌ ॥ ೧೮೬ ॥

ಅನ್ಯಸ್ಯಾಮಭವದ್ವೀರೋ ವಸುದೇವಾತ್ಮಜೋ ಬಲೀ ।
ಜರಾ ನಾಮ ನಿಷಾದೋಽಸೌ ಪ್ರಥಮಃ ಸ ಧನುರ್ಧರಃ ॥ ೧೮೭ ॥

ವಿಖ್ಯಾತೋ ದೇವಭಾಗಸ್ಯ ಮಹಾಭಾಗಃ ಸುತೋಽಭವತ್ ।
ಪಂಡಿತಾನಾಂ ಮತಂ ಪ್ರಾಹುರ್ದೇವಶ್ರವಸಮುದ್ಭವಮ್ ॥ ೧೮೮ ॥

ಅಶ್ಮಕ್ಯಾಂ ಲಭತೇ ಪುತ್ರಮನಾಧೃಷ್ಟಿರ್ಯಶಸ್ವಿನಮ್ ।
ನಿವೃತ್ತಶತ್ರುಂ ಶತ್ರುಘ್ನಂ ಶ್ರಾದ್ಧದೇವಂ ಮಹಾಬಲಮ್ ॥ ೧೮೯ ॥

---

೧೮೫. ಮತ್ತು ವಸುದೇವನು ವೈಶಾಖೀ ಎಂಬ ಪತ್ನಿಯಲ್ಲಿ ಕೌಶಿಕ ಎಂಬ ಉತ್ತಮ ಪುತ್ರನನ್ನು ಹೊಂದಿದನು. ಸುಗಂಧೀ, ವನರಾಜಿ ಎಂಬ ನಾಮಾಂಕಿತರಾಗಿ ವಸುದೇವನಿಗೆ ಇಬ್ಬರು ಪ್ರಿಯೆಯರಿದ್ದರು.

೧೮೬. ಪುಂಡ್ರ, ಕಪಿಲ ಎಂಬುವರಿಬ್ಬರು ಸುಗಂಧೆಯ ಪುತ್ರರಾಗಿದ್ದರು. ಅವರಿಬ್ಬರಲ್ಲಿ ಪುಂಡ್ರನು ರಾಜನಾಗಿ ರಾಜ್ಯವನ್ನು ಆಳಿದನು. ಕಪಿಲನು ವನಕ್ಕೆ ತೆರಳಿದನು.

೧೮೭. ವನರಾಜಿ ಎಂಬುವಳಲ್ಲಿ ವೀರನೂ ಬಲಿಷ್ಠನೂ ಆದ ಮತ್ತೊಬ್ಬ ಪುತ್ರನು ಜನಿಸಿದನು. ಅವನು ಜರಾ ಎಂಬ ನಾಮಾಂಕಿತ ನಿಷಾದನೂ ಮತ್ತು ಶ್ರೇಷ್ಠನಾದ ಧನುರ್ಧಾರಿಯೂ ಆಗಿದ್ದನು.

೧೮೮. ದೇವಭಾಗನಿಗೆ ಮಹಾಭಾಗನೆಂದು ವಿಖ್ಯಾತನಾದ ಪುತ್ರನು ಜನಿಸಿದನು. ದೇವಶ್ರವ ಎಂಬುವನಿಗೆ ಒಬ್ಬ ಪುತ್ರನು ಜನಿಸಿರುವನೆಂಬ ಪಂಡಿತರ ಸಮ್ಮತಿಯನ್ನು ಪ್ರಾಜ್ಞರು ಹೇಳುತ್ತಾರೆ.

೧೮೯. ಅನಾಧೃಷ್ಟಿ ಎಂಬುವನು ಅಶ್ಮಕಿಯಲ್ಲಿ ಕೀರ್ತಿ ಸಂಪನ್ನನೂ, ಶತ್ರುಗಳನ್ನು ಹಿಂತಿರುಗಿಸುವವನೂ ಆದ ಶತ್ರುಘ್ನ ಮತ್ತು ಮಹಾಬಲಿಷ್ಠನಾದ ಶ್ರಾದ್ಧದೇವ ಎಂಬ ಪುತ್ರರನ್ನು ಹೊಂದಿದನು.

ವ್ಯಜಾಯತ ಶ್ರಾದ್ಧದೇವೋ ನೈಷಾದಿರ್ಯಃ ಪರಿಶ್ರುತಃ ।
ಏಕಲವ್ಯೋ ಮಹಾಭಾಗೋ ನಿಷಾದೈಃ ಪರಿವರ್ಧಿತಃ ॥ ೧೯೦ ॥

ಗಂಡೂಷಾಯಾನಪತ್ಯಾಯ ಕೃಷ್ಣಸ್ತುಷ್ಟೋಽದದಾತ್ಸುತೌ ।
ಚಾರುದೇಷ್ಣಂ ಚ ಸಾಂಬಂ ಚ ಕೃತಾಸ್ತ್ರೌ ಶಸ್ತಲಕ್ಷಣೌ ॥ ೧೯೧ ॥

ರಂತಿಶ್ಚ ರಂತಿಪಾಲಶ್ಚ ದ್ವೌ ಪುತ್ರೌ ನಂದನಸ್ಯ ಚ ।
ವೃಕಾಯ ವೈ ತ್ವಪುತ್ರಾಯ ವಸುದೇವಃ ಪ್ರತಾಪವಾನ್ ॥ ೧೯೨ ॥

ಸೌಮಿಂ ದದೌ ಸುತಂ ವೀರಂ ಶೌರಿಃ ಕೌಶಿಕಮೇವ ಚ ।
ಸೃಂಜಯಸ್ಯ ಧನುಶ್ಚೈವ ವಿರಜಾಶ್ಚ ಸುತಾವಿಮೌ ॥ ೧೯೩ ॥

ಅನಪತ್ಯೋಽಭವಚ್ಛ್ಯಾಮಃ ಶಮೀಕಸ್ತು ವನಂ ಯಯೌ ।
ಜುಗುಪ್ಸಮಾನೋ ಭೋಜತ್ವಂ ರಾಜರ್ಷಿತ್ವಮವಾಪ್ತವಾನ್ ॥ ೧೯೪ ॥

---

೧೯೦. ಅನಾಧೃಷ್ಟಿಯ ಪುತ್ರನಾಗಿ ಜನಿಸಿರುವ ಶ್ರಾದ್ಧದೇವನು ನಿಷಾದರಿಂದ ವೃದ್ಧಿ ಹೊಂದಿರುವ ಮಹಾತ್ಮನಾದ ಏಕಲವ್ಯನೆಂಬ ನಿಷಾದ ಪುತ್ರನೆಂದು ಪ್ರಸಿದ್ಧನಾಗಿರುವನು.

೧೯೧. ಕೃಷ್ಣನು ಸಂತತಿಯಿಲ್ಲದಿರುವ ಗಂಡೂಷ ಎಂಬುವನಿಗೆ ಉತ್ತಮ ಲಕ್ಷಣಗಳಿಂದ ಕೂಡಿದವರೂ, ಅಸ್ತ್ರವಿದ್ಯೆಯಲ್ಲಿ ಪ್ರಾಜ್ಞರೂ ಆದ, ಸಾಂಬ, ಚಾರುದೇಷ್ಣ ಎಂಬ ಇಬ್ಬರು ಪುತ್ರರನ್ನು ಸಂತೋಷವಾಗಿ ಕೊಟ್ಟನು.

೧೯೨. ನಂದನ ಎಂಬುವನಿಗೆ ರಂತಿ, ರಂತಿಪಾಲ ಎಂಬ ಪುತ್ರರು ಜನಿಸಿರುವರು, ಪ್ರತಾಪವಂತನಾದ ವಸುದೇವನು ಪುತ್ರಸಂತಾನವಿಲ್ಲದ ವೃಕ ಎಂಬುವನಿಗೆ ಪುತ್ರರನ್ನು ಕೊಟ್ಟನು.

೧೯೩. ವಸುದೇವನು ಶೂರನಾದ ಸೌಮಿ, ಮತ್ತು ಕೌಶಿಕ ಎಂಬ ಪುತ್ರರನ್ನು ವೃಕನಿಗೆ ಕೊಟ್ಟನು, ಸೃಂಜಯನಿಗೆ ಧನು, ವಿರಜಾ ಎಂಬ ಇಬ್ಬರು ಪುತ್ರರು ಇದ್ದರು.

೧೯೪. ಶ್ಯಾಮ ಎಂಬುವನು ಸಂತತಿ ರಹಿತನಾಗಿದ್ದನು, ಶಮೀಕನು ವನಕ್ಕೆ ತೆರಳಿದನು. ಮತ್ತು ವಂಶ ಕ್ರಮದಿಂದ ಬಂದ ಭೋಜರಾಜತ್ವದಲ್ಲಿ ಜುಗುಪ್ಸೆಯನ್ನು ಹೊಂದಿ ರಾಜರ್ಷಿತ್ವವನ್ನು ಹೊಂದಿದನು.

ಯ ಇದಂ ಜನ್ಮ ಕೃಷ್ಣಸ್ಯ ಪಠತೇ ನಿಯತವ್ರತಃ ।
ಶ್ರಾವಯೇದ್ಬ್ರಾಹ್ಮಣಂ ವಾಪಿ ಸ ಮಹತ್ಸುಖಮಾಪ್ನುಯಾತ್
॥ ೧೯೫ ॥

ದೇವದೇವೋ ಮಹಾತೇಜಾ ಪೂರ್ವಂ ಕೃಷ್ಣಃ ಪ್ರಜಾಪತಿಃ ।
ವಿಹಾರಾರ್ಥಂ ಮನುಷ್ಯೇಷು ಜಜ್ಞೇ ನಾರಾಯಣಃ ಪ್ರಭುಃ ॥ ೧೯೬ ॥

ದೇವಕ್ಯಾಂ ವಸುದೇವೇನ ತಪಸಾ ಪುಷ್ಕರೇಕ್ಷಣಃ ।
ಚತುರ್ಬಾಹುಸ್ತು ಸಂಜಜ್ಞೇ ದಿವ್ಯರೂಪಶ್ರಿಯಾನ್ವಿತಃ ॥ ೧೯೭ ॥

ಪ್ರಕಾಶ್ಯೋ ಭಗವಾನ್ ಯೋಗೀ ಕೃಷ್ಣೋ ಮಾನುಷತಾಂ ಗತಃ ।
ಅವ್ಯಕ್ತೋ ವ್ಯಕ್ತಲಿಂಗಶ್ಚ ಸ ಏವ ಭಗವಾನ್ ಪ್ರಭುಃ ॥ ೧೯೮ ॥

ನಾರಾಯಣೋ ಯತಶ್ಚಕ್ರೇ ವ್ಯಯಂ ಚೈವಾವ್ಯಯಂ ಹಿ ಯತ್ ।
ದೇವೋ ನಾರಾಯಣೋ ಭೂತ್ವಾ ಹರಿರಾಸೀತ್ ಸನಾತನಃ ॥ ೧೯೯ ॥

---

೧೯೫. ಯಾವ ಮಾನವನು ಅಖಂಡಿತವಾದ ನಿಯಮಗಳಿಂದ ಕೂಡಿ ಕೃಷ್ಣನ ಜನ್ಮ ವೃತ್ತಾಂತವನ್ನು ಪಠಿಸುವನೊ, ಅಥವಾ ಬ್ರಾಹ್ಮಣನಿಂದ ಶ್ರವಣ ಮಾಡಿಸುವನೊ, ಅವನು ಮಹತ್ತಾದ ಸೌಖ್ಯವನ್ನು ಹೊಂದುವನು.

೧೯೬. ದೇವತೆಗಳಿಗೆ ದೇವರೂಪಿಯೂ ಮಹಾತೇಜಸ್ವಿಯೂ, ಪ್ರಜಾಪರಿಪಾಲಕನೂ, ಪ್ರಲಯಕಾಲದಲ್ಲಿ ಜಲದಲ್ಲಿ ನಿದ್ರಿಸುವ ಪರಮಾತ್ಮನೂ ಮತ್ತು ಪ್ರಭುವೂ ಆದ ವಿಷ್ಣುವು ಪೂರ್ವದಲ್ಲಿ ವಿಹಾರಸೌಖ್ಯವನ್ನು ಅನುಭವಿಸಲೋಸ್ಕರ ಮನುಷ್ಯರಲ್ಲಿ ಜನ್ಮವನ್ನು ಎತ್ತಿದನು.

೧೯೭. ಪುಂಡರೀಕ ಕಮಲದಂತೆ ಸುಂದರವಾದ ನೇತ್ರಗಳುಳ್ಳ ವಿಷ್ಣುವು ದಿವ್ಯವಾದ ರೂಪಸಂಪತ್ತಿಯಿಂದ ಕೂಡಿ ತಪೋಮಹಿಮೆಯಿಂದ ವಸುದೇವನಿಂದ ದೇವಕೀದೇವಿಯಲ್ಲಿ ಪುತ್ರನಾಗಿ ಅವತರಿಸಿದನು.

೧೯೮. ಪ್ರಮಾಣಾಗೋಚರನೂ ವ್ಯಕ್ತವಾದ ಲಿಂಗವುಳ್ಳವನೂ ಸಕಲ ನಿಯಾಮಕನೂ ಷಡ್ಗುಣೈಶ್ವರ್ಯಸಂಪನ್ನನೂ ಪೂಜ್ಯನಾದ ಯೋಗೇಶ್ವರನೂ ಆದ ವಿಷ್ಣು ಪರಮಾತ್ಮನು ಮನುಷ್ಯ ಜನ್ಮವನ್ನೆತ್ತಿ ಕೃಷ್ಣ ರೂಪದಿಂದ ಪ್ರಕಾಶವಾದನು.

೧೯೯. ಯಾವ ನಾರಾಯಣನು ನಿತ್ಯ ಮತ್ತು ಅನಿತ್ಯ ವಸ್ತುಗಳನ್ನು ರಚಿಸಿರುವನೊ, ಅಂತಹ ಅನಾದಿ ನಿಧನನಾದ ಶ್ರೀಮನ್ನಾರಾಯಣನು ಹರಿರೂಪದಿಂದ ಅವತರಿಸಿರುವನು.

ಯೋಽಂಬುಜಾಕ್ಷಾದಿಪುರುಷಂ ಪುರಾ ಚಕ್ರೇ ಪ್ರಜಾಪತಿಮ್ ।
ಅದಿತೇರಪಿ ಪುತ್ರತ್ವಮೇತ್ಯ ಯಾದವನಂದನಃ ॥ ೨೦೦ ॥

ದೇವೋ ವಿಷ್ಣುರಿತಿ ಖ್ಯಾತಃ ಶಕ್ರಾದವರಜೋಽಭವತ್ ।
ಪ್ರಾಸಾದಯನ್ ಯಂ ಚ ವಿಭುಂ ಹ್ಯದಿತ್ಯಾಃ ಪುತ್ರಕಾರಣೇ ॥ ೨೦೧ ॥

ವಧಾರ್ಥಂ ಸುರಶತ್ರೂಣಾಂ ದೈತ್ಯದಾನವರಕ್ಷಸಾಮ್ ।
ಯಯಾತಿವಂಶಜಸ್ಯಾಥ ವಸುದೇವಸ್ಯ ಧೀಮತಃ ॥ ೨೦೨ ॥

ಕುಲಂ ಪುಣ್ಯಂ ಯತೋ ಜನ್ಮ ಭೇಜೇ ನಾರಾಯಣಃ ಪ್ರಭುಃ ।
ಸಾಗರಾಃ ಸಮಕಂಪಂತ ಚೇಲುಶ್ಚ ಧರಣೀಧರಾಃ ॥ ೨೦೩ ॥

ಜಜ್ವಲುಸ್ತ್ವಗ್ನಿಹೋತ್ರಾಣಿ ಜಾಯಮಾನೇ ಜನಾರ್ದನೇ ।
ಶಿವಾಶ್ಚ ಪ್ರವವುರ್ವಾತಾಃ ಪ್ರಶಾಂತಮಭವದ್ರಜಃ ॥ ೨೦೪ ॥

---

೨೦೦. ಪೂರ್ವದಲ್ಲಿ ಶ್ರೀಮನ್ನಾರಾಯಣನು ತನ್ನ ನಾಭಿ ಕಮಲದಿಂದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿರುವನು. ಮತ್ತು ಈಗ ಯಾದವನಂದನನಾಗಿ ಅವತರಿಸಿದ ನಾರಾಯಣನು ಅದಿತಿ ದೇವಿಯ ಪುತ್ರತ್ವವನ್ನು ಹೊಂದಿದ್ದನು.

೨೦೧. ವಿಷ್ಣು ಪರಮಾತ್ಮನೆಂದು ಖ್ಯಾತಿಹೊಂದಿರುವ ಸ್ವಾಮಿಯು ಅದಿತಿಯಲ್ಲಿ ಜನ್ಮವೆತ್ತಿರುವ ಸಮಯದಲ್ಲಿ ಇಂದ್ರನಿಗೆ ಅನುಜನಾಗಿ ಹುಟ್ಟಿದನು. ಇಂತಹ ವಿಭು ಪರಮಾತ್ಮನನ್ನು ಅದಿತಿಯು ಪುತರೂಪದಿಂದ ಹೊಂದಿದಳು.

೨೦೨. ದೇವತೆಗಳಲ್ಲಿ ಶತ್ರುತ್ವವನ್ನು ಆಚರಿಸುವ ದೈತ್ಯ, ದಾನವ ಮತ್ತು ರಾಕ್ಷಸರನ್ನು ಸಂಹರಿಸುವುದಕ್ಕೋಸ್ಕರ ಯಯಾತಿ ವಂಶದಲ್ಲಿ ಜನಿಸಿರುವ ಜ್ಞಾನಿಯಾದ ವಸುದೇವನ ಕುಲವನ್ನು ಪುತ್ರ ರೂಪದಿಂದ ಹೊಂದಿದನು.

೨೦೩. ಸಕಲ ನಿಯಾಮಕನಾದ ಶ್ರೀಮನ್ನಾರಾಯಣನು ವಸುದೇವನ ಪವಿತ್ರ ಕುಲದಲ್ಲಿ ಜನ್ಮವನ್ನು ಹೊಂದಿರುವುದರಿಂದ ಆ ಸಮಯದಲ್ಲಿ ಸಾಗರಗಳು ಕಂಪಿಸಿದುವು. ಮತ್ತು ಪರ್ವತಗಳು ಚಲಿಸಿದುವು.

೨೦೪. ಶ್ರೀ ಕೃಷ್ಣನ ಪವಿತ್ರವಾದ ಜನನ ಸಮಯದಲ್ಲಿ ಅಗ್ನಿಹೋತ್ರದ ಅಗ್ನಿಗಳು ಚನ್ನಾಗಿ ಜ್ವಲಿಸಿದುವು. ಗಾಳಿಯು ಪ್ರಸನ್ನವಾಗಿ ಬೀಸಿತು. ಮತ್ತು ಭೂಮಿಯ ಧೂಳಿಯು ಶಾಂತವಾಯಿತು.

ಜ್ಯೋತೀಂಷ್ಯಭ್ಯಧಿಕಂ ರೇಜುರ್ಜಾಯಮಾನೇ ಜನಾರ್ದನೇ ।
ಅಭಿಜಿನ್ನಾಮ ನಕ್ಷತ್ರಂ ಜಯಂತೀ ನಾಮ ಶರ್ವರೀ ॥ ೨೦೫ ॥

ಮುಹೂರ್ತೋ ವಿಜಯೋ ನಾಮ ಯತ್ರ ಜಾತೋ ಜನಾರ್ದನಃ ।
ಅವ್ಯಕ್ತಃ ಶಾಶ್ವತಃ ಕೃಷ್ಣೋ ಹರಿರ್ನಾರಾಯಣಃ ಪ್ರಭುಃ ॥ ೨೦೬ ॥

ಜಜ್ಞೇ ತಥೈವ ಭಗವಾನ್ ಮಾಯಯಾ ಮೋಹಯನ್ ಪ್ರಜಾಃ ।
ಆಕಾಶಾತ್ಪುಷ್ಪವೃಷ್ಟಿಂ ಚ ವವರ್ಷ ತ್ರಿದಶೇಶ್ವರಃ ॥ ೨೦೭ ॥

ಗೀರ್ಭಿರ್ಮಂಗಲಯುಕ್ತಾಭಿಃ ಸ್ತುವಂತೋ ಮಧುಸೂದನಮ್ ।
ಮಹರ್ಷಯಃ ಸಗಂಧರ್ವಾ ಉಪತಸ್ಥುಃ ಸಹಸ್ರಶಃ ॥ ೨೦೮ ॥

ವಸುದೇವಸ್ತು ತಂ ರಾತ್ರೌ ಜಾತಂ ಪುತ್ರಮಧೋಕ್ಷಜಮ್ ।
ಶ್ರೀವತ್ಸಲಕ್ಷಣಂ ದೃಷ್ಟ್ವಾ ಹೃದಿ ದಿವ್ಯೈಃ ಸ್ವಲಕ್ಷಣೈಃ ॥ ೨೦೯ ॥

---

೨೦೫. ಜನಾರ್ದನನು ಜನ್ಮವನ್ನು ಧರಿಸಿದ ಸಮಯದಲ್ಲಿ ತೇಜೋಮಂಡಲವು ಹೆಚ್ಚಾಗಿ ಪ್ರಕಾಶಿಸಿತು. ಮತ್ತು ಆ ಸಮಯವು ಅಭಿಜಿತ್ ಎಂಬ ನಕ್ಷತ್ರದಿಂದಲೂ ಜಯಂತೀ ಎಂಬ ರಾತ್ರಿಯಿಂದಲೂ ಕೂಡಿದ್ದಾಗಿತ್ತು.

೨೦೬. ಜನಾರ್ದನನು ಹುಟ್ಟಿರುವ ಸಮಯವು ವಿಜಯಮುಹೂರ್ತದಿಂದ ಕೂಡಿತ್ತು. ಹೀಗೆ ಅವ್ಯಕ್ತನೂ ಶಾಶ್ವತನೂ ನಾರಾಯಣನೂ ಮತ್ತು ಸಕಲ ಲೋಕ ನಿಯಾಮಕನೂ ಆದ ಹರಿಯು ಕೃಷ್ಣರೂಪದಿಂದ ಜನಿಸಿದನು.

೨೦೭. ಭಗವಂತನಾದ ಶ್ರೀಮನ್ನಾರಾಯಣನು ಮಾಯೆಯಿಂದ ಪ್ರಜೆಗಳನ್ನು ಮೋಹಗೊಳಿಸುತ್ತಾ ಹಾಗೆಯೇ ಜನ್ಮವೆತ್ತಿದನು. ಆಗ ದೇವರಾಜನಾದ ಇಂದ್ರನು ಆಕಾಶದಿಂದ ಪುಷ್ಪವೃಷ್ಟಿಯನ್ನು ಸುರಿಸಿದನು.

೨೦೮. ಮತ್ತು ಸಾವಿರಾರು ಮಂದಿ ಮಹರ್ಷಿಗಳೂ ಗಂಧರ್ವರೂ ಸೇರಿ ಮಂಗಳ ಸೂಚಕವಾದ ಸ್ತುತಿವಚನಗಳಿಂದ ಮಧು ದೈತ್ಯನ ಸಂಹಾರಿಯಾದ ವಿಷ್ಣುವನ್ನು ಸ್ತುತಿಸಿದರು.

೨೦೯. ವಸುದೇವನು ಹೃದಯದಲ್ಲಿ ಶ್ರೀವತ್ಸವೆಂಬ ಲಾಂಛನದಿಂದಲೂ ದಿವ್ಯವಾದ ಶುಭಲಕ್ಷಣದಿಂದಲೂ ಕೂಡಿ ಪುತ್ರರೂಪದಿಂದ ಅವತರಿಸಿದ ಇಂದ್ರಿಯಾತೀತನಾದ ವಿಷ್ಣುವನ್ನು ನೋಡಿದನು.

ಉವಾಚ ವಾಸುದೇವಸ್ತ್ವಂ ರೂಪಂ ಸಂಹರ ವೈ ಪ್ರಭೋ ।
ಭೀತೋಽಹಂ ಕಂಸತಸ್ತಾತ ತಸ್ಮಾದೇವಂ ಬ್ರವೀಮ್ಯಹಮ್ ॥ ೨೧೦ ॥

ಮಮ ಪುತ್ರಾ ಹತಾಸ್ತೇನ ಜ್ಯೇಷ್ಠಾಸ್ತೇಽದ್ಭುತದರ್ಶನಾಃ ।
ವಸುದೇವವಚಃ ಶ್ರುತ್ವಾ ರೂಪಂ ಸಂಹೃತವಾನ್ ಪ್ರಭುಃ ॥ ೨೧೧ ॥

ಅನುಜ್ಞಾತಃ ಪಿತಾ ತ್ವೇನಂ ನಂದಗೋಪಗೃಹಂ ನಯತ್ ।
ಉಗ್ರಸೇನಗೃಹೇ ತಿಷ್ಠದ್ಯಶೋದಾಯೈ ತದಾ ದದೌ ॥ ೨೧೨ ॥

ತುಲ್ಯಕಾಲಂ ತು ಗರ್ಭಿಣ್ಯೌ ಯಶೋದಾ ದೇವಕೀ ತಥಾ ।
ಯಶೋದಾ ನಂದಗೋಪಸ್ಯ ಪತ್ನೀ ಸಾ ನಂದಗೋಪತೇಃ ॥ ೨೧೩ ॥

ಯಾಮೇವ ರಜನೀಂ ಕೃಷ್ಣೋ ಜಜ್ಞೇ ವೃಷ್ಣಿಕುಲೇ ಪ್ರಭುಃ ।
ತಾಮೇವ ರಜನೀಂ ಕನ್ಯಾ ಯಶೋದಾಯಾಂ ವ್ಯಜಾಯತ ॥ ೨೧೪ ॥

---

೨೧೦. ಮತ್ತು ಆ ವಸುದೇವನು ಕೃಷ್ಣನನ್ನು ಕುರಿತು ಹೀಗೆ ಹೇಳಿದನು. ಪರಮಾತ್ಮನೇ! ನಿನ್ನ ಈ ರೂಪವನ್ನು ಉಪಸಂಹಾರಮಾಡು. ಪುತ್ರನೇ ! ನಾನು ಕಂಸನಿಂದ ಭಯಪಟ್ಟಿರುವೆನು. ಆ ಕಾರಣದಿಂದ ಈ ರೀತಿ ಹೇಳುತ್ತಿದ್ದೇನೆ.

೨೧೧. ಆ ಕಂಸನಿಂದ ಅದ್ಭುತವಾದ ದರ್ಶನವುಳ್ಳ, ನಿನಗೆ ಜ್ಯೇಷ್ಠರಾಗಿದ್ದ ಅನೇಕ ಪುತ್ರರು ಕೊಲ್ಲಲ್ಪಟ್ಟಿರುವರು. ವಸುದೇವನ ಈ ವಚನವನ್ನು ಕೇಳಿ ಸರ್ವ ಶಕ್ತನಾದ ಕೃಷ್ಣನು ತನ್ನ ಅದ್ಭುತರೂಪವನ್ನು ಉಪಸಂಹಾರಮಾಡಿದನು.

೨೧೨. ಆಗ ಭಗವಂತನಿಂದ ಅನುಜ್ಞೆಹೊಂದಿದ ವಸುದೇವನು ಕೃಷ್ಣನನ್ನು ನಂದಗೋಪನ ಮನೆಗೆ ಎತ್ತಿಕೊಂಡು ಹೋದನು. ಮತ್ತು ಉಗ್ರಸೇನನ ಮನೆಯಲ್ಲಿದ್ದ ಯಶೋದೆಗೆ ಪುತ್ರನನ್ನು ಅರ್ಪಿಸಿದನು.

೨೧೩. ಈ ನಡುವೆ ಯಶೋದೆ ಮತ್ತು ದೇವಕಿಯರು ಒಂದೇ ಕಾಲದಲ್ಲಿ ಗರ್ಭವತಿಯರಾಗಿದ್ದರು. ಯಶೋದೆ ಎಂಬುವಳು ನಂದಗೋಪನೆಂಬ ಗೋಪರಾಜನ ಪತ್ನಿಯಾಗಿದ್ದಳು.

೨೧೪. ವೃಷ್ಣಿಯ ವಂಶದಲ್ಲಿ ಜಗತ್ಪ್ರಭುವಾದ ಶ್ರೀಕೃಷ್ಣನು ಯಾವ ರಾತ್ರಿಯಲ್ಲಿ ಹುಟ್ಟಿದನೋ, ಅದೇ ರಾತ್ರಿಯಲ್ಲಿ ಯಶೋದಾ ದೇವಿಯಲ್ಲಿ ಒಬ್ಬಳು ಕನ್ಯೆಯು ಜನಿಸಿದಳು.

15

ತಂ ಜಾತಂ ರಕ್ಷಮಾಣಸ್ತು ವಸುದೇವೋ ಮಹಾಯಶಾಃ ।
ಪ್ರಾದಾತ್ಪುತ್ರಂ ಯಶೋದಾಯ್ಯೈ ಕನ್ಯಾಂ ತು ಜಗೃಹೇ ಸ್ವಯಮ್
॥ ೨೧೫ ॥

ದತ್ತ್ವೇಮಂ ನಂದಗೋಪಸ್ಯ ರಕ್ಷೇಮಮಿತಿ ಚಾಬ್ರವೀತ್ ।
ಸುತಸ್ತೇ ಸರ್ವಕಲ್ಯಾಣೋ ಯಾದವಾನಾಂ ಭವಿಷ್ಯತಿ ॥ ೨೧೬ ॥

ಅಯಂ ಸ ಗರ್ಭೋ ದೇವಕ್ಯಾ ಮಮ ಕ್ಲೇಶಾನ್ ಹರಿಷ್ಯತಿ ।
ಉಗ್ರಸೇನಾತ್ಮಜಾಯಾಥ ಕನ್ಯಾಮಾನಕದುಂದುಭಿಃ ॥ ೨೧೭ ॥

ನಿವೇದಯಾಮಾಸ ತದಾ ಕನ್ಯೇತಿ ಶುಭಲಕ್ಷಣಾ ।
ಸ್ವಸುಸ್ತು ತನಯಂ ಕಂಸೋ ಜಾತಂ ನೈವಾವಧಾರಯತ್ ॥ ೨೧೮ ॥

ಅಥ ತಾಮಪಿ ದುಷ್ಟಾತ್ಮಾ ಹ್ಯುತ್ಸಸರ್ಜ ಮುದಾನ್ವಿತಃ ।
ತವೈಷಾ ಹಿ ಯಥಾ ಕನ್ಯಾ ತಥಾ ಮಮ ನ ಸಂಶಯಃ ।
ನ ಹನ್ಮ್ಯೇನಾಂ ಮಹಾಬಾಹೋ ವ್ರಜತ್ವೇಷಾ ಯಥಾರುಚಿ ॥ ೨೧೯ ॥

---

೨೧೫. ಮಹಾ ಯಶಸ್ವಿಯಾದ ವಸುದೇವನು ತನ್ನ ಪುತ್ರನನ್ನು ರಕ್ಷಿಸುವುದಕ್ಕೋಸ್ಕರ ಆ ಪುತ್ರನನ್ನು ಯಶೋದಾ ದೇವಿಗೆ ಕೊಟ್ಟನು, ಮತ್ತು ಯಶೋದೆಯಿಂದ ಕನ್ಯೆಯನ್ನು ತೆಗೆದುಕೊಂಡು ಬಂದನು.

೨೧೬. ತನ್ನ ಪುತ್ರನನ್ನು ನಂದಗೋಪನಿಗೆ ಕೊಟ್ಟು ನೀನು ಇವನನ್ನು ಪಾಲಿಸು ಎಂದು ಹೇಳಿದನು. ಸರ್ವ ಕಲ್ಯಾಣಗಳಿಂದ ಕೂಡಿದ ಈ ಪುತ್ರನು ಯಾದವ ವಂಶದಲ್ಲಿ ಬದುಕಿರಲಿ.

೨೧೭. ದೇವಕಿಯಲ್ಲಿ ಹುಟ್ಟಿದ ಈ ಗರ್ಭವು ದೇವಕಿಯ ಮತ್ತು ನನ್ನ ಕಷ್ಟಗಳನ್ನು ನಿವಾರಿಸಲಿ; ಎಂದು ಹೇಳಿ ವಸುದೇವನು ಉಗ್ರಸೇನನ ಮಗನಾದ ಕಂಸನಿಗೆ ಕನ್ಯೆಯು ಜನಿಸಿರುವುದನ್ನು ತಿಳಿಸಿದನು.

೨೧೮. ವಸುದೇವನು ಶುಭಲಕ್ಷಣಗಳಿಂದ ಕೂಡಿದ ಕನ್ಯೆಯು ಜನಿಸಿರುವಳೆಂದು ತಿಳಿಸಿದ್ದರಿಂದ ಆಗ ಕಂಸನು ತಂಗಿಯಾದ ದೇವಕಿಯಲ್ಲಿ ಪುತ್ರನು ಹುಟ್ಟಿರುವುದನ್ನು ತಿಳಿಯಲಿಲ್ಲ.

೨೧೯. ತರುವಾಯ ದುಷ್ಟಸ್ವಭಾವವುಳ್ಳ ಕಂಸನು ಸಂತೋಷಗೊಂಡವನಾಗಿ ಬಾಹುಬಲದಿಂದ ಕೂಡಿದ ವಸುದೇವನೇ! ಇವಳು ನಿನಗೆ ಹೇಗೆ ಕನ್ಯೆಯೋ, ಹಾಗೆ ನನಗೂ ಕನ್ಯೆಯಾಗಿರುವಳು. ಇವಳನ್ನು ನಾನು ಕೊಲ್ಲುವುದಿಲ್ಲ. ಇವಳು ಯಥೇಷ್ಟವಾಗಿ ಹೋಗಲಿ, ಎಂದು ಹೇಳಿ ಅವಳನ್ನು ಬಿಟ್ಟನು.

ಕನ್ಯಾ ಸಾ ವವೃಧೇ ತತ್ರ ವೃಷ್ಣಿಸದ್ಮನಿ ಪೂಜಿತಾ ।
ಪುತ್ರವತ್ಪಾಲಯಾಮಾಸ ದೇವೀ ದೇವೀಂ ಮುದಾ ತದಾ ॥ ೨೨೦ ॥

ತಮೇವಂವಿಧಿನೋತ್ಪನ್ನಮಾಹುಃ ಕೃಷ್ಣಂ ಪ್ರಜಾಪತಿಮ್ ।
ಏಕಾದಶಾ ತು ಜಜ್ಞೇ ವೈ ರಕ್ಷಾರ್ಥಂ ಕೇಶವಸ್ಯ ಹ ॥ ೨೨೧ ॥

ಏತಾಂ ಚೈಕಾಗ್ರಮನಸಃ ಪೂಜಯಿಷ್ಯಂತಿ ಯಾದವಾಃ ।
ದೇವದೇವೋ ದಿವ್ಯವಪುಃ ಕೃಷ್ಣಃ ಸಂರಕ್ಷಿತೋಽನಯಾ ॥ ೨೨೨ ॥

ಋಷಯ ಊಚುಃ :—
ಕಿಮರ್ಥಂ ವಸುದೇವಸ್ಯ ಭೋಜಃ ಕಂಸೋ ನರಾಧಿಪಃ ।
ಜಘಾನ ಪುತ್ರಾನ್ ಬಾಲಾನ್ ವೈ ತನ್ನೋ ವ್ಯಾಖ್ಯಾತುಮರ್ಹಸಿ ॥ ೨೨೩ ॥

ಸೂತ ಉವಾಚ :—
ಶೃಣುಧ್ವಂ ವೈ ಯಥಾ ಕಂಸಃ ಪುತ್ರಾನಾನಕದುಂದುಭೇಃ ।
ಜಾತಾಞ್ಜಾತಾನ್ ಸುತಾನ್ ಸರ್ವಾನ್ನಿಕ್ಷಿಪೇಷ ವೃಥಾಮತಿಃ॥ ೨೨೪ ॥

---

೨೨೦. ತರುವಾಯ ಆ ಕನ್ಯೆಯು ವೃಷ್ಣಿಯ ಗೃಹದಲ್ಲಿ ಉಪಚರಿಸಲ್ಪಟ್ಟವಳಾಗಿ ವೃದ್ಧಿಹೊಂದುತ್ತಾ ಬಂದಳು. ದೇವಕಿಯು ಈ ದೇವಕಿಯನ್ನು ಸಂತೋಷದಿಂದ ಪುತ್ರನಂತೆ ಪಾಲಿಸಿದಳು.

೨೨೧. ಜಗತ್ಪಾಲಕನಾದ ವಿಷ್ಣುಪರಮಾತ್ಮನು ಈ ವಿಧಾನದಿಂದ ಕೃಷ್ಣನಾಗಿ ಅವತರಿಸಿದನೆಂದು ಪ್ರಾಜ್ಞರು ಹೇಳುತ್ತಾರೆ. ಏಕಾದಶಾ ಎಂಬುವಳು ಕೃಷ್ಣನ ರಕ್ಷಣೆಗೋಸ್ಕರ ಹುಟ್ಟಿರುವಳು.

೨೨೨. ಯಾದವರು ಏಕಾಗ್ರತೆಯನ್ನು ಹೊಂದಿದ ಚಿತ್ತದಿಂದ ಈ ಯಶೋದೆಯನ್ನು ಅರ್ಚಿಸುತ್ತಾರೆ. ದೇವಾದಿದೇವನೂ ದಿವ್ಯದೇಹವನ್ನು ಧರಿಸಿದವನೂ ಆದ ಶ್ರೀಕೃಷ್ಣನು ಈ ಯಶೋದೆಯಿಂದ ರಕ್ಷಿಸಲ್ಪಟ್ಟಿರುವನು.

೨೨೩. ಋಷಿಗಳು ಇಂತೆಂದರು :— ಭೋಜವಂಶದ ಕಂಸ ಮಹಾರಾಜನು ವಸುದೇವನಿಗೆ ಹುಟ್ಟಿದ ಬಾಲಕರಾದ ಪುತ್ರರನ್ನು ಏಕೆ ಕೊಂದುಹಾಕಿದನು? ಈ ಅಂಶವನ್ನು ನಮಗೆ ವಿವರಿಸಲು ಅರ್ಹನಾಗಿದ್ದೀ.

೨೨೪. ಸೂತಮುನಿಯು ಪ್ರತ್ಯುತ್ತರವಿತ್ತನು :— ನಿರರ್ಥಕವಾದ ವಿವೇಕವುಳ್ಳ ಕಂಸನು ವಸುದೇವನಿಗೆ ಪುತ್ರರು ಹುಟ್ಟಿದ ಹಾಗೆಲ್ಲಾ ಆ ಪುತ್ರರನ್ನೆಲ್ಲಾ ಯಾವ ಕಾರಣದಿಂದ ಕೊಂದುಹಾಕಿದನೋ, ಆ ಕಾರಣವನ್ನು ಕೇಳಿರಿ.

ಭಯಾದ್ಯಥಾ ಮಹಾಬಾಹೋ ಜಾತಃ ಕೃಷ್ಣೋ ವಿವಾಸಿತಃ ।
ಯಥಾ ಚ ಗೋಷು ಗೋವಿಂದಃ ಸಂವೃದ್ಧಃ ಪುರುಷೋತ್ತಮಃ ॥ ೨೨೫ ॥

ಉದ್ವಾಹೇ ಕಿಲ ದೇವಕ್ಯಾ ವಸುದೇವಸ್ಯ ಧೀಮತಃ ।
ಸಾರಥ್ಯಂ ಕೃತವಾನ್ ಕಂಸೋ ಯುವರಾಜಸ್ತದಾಭವತ್ ॥ ೨೨೬ ॥

ತತೋಽಂತರಿಕ್ಷೇ ವಾಗಾಸೀದ್ದಿವ್ಯಾಭೂದ್ಯಸ್ಯ ಕಸ್ಯ ಚಿತ್ ।
ಕಂಸಸ್ಯ ನಾಮಮಾತ್ರೇಣ ಪುಷ್ಕಲಾ ಲೋಕಸಾಕ್ಷಿಣೀ ॥ ೨೨೭ ॥

ಯಾಮೇತಾಂ ವಹಸೇ ಕಂಸ ರಥೇನ ಪ್ರಿಯಕಾರಣಾತ್ ।
ತಸ್ಯಾ ಯಶ್ಚಾಷ್ಟಮೋ ಗರ್ಭಃ ಸ ತೇ ಮೃತ್ಯುರ್ಭವಿಷ್ಯತಿ ॥ ೨೨೮ ॥

ತಾಂ ಶ್ರುತ್ವಾ ವ್ಯಥಿತೋ ವಾಣೀಂ ತದಾ ಕಂಸೋ ವೃಥಾಮತಿಃ ।
ನಿಷ್ಕೃಷ್ಯ ಖಡ್ಗಂ ತಾಂ ಕನ್ಯಾಂ ಹಂತುಕಾಮೋಽಭವತ್ತದಾ ॥ ೨೨೯ ॥

---

೨೨೫. ಮತ್ತು ಬಾಹುಬಲವುಳ್ಳ ವಸುದೇವನಿಗೆ ಪುತ್ರನಾಗಿ ಹುಟ್ಟಿದ ಕೃಷ್ಣನು ಹೇಗೆ ಬೇರೆ ಸ್ಥಳಕ್ಕೆ ಒಯ್ಯಲ್ಪಟ್ಟನೋ, ಮತ್ತು ಪುರುಷೋತ್ತಮನಾದ ಶ್ರೀಕೃಷ್ಣನು ಗೋಕುಲದಲ್ಲಿ ಹೇಗೆ ಬೆಳೆದನೋ, ಈ ಎಲ್ಲಾ ಚರಿತ್ರೆಯನ್ನು ಶ್ರವಣಮಾಡಿದನು.

೨೨೬. ಜ್ಞಾನಿಯಾದ ವಸುದೇವನಿಗೂ ಮತ್ತು ದೇವಕಿಗೂ ನಡೆದ ವಿವಾಹೋತ್ಸವದಲ್ಲಿ ಆಗ ಯುವರಾಜನಾಗಿದ್ದ ಕಂಸನು ಆ ವಧೂವರರ ಉತ್ಸವದಲ್ಲಿ ರಥದಲ್ಲಿ ಸಾರಥ್ಯವನ್ನು ನಡೆಸಿದನು.

೨೨೭. ಆಗ ನಾಮವನ್ನು ಗ್ರಹಿಸಿ ಕಂಸನನ್ನು ಸಂಭೋಧಿಸಿರುವ ಮತ್ತು ಎಲ್ಲಾ ಅಂಶಗಳಲ್ಲಿಯೂ ಸರ್ವಲೋಕಗಳಿಗೆ ಸ್ಪಷ್ಟವಾದ ಯಾರೋ ಒಬ್ಬನ ದಿವ್ಯವಾದ ಆಕಾಶವಾಣಿಯು ಆಕಾಶದಲ್ಲಿ ಕೇಳಿಸಿತು.

೨೨೮. ಕಂಸ ಮಹಾರಾಜನೇ! ಪ್ರೀತಿಯ ಸಲುವಾಗಿ ರಥದಲ್ಲಿ ಕುಳ್ಳಿರಿಸಿ ಯಾವ ದೇವಕಿಯ ಉತ್ಸವ ನಡೆಸುತ್ತಿರುವೆಯೋ, ಆಕೆಯಲ್ಲಿ ಹುಟ್ಟುವ ಎಂಟನೆಯ ಗರ್ಭವು ನಿನಗೆ ಮೃತ್ಯುವಾಗುವುದು.

೨೨೯. ನಿರರ್ಥಕವಾದ ವಿವೇಕವುಳ್ಳ ಕಂಸನು ಆಕಾಶವಾಣಿಯನ್ನು ಕೇಳಿ ದುಃಖಗೊಂಡವನಾಗಿ ಆಗ ತನ್ನ ಖಡ್ಗವನ್ನು ಸೆಳೆದು ಆ ದೇವಕಿಯನ್ನು ಕೊಲ್ಲುವ ಇಷ್ಟವುಳ್ಳವನಾದನು.

ತಮುವಾಚ ಮಹಾಬಾಹುರ್ವಸುದೇವಃ ಪ್ರತಾಪವಾನ್ ।
ಉಗ್ರಸೇನಾತ್ಮಜಂ ಕಂಸಂ ಸೌಹೃದಾತ್ಪ್ರಣಯೇನ ವಾ ॥ ೨೩೦ ॥

ನ ಸ್ತ್ರಿಯಂ ಕ್ಷತ್ರಿಯೋ ಜಾತು ಹಂತುಮರ್ಹತಿ ಕಶ್ಚನ ।
ಉಪಾಯಃ ಪರಿದೃಷ್ಟೋಽತ್ರ ಮಯಾ ಯಾದವನಂದನ ॥ ೨೩೧ ॥

ಯೋಽಸ್ಯಾಃ ಸಂಜಾಯತೇ ಗರ್ಭೋಽಷ್ಟಮಃ ಪೃಥಿವೀಪತೇ ।
ತಮಹಂ ತೇ ಪ್ರಯಚ್ಛಾಮಿ ತತ್ರ ಕುರ್ಯಾ ಯಥಾಕ್ರಮಮ್
॥ ೨೩೨ ॥

ನ ತ್ವಿದಾನೀಂ ಯಥೇಷ್ಟಂ ತ್ವಂ ವರ್ತೇಥಾ ಭೂರಿದಕ್ಷಿಣ ।
ಸರ್ವಾನಪ್ಯಥವಾ ಗರ್ಭಾನ್ ಪೃಥಕ್ಚ್ಛೇಷ್ಯಾಮಿ ತೇ ವಶಮ್ ॥ ೨೩೩ ॥

ಏವಂ ಮಿಥ್ಯಾ ನರಶ್ರೇಷ್ಠ ವಾಗೇಷಾ ನ ಭವಿಷ್ಯತಿ ।
ಏವಮುಕ್ತೋಽನುನೀತಃ ಸ ಜಗ್ರಾಹ ವಚನಂ ತದಾ ॥ ೨೩೪ ॥

---

೨೩೦. ಆಗ ಬಾಹುಬಲಸಂಪನ್ನನೂ ಪ್ರತಾಪಶಾಲಿಯೂ ಆದ ವಸುದೇವನು ಉಗ್ರಸೇನನ ಪುತ್ರನಾದ ಆ ಕಂಸನನ್ನು ಕುರಿತು ಸ್ನೇಹ ಮತ್ತು ಪ್ರೇಮ ಭಾವಗಳಿಂದ ಕೂಡಿ ಈ ರೀತಿಯಾಗಿ ಹೇಳಿದನು.

೨೩೧. ಯಾದವ ಪುತ್ರನಾದ ಕಂಸನೆ! ಯಾರೊಬ್ಬ ಕ್ಷತ್ರಿಯನೂ ಯಾವಾಗಲೂ ಸ್ತ್ರೀಯನ್ನು ಕೊಲ್ಲುವುದು ಯುಕ್ತವಲ್ಲ. ನಿನಗೂ ವಿಪತ್ತನ್ನು ಈಕೆಯಿಂದ ತಪ್ಪಿಸುವ ವಿಷಯದಲ್ಲಿ ನನ್ನಿಂದ ಒಂದು ಉಪಾಯವು ಯೋಚಿಸಲ್ಪಟ್ಟಿದೆ.

೨೩೨. ಕಂಸ ಮಹಾರಾಜನೆ! ಈಕೆಯಲ್ಲಿ ಎಂಟನೆಯದಾಗಿ ಯಾವ ಗರ್ಭವು ಜನಿಸುವುದೊ, ಆ ಶಿಶುವನ್ನು ನಾನು ನಿನಗೆ ಒಪ್ಪಿಸುತ್ತೇನೆ. ಆ ಶಿಶುವಿನಲ್ಲಿ ನಿನಗೆ ತೋರಿದ ಕ್ರಮದಂತೆ ಮಾಡು

೨೩೩. ಅತಿಶಯವಾಗಿ ದಕ್ಷಿಣಾ ದಾನಮಾಡುವ ಶೀಲವುಳ್ಳ ರಾಜನೆ! ಈಗ ಇವಳನ್ನು ಕೊಲ್ಲುವ ಇಷ್ಟದಂತೆ ನಡೆದುಕೊಳ್ಳಬೇಡ, ಅಥವಾ ಇವಳಲ್ಲಿ ಗರ್ಭದಿಂದ ಜನಿಸುವ ಎಲ್ಲ ಶಿಶುಗಳನ್ನು ಪ್ರತ್ಯೇಕವಾಗಿ ನಿನಗೆ ವಶಪಡಿಸುತ್ತೇನೆ.

೨೩೪. ಪುರುಷಶ್ರೇಷ್ಠನೆ! ಈ ರೀತಿಯಾಗಿ ನಡೆದುಕೊಳ್ಳುವುದರಿಂದ ಆಕಾಶವಾಣಿಯು ಅನೃತವಾಗಿ ಪರಿಣಮಿಸಿಸುವುದರಿಂದ ಅದು ಅಯಥಾರ್ಥವಾಗುವುದಿಲ್ಲ ಹೀಗೆ ಸಮಾಧಾನದಿಂದ ಹೇಳಲ್ಪಟ್ಟ ಕಂಸನು ಆಗ ಆ ವಚನವನ್ನು ಅಂಗೀಕರಿಸಿದನು.

ವಸುದೇವಶ್ಚ ತಾಂ ಭಾರ್ಯಾಮವಾಪ್ಯ ಮುದಿತೋಽಭವತ್ ।
ಕಂಸಸ್ತಸ್ಯಾವಧೀತ್ ಪುತ್ರಾನ್ ಪಾಪಕರ್ಮಾ ವೃಥಾಮತಿಃ ॥ ೨೩೫ ॥

ಋಷಯ ಊಚುಃ :—

ಕ ಏಷ ವಸುದೇವಸ್ತು ದೇವಕೀ ಚ ಯಶಸ್ವಿನೀ ।
ನಂದಗೋಪಸ್ತು ಕಸ್ತ್ವೇಷ ಯಶೋದಾ ಚ ಮಹಾಯಶಾಃ॥ ೨೩೬ ॥

ಯೋ ವಿಷ್ಣುಂ ಜನಯಾಮಾಸ ಯಂ ಚ ತಾತೇತ್ಯಭಾಷತ ।
ಯಾ ಗರ್ಭಂ ಜನಯಾಮಾಸ ಯಾ ಚೈನಂ ಚಾಭ್ಯವರ್ಧಯತ್ ॥ ೨೩೭ ॥

ಸೂತ ಉವಾಚ :—

ಪುರುಷಃ ಕಶ್ಯಪಸ್ತ್ವಾಸೀದದಿತಿಸ್ತತ್ಪ್ರಿಯಾ ತಥಾ ।
ಕಶ್ಯಪೋ ಬ್ರಹ್ಮಣೋಽಂಶಶ್ಚ ಪೃಥಿವ್ಯಾ ಅದಿತಿಸ್ತಥಾ ॥ ೨೩೮ ॥

---

೨೩೫. ತರುವಾಯ ವಸುದೇವನು ದೇವಕಿಯನ್ನು ಭಾರ್ಯೆಯನ್ನಾಗಿ ಹೊಂದಿ ದಾಂಪತ್ಯ ಸೌಖ್ಯದಿಂದ ಆನಂದಹೊಂದಿದವನಾದನು. ಪಾಪಾಚಾರವುಳ್ಳವನೂ ನಿರರ್ಥಕವಾದ ಪಾಂಡಿತ್ಯವುಳ್ಳವನೂ ಆದ ಕಂಸನು ವಸುದೇವನಿಂದ ಜನಿಸಿದ ಎಲ್ಲ ಪುತ್ರರನ್ನು ಸಂಹರಿಸಿದನು.

೨೩೬. ಮುನಿಜನರು ಇಂತೆಂದರು :—ಈ ವಸುದೇನೆಂಬುವನು ಯಾರು? ಕೀರ್ತಿವಂತೆಯಾದ ದೇವಕಿಯು ಯಾರು? ಈ ನಂದಗೋಪನೆಂಬುವನು ಯಾರು? ಮತ್ತು ಕೀರ್ತಿಸಂಪನ್ನೆಯಾದ ಯಶೋದೆಯು ಯಾರು?

೨೩೭. ಯಾರು ವಿಷ್ಣುವನ್ನು ಪುತ್ರನನ್ನಾಗಿ ಹೊಂದಿರುವನೊ, ಯಾರನ್ನು ವಿಷ್ಣುಪರಮಾತ್ಮನು "ತಾತ" ಎಂದು ಕರೆದನೊ, ಯಾರು ವಿಷ್ಣುವನ್ನು ಗರ್ಭದಲ್ಲಿ ಧರಿಸಿದಳೊ, ಮತ್ತು ಯಾರು ವಿಷ್ಣುವನ್ನು ಪೋಷಿಸಿದಳೊ, ಅವರೆಲ್ಲರು ಯಾರು?

೨೩೮. ಸೂತಮುನಿಯು ಇಂತೆಂದನು:—ಹಿಂದೆ ಕಶ್ಯಪಮುನಿಯೆಂಬ ಪುರುಷನಿದ್ದನು. ಮತ್ತು ಅದಿತಿ ಎಂಬುವಳು ಆ ಮುನಿಯ ಪ್ರಿಯೆಯಾಗಿದ್ದಳು. ಇವರಲ್ಲಿ ಕಶ್ಯಪಮುನಿಯು ಬ್ರಹ್ಮನ ಅಂಶಸ್ವರೂಪನೂ ಮತ್ತು ಅದಿತಿಯು ಪೃಥವಿಯ ಅಂಶಸಂಭೂತಳೂ ಆಗಿದ್ದರು.

ನಂದೋ ದ್ರೋಣಃ ಸಮಾಖ್ಯಾತೋ ಯಶೋದಾ ಚ ಧರಾಭವತ್ ।
ಅಥ ಕಾಮಾನ್ಮಹಾಬಾಹುರ್ದೇವಕ್ಯಾಃ ಸಂಪ್ರವರ್ಧಯನ್ ॥ ೨೩೯ ॥

ಅಚರತ್ಸ ಮಹೀಂ ದೇವಃ ಪ್ರವಿಷ್ಟೋ ಮಾನುಷೀಂ ತನುಮ್ ।
ಮೋಹಯನ್ ಸರ್ವಭೂತಾನಿ ಯೋಗಾತ್ಮಾ ಯೋಗಮಾಯಯಾ ॥ ೨೪೦ ॥

ನಷ್ಟೇ ಧರ್ಮೇ ತದಾ ಜಜ್ಞೇ ವಿಷ್ಣುರ್ವೃಷ್ಣಿಕುಲೇ ಸ್ವಯಮ್ ।
ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಮ್ ॥ ೨೪೧ ॥

ವೈದರ್ಭೀ ರುಕ್ಮಿಣೀ ಕನ್ಯಾ ಸತ್ಯಾ ನಗ್ನಜಿತಸ್ತದಾ ।
ಸತ್ರಾಜಿತಃ ಸತ್ಯಭಾಮಾ ಜಾಂಬವತ್ಯಪಿ ರೋಹಿಣೀ ॥ ೨೪೨ ॥

ಶೈಬ್ಯಾ ಧನ್ಯಾನಿ ದೇವೀನಾಂ ಸಹಸ್ರಾಣಿ ಚ ಷೋಡಶ ।
ಚತುರ್ದಶ ತು ಯೇ ಪ್ರೋಕ್ತಾ ಗಣಾಸ್ತ್ವಪ್ಸರಸಾಂ ದಿವಿ ॥ ೨೪೩ ॥

---

೨೩೯. ನಂದಗೋಪನು ಬ್ರಹ್ಮನ ಅಂಶವೆಂದು ಪ್ರಸಿದ್ಧನಾಗಿರುವನು. ಮತ್ತು ಯಶೋದೆಯು ಪೃಥಿವಿಯ ಅವತಾರವಾಗಿದ್ದಳು. ಅನಂತರದಲ್ಲಿ ಮಹಾಬಾಹು ಬಲವುಳ್ಳ ವಿಷ್ಣುವು ದೇವಕಿಯ ಕಾಮಾರ್ಥಗಳನ್ನು ಪೂರ್ತಿಗೊಳಿಸಿದನು.

೨೪೦. ಆಗ ಯೋಗೇಶ್ವರ ರೂಪಿಯಾದ ವಿಷ್ಣುಪರಮಾತ್ಮನು ತನ್ನ ಯೋಗಮಾಯೆಯಿಂದ ಸರ್ವ ಪ್ರಾಣಿಗಳನ್ನು ಮೋಹಪಡಿಸುತ್ತ ಮಾನುಷ ದೇಹವನ್ನು ಪ್ರವೇಶಿಸಿ ಭೂಮಿಯಲ್ಲಿ ಸಂಚರಿಸಿದನು.

೨೪೧. ಧರ್ಮಮಾರ್ಗವು ನಶಿಸಿ ಹೋಗಿರುವ ಆ ಸಮಯದಲ್ಲಿ ಮಹಾವಿಷ್ಣುವು ಧರ್ಮಮಾರ್ಗ ಪ್ರತಿಷ್ಠೆಯನ್ನೂ ಮತ್ತು ಧರ್ಮ ದ್ವೇಷಿಗಳಾದ ಅಸುರರ ನಾಶವನ್ನೂ ಮಾಡಲು ತಾನು ಯಾದವ ಕುಲದಲ್ಲಿ ಜನಿಸಿದನು.

೨೪೨. ವಿದರ್ಭ ರಾಜನ ಪುತ್ರಿಯಾದ ರುಕ್ಮಿಣಿ, ನಗ್ನಜಿತನ ಕನ್ಯೆಯಾದ ಸತ್ಯಾ, ಸತ್ರಾಜಿತನ ಸುತೆಯಾದ ಸತ್ಯಭಾಮಾ ಮತ್ತು ಜಾಂಬವಂತನ ಕುವರಿಯಾದ ರೋಹಿಣಿ—ಇವರು ಶ್ರೀ ಕೃಷ್ಣನ ಪ್ರಿಯೆಯರಾಗಿದ್ದರು.

೨೪೩. ಶಿಬಿಯ ತನಯಳಾದ ಶೈಬ್ಯಾ ಎಂಬುವಳು--ಮುಂತಾದ ಹದಿನಾರು ಸಹಸ್ರ ಮಂದಿ ಸ್ತ್ರೀಯರು ಶ್ರೀ ಕೃಷ್ಣನ ಪ್ರೇಯಸಿಯರಾಗಿದ್ದರು. ದೇವಲೋಕದಲ್ಲಿ ಅಪ್ಸರಾಂಗನೆಯರ ಹದಿನಾಲ್ಕು ಗಣಗಳು ಇವೆಯೆಂದು ಹೇಳಲ್ಪಟ್ಟಿರುವುದು.

ವಿಚಾರ್ಯ ದೇವೈಃ ಶಕ್ರೇಣ ವಿಶಿಷ್ಟಾಸ್ತ್ವಿಹ ಪ್ರೇಷಿತಾಃ ।
ಪತ್ನ್ಯರ್ಥಂ ವಾಸುದೇವಸ್ಯ ಉತ್ಪನ್ನಾ ರಾಜವೇಶ್ಮಸು ॥ ೨೪೪ ॥

ಏತಾಃ ಪತ್ನ್ಯೋ ಮಹಾಭಾಗಾ ವಿಷ್ವಕ್ಸೇನಸ್ಯ ವಿಶ್ರುತಾಃ ।
ಪ್ರದ್ಯುಮ್ನಶ್ಚಾರುದೇಷ್ಣಶ್ಚ ಸುದೇವಃ ಶರಭಸ್ತಥಾ ॥ ೨೪೫ ॥

ಚಾರುಶ್ಚ ಚಾರುಭದ್ರಶ್ಚ ಭದ್ರಚಾರುಸ್ತಥಾಪರಃ ।
ಚಾರುವಿದ್ಯಶ್ಚ ರುಕ್ಮಿಣ್ಯಾಂ ಕನ್ಯಾ ಚಾರುಮತೀ ತಥಾ ॥ ೨೪೬ ॥

ಸಾನುರ್ಭಾನುಸ್ತಥಾಕ್ಷಶ್ಚ ರೋಹಿತೋ ಮಂತ್ರವಿತ್ತಥಾ ।
ಜರೋಽಂಧಕಸ್ತಾಮ್ರಚಕ್ರೌ ಸೌಭರಿಶ್ಚ ಜರಂಧರಃ ॥ ೨೪೭ ॥

ಚತಸ್ರೋ ಜಜ್ಞಿರೇ ತೇಷಾಂ ಸ್ವಸಾರೋ ಗರುಡಧ್ವಜಾತ್ ।
ಭಾನುಃ ಸೌಭರಿಕಾ ಚೈವ ತಾಮ್ರಪರ್ಣೀ ಜರಂಧರಾ ॥ ೨೪೮ ॥

---

೨೪೪. ಇಂದ್ರ ಮತ್ತು ದೇವತೆಗಳಿಂದ ಆ ಅಪ್ಸರಾಂಗನೆಯರಲ್ಲಿ ಉತ್ತಮರೆಂದು ನಿರ್ಣಯಿಸಿ ಕಳುಹಿಸಲ್ಪಟ್ಟಿರುವ ಸ್ತ್ರೀಯರು ವಾಸುದೇವನಿಗೆ ಪತ್ನಿಯರಾಗಲು ರಾಜಗೃಹಗಳಲ್ಲಿ ಕನ್ಯೆಯರಾಗಿ ಜನಿಸಿದರು.

೨೪೫. ಮಹಾ ಭಾಗ್ಯವತಿಯರಾದ ಈ ಅಂಗನೆಯರು ಶ್ರೀ ಕೃಷ್ಣನಿಗೆ ಪ್ರಿಯೆಯರೆಂದು ಪ್ರಸಿದ್ಧರಾಗಿರುವರು. ಇದರಲ್ಲಿ ರುಕ್ಮಿಣಿಯಲ್ಲಿ ಹುಟ್ಟಿದ ಸಂತತಿಯನ್ನು ಹೇಳುವೆನು. ಪ್ರದ್ಯುಮ್ನ, ಚಾರುದೇಷ್ಣ, ಸುದೇವ ಮತ್ತು ಶರಭ ಎಂಬುವರು ರುಕ್ಮಿಣಿಗರ್ಭದಲ್ಲಿ ಜನಿಸಿ ಪ್ರಜಾವರ್ಗದಲ್ಲಿ ಸೇರಿರುವರು.

೨೪೬. ಮತ್ತು ಚಾರು, ಚಾರುಭದ್ರ, ಭದ್ರಚಾರು, ಚಾರುವಿದ್ಯ ಎಂಬ ಪುತ್ರರೂ ಚಾರುಮತೀ ಎಂಬ ಒಬ್ಬಳು ಕನ್ಯೆಯೂ ರುಕ್ಮಿಣಿಯಲ್ಲಿ ಜನಿಸಿರುವ ಪ್ರಜೆಯಾಗಿರುವರು.

೨೪೭. ಸಾನು, ಭಾನು, ಅಕ್ಷ, ರೋಹಿತ, ಮಂತ್ರವಿತ್, ಜರ, ಅಂಧಕ, ತಾಮ್ರ, ಚಕ್ರ, ಸೌಭರಿ ಮತ್ತು ಜರಂಧರ ಎಂಬ ನಾಮಾಂಕಿತರು ಸತ್ಯಭಾಮೆಯ ಪುತ್ರರಾಗಿ ಜನಿಸಿದರು

೨೪೮. ಮತ್ತು ಗರುಡನೆಂಬ ಧ್ವಜಚಿಹ್ನವುಳ್ಳ ವಾಸುದೇವನಿಂದ ಸತ್ಯಭಾಮೆಯಲ್ಲಿ ಹುಟ್ಟಿರುವ ಪುತ್ರರಿಗೆ ಭಾನು, ಸೌಭರಿಕಾ, ತಾಮ್ರಪರ್ಣೀ, ಮತ್ತು ಜರಂಧರಾ ಎಂಬ ನಾಲ್ಕು ಕನ್ಯೆಯರು ಭಗಿನಿಯರಾಗಿ ಜನಿಸಿರುವರು.

ಸತ್ಯಭಾಮಾಸುತಾ ಏತೇ ಜಾಂಬವತ್ಯಾಃ ಪ್ರಜಾಃ ಶೃಣು ।
ಭದ್ರಶ್ಚ ಭದ್ರಗುಪ್ತಶ್ಚ ಭದ್ರಚಿತ್ರಸ್ತಥೈವ ಚ ॥ ೨೪೯ ॥

ಭದ್ರಬಾಹುಶ್ಚ ವಿಖ್ಯಾತಃ ಕನ್ಯಾ ಭದ್ರವತೀ ತಥಾ ।
ಸಂಬೋಧನೀ ಚ ವಿಖ್ಯಾತಾ ಜ್ಞೇಯಾ ಜಾಂಬವತೀಸುತಾಃ ॥ ೨೫೦ ॥

ಸಂಗ್ರಾಮಜಿಚ್ಚ ಶತಜಿತ್ತಥೈವ ಚ ಸಹಸ್ರಜಿತ್ ।
ಏತೇ ಪುತ್ರಾಃ ಸುದೇವ್ಯಾಂ ಚ ವಿಷ್ವಕ್ಸೇನಸ್ಯ ಕೀರ್ತಿತಾಃ ॥ ೨೫೧ ॥

ವೃಕೋ ವೃಕಾಶ್ವೋ ವೃಕಜಿದ್ವೃಜಿನೀ ಚ ವರಾಂಗನಾ ।
ಮಿತ್ರಬಾಹುಃ ಸುನೀಥಶ್ಚ ನಾಗ್ನಜಿತ್ಯಾಃ ಪ್ರಜಾಸ್ತ್ವಿಹ ॥ ೨೫೨ ॥

ಏವಮಾದೀನಿ ಪುತ್ರಾಣಾಂ ಸಹಸ್ರಾಣಿ ನಿಬೋಧತ ।
ಪ್ರಯುತಂ ತು ಸಮಾಖ್ಯಾತಂ ವಾಸುದೇವಸ್ಯ ಯೇ ಸುತಾಃ ॥ ೨೫೩ ॥

---

೨೪೯. ಹಿಂದೆ ಹೇಳಿರುವವರು ಸತ್ಯಭಾಮೆಯಲ್ಲಿ ಜನಿಸಿರುವ ಪ್ರಜೆಯು. ಇನ್ನು ಮುಂದೆ ಜಾಂಬವತಿಯ ಪ್ರಜೆಯನ್ನು ಕೇಳಿರಿ, ಭದ್ರ, ಭದ್ರಗುಪ್ತ, ಮತ್ತು ಭದ್ರಚಿತ್ರ ಎಂಬುವರು ಜಾಂಬವತಿಯ ಪ್ರಜೆಯಾಗಿರುವರು.

೨೫೦. ಮತ್ತು ಭದ್ರಬಾಹು, ಎಂಬ ವಿಖ್ಯಾತನಾದ ಪುತ್ರನೂ ಭದ್ರವತೀ, ಸಂಬೋಧನೀ ಎಂಬ ಪ್ರಸಿದ್ಧರಾದ ಕನ್ಯೆಯರೂ ಜಾಂಬವತೀ ಪುತ್ರರೆಂದು ತಿಳಿಯಬೇಕು.

೨೫೧. ಮತ್ತು ಸಂಗ್ರಾಮ ಜಿತ್, ಶತಜಿತ್, ಸಹಸ್ರಜಿತ್ ಎಂಬ ನಾಮಾಂಕಿತರಾದ ಪುತ್ರರು ಶ್ರೀ ಕೃಷ್ಣನಿಗೆ ಸುದೇವೀ ಎಂಬ ಪತ್ನಿಯಲ್ಲಿ ಹುಟ್ಟಿರುವರೆಂದು ಕೀರ್ತಿಸಲ್ಪಟ್ಟಿರುವರು.

೨೫೨. ಹಾಗು ವೃಕ, ವೃಕಾಶ್ವ, ವೃಕಜಿತ್, ಮಿತ್ರಬಾಹು, ಸುನೀಥ ಎಂಬ ಗಂಡುಮಕ್ಕಳೂ, ಮತ್ತು ವೃಜಿನೀ ನಾಮಾಂಕಿತಳಾದ ಉತ್ತಮಾಂಗನೆಯಾದ ಕನ್ಯೆಯೂ ನಗ್ನಜಿತನ ಪುತ್ರಿಯಾದ ಸತ್ಯಾದೇವಿಯಲ್ಲಿ ಜನಿಸಿರುವರು.

೨೫೩. ಇವರೇ ಮೊದಲಾದ ಸಹಸ್ರಾರು ಮಂದಿ ಪುತ್ರರು ಜನಿಸಿರುವರೆಂದು ತಿಳಿಯಿರಿ. ವಾಸುದೇವನಿಂದ ಜನಿಸಿದ ಪುತ್ರರ ಸಂಖ್ಯೆಯು ಪ್ರಯುತವೆಂದು ಹೇಳಲ್ಪಟ್ಟಿರುವುದು.

ಅಯುತಾನಿ ತಥಾಷ್ಟೌ ಚ ಶೂರಾ ರಣವಿಶಾರದಾಃ ।
ಜನಾರ್ದನಸ್ಯ ವಂಶೋ ವಃ ಕೀರ್ತಿತೋಽಯಂ ಯಥಾತಥಮ್ ॥ ೨೫೪ ॥

ಬೃಹತೀ ಪುರುಭಾರ್ಯಾಸೀತ್ಸುಮಧ್ಯಾ ಸುಗತಿಸ್ತಥಾ ।
ಕನ್ಯಾ ಸಾ ಬೃಹದುಕ್ಥಸ್ಯ ಶೈನೇಯಸ್ಯ ಮಹಾತ್ಮನಃ ॥ ೨೫೫ ॥

ತಸ್ಯಾಃ ಪುತ್ರಾಸ್ತು ವಿಖ್ಯಾತಾಸ್ತ್ರಯಃ ಸಮಿತಿಶೋಭನಾಃ ।
ಅಂಗದಃ ಕನಕಃ ಶ್ವೇತಃ ಕನ್ಯಾ ಶ್ವೇತಾ ತಥೈವ ಚ ॥ ೨೫೬ ॥

ಆಗಾವಹಸ್ಯ ಚಿತ್ರಶ್ಚ ಶೂರಶ್ಚಿತ್ರರಥಶ್ಚ ಯಃ ।
ಚಿತ್ರಸೇನಃ ಸ್ಮೃತಶ್ಚಾಸ್ಯ ಕನ್ಯಾ ಚಿತ್ರವತೀ ತಥಾ ॥ ೨೫೭ ॥

ತುಂಬಶ್ಚ ತುಂಬವರ್ಚಾಶ್ಚ ಜಾತೌ ತುಂಬಸ್ಯ ತಾವುಭೌ ।
ಉಪಾಸಂಗಸುತೌ ದ್ವೌ ತು ವಜ್ರಾರಃ ಕ್ಷಿಪ್ರ ಏವ ಚ ॥ ೨೫೮ ॥

---

೨೫೪. ಮತ್ತು ಅದರ ಜೊತೆಗೆ ಮತ್ತೆ ಎಂಟು ಅಯುತ ಸಂಖ್ಯೆಯು ಸೇರಿಕೊಂಡಿದೆ. ಆ ಪುತ್ರರೆಲ್ಲರೂ ಶೂರರೂ ಯುದ್ಧವಿಶಾರದರೂ ಆಗಿ ವಿಖ್ಯಾತರಾಗಿರುವರು. ಈ ರೀತಿಯಾಗಿ ನನ್ನಿಂದ ಜನಾರ್ದನನ ವಂಶಾವಳಿಯು ನಿಮಗೆ ತಾತ್ವಿಕವಾಗಿ ಕೀರ್ತಿಸಲ್ಪಟ್ಟಿರುವುದು.

೨೫೫. ಪುರುರಾಜನಿಗೆ ಉತ್ತಮವಾದ ಮಧ್ಯಭಾಗದಿಂದಲೂ ಗಂಭೀರವಾದ ಗಮನದಿಂದಲೂ ಕೂಡಿದ ಬೃಹತೀ ಎಂಬ ಪತ್ನಿ ಇದ್ದಳು. ಆಕೆಯು ಶಿನಿಯ ಪುತ್ರನೂ ಮಹಾತ್ಮನೂ ಆದ ಬೃಹದುಕ್ಥನ ಕನ್ಯೆಯಾಗಿದ್ದಳು.

೨೫೬. ಆಕೆಗೆ ಯುದ್ಧದಲ್ಲಿ ಕಲ್ಯಾಣವನ್ನು ತರುವ ಮೂರು ಮಂದಿ ಪುತ್ರರು ಪ್ರಸಿದ್ಧರಾಗಿರುವರು. ಅವರು ಅಂಗದ, ಕನಕ, ಮತ್ತು ಶ್ವೇತ ಎಂಬ ನಾಮಾಂಕಿತರಾಗಿದ್ದರು. ಅಲ್ಲದೆ ಶ್ವೇತಾ ಎಂಬ ಕನ್ಯೆಯು ಇದ್ದಳು.

೨೫೭. ಆಗಾವಹ ಎಂಬುವನಿಗೆ ಚಿತ್ರ, ಚಿತ್ರರಥ ಮತ್ತು ಚಿತ್ರಸೇನ, ಎಂಬ ಪುತ್ರರೂ ಚಿತ್ರವತೀ ಎಂಬ ಕನ್ಯೆಯೂ ಸೇರಿ ನಾಲ್ಕು ಮಂದಿ ಇದ್ದರೆಂದು ಸ್ಮರಿಸಲ್ಪಟ್ಟಿರುವರು.

೨೫೮. ತುಂಬ ಎಂಬುವನಿಗೆ ತುಂಬ, ತುಂಬವರ್ಚಾ ಎಂಬ ಇಬ್ಬರು ಪುತ್ರರು ಜನಿಸಿರುವರು. ವಜ್ರಾರ, ಕ್ಷಿಪ್ರ ಎಂಬುವರಿಬ್ಬರು ಉಪಾಸಂಗನಿಗೆ ಪುತ್ರರಾಗಿ ಜನಿಸಿರುವರು.

ಭೂರೀಂದ್ರಸೇನೋ ಭೂರಿಶ್ಚ ಗವೇಷಣಸುತಾವುಭೌ ।
ಯುಧಿಷ್ಠಿರಸ್ಯ ಕನ್ಯಾಯಾಂ ಸುಧನುಸ್ತಸ್ಯ ಚಾತ್ಮಜಃ ॥ ೨೫೯ ॥

ಶಾಕ್ಯಾಂ ತು ಪಂಚ ತನಯಾಂಲ್ಲೇಭೇ ಸಾಂಬಾತ್ತರಸ್ವಿನಃ ।
ಸತ್ಯಪ್ರಕೃತಯೋ ದೇವಾಃ ಪಂಚ ವೀರಾಃ ಪ್ರಕೀರ್ತಿತಾಃ ॥ ೨೬೦ ॥

ತಿಸ್ರಃ ಕೋಟ್ಯಸ್ತು ಪೌತ್ರಾಣಾಂ ಯಾದವಾನಾಂ ಮಹಾತ್ಮನಾಮ್ ।
ಸರ್ವನೇವ ಕುಲಂ ಯಚ್ಚ ವರ್ತಂತೇ ಚೈವ ಯೇ ಕುಲೇ ॥ ೨೬೧ ॥

ವಿಷ್ಣುಸ್ತೇಷಾಂ ಪ್ರಮಾಣೇ ಚ ಪ್ರಭುತ್ವೇ ಚ ವ್ಯವಸ್ಥಿತಃ ।
ನಿದೇಶಸ್ಥಾಯಿಭಿಸ್ತಸ್ಯ ಬಧ್ಯಂತೇ ಸುರಮಾನುಷಾಃ ॥ ೨೬೨ ॥

ದೇವಾಸುರಾಹವಹತಾ ಅಸುರಾ ಯೇ ಮಹಾಬಲಾಃ ।
ಇಹೋತ್ಪನ್ನಾ ಮನುಷ್ಯೇಷು ಬಾಧಂತೇ ತೇ ತು ಮಾನವಾನ್॥ ೨೬೩ ॥

---

೨೫೯. ಹಾಗೆ ಭೂರೀಂದ್ರಸೇನ, ಭೂರಿ ಎಂಬುವರು ಇಬ್ಬರು ಗವೇಷಣ ಎಂಬುವನಿಗೆ ಪುತ್ರರಾಗಿ ಜನಿಸಿದರು. ಯುಧಿಷ್ಠಿರನ ಕನ್ಯೆಯಲ್ಲಿ ಸಾಂಬ ಎಂಬುವನಿಂದ ಸುಧನು ಎಂಬ ಪುತ್ರನು ಹುಟ್ಟಿದನು.

೨೬೦. ಮತ್ತು ವಿಕ್ರಮ ಶಾಲಿಯಾದ ಸಾಂಬನು ಕಾಶೀ ಎಂಬಾಕೆಯಲ್ಲಿ ಐದು ಮಂದಿ ಪುತ್ರರನ್ನು ಹೊಂದಿದನು. ಆ ಐದುಮಂದಿ ಪುತ್ರರು ಸತ್ಯಶೀಲವುಳ್ಳವರೂ ವೀರರೂ ಮತ್ತು ದೇವತುಲ್ಯರೂ ಆಗಿರುವರೆಂದು ಕೀರ್ತಿಸಲ್ಪಟ್ಟಿರುವರು.

೨೬೧. ಮಹಾತ್ಮರಾದ ಯಾದವರಾಜರಿಗೆ ಮೂರುಕೋಟಿ ಪೌತ್ರಪರಂಪರೆಯು ಇರುವುದು. ಯಾರಾರಿಂದ ಯಾವ ಯಾವ ವಂಶವು ವೃದ್ಧಿಹೊಂದಿತೋ, ಆಯಾಯ ವಂಶದಲ್ಲಿ ಯಾರು ಯಾರು ಜನಿಸಿದರೊ, ಅವರು ವಿಷ್ಣುವಿಗೆ ನಿಯಮ್ಯರಾಗಿದ್ದರು.

೨೬೨. ಅವರ ಪರಿಮಾಣ ಮತ್ತು ಪ್ರಭುತ್ವದಲ್ಲಿ ಶ್ರೀ ಮಹಾವಿಷ್ಣುವು ಅಧಿಕಾರವನ್ನು ಹೊಂದಿದ್ದನು. ದೇವ-ಮಾನುಷರೆಲ್ಲರೂ ವಿಷ್ಣುಪರಮಾತ್ಮನ ಆಜ್ಞಾಧಾರಿಗಳಿಂದ ಬಂಧಿಸಲ್ಪಟ್ಟಿರುವರು.

೨೬೩. ದೇವ-ಅಸುರರ ಸಂಗ್ರಾಮಗಳಲ್ಲಿ ಸಂಹರಿಸಲ್ಪಟ್ಟ ಮಹಾಬಲವಂತರಾದ ಅಸುರರು ಈ ಲೋಕದಲ್ಲಿ ಮನುಷ್ಯ ಯೋನಿಯಲ್ಲಿ ಜನಿಸಿ ಸಾಧುಮಾನವರನ್ನು ಪೀಡಿಸುತ್ತಾರೆ.

ತೇಷಾಮುತ್ಪಾದನಾರ್ಥಾಯ ಉತ್ಪನ್ನಾ ಯಾದವೇ ಕುಲೇ ।
ಸಮುತ್ಪನ್ನಂ ಕುಲಶತಂ ಯಾದವಾನಾಂ ಮಹಾತ್ಮನಾಮ್ ॥ ೨೬೪ ॥

ಇತಿ ಪ್ರಸೂತಿರ್ವೃಷ್ಣೀನಾಂ ಸಮಾಸವ್ಯಾಸಯೋಗತಃ ।
ಕೀರ್ತಿತಾ ಕೀರ್ತನೀಯಾ ಸಾ ಕೀರ್ತಿಸಿದ್ಧಿಮಭೀಪ್ಸತಾ ॥ ೨೬೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಏಕಸಪ್ತತಿತಮೋऽಧ್ಯಾಯಃ

---

೨೬೪. ಅವರನ್ನು ನಿಗ್ರಹಿಸುವುದಕ್ಕೋಸ್ಕರ ಯಾದವ ಶ್ರೇಣಿಯಲ್ಲಿ ಮಹಾತ್ಮರಾದ ಅನೇಕ ಯಾದವರ ನೂರಾರು ಕುಲಗಳ ಪರಂಪರೆಯು ಹುಟ್ಟಿ ಬೆಳೆದಿರುವುದು.

೨೬೫. ಹೀಗೆ ಸಂಕ್ಷೇಪ ವಿಸ್ತಾರಗಳಿಂದ ವೃಷ್ಣಿಗಳ ವಂಶ ಸಂತತಿಯು ಕೀರ್ತಿಸಲ್ಪಟ್ಟಿರುವುದು. ಕೀರ್ತಿಯನ್ನು ಹೊಂದುವ ಆಕಾಂಕ್ಷೆಯುಳ್ಳ ಮಾನವನಿಂದ ಇದು ಯಾವಾಗಲೂ ಕೀರ್ತಿಸಲ್ಪಡಬೇಕು.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಎಪ್ಪತ್ತೊಂದನೆಯ
ಅಧ್ಯಾಯವು ಮುಗಿದುದು.

---

## ದ್ವಿಸಪ್ತತಿತಮೋಽಧ್ಯಾಯಃ

**ಸೂತ ಉವಾಚ :—**

**ಮನುಷ್ಯಪ್ರಕೃತೀನ್ ದೇವಾನ್ ಕೀರ್ತ್ಯಮಾನಾನ್ನಿಬೋಧತ ।**
**ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಃ ಸಾಂಬ ಏವ ಚ ॥ ೧ ॥**

**ಅನಿರುದ್ಧಶ್ಚ ಪಂಚೈತೇ ವಂಶವೀರಾಃ ಪ್ರಕೀರ್ತಿತಾಃ ।**
**ಸಪ್ತರ್ಷಯಃ ಕುಬೇರಶ್ಚ ಯಜ್ಞೋ ಮಣಿವರಸ್ತಥಾ ॥ ೨ ॥**

**ಶಾಲೂಕಿರ್ನಾರದಶ್ಚೈವ ವಿದ್ವಾನ್ ಧನ್ವಂತರಿಸ್ತಥಾ ।**
**ನಂದಿನಶ್ಚ ಮಹಾದೇವಃ ಸಾಲಂಕಾಯನ ಏವ ಚ ।**
**ಆದಿದೇವಸ್ತದಾ ವಿಷ್ಣುರೇಭಿಶ್ಚ ಸಹ ದೇವತೈಃ ॥ ೩ ॥**

**ಋಷಯ ಊಚುಃ :—**

**ವಿಷ್ಣೋಃ ಕಿಮರ್ಥಂ ಸಂಭೂತಿಃ ಸ್ಮೃತಾಃ ಸಂಭೂತಯಃ ಕತಿ ।**
**ಭವಿಷ್ಯಾಃ ಕತಿ ಚಾನ್ಯೇ ತು ಪ್ರಾದುರ್ಭಾವಾ ಮಹಾತ್ಮನಃ ॥ ೪ ॥**

---

೧. ಸೂತಮುನಿಯು ಇಂತೆಂದನು :—ಮುಂದೆ ಹೇಳಲ್ಪಡುವ ಮಾನವ ಪ್ರಕೃತಿಯಿಂದ ಕೂಡಿದ ದೇವತೆಗಳನ್ನು ಶ್ರವಣಮಾಡಿರಿ, ಸಂಕರ್ಷಣ, ವಾಸುದೇವ ಪ್ರದ್ಯುಮ್ನ ಮತ್ತು ಸಾಂಬ ಎಂಬುವರು ಮನುಷ್ಯ ಪ್ರಕೃತಿಯನ್ನು ಹೊಂದಿರುವ ದೇವತೆಗಳಾಗಿರುವರು.

೨, ಮತ್ತು ಅನಿರುದ್ಧನು ಸೇರಿ ಹಿಂದೆ ಹೇಳಿದ ಐದು ಮಂದಿಯು ವಂಶವೀರ ರೆಂದು ಕೀರ್ತಿಸಲ್ಪಟ್ಟಿರುವರು. ಮತ್ತು ಸಪ್ತರ್ಷಿಗಳು, ಕುಬೇರ, ಯಜ್ಞ, ಮಣಿವರ, ಎಂಬುವರು ಅಂತಹ ದೇವಗಣಕ್ಕೆ ಸೇರಿರುವರು.

೩. ಹಾಗು ಶಾಲೂಕಿ, ನಾರದ, ಜ್ಞಾನಿಯಾದ ಧನ್ವಂತರಿ, ನಂದಿನ, ಮಹಾ ದೇವ, ಮತ್ತು ಸಾಲಂಕಾಯನ ಎಂಬುವರು ಮಾನವ ಪ್ರಕೃತಿಯ ದೇವಗಣದಲ್ಲಿ ಎಣಿಸಲ್ಪಡುವರು, ಆದಿ ದೇವನಾದ ಮಹಾ ವಿಷ್ಣುವು ಈ ದೇವತೆಗಳೊಂದಿಗೆ ವಿವಿಧ ಲೀಲೆಗಳನ್ನು ತೋರಿಸುತ್ತಾನೆ.

೪. ಮುನಿಜನರು ಇಂತೆಂದರು :—ಮಹಾವಿಷ್ಣುವು ಏಕೆ ಜನ್ಮವೆತ್ತಿರುವನು? ಹಾಗೆ ಕಳೆದುಹೋದ ಜನ್ಮಗಳೆಷ್ಟು? ಮತ್ತು ಆ ಮಹಾತ್ಮನಿಗೆ ಮುಂದೆ ಎಷ್ಟು ಜನ್ಮಗಳು ಉಂಟಾಗುವುವು?

ಬ್ರಹ್ಮಕ್ಷತ್ರೇಷು ಶಸ್ತೇಷು ಕಿಮರ್ಥಮಿಹ ಜಾಯತೇ ।
ಪುನಃ ಪುನರ್ಮನುಷ್ಯೇಷು ತನ್ನಃ ಪ್ರಬ್ರೂಹಿ ಪೃಚ್ಛತಾಮ್ ॥ ೫ ॥

ವಿಸ್ತರೇಣೈವ ಸರ್ವಾಣಿ ಕರ್ಮಾಣಿ ರಿಪುಘಾತಿನಃ ॥ ೬ ॥

ಶ್ರೋತುಮಿಚ್ಛಾಮಹೇ ಸಮ್ಯಗ್ವದ ಕೃಷ್ಣಸ್ಯ ಧೀಮತಃ ।
ಕರ್ಮಣಾಮಾನುಪೂರ್ವೀಂ ಚ ಪ್ರಾದುರ್ಭಾವಾಶ್ಚ ಯೇ ಪ್ರಭೋ
॥ ೭ ॥

ಯಾ ವಾಸ್ಯ ಪ್ರಕೃತಿಸ್ತಾತ ತಾಂ ಚಾಸ್ಮಾನ್ ವಕ್ತುಮರ್ಹಸಿ ।
ಕಥಂ ಸ ಭಗವಾನ್ ವಿಷ್ಣುಃ ಸುರೇಷ್ವರಿವಿಷೂದನಃ ॥ ೮ ॥

ವಸುದೇವಕುಲೇ ಧೀಮಾನ್ ವಾಸುದೇವತ್ವಮಾಗತಃ ।
ಅಮರೈರಾವೃತಂ ಪುಣ್ಯಂ ಪುಣ್ಯಕೃದ್ಭಿರಲಂಕೃತಮ್ ॥ ೯ ॥

---

೫. ಆ ಮಹಾತ್ಮನು ಬ್ರಹ್ಮ-ಕ್ಷತ್ರ ಮುಂತಾದ ಉತ್ತಮ ವರ್ಗದ ಮನುಷ್ಯರಲ್ಲಿ ಏಕೆ ಮತ್ತೆ ಮತ್ತೆ ಜನ್ಮವನ್ನು ಹೊಂದುತ್ತಾನೆ? ಇದನ್ನು ಕುತೂಹಲದಿಂದ ಪ್ರಶ್ನಿಸುವ ನಮಗೆ ಉಪದೇಶಿಸು.

೬. ಮತ್ತು ಶತ್ರು ಸಂಹಾರಮಾಡಲು ಅವತರಿಸಿದ ಮಹಾವಿಷ್ಣುವಿನ ಎಲ್ಲ ಶತ್ರು ನಿಗ್ರಹರೂಪವಾದ ಲೀಲಾಕರ್ಮಗಳನ್ನು ವಿಸ್ತಾರವಾಗಿ ಹೇಳು.

೭. ಪ್ರಭುವೆ! ಜ್ಞಾನರೂಪಿಯಾದ ಶ್ರೀ ಕೃಷ್ಣನು ನಡೆಸಿದ ಕರ್ಮಗಳ ಆನುಪೂರ್ವಿಯನ್ನೂ ಮತ್ತು ಅವನ ಸಮಸ್ತ ಪ್ರಾದುರ್ಭಾವ ಚರಿತ್ರೆಯನ್ನೂ ಕೇಳಲು ಇಷ್ಟವುಳ್ಳವರಾಗಿದ್ದೇವೆ. ಅದನ್ನು ನನ್ನಾಗಿ ಹೇಳು.

೮. ದೇವತೆಗಳಲ್ಲಿ ಶತ್ರುಸಂಹಾರಿ ಎಂದೆನಿಸಿರುವ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ಹೇಗೆ ಅವತರಿಸಿದನು? ಇವನಿಗೆ ಜನ್ಮವನ್ನುಂಟುಮಾಡಿದ ಪ್ರಕೃತಿಯು ಯಾವುದು? ಎಂಬುದನ್ನು ನಮಗೆ ಹೇಳಲು ಅರ್ಹನಾಗಿದ್ದೀಯೆ.

೯. ಪುಣ್ಯವನ್ನು ಆರ್ಜಿಸಿದ ದೇವತೆಗಳಿಂದ ತುಂಬಿ ಶೋಭಿಸಲ್ಪಟ್ಟ ಪವಿತ್ರವಾದ ದೇವಲೋಕದಲ್ಲಿರುವ ಸರ್ವಜ್ಞನಾದ ವಿಷ್ಣುವು ವಸುದೇವನ ಕುಲದಲ್ಲಿ ಹುಟ್ಟಿ ವಸುದೇವ ಪುತ್ರತ್ವವೆಂಬ ವಾಸು ದೇವತ್ವವನ್ನು ಏಕೆ ಹೊಂದಿದನು?

ದೇವಲೋಕಂ ಕಿಮುತ್ಸೃಜ್ಯ ಮರ್ತ್ಯಲೋಕಮಿಹಾಗತಃ ।
ದೇವಮಾನುಷಯೋರ್ನೇತಾ ಧಾತುರ್ಯಃ ಪ್ರಸವೋ ಹರಿಃ ॥ ೧೦ ॥

ಕಿಮರ್ಥಂ ದಿವ್ಯಮಾತ್ಮಾನಂ ಮಾನುಷ್ಯೇ ಸಮವೇಶಯತ್ ।
ಯಶ್ಚಕ್ರಂ ವರ್ತಯತ್ಯೇಕೋ ಮನುಷ್ಯಾಣಾಂ ಮನೋಮಯಮ್ ॥ ೧೧ ॥

ಮಾನುಷ್ಯೇ ಸ ಕಥಂ ಬುದ್ಧಿಂ ಚಕ್ರೇ ಚಕ್ರಭೃತಾಂ ವರಃ ।
ಗೋಪಾಯನಂ ಯಃ ಕುರುತೇ ಜಗತಃ ಸಾರ್ವಕಾಲಿಕಮ್ ॥ ೧೨ ॥

ಸ ಕಥಂ ಗಾಂ ಗತೋ ವಿಷ್ಣುರ್ಗೋಪತ್ವಮಕರೋತ್ ಪ್ರಭುಃ ।
ಮಹಾಭೂತಾತ್ಮಭೂತಾತ್ಮಾ ಯೋ ದಧಾರ ಚಕಾರ ಹ ॥ ೧೩ ॥

ಶ್ರೀಗರ್ಭಃ ಸ ಕಥಂ ಗರ್ಭೇ ಸ್ತ್ರಿಯಾ ಭೂಚರಯಾ ವೃತಃ ।
ಯೇನ ಲೋಕಾನ್ ಕ್ರಮೈರ್ಜಿತ್ವಾ ಸ ಶ್ರೀಕಾಸ್ತ್ರಿದಶಾಃ ಕೃತಾಃ ॥ ೧೪ ॥

---

೧೦. ದೇವ-ಮಾನುಷರಿಗೆ ನಾಯಕನೂ, ಸೃಷ್ಟಿಕರ್ತನಾದ ಬ್ರಹ್ಮದೇವನಿಗೆ ಕಾರಣನೂ ಆದ ಹರಿಯು ದೇವಲೋಕವನ್ನು ಬಿಟ್ಟು ಮರ್ತ್ಯ ಲೋಕಕ್ಕೆ ಏಕೆ ಬಂದನು ?

೧೧. ಯಾವ ಪರಮಾತ್ಮನು ಮಾನವರ ಮನೋಮಯವಾದ ಚಕ್ರವನ್ನು ಏಕಾಕಿಯಾಗಿ ಭ್ರಮಣಮಾಡಿಸುವನೋ, ಆ ವಿಷ್ಣುವು ತನ್ನ ದಿವ್ಯವಾದ ಆತ್ಮವನ್ನು ಮಾನವಜಾತಿಯಲ್ಲಿ ಏಕೆ ಇರಿಸಿದನು ?

೧೨ ಮತ್ತು ಯಾವ ಪರಮಾತ್ಮನು ಸರ್ವಕಾಲದಲ್ಲಿಯೂ ಪ್ರಪಂಚದ ಪರಿಪಾಲನವನ್ನು ರಚಿಸುವನೋ, ಚಕ್ರಧಾರಿಗಳಲ್ಲಿ ಶ್ರೇಷ್ಠನಾದ ಆ ವಿಷ್ಣುವು ಮನುಷ್ಯ ಜನ್ಮದಲ್ಲಿ ಹೇಗೆ ಬುದ್ಧಿವ್ಯಾಪಾರವನ್ನು ರಚಿಸಿದನು ?

೧೩. ಪ್ರಭುತ್ವಶಕ್ತಿಸಂಪನ್ನನೂ, ಸರ್ವಭೂತಾತ್ಮಕನೂ, ಆದ ಯಾವ ವಿಷ್ಣು ಪರಮಾತ್ಮನು ಎಲ್ಲ ಮಹಾಭೂತಗಳನ್ನು ನಿರ್ಮಿಸಿ ಅಸಂಕರವಾಗಿ ಧರಿಸಿರುವನೊ, ಅವನು ಭೂಮಿಯಲ್ಲಿ ಅವತರಿಸಿ ಗೋಪವೇಷವನ್ನು ಹೇಗೆ ಅಭಿನಯಿಸಿದನು ?

೧೪. ಹಾಗು ಯಾವ ಪರಮಾತ್ಮನಿಂದ ಬಲಿನಿಗ್ರಹ ಸಮಯದಲ್ಲಿ ಮೂರು ಪಾದನ್ಯಾಸಗಳಿಂದ ಲೋಕಗಳನ್ನು ಜಯಿಸಿ ದೇವವೃಂದವು ಸಂಪತ್ತಿಯಿಂದ ಕೂಡಿರುವುದಾಗಿ ಮಾಡಲ್ಪಟ್ಟಿತೊ, ಅಂತಹ ಶ್ರೀಗರ್ಭನಾದ ವಿಷ್ಣುವು ಮರ್ತ್ಯಲೋಕದ ನಾರಿಯಿಂದ ತನ್ನ ಗರ್ಭದಲ್ಲಿ ವಾಸಮಾಡುವಂತೆ ಹೇಗೆ ವರಿಸಲ್ಪಟ್ಟನು ?

ಸ್ಥಾಪಿತಾ ಜಗತೋ ಮಾರ್ಗಾಸ್ತ್ರಿಕ್ರಮಂ ವಪುರಾಹೃತಮ್ ।
ಪದೌ ಜಿತಾಂ ವಸುಮತೀಂ ಸುರಾಣಾಂ ಸುರಸತ್ತಮಃ ॥ ೧೫ ॥

ಯೇನ ಸೈಹ್ಮಂ ವಪುಃ ಕೃತ್ವಾ ದ್ವಿಧಾ ಕೃತ್ವಾ ಚ ತತ್ಪುನಃ ।
ಪೂರ್ವದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುರ್ಹತಃ ॥ ೧೬ ॥

ಯಃ ಪುರಾ ಹ್ಯನಲೋ ಭೂತ್ವಾ ತ್ವೌರ್ವಃ ಸಂವರ್ತಕೋ ವಿಭುಃ ।
ಪಾತಾಲಸ್ಥೋಽರ್ಣವಗತಃ ಪಪೌ ತೋಯಮಯಂ ಹವಿಃ ॥ ೧೭ ॥

ಸಹಸ್ರಚರಣಂ ದೇವಂ ಸಹಸ್ರಾಂಶುಂ ಸಹಸ್ರಶಃ ।
ಸಹಸ್ರಶಿರಸಂ ದೇವಂ ಯಮಾಹುರ್ವೈ ಯುಗೇ ಯುಗೇ ॥ ೧೮ ॥

ನಾಭ್ಯರಣ್ಯಾಂ ಸಮುದ್ಭೂತಂ ಯಸ್ಯ ಪೈತಾಮಹಂ ಗೃಹಮ್ ।
ಏಕಾರ್ಣವ ಗತೇ ಲೋಕೇ ತತ್ಪಂಕಜಮಪಂಕಜಮ್ ॥ ೧೯ ॥

---

೧೫. ಆ ಪರಮಾತ್ಮನಿಂದ ಜಗತ್ತಿನ ಸ್ಥಿತಿಮಾರ್ಗಗಳು ಸ್ಥಾಪಿಸಲ್ಪಟ್ಟಿರುವುವು. ತ್ರಿವಿಕ್ರಮಾವತಾರದ ಮೂರ್ತಿಯು ಪರಿಗ್ರಹಿಸಲ್ಪಟ್ಟಿತು. ಮತ್ತು ದೇವೋತ್ತಮನಾದ ಪರಮಾತ್ಮನು ತಾನು ಜಯಿಸಿದ ಭೂಮಿಯನ್ನು ದೇವತೆಗಳಿಗೆ ಪ್ರದಾನಮಾಡಿರುವನು.

೧೬. ಆ ಪರಮಾತ್ಮನಿಂದ ಸಿಂಹದ ವಿಗ್ರಹವನ್ನು ಸ್ವೀಕರಿಸಿ ಕಂಠದ ಕೆಳಭಾಗದಲ್ಲಿ ನರನ ಆ ಕಾರವನ್ನು ಧರಿಸಿ ಆ ಮೂರ್ತಿಯನ್ನು ನರ–ಸಿಂಹ ಎಂಬ ಎರಡು ವಿಧವಾಗಿ ಮಾಡಿ ದೈತ್ಯರಲ್ಲಿ ಆದಿಪುರುಷನೂ, ಮಹಾವೀರ್ಯ ಸಂಪನ್ನನೂ, ಆದ ಹಿರಣ್ಯಕಶಿಪು ರಾಕ್ಷಸನು ಕೊಲ್ಲಲ್ಪಟ್ಟನು.

೧೭. ಪ್ರಲಯಕಾರಕನೂ, ಸರ್ವಸಮರ್ಥನೂ ಆದ ಪರಮಾತ್ಮನು ಪೂರ್ವದಲ್ಲಿ ಸಮುದ್ರಮಧ್ಯದ ಪಾತಾಲದಲ್ಲಿರುವ ಬಡಬಾಗ್ನಿಯ ರೂಪವನ್ನು ಹೊಂದಿ ಸಮುದ್ರದ ಜಲರೂಪವಾದ ಹವಿಸ್ಸನ್ನು ಪಾನಮಾಡಿದನು.

೧೮. ಮತ್ತು ಪ್ರತಿಯೊಂದು ಯುಗದಲ್ಲಿಯೂ ಸರ್ವವ್ಯಾಪಕನಾದ ವಿಷ್ಣುವನ್ನು ಸರ್ವಭೂತಾತ್ಮಕ ರೂಪದಿಂದ ಸಹಸ್ರಪಾದಗಳಿಂದಲೂ ಸುತ್ತ ವ್ಯಾಪಿಸಿದ ಸಹಸ್ರಕಿರಣಗಳಿಂದಲೂ ಮತ್ತು ಸಹಸ್ರಶಿರಗಳಿಂದ ಕೂಡಿರುವನೆಂದು ವರ್ಣಿಸುವರು.

೧೯. ಪ್ರಲಯದಲ್ಲಿ ಲೋಕಗಳು ಏಕಾರ್ಣವರೂಪವನ್ನು ಹೊಂದಲು ಪಿತಾಮಹನಾದ ಬ್ರಹ್ಮದೇವನ ಆಧಾರವಾದ, ಮತ್ತು ಇತರ ಕಮಲಗಳಂತೆ, ಕೆಸರಿನಲ್ಲಿ ಹುಟ್ಟದೆ ಶುದ್ಧವಾದ ಕಮಲವು ಪರಮಾತ್ಮನ ನಾಭಿಯಲ್ಲಿ ಇತ್ತು.

ಯೇನ ತೇ ನಿಹತಾ ದೈತ್ಯಾಃ ಸಂಗ್ರಾಮೇ ತಾರಕಾಮಯೇ ।
ಸರ್ವದೇವಮಯಂ ಕೃತ್ವಾ ಸರ್ವಾಯುಧಧರಂ ವಪುಃ ॥ ೨೦ ॥

ಮಹಾಬಲೇನ ವ್ರೋತ್ಸಿಕ್ತಃ ಕಾಲನೇಮಿರ್ನಿಪಾತಿತಃ ।
ಉತ್ತರಾಂಶೇ ಸಮುದ್ರಸ್ಯ ಕ್ಷೀರೋದಸ್ಯಾಮೃತೋದಧೇಃ ।
ಯಃ ಶೇತೇ ಶಾಶ್ವತಂ ಯೋಗಮಾಚ್ಛಾದ್ಯ ತಿಮಿರಂ ಮಹತ್ ॥ ೨೧ ॥

ಸುರಾರಣೀ ಗರ್ಭಮಧತ್ತ ದಿವ್ಯಂ
ತಪಃಪ್ರಕರ್ಷಾದದಿತಿಃ ಪುರಾ ಯಮ್ ।
ಶಕ್ರಂ ಚ ಯೋ ದೈತ್ಯಗಣಂ ಚ ರುದ್ಧಂ
ಗರ್ಭಾವಮಾನೇನ ಭೃಶಂ ಚಕಾರ ಹ ॥ ೨೨ ॥

---

೨೦. ಮತ್ತು ಪರಮಾತ್ಮನಿಂದ ಸರ್ವ ದೇವತಾತ್ಮಕವೂ, ಸರ್ವಾಯುಧಗಳನ್ನು ಧರಿಸಿರುವುದೂ ಆದ ದೇಹವನ್ನು ಸ್ವೀಕರಿಸಿ ತಾರಕಾಸುರನನ್ನು ನಿಗ್ರಹಿಸಿದ ಸಂಗ್ರಾಮದಲ್ಲಿ ಎಲ್ಲ ದೈತ್ಯರು ಸಂಹರಿಸಲ್ಪಟ್ಟರು.

೨೧. ಮತ್ತು ಕ್ಷೀರಸಮುದ್ರವೆಂಬ ಅಮೃತೋದಧಿಯ ಉತ್ತರ ದಿಗ್ಭಾಗದಲ್ಲಿ ಮಹಾಂಧಕಾರವನ್ನು ಆವರಿಸಿಕೊಂಡು ಶಾಶ್ವತಯೋಗಾಭ್ಯಾಸದಿಂದ ಶಯನಮಾಡಿರುವ ಕಾಲನೇಮಿ ಎಂಬ ರಾಕ್ಷಸನು ಮಹಾಬಲಶಾಲಿಯಾದ ಪರಮಾತ್ಮನಿಂದ ಸಂಹರಿಸಲ್ಪಟ್ಟನು.

೨೨. ಪೂರ್ವದಲ್ಲಿ ದೇವೋತ್ತಮನ ಜನ್ಮಭೂಮಿಯಾದ ಅದಿತಿಯು ತಪೋಮಹಿಮೆಯಿಂದ ವಿಷ್ಣುಪರಮಾತ್ಮನ ದಿವ್ಯಗರ್ಭವನ್ನೂ, ಮತ್ತು ಅದಕ್ಕೆ ಮುಂಚೆ ಇಂದ್ರನ ಗರ್ಭವನ್ನೂ ಧರಿಸಿದಳು, ಮತ್ತು ಇಂತಹ ದೇವಗರ್ಭಧಾರಣದಿಂದ ದೈತ್ಯರನ್ನು ಮತ್ತೆ ಮತ್ತೆ ಬಂಧಿಸಲ್ಪಟ್ಟರುವಂತೆ ಮಾಡಿದಳು.

ಪದಾನಿ ಯೋ ಲೋಕಪದಾನಿ ಕೃತ್ವಾ
ಚಕಾರ ದೈತ್ಯಾನ್ ಸಲಿಲೇಶಯಾಂಸ್ತಾನ್ ।
ಕೃತ್ವಾ ಚ ದೇವಾಂಸ್ತ್ರಿದಿವಸ್ಯ ದೇವಾಂ—
ಶ್ಚಕ್ರೇ ಸುರೇಶಂ ಪುರುಹೂತಮೇವ ॥ ೨೩ ॥

ಗಾರ್ಹಪತ್ಯೇನ ವಿಧಿನಾ ಅನ್ವಾಹಾರ್ಯೇಣ ಕರ್ಮಣಾ ॥ ೨೪ ॥

ಅಗ್ನಿಮಾಹವನೀಯಂ ಚ ವೇದೀಂ ಚೈವ ಕುಶಂ ಸ್ರುವಮ್ ।
ಪ್ರೋಕ್ಷಣೀಯಂ ಶೃತಂ ಚೈವ ಆವಭೃಥ್ಯಂ ತಥೈವ ಚ ॥ ೨೫ ॥

ಅಥರ್ಷೀಂಶ್ಚೈವ ಯಶ್ಚಕ್ರೇ ಹವ್ಯಭಾಗಪ್ರದಾನ್ ಮಖೇ ।
ಹವ್ಯಾದಾಂಶ್ಚ ಸುರಾಂಶ್ಚಕ್ರೇ ಕವ್ಯಾದಾಂಶ್ಚ ಪಿತೄನಪಿ
ಭೋಗಾರ್ಥಂ ಯಜ್ಞವಿಧಿನಾ ಯೋ ಯಜ್ಞೋ ಯಜ್ಞಕರ್ಮಣಿ
॥ ೨೬ ॥

---

೨೩. ಮತ್ತು ಪರಮಾತ್ಮನು ತ್ರಿವಿಕ್ರಮಾವತಾರ ಸಮಯದಲ್ಲಿ ಲೋಕಗಳಲ್ಲಿ ತನ್ನ ಪಾದಗಳನ್ನು ಇರಿಸಿ ದೈತ್ಯರನ್ನು ಸಮುದ್ರದ ಬಿಲವಾದ ಪಾತಾಳದಲ್ಲಿ ವಾಸಿಸುವಂತೆಯೂ ದೇವತೆಗಳನ್ನು ಸ್ವರ್ಗಲೋಕವಾಸಿಗಳಾದ ದೇವವರ್ಗವನ್ನಾಗಿಯೂ ಮತ್ತು ಇಂದ್ರನನ್ನು ದೇವರಾಜನನ್ನಾಗಿಯೂ ಮಾಡಿರುವನು.

೨೪. ಹಾಗು ಧರ್ಮದ್ವೇಷಿಗಳಿಂದ ಖಿಲವಾಗಿ ಹೋದ ಕರ್ಮಕಾಂಡವನ್ನು ಪುನರುಜ್ಜೀವನಮಾಡಿ ವಿಧಿವಿಹಿತಸಂಸ್ಕಾರಗಳಿಂದ ಗಾರ್ಹಪತ್ಯ, ದಕ್ಷಿಣಾಗ್ನಿ ಮುಂತಾದ ಅಗ್ನಿಗಳನ್ನು ಸ್ಥಿರಮಾಡಿದನು.

೨೫. ಮತ್ತು ಕರ್ಮಾಂಗವಾದ ಆಹವನೀಯ ಅಗ್ನಿ, ವೇದಿ, ಕುಶ, ಸ್ರುವ, ಪ್ರೋಕ್ಷಣೀಪಾತ್ರ, ಸ್ರುಕ್, ಮತ್ತು ಅವಭೃಥಕರ್ಮ ಸಾಮಗ್ರೀ ಮುಂತಾದುವುಗಳ ಸಂಪ್ರದಾಯವನ್ನು ಪ್ರಕಾಶಪಡಿಸಿದನು.

೨೬. ಮತ್ತು ಯಜ್ಞರೂಪಿಯಾದ ಪರಮಾತ್ಮನು ಯಜ್ಞಕರ್ಮಗಳಲ್ಲಿ ಭೋಗಾರ್ಥವಾಗಿ ಋಷಿಗಳು ಯಜ್ಞದ ಹವಿರ್ಭಾಗ ಸಮರ್ಪಕರೂ ದೇವತೆಗಳು ಹವಿಸ್ಸನ್ನು ಭುಂಜಿಸುವರೂ ಮತ್ತು ಪಿತೃದೇವತೆಗಳು ಕವ್ಯವನ್ನು ಭುಂಜಿಸುವವರೂ ಆಗಿರುವಂತೆ ಯಜ್ಞವಿಧಾನವನ್ನು ಏರ್ಪಡಿಸಿದನು.

ಯೂಪಾನ್ ಸಮಿತ್ಸ್ರುವಂ ಸೋಮಂ ಪವಿತ್ರಂ ಪರಿಧೀನಪಿ ।
ಯಜ್ಞಿಯಾನಿ ಚ ದ್ರವ್ಯಾಣಿ ಯಜ್ಞಿಯಾಂಶ್ಚ ತಥಾನಲಾನ್ ॥ ೨೭ ॥

ಸದಸ್ಯಾನ್ ಯಜಮಾನಾಂಶ್ಚ ಹ್ಯಶ್ವಮೇಧಾನ್ ಕ್ರತೂತ್ತಮಾನ್ ।
ವಿಚಿತ್ರಾನ್ ರಾಜಸೂಯಾದೀನ್ ಪಾರಮೇಷ್ಠ್ಯೇನ ಕರ್ಮಣಾ॥ ೨೮ ॥

ಉದ್ಗಾತ್ರಾದೀಂಶ್ಚ ಯಃ ಕೃತ್ವಾ ಯಜ್ಞಾಂಲ್ಲೋಕಾನನುಕ್ರಮಾತ್ ।
ಕ್ಷಣಾ ನಿಮೇಷಾಃ ಕಾಷ್ಠಾಶ್ಚ ಕಲಾಸ್ತ್ರೈಕಾಲ್ಯಮೇವ ಚ ॥ ೨೯ ॥

ಮುಹೂರ್ತಾಸ್ತಿಥಯೋ ಮಾಸಾ ದಿನಂ ಸಂವತ್ಸರಂ ತಥಾ ।
ಋತವಃ ಕಾಲಯೋಗಾಶ್ಚ ಪ್ರಮಾಣಂ ತ್ರಿವಿಧಂ ತ್ರಿಷು ॥ ೩೦ ॥

ಆಯುಃ ಕ್ಷೇತ್ರಾಣ್ಯಥ ಬಲಂ ಕ್ಷಣಂ ಯದ್ರೂಪಸೌಷ್ಠವಮ್ ।
ಮೇಧಾವಿತ್ವಂ ಚ ಶೌರ್ಯಂ ಚ ಶಾಸ್ತ್ರಸ್ಯೈವ ಚ ಪಾರಣಮ್ ॥ ೩೧ ॥

---

೨೭. ಮತ್ತು ಪರಮಾತ್ಮನು ಯೂಪ, ಸಮಿತ್, ಸ್ರುವ, ಸೋಮ, ಪವಿತ್ರ ಪರಿಧಿ, ಯಜ್ಞಾರ್ಹದ್ರವ್ಯ ಮತ್ತು ಯಜ್ಞಾರ್ಹವಾದ ಅಗ್ನಿ–ಎಂಬ ಯಜ್ಞಾಂಗವಾದ ವಸ್ತುಗಳನ್ನು ನಿರ್ಮಾಣ ಮಾಡಿದನು.

೨೮. ಹಾಗು ಪರಮಾತ್ಮನು ಪರಮಸ್ಥಾನದ ವಿಚಿತ್ರ ಮಹಿಮೆಯಿಂದ ಕೂಡಿದ ಕರ್ಮದಿಂದ ಸದಸ್ಯ, ಯಜಮಾನ, ಉತ್ತಮವಾದ ಅಶ್ವಮೇಧಕ್ರತು, ಮತ್ತು ವಿಚಿತ್ರವಾದ ರಾಜಸೂಯ ಯಾಗಗಳನ್ನು ಕಲ್ಪಿಸಿದನು.

೨೯. ಮತ್ತು ಪರಮಾತ್ಮನು ಉದ್ಗಾತೃ ಮುಂತಾದ ಋತ್ವಿಜರನ್ನು ನಿಯಮಿಸಿ ಕ್ರಮವಾಗಿ ಯಜ್ಞಗಳನ್ನು ಸೃಜಿಸಿ ಕ್ರಮವಾಗಿ ಕ್ಷಣ, ನಿಮೇಷ, ಕಾಷ್ಠಾ, ಕಲಾ, ಭೂತ, ಭವಿಷ್ಯ ಮತ್ತು ವರ್ತಮಾನವೆಂಬ ತ್ರೈಕಾಲ್ಯಗಳಿಂದ ಕೂಡಿದ ಕಾಲಾಂಶ ಗಳನ್ನು ರಚಿಸಿದನು

೩೦. ಮತ್ತು ಮುಹೂರ್ತ, ತಿಥಿ, ಮಾಸ, ದಿನ, ಸಂವತ್ಸರ ಮತ್ತು ಋತು, ಕಾಲಯೋಗಗಳೆಂಬ ಮತ್ತೆ ಕೆಲವು ಕಾಲಾಂಶಗಳನ್ನು ಸೃಷ್ಟಿಸಿ ಮೂರು ಪ್ರಮೇಯ ವಿಷಯಗಳಲ್ಲಿ ಲೋಕ, ಶಾಸ್ತ್ರ, ಅಧ್ಯಾತ್ಮವೆಂಬ ಪ್ರಮಾಣಗಳನ್ನು ಕಲ್ಪಿಸಿದನು.

೩೧. ಅಲ್ಲದೆ, ಆಯುಸ್ಸು, ಕ್ಷೇತ್ರ, ಬಲ, ಉತ್ಸವ, ರೂಪಲಾವಣ್ಯ, ಮೇಧಾ ವಿತ್ವ, ಶೌರ್ಯ ಮತ್ತು ಶಾಸ್ತ್ರಪಾರಂಗಮತ್ವ ಮುಂತಾದ ಸದ್ಗುಣಗಳನ್ನು ಪರಮಾತ್ಮನು ರಚಿಸಿರುವನು.

ತ್ರಯೋ ವರ್ಣಾಸ್ತ್ರಯೋ ಲೋಕಾಸ್ತ್ರೈವಿದ್ಯಂ ಪಾವಕಾಸ್ತ್ರಯಃ ।
ತ್ರೈಕಾಲ್ಯಂ ತ್ರೀಣಿ ಕರ್ಮಾಣಿ ತಿಸ್ರೋ ಮಾತ್ರಾ ಗುಣಾಸ್ತ್ರಯಃ॥ ೩೨ ॥

ಸೃಷ್ಟಾ ಲೋಕೇಶ್ವರಾಶ್ಚೈವ ಯೇನ ಯೇನ ಚ ಕರ್ಮಣಾ ।
ಸರ್ವಭೂತಗಣಾಃ ಸೃಷ್ಟಾಃ ಸರ್ವಭೂತಗಣಾತ್ಮನಾ ॥ ೩೩ ॥

ಕ್ಷಣಂ ಸಂಧಾಯ ಪೂರ್ವೇಣ ಯೋಗೇನ ರಮತೇ ಚ ಯಃ ।
ಗತಾಗತಾನಾಂ ಯೋ ನೇತಾ ಸರ್ವತ್ರ ವಿವಿಧೇಶ್ವರಃ ॥ ೩೪ ॥

ಯೋ ಗತಿರ್ಧರ್ಮಯುಕ್ತಾನಾಮಗತಿಃ ಪಾಪಕರ್ಮಣಾಮ್ ।
ಚಾತುರ್ವರ್ಣ್ಯಸ್ಯ ಪ್ರಭವಶ್ಚಾತುರ್ವರ್ಣ್ಯಸ್ಯ ರಕ್ಷಿತಾ ॥ ೩೫ ॥

ಚಾತುರ್ವಿದ್ಯಸ್ಯ ಯೋ ವೇತ್ತಾ ಚಾತುರಾಶ್ರಮ್ಯಸಂಶ್ರಯಃ ।
ದಿಗಂತರಂ ನಭೋ ಭೂಮಿರಾಪೋ ವಾಯುರ್ವಿಭಾವಸುಃ ॥ ೩೬ ॥

---

೩೨. ಮತ್ತು ಬ್ರಾಹ್ಮಣಾದಿ ವರ್ಣತ್ರಯ, ಸ್ವರ್ಗಾದಿಲೋಕತ್ರಯ, ಋಗ್ವೇದಾದಿ ವೇದತ್ರಯ, ಆಹವನೀಯಾದಿ ಅಗ್ನಿತ್ರಯ, ಭೂತಾದಿ ಕಾಲತ್ರಯ, ಯಜನಾದಿ ಕರ್ಮತ್ರಯ, ಅಕಾರಾದಿ ಮಾತ್ರಾತ್ರಯ ಮತ್ತು ಸತ್ತ್ವಾದಿ ಗುಣತ್ರಯಗಳು ಪರಮಾತ್ಮ ನಿರ್ಮಿತವಾದ ಸೃಷ್ಟಿವರ್ಗವಾಗಿದೆ.

೩೩. ಮತ್ತು ಪರಮಾತ್ಮನಿಂದ ನಿಯಮಿತವಾದ ಆಯಾಯ ವ್ಯಾಪಾರಗಳಿಂದ ಕೂಡಿದ ಲೋಕೇಶ್ವರರು ಸೃಷ್ಟಿಸಲ್ಪಟ್ಟರು, ಸರ್ವ ಭೂತಗಳ ಸಮೂಹ ರೂಪದಿಂದ ಸರ್ವ ಭೂತಗಳು ಸೃಷ್ಟಿಸಲ್ಪಟ್ಟಿರುವುವು.

೩೪. ಪೂರ್ವಕಲ್ಪದ ಯೋಗದೃಷ್ಟಿ ವಿಶೇಷದಿಂದ ಕ್ಷಣಮಾತ್ರ ಅನುಸಂಧಾನ ಮಾಡಿ ಸೃಷ್ಟಿಯನ್ನು ರಚಿಸಿ ಪರಮಾತ್ಮನು ಅಲ್ಲಿ ರಮಿಸುತ್ತಿರುವನು, ಮತ್ತು ಜನ್ಮ-ನಾಶಗಳಿಗೆ ನಾಯಕನೂ ಸಕಲ ವಸ್ತುಗಳಿಗೆ ಈಶ್ವರನೂ ಆಗಿರುವನು.

೩೫. ಮತ್ತು ಆ ಪರಮಾತ್ಮನು ಪುಣ್ಯ ಕರ್ಮತತ್ಪರರಿಗೆ ಸದ್ಗತಿ ರೂಪನೂ, ಪಾಪಿಗಳಿಗೆ ಅಧೋಗತಿ ರೂಪನೂ, ಚಾತುರ್ವರ್ಣ್ಯಕ್ಕೆ ಕಾರಣ ಸ್ವರೂಪನೂ, ಮತ್ತು ಚಾತುರ್ವರ್ಣ್ಯವನ್ನು ಪಾಲಿಸುವವನೂ ಆಗಿರುವನು.

೩೬. ಮಹಾ ವಿಷ್ಣುವು ಋಗ್ವೇದಾದಿ ಚತುರ್ವಿದ್ಯೆಗಳನ್ನು ತಿಳಿದವನೂ, ಬ್ರಹ್ಮಚರ್ಯ ಮುಂತಾದ ನಾಲ್ಕು ಆಶ್ರಮಗಳಿಗೆ ಆಶ್ರಯಪ್ರದನೂ, ಆಗಿರುವನು. ಮತ್ತು ದಿಙ್ಮಂಡಲ, ಆಕಾಶ, ಭೂಮಿ, ಜಲ, ವಾಯು, ಅಗ್ನಿ ರೂಪದಿಂದ ಸರ್ವಾತ್ಮಕನಾಗಿರುವನು.

ಚಂದ್ರಸೂರ್ಯದ್ವಯಂ ಜ್ಯೋತಿಯುರ್ಗೇಶಾಃ ಕ್ಷಣದಾಚರಾಃ ।
ಯಃ ಪರಂ ಶ್ರೂಯತೇ ದೇವೋ ಯಃ ಪರಂ ಶ್ರೂಯತೇ ತಪಃ॥ ೩೭ ॥

ಯಃ ಪರಂ ತಮಸಃ ಪ್ರಾಹುರ್ಯಃ ಪರಂ ಪರಮಾತ್ಮವಾನ್ ।
ಆದಿತ್ಯಾದಿಸ್ತು ಯೋ ದೇವೋ ಯಶ್ಚ ದೈತ್ಯಾಂತಕೋ ವಿಭುಃ ॥ ೩೮ ॥

ಯುಗಾಂತೇಷ್ವಂತಕೋ ಯಶ್ಚ ಯಶ್ಚ ಲೋಕಾಂತಕಾಂತಕಃ ।
ಸೇತುರ್ಯೋ ಲೋಕಸೇತೂನಾಂ ಮೇಧ್ಯೋ ಯೋ ಮೇಧ್ಯಕರ್ಮಣಾಮ್ ॥ ೩೯ ॥

ವೇದ್ಯೋ ಯೋ ವೇದವಿದುಷಾಂ ಪ್ರಭುರ್ಯಃ ಪ್ರಭವಾತ್ಮನಾಮ್ ।
ಸೋಮಭೂತಸ್ತು ಭೂತಾನಾಮಗ್ನಿಭೂತೋಽಗ್ನಿವರ್ಚಸಾಮ್ ॥ ೪೦ ॥

ಮನುಷ್ಯಾಣಾಂ ಮನುರ್ಭೂತಸ್ತಪೋಭೂತಸ್ತಪಸ್ವಿನಾಮ್ ।
ವಿನಯೋ ನಯತೃಪ್ತಾನಾಂ ತೇಜಸ್ತೇಜಸ್ವಿನಾಪಿ ॥ ೪೧ ॥

---

೩೭. ಪರಮಾತ್ಮನು ಚಂದ್ರ-ಸೂರ್ಯರೆಂಬ ಜ್ಯೋತಿಯು, ಯುಗಾಧಿಪರು, ರಾತ್ರಿಂಚರರು, ಮುಂತಾದ ವಿಶ್ವರೂಪಿಯಾಗಿ ಪ್ರಕಾಶಿಸುವನು, ಮತ್ತು ಪರಮ ದೇವತಾರೂಪಿಯೆಂದೂ, ಉತ್ತಮ ತಪೋರೂಪಿಯೆಂದೂ ಕೇಳಲ್ಪಡುವನು.

೩೮. ಜ್ಞಾನಿಗಳು ವಿಷ್ಣುವನ್ನು ತಮೋಗುಣಾತೀತನನ್ನಾಗಿಯೂ ಪರಮಾತ್ಮನನ್ನಾಗಿಯೂ ಹೇಳುವರು, ಮತ್ತು ವಿಶ್ವರೂಪಿಯಾದ ವಿಷ್ಣುವು ಆದಿತ್ಯ ಮುಂತಾದ ಜ್ಯೋತಿರೂಪನೂ, ಸಕಲ ದೈತ್ಯಾಂತಕನೂ ಆಗಿರುವನು.

೩೯. ಮತ್ತು ಆ ಪರಮಾತ್ಮನು ಯುಗಾವಸಾನ ಸಮಯಗಳಲ್ಲಿ ಅಂತಕರನೂ, ಸಕಲ ಲೋಕ ಸಂಹಾರಕಾರಿಯೂ, ಲೋಕಗಳ ಅಸಂಕರವನ್ನು ಸ್ಥಿರಪಡಿಸುವ ಸೇತುವೆಗಳಲ್ಲಿ ಸೇತುರೂಪನೂ ಮತ್ತು ಪವಿತ್ರವಾದ ಕರ್ಮಗಳಲ್ಲಿ ಪೂಜ್ಯನಾದ ಪವಿತ್ರಾತ್ಮನೂ ಆಗಿರುವನು.

೪೦. ಮಹಾ ವಿಷ್ಣುವು ವೇದಪರಿಜ್ಞಾನವಿರುವವರಿಗೆ ವೇದ್ಯನೂ, ಕಾರಣ ವಸ್ತುಗಳಿಗೆ ಸ್ವಾಮಿಯೂ, ಸರ್ವ ಭೂತಗಳಿಗೆ ಸೋಮರಾಜ ರೂಪಿಯೂ, ಮತ್ತು ಅಗ್ನಿವರ್ಚಸ್ಸಿನಿಂದ ಪ್ರಕಾಶಿಸುವ ಮಹಾತ್ಮರಿಗೆ ಅಗ್ನಿಸ್ವರೂಪಿಯೂ ಆಗಿರುವನು.

೪೧. ಮತ್ತು ದೇವೋತ್ತಮನು ಮನುಷ್ಯರಿಗೆ ಕೂಟಸ್ಥನಾದ ಮನುರಾಜನೂ, ತಪಸ್ವಿಗಳಿಗೆ ತಪಃಶಕ್ತಿ ಸ್ವರೂಪನೂ, ನಯಗುಣದಲ್ಲಿ ಪ್ರೀತಿಯುಳ್ಳವರಿಗೆ ವಿನಯ ಸ್ವರೂಪನೂ ಮತ್ತು ತೇಜಸ್ವಿಗಳಿಗೆ ತೇಜೋರೂಪನೂ ಆಗಿರುವನು.

ವಿಗ್ರಹೋ ವಿಗ್ರಹಾಣಾಂ ಯೋ ಗತಿರ್ಗತಿಮತಾಮಪಿ ।
ಆಕಾಶಪ್ರಭವೋ ವಾಯುರ್ವಾಯುಪ್ರಾಣೋ ಹುತಾಶನಃ ॥ ೪೨ ॥

ದೇವಾ ಹುತಾಶನಪ್ರಾಣಾಃ ಪ್ರಾಣೋಽಗ್ನೇರ್ಮಧುಸೂದನಃ ।
ರಸಾಚ್ಛೋಣಿತಸಂಭೂತಿಃ ಶೋಣಿತಾನ್ಮಾಂಸಮುಚ್ಯತೇ ॥ ೪೩ ॥

ಮಾಂಸಾತ್ತು ಮೇದಸೋ ಜನ್ಮ ಮೇದಸೋಽಸ್ಥಿ ನಿರುಚ್ಯತೇ ।
ಅಸ್ಥ್ನೋ ಮಜ್ಜಾ ಸಮಭವನ್ಮಜ್ಜಾತಃ ಶುಕ್ರಸಂಭವಃ ॥ ೪೪ ॥

ಶುಕ್ರಾದ್ಗರ್ಭಃ ಸಮಭವದ್ರಸಮೂಲೇನ ಕರ್ಮಣಾ ।
ತತ್ರಾಪಾಂ ಪ್ರಥಮಾವಾಪಃ ಸ ಸೌಮ್ಯೋ ರಾಶಿರುಚ್ಯತೇ ॥ ೪೫ ॥

ಗರ್ಭೋಽಶ್ಮಸಂಭವೋ ಜ್ಞೇಯೋ ದ್ವಿತೀಯೋ ರಾಶಿರುಚ್ಯತೇ ।
ಶುಕ್ರಂ ಸೋಮಾತ್ಮಕಂ ವಿದ್ಯಾದಾರ್ತವಂ ಪಾವಕಾತ್ಮಕಮ್ ॥ ೪೬ ॥

---

೪೨. ಮತ್ತು ಸ್ವಾಮಿಯು ವಿಗ್ರಹಗಳಿಗೆ ವಿಗ್ರಹ ರೂಪಿಯೂ ಸದ್ಗತಿಯನ್ನು ಹೊಂದುವ ಪುಣ್ಯಾತ್ಮರಿಗೆ ಸದ್ಗತಿ ರೂಪನೂ, ಆಕಾಶ ತತ್ತ್ವದಿಂದ ಹುಟ್ಟಿದ ವಾಯು ಸ್ವರೂಪನೂ ಮತ್ತು ವಾಯು ತತ್ತ್ವದಿಂದ ಜನಿಸಿದ ಅಗ್ನಿ ರೂಪನೂ ಆಗಿರುವನು.

೪೩. ದೇವತೆಗಳಿಗೆ ಅಗ್ನಿಯು ಪ್ರಾಣ ರೂಪನು, ಅಗ್ನಿಗೆ ಮಧು ದೈತ್ಯಾಂತಕನಾದ ವಿಷ್ಣುವು ಪ್ರಾಣರೂಪನು, ರಸದಿಂದ ರಕ್ತದ ಉತ್ಪತ್ತಿಯಾಗುವುದು, ರಕ್ತದಿಂದ ಮಾಂಸವು ಉತ್ಪನ್ನವಾಗುವುದು.

೪೪. ಹಾಗೆಯೇ ಮಾಂಸದಿಂದ ಮೇದಸ್ಸು, ಮೇದಸ್ಸಿನಿಂದ ಅಸ್ಥಿ, ಅಸ್ಥಿಯಿಂದ ಮಜ್ಜಾ, ಮಜ್ಜೆಯಿಂದ ಶುಕ್ರವೆಂಬ ಧಾತುಗಳು ಕ್ರಮವಾಗಿ ಹುಟ್ಟುವುವು.

೪೫. ರಸ ಪ್ರಚುರವಾದ ಕರ್ಮ ನಿಮಿತ್ತದಿಂದ ಶುಕ್ರದಿಂದ ಗರ್ಭವು ಆವಿರ್ಭವಿಸುವುದು, ಆ ಗರ್ಭೋತ್ಪತ್ತಿಯಲ್ಲಿ ಜಲಧಾತುವಿನ ಸಂಪರ್ಕವು ಮೊದಲನೆಯದಾಗಿರುವುದು. ಅದು ಸೋಮದೇವತೆಯ ಅಂಶವೆಂದು ಕರೆಯಲ್ಪಡುವುದು.

೪೬. ದ್ರವಧಾತು ರೂಪವಾದ ಗರ್ಭವು ಪಾಷಾಣ ಸಂಸ್ಥಾನ (ಆಕಾರ) ವನ್ನು ಹೊಂದುವುದು. ಅದು ದ್ವಿತೀಯರಾಶಿಯೆಂದು ಕರೆಯಲ್ಪಡುವುದು. ಇವುಗಳಲ್ಲಿ ಶುಕ್ರವು ಸೋಮರೂಪವೂ ಶೋಣಿತವು ಅಗ್ನಿರೂಪವೂ ಆಗಿರುವುದು.

ಭಾವೌ ರಸಾನುಗಾವೇತೌ ವೀರ್ಯೇ ಚ ಶಶಿಪಾವಕೌ ।
ಕಫವರ್ಗೇ ಭವೇಚ್ಛುಕ್ರಂ ಪಿತ್ತವರ್ಗೇ ಚ ಶೋಣಿತಮ್ ॥ ೪೭ ॥

ಕಫಸ್ಯ ಹೃದಯಂ ಸ್ಥಾನಂ ನಾಭ್ಯಾಂ ಪಿತ್ತಂ ಪ್ರತಿಷ್ಠಿತಮ್ ।
ದೇಹಸ್ಯ ಮಧ್ಯೇ ಹೃದಯಂ ಸ್ಥಾನಂ ತು ಮನಸಃ ಸ್ಮೃತಮ್ ॥ ೪೮ ॥

ನಾಭಿಷ್ಠೋದರಸಂಸ್ಥಾ ತು ತತ್ರ ದೇವೋ ಹುತಾಶನಃ ।
ಮನಃ ಪ್ರಜಾಪತಿರ್ಜ್ಞೇಯಃ ಕಫಃ ಸೋಮೋ ವಿಭಾವ್ಯತೇ ॥ ೪೯ ॥

ಪಿತ್ತಮಗ್ನಿಃ ಸ್ಮೃತೋ ಹ್ಯೇತದಗ್ನೀಷೋಮಾತ್ಮಕಂ ಜಗತ್ ।
ಏವಂ ಪ್ರವರ್ತಿತೇ ಗರ್ಭೇ ವೃತ್ತೇ ಕರ್ಕಂಧುಸನ್ನಿಭೇ ॥ ೫೦ ॥

ವಾಯುಃ ಪ್ರವೇಶನಂ ಚಕ್ರೇ ಸಂಗತಃ ಪರಮಾತ್ಮನಾ ।
ಸ ಪಂಚಧಾ ಶರೀರಸ್ಥೋ ವಿದ್ಯತೇ ವರ್ಧಯೇತ್ಪುನಃ ॥ ೫೧ ॥

---

೪೭. ಈ ಶುಕ್ರ, ಶೋಣಿತವೆಂಬ ಭಾವಗಳೆರಡು ರಸತತ್ತ್ವವನ್ನು ಅನುಸರಿಸಿರುವುವು, ಶುಕ್ರ-ಶೋಣಿತಗಳೆರಡು ಸೋಮ ಅಗ್ನಿರೂಪಗಳಾಗಿವೆ. ಶುಕ್ರಧಾತುವು ಕಫವರ್ಗದಲ್ಲಿ ಸೇರಿರುವುದೂ, ಶೋಣಿತವು ಪಿತ್ತ ವರ್ಗಕ್ಕೆ ಸೇರಿರುವುದೂ ಆಗಿದೆ.

೪೮. ಕಫಕ್ಕೆ ಹೃದಯವು ಸ್ಥಾನವಾಗಿದೆ. ಪಿತ್ತವು ನಾಭಿಯಲ್ಲಿ ಸ್ಥಿತಿಯನ್ನು ಹೊಂದಿದೆ. ದೇಹದ ಮಧ್ಯದಲ್ಲಿ ಮನಸ್ಸಿಗೆ ಆಧಾರವಾಗಿ ಹೃದಯವು ಇರುವುದು.

೪೯. ನಾಭಿಯು ಉದರ ಮಧ್ಯದಲ್ಲಿರುವುದು. ಅಲ್ಲಿ ಜಠರಾಗ್ನಿ ರೂಪದಿಂದ ಅಗ್ನಿದೇವನು ವಾಸಮಾಡಿರುವನು. ಮನಸ್ಸು ಪ್ರಜಾಪತಿಯ ಅಂಶವೆಂದು ತಿಳಿಯಬೇಕು. ಮತ್ತು ಕಫವು ಸೋಮರೂಪವೆಂದು ಭಾವಿಸಲ್ಪಡಬೇಕು.

೫೦. ಪಿತ್ತವು ಅಗ್ನಿರೂಪವಾದುದೆಂದು ಸ್ಮರಿಸಲ್ಪಟ್ಟಿದೆ. ಹೀಗೆ ಸಕಲ ಜಗತ್ತು ಅಗ್ನೀಷೋಮಾತ್ಮಕವಾಗಿದೆ. ಹಿಂದೆ ಹೇಳಿದ ಆಯಾಯ ಧಾತುಗಳಿಂದ ಕ್ರಮವಾಗಿ ಗರ್ಭವು ಬದರೀ ಫಲದ ಆಕಾರವಾಗಿ ಹುಟ್ಟಿ ಪರಿಣಮಿಸುವುದು.

೫೧. ಆ ಗರ್ಭದಲ್ಲಿ ವಾಯುವು ಪ್ರವೇಶಮಾಡಿ ಪರಮಾತ್ಮನಲ್ಲಿ ಸೇರಿಕೊಂಡು ಅಲ್ಲಿ ಪ್ರಾಣ ಮುಂತಾದ ಐದು ವಿಧಗಳನ್ನು ಹೊಂದಿ ಮತ್ತೆ ಗರ್ಭವನ್ನು ವೃದ್ಧಿಪಡಿಸುವುದು.

ಪ್ರಾಣಾಪಾನೌ ಸಮಾನಶ್ಚ ಹ್ಯುದಾನೋ ವ್ಯಾನ ಏವ ಚ ।
ಪ್ರಾಣೋಽಸ್ಯ ಪರಮಾತ್ಮಾನಂ ವರ್ಧಯನ್ ಪರಿವರ್ತತೇ ॥ ೫೨ ॥

ಅಪಾನಃ ಪಶ್ಚಿಮಂ ಕಾಯಮುದಾನೋಽರ್ಧ್ವಂ ಶರೀರಿಣಃ ।
ವ್ಯಾನೋ ವ್ಯಾನೀಯತೇ ಯೇನ ಸಮಾನಃ ಸರ್ವಸಂಧಿಷು ॥ ೫೩ ॥

ಭೂತಾವಾಪ್ತಿಸ್ತತಸ್ತಸ್ಯ ಜಾಯತೇಂದ್ರಿಯಗೋಚರಾ ।
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಮ್ ॥ ೫೪ ॥

ಸರ್ವೇಂದ್ರಿಯನಿವಿಷ್ಟಾಸ್ತೇ ಸ್ವಸ್ವಯೋಗಂ ಪ್ರಚಕ್ರಿರೇ ।
ಪಾರ್ಥಿವಂ ದೇಹಮಾಹುಸ್ತು ಪ್ರಾಣಾತ್ಮಾನಂ ಚ ಮಾರುತಮ್ ॥ ೫೫ ॥

ಛಿದ್ರಾಣ್ಯಾಕಾಶಯೋನೀನಿ ಜಲಾತ್ ಸ್ರಾವಃ ಪ್ರವರ್ತತೇ ।
ಜ್ಯೋತಿಶ್ಚಕ್ಷುಷಿ ಕೋಷ್ಠೋಽಸ್ಮಾತ್ತೇಷಾಂ ಯನ್ಮಾಮತಃ ಸ್ಮೃತಮ್ ॥ ೫೬ ॥

---

೫೨. ಶರೀರದಲ್ಲಿರುವ ವಾಯುವಿನ ಐದು ಭಾಗಗಳಿಗೆ ಪ್ರಾಣ-ಅಪಾನ-ಸಮಾನ-ಉದಾನ-ವ್ಯಾನ ಎಂದು ಹೆಸರು. ಇವುಗಳಲ್ಲಿ ಪ್ರಾಣವಾಯುವು ಪರಮಾತ್ಮನ ಜೀವನಾವಸ್ಥೆಯನ್ನು ವೃದ್ಧಿಮಾಡುತ್ತ ಚಲಿಸುತ್ತದೆ.

೫೩. ಅಪಾನವು ಶರೀರದ ಅಧೋಭಾಗವನ್ನು ಅವಲಂಬಿಸಿದೆ. ಉದಾನ ವಾಯುವು ಶರೀರದ ಊರ್ಧ್ವ ಅರ್ಧ ಭಾಗವನ್ನು ಅವಲಂಬಿಸಿದೆ. ವ್ಯಾನವಾಯುವು ವೀರ್ಯಕರ್ಮಗಳಿಗೆ ಕಾರಣವಾಗಿಯೂ ಮತ್ತು ಸಮಾನವಾಯುವು ಆಹಾರವನ್ನು ಸಂಧಿ ಬಂಧಗಳಲ್ಲಿ ಸಮವಾಗಿ ಇರಿಸುತ್ತಲೂ ಸಂಚರಿಸುವುವು.

೫೪. ತರುವಾಯ ಆಯಾಯ ಭೂತಗಳಿಂದ ಇಂದ್ರಿಯ ರೂಪವಾದ ಪರಿಣಾಮವು ಲಭಿಸುವುದು. ಪೃಥಿವೀ, ವಾಯು, ಆಕಾಶ, ಜಲ ಮತ್ತು ತೇಜಸ್ಸು ಎಂಬ ಪಂಚಭೂತಗಳು ಮಾತ್ರಾ ರೂಪವಾಗಿ ದೇಹವನ್ನು ಪ್ರವೇಶಿಸುವುವು.

೫೫. ಆ ಭೂತಗಳು ತಮ್ಮ ಸಾರ ರೂಪದಿಂದ ಸಮಸ್ತೇಂದ್ರಿಯಗಳಲ್ಲಿ ಅಧಿಷ್ಠಾನದಿಂದ ಇದ್ದು ತಮ್ಮ ತಮ್ಮ ವ್ಯಾಪಾರಗಳನ್ನು ರಚಿಸುತ್ತವೆ. ಭೌತಿಕ ಸಂಘ ರೂಪವಾದ ದೇಹವಲ್ಲಿ ದೇಹರಚನೆಯು ಪೃಥಿವಿಯ ಭಾಗದಿಂದಲೂ ಪ್ರಾಣವಾಯು ಚೇಷ್ಟೆಯು ವಾಯುವಿನಿಂದಲೂ ಆಗುವುವು.

೫೬. ಮತ್ತು ದೇಹದಲ್ಲಿರುವ ಛಿದ್ರಗಳಿಗೆ ಆಕಾಶವು ಕಾರಣವು. ಜಲದಿಂದ ದ್ರವ್ಯಭಾಗವು ಜನಿಸುವುದು. ನೇತ್ರಗೋಳದಲ್ಲಿ ಇಂದ್ರಿಯ ರೂಪದಿಂದಲೂ ಜಠರದಲ್ಲಿ ಅಗ್ನಿರೂಪದಿಂದಲೂ ತೇಜಸ್ಸು ವ್ಯಾಪಿಸಿರುವುದು. ಆದ್ದರಿಂದ ಶರೀರವು ಭೌತಿಕವೆಂದು ಸ್ಮರಿಸಲ್ಪಟ್ಟಿದೆ.

ಸಂಗ್ರಾಹ್ಯ ವಿಷಯಾಂಶ್ಚೈವ ಯಸ್ಯ ವೀರ್ಯಾತ್ಪ್ರವರ್ತಿತಾಃ ।
ಇತ್ಯೇತಾನ್ ಪುರುಷಃ ಸರ್ವಾನ್ ಸೃಜತ್ಯೇಕಃ ಸನಾತನಃ ॥ ೫೭ ॥

ನೈಧನೇಽಸ್ಮಿನ್ ಕಥಂ ಲೋಕೇ ನರತ್ವಂ ವಿಷ್ಣುರಾಗತಃ ।
ಏಷ ನಃ ಸಂಶಯೋ ಧೀಮನ್ ಏಷ ವೈ ವಿಸ್ಮಯೋ ಮಹಾನ್॥ ೫೮ ॥

ಕಥಂ ಗತಿರ್ಗತಿಮತಾಮಾಪನ್ನೋ ಮಾನುಷೀಂ ತನುಮ್ ।
ಶ್ರೋತುಮಿಚ್ಛಾಮಹೇ ವಿಷ್ಣೋಃ ಕರ್ಮಾಣಿ ಚ ಯಥಾಕ್ರಮಮ್
॥ ೫೯ ॥

ಆಶ್ಚರ್ಯಂ ಪರಮಂ ವಿಷ್ಣುರ್ವೇದೈರ್ದೇವೈಶ್ಚ ಕಥ್ಯತೇ ।
ವಿಷ್ಣೋರುತ್ಪತ್ತಿಮಾಶ್ಚರ್ಯಂ ಕಥಯಸ್ವ ಮಹಾಮತೇ ॥ ೬೦ ॥

ಏತದಾಶ್ಚರ್ಯಮಾಖ್ಯಾತಂ ಕಥ್ಯತಾಂ ವೈ ಸುಖಾವಹಮ್ ।
ಪ್ರಖ್ಯಾತಬಲವೀರ್ಯಸ್ಯ ಪ್ರಾದುರ್ಭಾವಾನ್ಮಹಾತ್ಮನಃ
ಕರ್ಮಣಾಶ್ಚರ್ಯಭೂತಸ್ಯ ವಿಷ್ಣೋಃ ಸತ್ತ್ವಮಿಹೋಚ್ಯತೇ ॥ ೬೧ ॥

---

೫೭. ಆಯಾಯ ಇಂದ್ರಿಯಗಳಿಂದ ವಿಷಯಗಳು ಗ್ರಹಿಸಲ್ಪಡುವುವು ಇಂತಹ ವ್ಯಾಪಾರಗಳು ಪರಮಾತ್ಮನ ವೀರ್ಯದಿಂದ ಜರುಗುವುವು. ಈ ರೀತಿಯಾಗಿ ಪೂರ್ಣಾತ್ಮಕನೂ ಅನಾದಿಯೂ ಆದ ಅದ್ವಿತೀಯ ಪರಮಾತ್ಮನು ಈ ತತ್ತ್ವಗಳನ್ನು ಸೃಜಿಸುವನು.

೫೮. ಇಂತಹ ವಿಷ್ಣುಪರಮಾತ್ಮನು ನಿಧನ ಹೊಂದುವ ಈ ಲೋಕದಲ್ಲಿ ಮಾನುಷ ಜನ್ಮವನ್ನು ಏಕೆ ಹೊಂದಿವನು? ಜ್ಞಾನಿಯೆ! ನಮಗೆ ಇದೊಂದು ಸಂಶಯವೂ ಮಹಾವಿಸ್ಮಯವೂ ಆಗಿರುವುದು.

೫೯ ಸದ್ಗತಿ ಪ್ರಾಪ್ತಿಗೆ ಅರ್ಹರಾದವರಿಗೆ ಗತಿರೂಪನಾಗಿರುವ ವಿಷ್ಣುವು ಮಾನುಷ ಜನ್ಮವನ್ನು ಏಕೆ ಹೊಂದಿದನು? ಈ ಅಂಶವನ್ನೂ ಮಹಾವಿಷ್ಣುವಿನ ಪವಿತ್ರ ಕರ್ಮಗಳನ್ನೂ ಕ್ರಮವಾಗಿ ಕೇಳಲು ಇಷ್ಟವುಳ್ಳವರಾಗಿದ್ದೇವೆ.

೬೦. ವೇದಗಳಿಂದಲೂ ದೇವತೆಗಳಿಂದಲೂ ಮಹಾವಿಷ್ಣುವು ಮಹಿಮಾತಿಶಯದಿಂದ ಆಶ್ಚರ್ಯರೂಪನಾಗಿ ವರ್ಣಿಸಲ್ಪಡುವನು, ಮಹಾಜ್ಞಾನಿಯೆ! ವಿಷ್ಣು ಪರಮಾತ್ಮನ ಆಶ್ಚರ್ಯಕರವಾದ ಉತ್ಪತ್ತಿ ಚರಿತ್ರೆಯನ್ನು ಹೇಳು.

೬೧. ಪ್ರಖ್ಯಾತವಾದ ಬಲ, ವೀರ್ಯಗಳಿಂದ ಕೂಡಿದ ಮಹಾತ್ಮನಾದ ವಿಷ್ಣುವಿನ ಪ್ರಾದುರ್ಭಾವವನ್ನು ಸೂಚಿಸುವ, ಆಶ್ಚರ್ಯಕರವಾಗಿ ಹಿಂದೆ ಹೇಳಲ್ಪಟ್ಟಿರುವ ಮತ್ತು ಆನಂದದಾಯಕವಾದ ಚರಿತ್ರೆಯು ಹೇಳಲ್ಪಡಲಿ, ಅಸಾಧಾರಣವಾದ ವ್ಯಾಪಾರದಿಂದ ಆಶ್ಚರ್ಯರೂಪಿಯಾದ ವಿಷ್ಣುವಿನ ಮಹಾಶಕ್ತಿಯು ಇದರಿಂದ ಹೇಳಲ್ಪಡುತ್ತದೆ.

ಸೂತ ಉವಾಚ :—

ಅಹಂ ವಃ ಕೀರ್ತಯಿಷ್ಯಾಮಿ ಪ್ರಾದುರ್ಭಾವಂ ಮಹಾತ್ಮನಃ ॥ ೬೨ ॥

ಯಥಾ ಬಭೂವ ಭಗವಾನ್ಮಾನುಷೇಷು ಮಹಾತಪಾಃ ।
ಭೃಗುಸ್ತ್ರೀವಧದೋಷೇಣ ಭೃಗುಶಾಪೇನ ಮಾನುಷೇ ॥ ೬೩ ॥

ಜಾಯತೇ ಚ ಯುಗಾಂತೇಷು ದೇವಕಾರ್ಯಾರ್ಥಸಿದ್ಧಯೇ ।
ತಸ್ಯ ದಿವ್ಯಾಂ ತನುಂ ವಿಷ್ಣೋರ್ಗದತೋ ಮೇ ನಿಬೋಧತ ॥ ೬೪ ॥

ಯುಗಧರ್ಮೇ ಪರಾವೃತ್ತೇ ಕಾಲೇ ಚ ಶಿಥಿಲೇ ಪ್ರಭುಃ ।
ಕರ್ತುಂ ಧರ್ಮವ್ಯವಸ್ಥಾನಂ ಜಾಯತೇ ಮಾನುಷೇಷ್ವಿಹ
ಭೃಗೋಃ ಶಾಪನಿಮಿತ್ತೇನ ದೇವಾಸುರಕೃತೇನ ಚ ॥ ೬೫ ॥

ಋಷಯ ಊಚುಃ :—

ಕಥಂ ದೇವಾಸುರಕೃತೇ ತದ್ವ್ಯಾಹಾರಮವಾಪ್ತವಾನ್ ।
ಏತದ್ವೇದಿತುಮಿಚ್ಛಾಮೋ ವೃತ್ತಂ ದೇವಾಸುರಂ ಕಥಮ್ ॥ ೬೬ ॥

---

೬೨. ಸೂತಮುನಿಯು ಇಂತೆಂದನು:— ನಾನು ಮಹಾತ್ಮನಾದ ವಿಷ್ಣು ಪರಮಾತ್ಮನ ಆಶ್ಚರ್ಯಕರವಾದ ಪ್ರಾದುರ್ಭಾವ ಚರಿತ್ರೆಯನ್ನು ಶ್ರವಣಮಾಡಬೇಕೆಂಬ ಕುತೂಹಲವುಳ್ಳ ನಿಮಗೆ ಅದನ್ನು ವರ್ಣಿಸುವೆನು.

೬೩. ಷಡ್ಗುಣೈಶ್ವರ್ಯ ಸಂಪನ್ನನಾದ ಮತ್ತು ಜ್ಞಾನರೂಪವಾದ ಮಹಾ ತಪಸ್ಸುಳ್ಳ ಪರಮಾತ್ಮನು ಭೃಗುಮುನಿಯ ಪತ್ನಿಯ ಹತ್ಯಾದೋಷದಿಂದ ರುಷ್ಟನಾದ ಭೃಗುಮುನಿಯ ಶಾಪದಿಂದ ಮನುಷ್ಯಜನ್ಮವನ್ನು ಎತ್ತಿರುವನು.

೬೪. ಯುಗಾಂತಸಮಯದಲ್ಲಿ ದೇವಕಾರ್ಯಗಳನ್ನು ಸಾಧಿಸಲೋಸ್ಕರ ಮತ್ತೆ ಮತ್ತೆ ಜನಿಸುವನು. ಆ ವಿಷ್ಣುಪರಮಾತ್ಮನ ದಿವ್ಯವಾದ ವಿಗ್ರಹವನ್ನು ನಿಮಗೆ ವರ್ಣಿಸುವ ನನ್ನ ವಚನವನ್ನು ಶ್ರವಣಮಾಡಿರಿ.

೬೫. ಪ್ರಭುವಾದ ಮಹಾವಿಷ್ಣುವು ಯುಗಧರ್ಮವು ಕ್ಷೀಣವಾಗಿ ಕಳೆದು ಕಲ್ಪ ಕಾಲವು ಅವಸಾನಹೊಂದುತ್ತ ಬರುವ ಸಮಯದಲ್ಲಿ ದೇವ-ಅಸುರರ ನಿಮಿತ್ತದಿಂದ ಸಂಭವಿಸಿದ ಭೃಗುಮುನಿಯ ಶಾಪವಶದಿಂದ ಧರ್ಮವ್ಯವಸ್ಥೆಯನ್ನು ರಚಿಸಲು ಮನುಷ್ಯಯೋನಿಯಲ್ಲಿ ಜನಿಸುವನು.

೬೬. ಮುನಿಗಳು ಇಂತೆಂದರು:—ವಿಷ್ಣುಪರಮಾತ್ಮನು ದೇವಾಸುರರಿಗೋಸ್ಕರ ಮನುಷ್ಯಜನ್ಮ ವೃತ್ತಾಂತವನ್ನು ಹೇಗೆ ಹೊಂದಿದನು. ದೇವಾಸುರರ ಸಂಗ್ರಾಮ ವೃತ್ತವು ಹೇಗೆ ನಡೆಯಿತು ? ಇದನ್ನು ಕೇಳಲು ಇಷ್ಟಪಡುತ್ತೇವೆ.

**ಸೂತ ಉವಾಚ :—**

**ದೇವಾಸುರಂ ಯಥಾ ವೃತ್ತಂ ಬ್ರುವತಸ್ತನ್ನಿಬೋಧತ ॥ ೬೭ ॥**

**ಹಿರಣ್ಯಕಶಿಪುರ್ದೈತ್ಯಸ್ತ್ರೈಲೋಕ್ಯಂ ಪ್ರಾಕ್ ಪಶಾಸತಿ ।**
**ಬಲಿನಾಧಿಷ್ಠಿತಂ ರಾಜ್ಯಂ ಪುನರ್ಲೋಕತ್ರಯೇ ಕ್ರಮಾತ್ ॥ ೬೮ ॥**

**ಸಖ್ಯಮಾಸೀತ್ ಪರಂ ತೇಷಾಂ ದೇವಾನಾಮಸುರೈಃ ಸಹ ।**
**ಯುಗಾಖ್ಯಾ ದಶ ಸಂಪೂರ್ಣಾ ಹ್ಯಾಸೀದವ್ಯಾಹತಂ ಜಗತ್ ॥ ೬೯ ॥**

**ನಿದೇಶಸ್ಥಾಯಿನಶ್ಚೈವ ತಯೋರ್ದೇವಾಸುರಾಭವನ್ ।**
**ಬದ್ಧೇ ಬಲೌ ವಿವಾದೋಽಥ ಸಂಪ್ರವೃತ್ತಃ ಸುದಾರುಣಃ ॥ ೭೦ ॥**

**ದೇವಾಸುರಾಣಾಂ ಚ ತದಾ ಘೋರಃ ಕ್ಷಯಕರೋ ಮಹಾನ್ ।**
**ತೇಷಾಂ ದ್ವೀಪನಿಮಿತ್ತಂ ವೈ ಸಂಗ್ರಾಮಾ ಬಹವೋಽಭವನ್ ॥ ೭೧ ॥**

---

೬೭. ಸೂತ ಮುನಿಯು ಹೀಗೆ ನುಡಿದನು :—ದೇವ ಮತ್ತು ಅಸುರರ ಯುದ್ಧ ವೃತ್ತವು ಏಕೆಜರುಗಿತೆಂಬುನನ್ನು ಹೇಳುವೆನು, ಅದನ್ನು ನನ್ನಿಂದ ಶ್ರವಣಮಾಡಿರಿ.

೬೮. ಪೂರ್ವದಲ್ಲಿ ಹಿರಣ್ಯಕಶಿಪು ಎಂಬ ದೈತ್ಯನು ಮೂರು ಲೋಕಗಳನ್ನು ಆಳಿದನು. ತರುವಾಯ ಲೋಕತ್ರಯದ ರಾಜ್ಯವು ಕ್ರಮವಾಗಿ ಬಲಿಚಕ್ರವರ್ತಿಯಿಂದ ಆಳಲ್ಪಟ್ಟಿತು.

೬೯. ಆಗ ದೇವತೆಗಳಿಗೆ ಅಸುರರ ಸಂಗಡ ಪ್ರಕೃಷ್ಟವಾದ ಮೈತ್ರೀಭಾವವು ಇದ್ದಿತು. ಹಾಗೆ ಅವರ ಆಳ್ವಿಕೆಯಲ್ಲಿ ಹತ್ತು ಯುಗಸಂಖ್ಯೆಯ ಪರ್ಯಾಯಕಾಲವು ಕಳೆಯಿತು. ಪ್ರಪಂಚವು ಉಪದ್ರವವಿಲ್ಲದೆ ನೆಮ್ಮದಿಯಿಂದ ಇತ್ತು.

೭೦. ಆಗ ಸಕಲ ದೇವಾಸುರರು ಆ ಹಿರಣ್ಯಕಶಿಪು–ಬಲಿರಾಜರ ನಿದೇಶವನ್ನು ಪಾಲಿಸಿಕೊಂಡಿದ್ದರು. ಬಲಿಚಕ್ರವರ್ತಿಯು ಬಂಧಿತನಾದ ತರುವಾಯ ದೇವಾಸುರರಿಗೆ ಭಯಂಕರವಾದ ಯುದ್ಧವು ಪ್ರಸಕ್ತವಾಯಿತು.

೭೧. ಆ ಸಮಯದಲ್ಲಿ ದೇವ-ಅಸುರರಿಗೆ ಹಾನಿಯನ್ನು ಉಂಟುಮಾಡುವ ಪ್ರಬಲವಾದ ಘೋರ ಸಂಗ್ರಾಮವು ನಡೆಯಿತು. ಆಮೇಲೆ ದ್ವೀಪರೂಪವಾದ ರಾಜ್ಯವನ್ನು ಹೊಂದುವ ನಿಮಿತ್ತದಿಂದ ಅನೇಕ ರಣಗಳು ನಡೆಯುತ್ತ ಬಂದುವು.

ವರಾಹೇಽಸ್ಮಿನ್ ದಶ ದ್ವೌ ಚ ಷಂಡಾಮರ್ಕಾಂತಗಾಃ ಸ್ಮೃತಾಃ ।
ನಾಮತಸ್ತು ಸಮಾಸೇನ ಶೃಣುಧ್ವಂ ತಾನ್ ವಿವಕ್ಷತಃ ॥ ೭೨ ॥

ಪ್ರಥಮೋ ನಾರಸಿಂಹಸ್ತು ದ್ವಿತೀಯಶ್ಚಾಪಿ ವಾಮನಃ ।
ತೃತೀಯಃ ಸ ತು ವಾರಾಹಶ್ಚತುರ್ಥೋಽಮೃತಮಂಥನಃ ॥ ೭೩ ॥

ಸಂಗ್ರಾಮಃ ಪಂಚಮಶ್ಚೈವ ಸುಘೋರಸ್ತಾರಕಾಮಯಃ ।
ಷಷ್ಠೋ ಹ್ಯಾಡೀಬಕಸ್ತೇಷಾಂ ಸಪ್ತಮಸ್ತ್ರೈಪುರಃ ಸ್ಮೃತಃ ॥ ೭೪ ॥

ಅಂಧಕಾರೋಽಷ್ಟಮಸ್ತೇಷಾಂ ಧ್ವಜಶ್ಚ ನವಮಃ ಸ್ಮೃತಃ ।
ವಾರ್ತ್ರಶ್ಚ ದಶಮೋ ಘೋರಸ್ತತೋ ಹಾಲಾಹಲಃ ಸ್ಮೃತಃ ॥ ೭೫ ॥

ಸ್ಮೃತೋ ದ್ವಾದಶಕಸ್ತೇಷಾಂ ಘೋರಃ ಕೋಲಾಹಲೋಽಪರಃ ।
ಹಿರಣ್ಯಕಶಿಪುರ್ದೈತ್ಯೋ ನರಸಿಂಹೇನ ಸೂದಿತಃ ॥ ೭೬ ॥

---

೭೨. ಈ ವರಾಹ ಕಲ್ಪದಲ್ಲಿ ಷಂಡ, ಅಮರ್ಕರೆಂಬ ಅಸುರರ ಸಂಗ್ರಾಮಗಳೂ ಸೇರಿ ಒಟ್ಟು ಹನ್ನೆರಡು ಯುದ್ಧಗಳು ನಡೆಯುವೆಂದು ಸ್ಮರಿಸಲ್ಪಟ್ಟಿರುವುವು. ಅವುಗಳನ್ನು ವಿವರಿಸಿ ಹೇಳಬೇಕೆಂದಿರುವ ನನ್ನ ವಚನದಿಂದ ಅವುಗಳ ಹೆಸರುಗಳನ್ನು ಶ್ರವಣಮಾಡಿರಿ.

೭೩. ಇವುಗಳಲ್ಲಿ ನರಸಿಂಹಾವತಾರದಲ್ಲಿ ನಡೆದಿರುವ ಸಂಗ್ರಾಮವೃತ್ತವು ಮೊದಲನೆಯದೂ ವಾಮನಾವತಾರದ ನಿಗ್ರಹವು ಎರಡನೆಯದೂ, ವರಾಹಾವತಾರದ ಶಿಕ್ಷಣವು ಮೂರನೆಯದೂ ಮತ್ತು ಅಮೃತ ಮಥನ ಸಮಯದಲ್ಲಿ ನಡೆದಿರುವ ಕಾಳಗವು ನಾಲ್ಕನೆಯದೂ ಆಗಿವೆ.

೭೪. ಘೋರವಾದ, ತಾರಕಾಸುರನಿಗೆ ಪೀಡಾಜನಕವಾದ ಸಂಗ್ರಾಮವು ಐದನೆಯದಾಗಿರುವುದು. ಹಾಗೆಯೆ ಆಡೀ ಬಕವೆಂಬ ಸಂಗ್ರಾಮವು ಆರನೆಯದೂ ಮತ್ತು ತ್ರಿಪುರಾಸುರ ರೂಪವಾದ ರಣವು ಏಳನೆಯದೂ ಆಗಿವೆ.

೭೫. ಅಂಧಕಾಸುರನ ಸಂಗಡದ ಕಾಳಗವು ಎಂಟನೆಯದು. ಧ್ವಜಾಸುರನ ರಣವು ಒಂಭತ್ತನೆಯದೆಂದು ಸ್ಮರಿಸಲ್ಪಟ್ಟಿರುವುದು. ವೃತ್ರಾಸುರನ ಸಂಗಡವಾದ ಘೋರ ಯುದ್ಧವು ಹತ್ತನೆಯದು, ಮತ್ತು ಹಾಲಾಹಲವೆಂಬ ರಣವು ಹನ್ನೊಂದನೆಯದಾಗಿ ಸ್ಮರಿಸಲ್ಪಟ್ಟಿರುವುದು.

೭೬. ಮತ್ತೊಂದು ಘೋರವಾದ ಕೋಲಾಹಲವೆಂಬ ರಣವು ಹನ್ನೆರಡನೆಯದಾಗಿ ಸ್ಮರಿಸಲ್ಪಟ್ಟಿರುವುದು. ಇವುಗಳಲ್ಲಿ ಪ್ರಥಮ ಸಂಗ್ರಾಮದಲ್ಲಿ ಹಿರಣ್ಯ ಕಶಿಪು ಎಂಬ ದೈತ್ಯನು ನರಸಿಂಹಸ್ವಾಮಿಯಿಂದ ಸಂಹರಿಸಲ್ಪಟ್ಟನು.

ವಾಮನೇನ ಬಲಿರ್ಬದ್ಧಸ್ತ್ರೈಲೋಕ್ಯಾಕ್ರಮಣೇ ಕೃತೇ ।
ಹಿರಣ್ಯಾಕ್ಷೋ ಹತೋ ದ್ವಂದ್ವೇ ಪ್ರತಿವಾದೇ ಚ ದೈವತೇ ॥ ೭೭ ॥

ಮಹಾಬಲೋ ಮಹಾಸತ್ತ್ವಃ ಸಂಗ್ರಾಮೇಷ್ವಪರಾಜಿತಃ ।
ದಂಷ್ಟ್ರಯಾ ತು ವರಾಹೇಣ ಸ ದೈತ್ಯಸ್ತು ದ್ವಿಧಾಕೃತಃ ॥ ೭೮ ॥

ಪ್ರಹ್ಲಾದೋ ನಿರ್ಜಿತೋ ಯುದ್ಧೇ ಇಂದ್ರೇಣಾಮೃತಮಂಥನೇ ।
ವಿರೋಚನಸ್ತು ಪ್ರಾಹ್ರಾದಿರ್ನಿತ್ಯಮಿಂದ್ರವಧೋದ್ಯತಃ ॥ ೭೯ ॥

ಇಂದ್ರೇಣೈವ ಸ ವಿಕ್ರಮ್ಯ ನಿಹತಸ್ತಾರಕಾಮಯೇ ।
ಭವಾದವಧ್ಯತಾಂ ಪ್ರಾಪ್ಯ ವಿಶೇಷಾಸ್ತ್ರಾದಿಭಿಸ್ತು ಯಃ ॥ ೮೦ ॥

ಸ ಜಂಭೋ ನಿಹತಃ ಷಷ್ಠೇ ಶಕ್ರಾವಿಷ್ಟೇನ ವಿಷ್ಣುನಾ ।
ಅಶಕ್ನುವತ್ಸು ದೇವೇಷು ಪರಂ ಸೋಢುಮದೈವತಮ್ ॥ ೮೧ ॥

---

೭೭. ವಾಮನ ಮೂರ್ತಿಯಿಂದ ತ್ರಿಲೋಕಗಳ ಆಕ್ರಮಣವು ನಡೆಯಿಸಲ್ಪಟ್ಟ ಸಮಯದಲ್ಲಿ ಬಲಿಚಕ್ರವರ್ತಿಯು ಬಂಧಿಸಲ್ಪಟ್ಟನು. ಮತ್ತು ದೇವತೆಗಳ ಸಂಗಡ ಆದ ಪ್ರತಿ ಯುದ್ಧದಿಂದ ಹಿರಣ್ಯಾಕ್ಷನು ಕೊಲ್ಲಲ್ಪಟ್ಟನು.

೭೮. ಆ ಹಿರಣ್ಯಾಕ್ಷನು ಮಹಾ ಬಲಿಷ್ಠನೂ, ಮಹಾ ಸತ್ತ್ವವುಳ್ಳವನೂ, ಆಗಿ ಅನೇಕ ಸಂಗ್ರಾಮಗಳಲ್ಲಿ ಪರಾಜಯ ಹೊಂದದೆ ಇದ್ದನು. ಆಗ ಆ ದೈತ್ಯನು ವರಾಹಮೂರ್ತಿಯಿಂದ ಕೋರೆ ಹಲ್ಲಿನಿಂದ ಎರಡಾಗಿ ಸೀಳಲ್ಪಟ್ಟು ಮೃತನಾದನು

೭೯. ಅಮೃತ ಮಥನ ಪ್ರಸ್ತಾವದ ಯುದ್ಧದಲ್ಲಿ ಪ್ರಹ್ಲಾದನು ಇಂದ್ರನಿಂದ ಪರಾಜಯ ಹೊಂದಿದನು. ಪ್ರಹ್ಲಾದ ಪುತ್ರನಾದ ವಿರೋಚನನು ಯಾವಾಗಲೂ ಇಂದ್ರನ ವಧನ ಉದ್ಯಮದಲ್ಲಿದ್ದನು.

೮೦. ತಾರಕಾಸುರ ಯುದ್ಧದಲ್ಲಿ ಆ ವಿರೋಚನನು ಇಂದ್ರನಿಂದ ವಿಕ್ರಮ ಪೂರ್ವಕವಾಗಿ ಸಂಹರಿಸಲ್ಪಟ್ಟನು, ಮತ್ತೊಬ್ಬ ಜಂಭನೆಂಬ ಅಸುರನು ಈಶ್ವರನಿಂದ ವಿಶೇಷವಾದ ಅಸ್ತ್ರಾದಿಗಳಿಂದ ಅವಧ್ಯನಾಗಿರುವ ವರವನ್ನು ಹೊಂದಿದ್ದನು.

೮೧. ಆ ಅಸುರನ ದೇವ ವಿರೋಧಾಚರಣೆಯ ಅತಿಶಯವನ್ನು ದೇವತೆಗಳು ಸಹಿಸದಿರಲು ಇಂದ್ರನ ಮೂರ್ತಿಯಲ್ಲಿ ಆವೇಶಹೊಂದಿದ ಮಹಾವಿಷ್ಣುವಿನಿಂದ ಅವನು ಆರನೆಯ ಯುದ್ಧದಲ್ಲಿ ಸಂಹರಿಸಲ್ಪಟ್ಟನು.

ನಿಹತಾ ದಾನವಾಃ ಸರ್ವೇ ತ್ರಿಪುರೇ ತ್ರ್ಯಂಬಕೇಣ ತು ।
ಅಥ ದೈತ್ಯಾಸುರಾಶ್ಚೈವ ರಾಕ್ಷಸಾಸ್ತ್ವಂಧಕಾರಿಕೇ ॥ ೮೨ ॥

ಜಿತಾ ದೇವಮನುಷ್ಯೈಸ್ತೇ ಪಿತೃಭಿಶ್ಚೈವ ಸಂಗತಾಃ ।
ಸವೃತ್ರಾನ್ ದಾನವಾಂಶ್ಚೈವ ಸಂಗತಾನ್ ಕೃತ್ಸ್ನಶಶ್ಚ ತಾನ್ ॥ ೮೩ ॥

ಜಘ್ನೇ ವಿಷ್ಣುಸಹಾಯೇನ ಮಹೇಂದ್ರಸ್ತೇನ ವರ್ಧಿತಃ ।
ಹತೋ ಧ್ವಜೇ ಮಹೇಂದ್ರೇಣ ಮಾಯಾಛತ್ರಶ್ಚ ಯೋಗವಿತ್॥ ೮೪ ॥

ಧ್ವಜಲಕ್ಷಂ ಸಮಾವಿಶ್ಯ ವಿಪ್ರಚಿತ್ತಿಃ ಸಹಾನುಜಃ ।
ದೈತ್ಯಾಂಶ್ಚ ದಾನವಾಂಶ್ಚೈವ ಸಂಹತಾನ್ ಕೃತ್ಸ್ನಶಶ್ಚ ತಾನ್ ॥ ೮೫ ॥

ಜಯುದ್ಧಾಲಾಹಲೇ ಸರ್ವೈರ್ದೇವೈಃ ಪರಿವೃತೋ ವೃಷಾ ।
ರಜಿಃ ಕೋಲಾಹಲೇ ಸರ್ವಾನ್ ದೈತ್ಯಾನ್ ಪರಿವೃತೋಽಜಯತ್
॥ ೮೬ ॥

---

೮೨. ತ್ರಿಪುರಯುದ್ಧದಲ್ಲಿ ಈಶ್ವರನಿಂದ ಸಮಸ್ತ ದಾನವರೂ ವಧಿಸಲ್ಪಟ್ಟರು. ಮತ್ತು ಅಂಧಕಾಸುರನ ಸಂಹಾರದಲ್ಲಿ ಸಮಸ್ತ ದೈತ್ಯ-ಅಸುರ-ರಾಕ್ಷಸರು ಪರಾಜಯ ಹೊಂದಿದರು.

೮೩. ಆ ದಾನವಾದಿಗಳು ದೇವ, ಮನುಷ್ಯ ಮತ್ತು ಪಿತೃಗಳಿಂದ ಸಂಗತರಾಗಿ ಅವರಿಂದ ಜಯಿಸಲ್ಪಟ್ಟರು. ಹಾಗೆ ವೃತ್ರಾಸುರನು ಮೊದಲಾಗಿ ಸೇರಿ ಬಂದ ಸಮಸ್ತ ದಾನವರೂ ಅಪಜಯ ಹೊಂದಿದರು.

೮೪. ವಿಷ್ಣುವಿನ ಸಹಾಯಾಚರಣೆಯಿಂದ ವೃದ್ಧಿಹೊಂದಿದ ಇಂದ್ರನು ಸಮಸ್ತ ದಾನವರನ್ನೂ ನಿಗ್ರಹಿಸಿದನು. ಮತ್ತು ಧ್ವಜಾಸುರಯುದ್ಧದಲ್ಲಿ ಯೋಗವನ್ನು ತಿಳಿದಿರುವ ಮಾಯಾ ಛತ್ರನೆಂಬ ದೈತ್ಯನು ಸಂಹರಿಸಲ್ಪಟ್ಟನು.

೮೫. ಆ ಯುದ್ಧದಲ್ಲಿ ತನ್ನ ಅನುಜನಿಂದ ಕೂಡಿದ ವಿಪ್ರಚಿತ್ತಿ ಎಂಬ ಅಸುರನು ಲಕ್ಷಧ್ವಜವನ್ನು ಆವೇಶಮಾಡಿ ಯುದ್ಧ ಮಾಡುತ್ತಲಿದ್ದನು. ಮತ್ತು ಹಾಲಾಹಲಯುದ್ಧದಲ್ಲಿ ದೈತ್ಯರು ಮತ್ತು ದಾನವರು ಸೇರಿ ರಣಕ್ಕೆ ಬಂದರು.

೮೬. ಆಗ ಎಲ್ಲ ದೇವತೆಗಳಿಂದ ಸುತ್ತುವರಿಯಲ್ಪಟ್ಟು ಇಂದ್ರನು ಎಲ್ಲ ದಾನವರನ್ನು ಸಂಹಾರಮಾಡಿದನು. ರಜಿ ಚಕ್ರವರ್ತಿಯು ರಣರಂಗದಲ್ಲಿ ಎಲ್ಲ ದೈತ್ಯರನ್ನು ಸುತ್ತುವರಿದು ಜಯಿಸಿದನು.

ಯಜ್ಞಸ್ಯಾವಭೃಥೇ ಜಿತ್ವಾ ಷಂಡಾಮರ್ಕೌ ತು ದೈವತೈಃ ।
ಏತೇ ದೇವಾಸುರಾ ವೃತ್ತಾಃ ಸಂಗ್ರಾಮಾ ದ್ವಾದಶೈವ ತು ॥ ೮೭ ॥

ಸುರಾಸುರಕ್ಷಯಕರಾಃ ಪ್ರಜಾನಾಮಶಿವಶ್ಚ ಹ ।
ಹಿರಣ್ಯಕಶಿಪೂ ರಾಜಾ ವರ್ಷಾಣಾಮರ್ಬುದಂ ಬಭೌ ॥ ೮೮ ॥

ತಥಾ ಶತಸಹಸ್ರಾಣಿ ಹ್ಯಧಿಕಾನಿ ದ್ವಿಸಪ್ತತಿಃ ।
ಅಶೀತಿಶ್ಚ ಸಹಸ್ರಾಣಿ ತ್ರೈಲೋಕ್ಯಸ್ಯೇಶ್ವರೋಽಭವತ್ ॥ ೮೯ ॥

ಪಾರಂಪರ್ಯೇಣ ರಾಜಾ ತು ಬಲಿರ್ವರ್ಷಾರ್ಬುದಃ ಪುನಃ ।
ಷಷ್ಟಿಶ್ಚೈವ ಸಹಸ್ರಾಣಿ ತ್ರಿಂಶಚ್ಚ ನಿಯುತಾನಿ ಚ ॥ ೯೦ ॥

ಬಲೇ ರಾಜ್ಯಾಧಿಕಾರಸ್ತು ಯಾವತ್ಕಾಲಂ ಬಭೂವ ಹ ।
ಪ್ರಹ್ರಾದೋ ನಿರ್ಜಿತೋಽಭೂಚ್ಚ ತಾವತ್ಕಾಲಂ ಸಹಾಸುರೈಃ ॥ ೯೧ ॥

---

೮೭. ರಜಿ ಎಂಬ ಚಕ್ರವರ್ತಿಯು ತಾನು ಆಚರಿಸಿದ ಯಜ್ಞಕರ್ಮದ ಅವಭೃಥ ಸಮಯದಲ್ಲಿ ಅನೇಕ ದೇವತೆಗಳೊಡನೆ ಷಂಡ-ಅಮರ್ಕ ಎಂಬ ಅಸುರರನ್ನು ನಿಗ್ರಹಿಸಿದನು. ಹೀಗೆ ದೇವ-ಅಸುರರ ಸಂಗ್ರಾಮಗಳು ಹನ್ನೆರಡು ಸಲ ನಡೆದಿರುವುವು.

೮೮. ದೇವ-ದಾನವರ ನಾಶಕ್ಕೆ ಕಾರಣನಾದ ಮತ್ತು ಪ್ರಜೆಗಳ ಅಮಂಗಳಕರನಾದ ಹಿರಣ್ಯಕಶಿಪು ಎಂಬುವನು ರಾಜನಾಗಿ ಅರ್ಬುದ ವರ್ಷಗಳ ವರೆಗೆ ಪ್ರಕಾಶಿಸಿದನು.

೮೯. ಮತ್ತು ಎಂಭತ್ತುಸಾವಿರದ ಎಪ್ಪತ್ತೆಂಟರಿಂದ ಅಧಿಕವಾಗಿ ಸೇರಿದ ಒಂದು ಲಕ್ಷ ವರ್ಷಗಳಷ್ಟು ದೀರ್ಘಕಾಲದವರೆಗೆ ಹಿರಣ್ಯಕಶಿಪುವು ತ್ರಿಲೋಕಗಳಿಗೆ ಈಶ್ವರನಾದನು.

೯೦. ಅದೇ ಪರಂಪರೆಯಿಂದ ರಾಜನಾಗಿ ಬಂದ ಬಲಿಚಕ್ರವರ್ತಿಯು ಮೂವತ್ತು ನಿಯುತ ಅರವತ್ತು ಸಹಸ್ರ ವರ್ಷಗಳವರೆಗೆ ರಾಜ್ಯವನ್ನು ಆಳಿದನು.

೯೧. ಎಷ್ಟು ಕಾಲದವರೆಗೆ ಬಲಿಚಕ್ರವರ್ತಿಯ ರಾಜ್ಯಾಧಿಕಾರವು ಬೆಳಗುತ್ತಿತ್ತೊ ಅಷ್ಟುಕಾಲದವರೆಗೆ ಪ್ರಹ್ಲಾದಾಸುರನು ಸಮಸ್ತ ಅಸುರರೊಂದಿಗೆ ಪರಾಜಯವನ್ನು ಹೊಂದಿದನು.

ಇಂದ್ರಾಸ್ತ್ರಯಸ್ತೇ ವಿಖ್ಯಾತಾ ಹ್ಯಸುರಾಣಾಂ ಮಹೌಜಸಃ ।
ದೈತ್ಯಸಂಸ್ಥಮಿದಂ ಸರ್ವಮಾಸೀದ್ದಶಯುಗಂ ಕಿಲ ॥ ೯೨ ॥

ಅಶಪತ್ತು ತತಃ ಶುಕ್ರೋ ರಾಷ್ಟ್ರಂ ದಶಯುಗಂ ಪುನಃ ।
ತ್ರೈಲೋಕ್ಯಮಿದಮವ್ಯಗ್ರಂ ಮಹೇಂದ್ರೋ ಹ್ಯಭ್ಯಯಾದ್ಬಲೇಃ ॥ ೯೩ ॥

ಪ್ರಹ್ರಾದಸ್ಯ ಹೃತೇ ತಸ್ಮಿಂಸ್ತ್ರೈಲೋಕ್ಯೇ ಕಾಲಪರ್ಯಯಾತ್ ।
ಪರ್ಯಾಯೇಣೈವ ಸಂಪ್ರಾಪ್ತಂ ತ್ರೈಲೋಕ್ಯಂ ಪಾಕಶಾಸನಮ್ ॥ ೯೪ ॥

ತತೋಽಸುರಾನ್ ಪರಿತ್ಯಜ್ಯ ಯಜ್ಞೋ ದೇವಾನುಪಾಗಮತ್ ।
ಯಜ್ಞೇ ದೇವಾನಥ ಗತೇ ಕಾವ್ಯಂ ತೇ ಹ್ಯಸುರಾಬ್ರುವನ್ ॥ ೯೫ ॥

ಕಿಂ ತನ್ನೋ ಮಿಷತಾಂ ರಾಷ್ಟ್ರಂ ತ್ಯಕ್ತ್ವಾ ಯಜ್ಞಃ ಸುರಾನ್ ಗತಃ ।
ಸ್ಥಾತುಂ ನ ಶಕ್ನುಮೋ ಹ್ಯದ್ಯ ಪ್ರವಿಶಾಮ ರಸಾತಲಮ್ ॥ ೯೬ ॥

---

೯೨. ಹೀಗೆ ಅಸುರರಲ್ಲಿ ಮಹಾಪರಾಕ್ರಮಿಗಳೆನಿಸಿರುವ ಹಿರಣ್ಯಕಶಿಪು, ಬಲಿ, ಪ್ರಹ್ಲಾದ ಎಂಬ ಮೂರು ಮಂದಿಯು ಇಂದ್ರರಾಗಿ ಪ್ರಸಿದ್ಧರಾಗಿದ್ದರು. ಹೀಗೆ ಈ ಎಲ್ಲ ಪ್ರಪಂಚವು ಹತ್ತು ಯುಗಗಳು ಕಳೆಯುವವರೆಗೆ ದೈತ್ಯರ ಅಧೀನವಾಗಿತ್ತು.

೯೩. ತರುವಾಯ ದೈತ್ಯರ ಗುರುವಾದ ಶುಕ್ರನು ಹತ್ತು ಯುಗಗಳು ಕಳೆದ ಮೇಲೆ ರಾಷ್ಟ್ರಕ್ಕೆ ಶಾಪವನ್ನು ಕೊಟ್ಟನು. ಆಗ ಮಹೇಂದ್ರನು ಬಲಿರಾಜನ ಮುಂದೆ ನಿರಂಕುಶವಾದ ತ್ರೈಲೋಕ್ಯ ರಾಜ್ಯವನ್ನು ಹೊಂದಿದನು.

೯೪. ಪ್ರಹ್ಲಾದನ ಆ ತ್ರೈಲೋಕ್ಯ ರಾಜ್ಯಾಧಿಕಾರವು ಕಾಲವಶದಿಂದ ನಷ್ಟವಾಗಲು ಆ ತ್ರೈಲೋಕ್ಯವು ಪರ್ಯಾಯವಾಗಿ ಇಂದ್ರನ ಶಾಸನಕ್ಕೆ ಭಾಗಿಯಾಯಿತು.

೯೫. ಅನಂತರದಲ್ಲಿ ಯಜ್ಞ ಪುರುಷನು ಹವಿಸ್ಸೆಂಬ ಅಮೃತದಿಂದ ದೇವತೆಗಳನ್ನು ಸೇವಿಸಿದನು. ಈ ರೀತಿಯಾಗಿ ಯಜ್ಞವು ದೇವ ಭಾಗವಾಗಲಾಗಿ ಅಸುರರು ಗುರುವಾದ ಶುಕ್ರನನ್ನು ಕುರಿತು ಇಂತೆಂದರು.

೯೬. ಗುರುವೆ! ನಾವು ನೋಡುತ್ತಿರುವ ಹಾಗೆ ರಾಷ್ಟ್ರವೂ, ಯಜ್ಞವೂ ನಮ್ಮನ್ನು ಬಿಟ್ಟು ದೇವತೆಗಳನ್ನು ಹೊಂದಿರುವುವು. ಈಗ ನಮ್ಮಿಂದ ಇಲ್ಲಿ ಇರಲು ಶಕ್ಯವಲ್ಲವು, ಆದುದರಿಂದ ನಾವು ಪಾತಾಲವನ್ನು ಪ್ರವೇಶಿಸುವೆವು.

ಏವಮುಕ್ತೋಽಬ್ರವೀದೇತಾನ್ ವಿಷಣ್ಣಃ ಸಾಂತ್ವಯನ್ ಗಿರಾ ।
ಮಾ ಭೈಷ್ಟ ಧಾರಯಿಷ್ಯಾಮಿ ತೇಜಸಾ ಸ್ವೇನ ವಃ ಸುರಾಃ ॥ ೯೭ ॥

ವೃಷ್ಟಿರೋಷಧಯಶ್ಚೈವ ರಸಾ ವಸ್ತು ಚ ಯತ್ಪರಮ್ ।
ಕೃತ್ಸ್ನಾನಿ ಹ್ಯಪಿ ತಿಷ್ಠಂತು ಪಾದಸ್ತೇಷಾಂ ಸುರೇಷು ವೈ ॥ ೯೮ ॥

ಯುಷ್ಮದರ್ಥಂ ಪ್ರದಾಸ್ಯಾಮಿ ತತ್ಸರ್ವಂ ಧಾರ್ಯತೇ ಮಯಾ ।
ತತೋ ದೇವಾಸುರಾನ್ ದೃಷ್ಟ್ವಾ ಧೃತಾನ್ ಕಾವ್ಯೇನ ಧೀಮತಾ ॥ ೯೯ ॥

ಅಮಂತ್ರಯಂಸ್ತದಾ ತೇ ವೈ ಸಂವಿಗ್ನಾ ವಿಜಿಗೀಷಯಾ ।
ಏಷ ಕಾವ್ಯ ಇದಂ ಸರ್ವಂ ವ್ಯಾವರ್ತಯತಿ ನೋ ಬಲಾತ್ ॥ ೧೦೦ ॥

ಸಾಧು ಗಚ್ಛಾಮಹೇ ತೂರ್ಣಂ ಯಾವನ್ನಾಪ್ಯಾಯಯೇತ್ತು ತಾನ್ ।
ಪ್ರಸಹ್ಯ ಹತ್ವಾ ಶಿಷ್ಟಾಂಸ್ತು ಪಾತಾಲಂ ಪ್ರಾಪಯಾಮಹೇ ॥ ೧೦೧ ॥

---

೯೭. ಈ ರೀತಿಯಾಗಿ ಹೇಳಲ್ಪಟ್ಟ ಗುರುವಾದ ಶುಕ್ರನು ವಿಷಾದ ಹೊಂದಿದವನಾಗಿ ಪ್ರಿಯವಚನಗಳಿಂದ ಸಮಾಧಾನಮಾಡುತ್ತ ಹೀಗೆ ಹೇಳಿದನು :—ಅಸುರರೆ ! ನೀವು ಭಯಪಡಬೇಡಿ, ನಾನು ನನ್ನ ತೇಜೋಬಲದಿಂದ ನಿಮ್ಮನ್ನು ಧರಿಸುತ್ತೇನೆ.

೯೮. ವೃಷ್ಟಿ, ಓಷಧಿ, ರಸ, ಮತ್ತು ಉತ್ತಮವಾದ ವಸ್ತು ಇವೆಲ್ಲವೂ ದೇವತೆಗಳಲ್ಲಿ ಒಂದು ಪಾದಾಂಶವು ಮಾತ್ರ ಇರಲಿ.

೯೯. ಅದೆಲ್ಲವೂ ನನ್ನ ಮಹಿಮೆಯಿಂದ ಧರಿಸಲ್ಪಡುವುದು. ಅವುಗಳನ್ನು ನಿಮಗೋಸ್ಕರ ಕೊಡುವೆನು. ಆಗ ದೇವತೆಗಳೂ ಅಸುರರೂ ಜ್ಞಾನಿಯಾದ ಶುಕ್ರನಿಂದ ರಾಕ್ಷಸರು ಧರಿಸಲ್ಪಟ್ಟಿರುವುದನ್ನು ಅರಿತರು.

೧೦೦. ಆಗ ದೇವತೆಗಳು ರಾಕ್ಷಸರನ್ನು ಜಯಿಸಬೇಕೆಂಬ ಸಂಕಲ್ಪದಿಂದ ಸಂಭ್ರಮಹೊಂದಿಕೊಂಡು ಆಲೋಚಿಸಿದರು. ಈ ಶುಕ್ರಾಚಾರ್ಯನು ತನ್ನ ಬಲದಿಂದ ಈ ಎಲ್ಲ ಭೋಗಸಾಮಗ್ರಿಯನ್ನು ನಮ್ಮಿಂದ ತಪ್ಪಿಸುವನು.

೧೦೧. ಆದುದರಿಂದ ಈಗ ವೃಷ್ಟಿ, ಓಷಧಿ ಮುಂತಾದುವು ಶುಕ್ರನ ಬಲದಿಂದ ರಾಕ್ಷಸರನ್ನು ಬಲಪಡಿಸುವುದರೊಳಗೆ ಬೇಗ ನಾವು ಹೋಗೋಣ; ಬಲಾತ್ಕಾರವಾಗಿ ಅವರನ್ನು ಕೊಂದು ಮಿಕ್ಕವರನ್ನು ಪಾತಾಳಲೋಕಕ್ಕೆ ತಳ್ಳಿಹಾಕೋಣ.

ತತೋ ದೇವಾಸ್ತು ಸಂರಬ್ಧಾ ದಾನವಾನಭಿಸೃತ್ಯ ವೈ ।
ಜಘ್ನುಸ್ತೈರ್ವಧ್ಯಮಾನಾಸ್ತೇ ಕಾವ್ಯಮೇವಾಭಿದುದ್ರುವುಃ ॥ ೧೦೨ ॥

ತತಃ ಕಾವ್ಯಸ್ತು ತಾನ್ ದೃಷ್ಟ್ವಾ ತೂರ್ಣಂ ದೇವೈರಭಿದ್ರುತಾನ್ ।
ಸಮರಕ್ಷತ ಸಂತ್ರಸ್ತಾನ್ ದೇವೇಭ್ಯಸ್ತಾನ್ ದಿತೇಃ ಸುತಾನ್ ॥ ೧೦೩ ॥

ಕಾವ್ಯೋ ದೃಷ್ಟ್ವಾ ಸ್ಥಿತಾನ್ ದೇವಾಂಸ್ತತ್ರ ದೈವಮಚಿಂತಯುತ್ ।
ತಾನುವಾಚ ತತೋ ಧ್ಯಾತ್ವಾ ಪೂರ್ವವೃತ್ತಮನುಸ್ಮರನ್ ॥ ೧೦೪ ॥

ತ್ರೈಲೋಕ್ಯಂ ವಿಜಿತಂ ಸರ್ವಂ ವಾಮನೇನ ತ್ರಿಭಿಃ ಕ್ರಮೈಃ ।
ಬಲಿರ್ಬದ್ಧೋ ಹತೋ ಜಂಭೋ ನಿಹತಶ್ಚ ವಿರೋಚನಃ ॥ ೧೦೫ ॥

ಮಹಾಸುರಾ ದ್ವಾದಶಸು ಸಂಗ್ರಾಮೇಷು ಸುರೈರ್ಹತಾಃ ।
ತೈಸ್ತೈರುಪಾಯೈರ್ಭೂಯಿಷ್ಠಾ ನಿಹತಾ ಯೇ ಪ್ರಧಾನತಃ ॥ ೧೦೬ ॥

---

೧೦೨. ಹೀಗೆಂದು ಆಲೋಚಿಸಿ ವೇಗದಿಂದ ದೇವತೆಗಳು ದಾನವರನ್ನು ಆಕ್ರಮಿಸಿ ಸಂಹಾರಮಾಡಲಾರಂಭಿಸಿದರು. ದೇವತೆಗಳಿಂದ ವಧಿಸಲ್ಪಡುತ್ತಲಿದ್ದ ರಾಕ್ಷಸರು ಶುಕ್ರಾಚಾರ್ಯನ ಸನ್ನಿಧಿಗೆ ಓಡಿಬಂದರು.

೧೦೩. ತರುವಾಯ ಶುಕ್ರಾಚಾರ್ಯನು ದೇವತೆಗಳಿಂದ ಸಂಭ್ರಮದಿಂದ ಓಡಿಸಲ್ಪಟ್ಟು ಬಂದಿರುವ ದಿತಿಯ ಪುತ್ರರಾದ ರಾಕ್ಷಸರನ್ನು ಸಂರಕ್ಷಿಸಿದನು.

೧೦೪. ಆಗ ಶುಕ್ರಾಚಾರ್ಯನು ಬಲಿಷ್ಠರಾಗಿ ಅಲ್ಲಿ ನಿಂತಿದ್ದ ದೇವತೆಗಳನ್ನು ನೋಡಿ ದೈವಗತಿಯನ್ನು ವಿಮರ್ಶೆಮಾಡಿದನು. ತರುವಾಯ ಧ್ಯಾನದೃಷ್ಟಿಯಿಂದ ಪೂರ್ವ ವೃತ್ತಾಂತವನ್ನು ಸ್ಮರಿಸಿ ಅಸುರರನ್ನು ಕುರಿತು ಹೀಗೆ ಹೇಳಿದನು.

೧೦೫. ವಾಮನ ಮೂರ್ತಿಯಿಂದ ಮೂರು ಪಾದನ್ಯಾಸಗಳಿಂದ ಮೂರು ಲೋಕಗಳು ಗೆಲ್ಲಲ್ಪಟ್ಟುವು. ಬಲಿಯು ಬಂಧಿತನಾದನು, ಜಂಭಾಸುರನು ಸಂಹರಿಸಲ್ಪಟ್ಟನು. ಮತ್ತು ವಿರೋಚನನು ಸಂಹರಿಸಲ್ಪಟ್ಟನು.

೧೦೬. ಮಹಾ ಅಸುರರಾಗಿದ್ದವರು ಹನ್ನೆರಡು ಸಂಗ್ರಾಮಗಳಲ್ಲಿ ದೇವರಿಂದ ವಧಿಸಲ್ಪಟ್ಟಿರುವರು. ಅಸುರರಲ್ಲಿ ಪ್ರಧಾನರೆಂದೆನಿಸಿರುವ ಹೆಚ್ಚು ವ್ಯಕ್ತಿಗಳು ಆಯಾಯ ಉಪಾಯಗಳಿಂದ ಸಂಹರಿಸಲ್ಪಟ್ಟರು.

ಕಿಂಚಿಚ್ಛಿಷ್ಟಾಸ್ತು ವೈ ಯೂಯಂ ಯುದ್ಧೇ ಸ್ವಲ್ಪೇ ತು ವೈ ಸ್ವಯಮ್ ।
ನೀತಿಂ ವೋ ಹಿ ವಿಧಾಸ್ಯಾಮಿ ಕಾಲಃ ಕಶ್ಚಿತ್ ಪ್ರತೀಕ್ಷ್ಯತಾಮ್ ॥ ೧೦೭ ॥

ಯಾಸ್ಯಾಮ್ಯಹಂ ಮಹಾದೇವಂ ಮಂತ್ರಾರ್ಥೇ ವಿಜಯಾಯ ಚ ।
ಅಗ್ನಿಮಾಪ್ಯಾಯಯೇದ್ಧೋತಾ ಮಂತ್ರೈರೇಷ ದಹಿಷ್ಯತಿ ॥ ೧೦೮ ॥

ತತೋ ಯಾಸ್ಯಾಮ್ಯಹಂ ದೇವಂ ಮಂತ್ರಾರ್ಥೇ ನೀಲಲೋಹಿತಮ್
ಯುಷ್ಮಾನನುಗ್ರಹೀಷ್ಯಾಮಿ ಪುನಃ ಪಶ್ಚಾದಿಹಾಗತಃ ॥ ೧೦೯ ॥

ಯೂಯಂ ತಪಶ್ಚರಧ್ವಂ ವೈ ಸಂವೃತಾ ವಲ್ಕಲೈರ್ವನೇ ।
ನ ವೈ ದೇವಾ ವಧಿಷ್ಯಂತಿ ಯಾವದಾಗಮನಂ ಮಮ ॥ ೧೧೦ ॥

ಅಪ್ರತೀಪಾಂಸ್ತತೋ ಮಂತ್ರಾನ್ ದೇವಾತ್ಪ್ರಾಪ್ಯ ಮಹೇಶ್ವರಾತ್ ।
ಯೋತ್ಸ್ಯಾಮಹೇ ಪುನರ್ದೇವಾಂಸ್ತತಃ ಪ್ರಾಪ್ಸ್ಯಥ ವೈ ಜಯಮ್ ॥ ೧೧೧ ॥

---

೧೦೭. ಯುದ್ಧದ ಉಗ್ರತ್ವವು ಇಳಿದು ಅವರಲ್ಲಿ ನೀವು ಮಾತ್ರ ಅಲ್ಪಮಂದಿಯು ಮಿಕ್ಕಿದ್ದೀರಿ. ಮುಂದೆ ನಿಮಗೆ ಅನುಕೂಲವಾಗುವ ನೀತಿಯನ್ನು ನಾನು ಮಾಡುತ್ತೇನೆ, ಸ್ವಲ್ಪ ಕಾಲವು ನಿಮ್ಮಿಂದ ನಿರೀಕ್ಷಿಸಲ್ಪಡಲಿ.

೧೦೮. ನಾನು ಈಗ ಮಂತ್ರಗಳನ್ನು ಸಂಗ್ರಹ ಮಾಡುವುದಕ್ಕೂ ತನ್ಮೂಲಕವಾಗಿ ನಿಮಗೆ ವಿಜಯವನ್ನು ಸಾಧಿಸುವುದಕ್ಕೂ ಮಹಾದೇವನ ಸನ್ನಿಧಿಗೆ ಹೋಗುತ್ತೇನೆ. ಹೋಮಮಾಡುವವನು ಅಗ್ನಿಯನ್ನು ಆಪ್ಯಾಯನ ಮಾಡಿದರೆ ಆ ಅಗ್ನಿಯು ಮಂತ್ರಬಲದಿಂದ ದಹಿಸುವುದು.

೧೦೯. ಆದುದರಿಂದ ಮಂತ್ರಗಳನ್ನು ಸಂಗ್ರಹಿಸಲು ಕಂಠದಲ್ಲಿ ನೀಲವರ್ಣ, ಕೇಶಗಳಲ್ಲಿ ರಕ್ತ ವರ್ಣಗಳಿಂದ ಕೂಡಿದ ಮಹೇಶ್ವರನನ್ನು ಹೊಂದುವೆನು. ಮತ್ತೆ ಹಿಂದಕ್ಕೆ ಬಂದು ನಾನು ನಿಮ್ಮನ್ನು ಅನುಗ್ರಹಿಸುವೆನು.

೧೧೦. ನೀವು ಚೀರ-ವಲ್ಕಲಗಳನ್ನು ಧರಿಸಿಕೊಂಡು ಇದ್ದು ತಪವನ್ನು ಆಚರಿಸಿರಿ. ನಾನು ಈಶ್ವರನಿಂದ ಹಿಂದಕ್ಕೆ ಬರುವವರೆಗೆ ದೇವತೆಗಳು ನಿಮ್ಮನ್ನು ವಧಿಸುವುದಿಲ್ಲ.

೧೧೧. ನಾವು ದೇವನಾದ ಈಶ್ವರನಿಂದ ನಿಮಗೆ ಅನುಕೂಲವಾದ ಮಂತ್ರಗಳನ್ನು ಹೊಂದಿದ ತರುವಾಯ ಮತ್ತೆ ದೇವತೆಗಳ ಸಂಗಡ ಯುದ್ಧಮಾಡೋಣ; ಆಗ ನೀವು ವಿಜಯವನ್ನು ಸಂಪಾದಿಸುವಿರಿ, ಹೀಗೆಂದು ಹೇಳಿದನು.

ತತಸ್ತೇ ಕೃತಸಂವಾದಾ ದೇವಾನೂಚುಸ್ತತೋಽಸುರಾಃ ।
ನ್ಯಸ್ತಶಸ್ತ್ರಾ ವಯಂ ಸರ್ವೇ ಲೋಕಾನ್ ಯೂಯಂ ಕ್ರಮಂತು ವೈ ॥ ೧೧೨ ॥

ವಯಂ ತಪಶ್ಚರಿಷ್ಯಾಮಃ ಸಂವೃತ್ತಾ ವಲ್ಕಲೈರ್ವನೇ ।
ಪ್ರಹ್ಲಾದಸ್ಯ ವಚಃ ಶ್ರುತ್ವಾ ಸತ್ಯಾನುವ್ಯಾಹೃತಂ ತು ತತ್ ॥ ೧೧೩ ॥

ತತೋ ದೇವಾ ನ್ಯವರ್ತಂತ ವಿಜ್ವರಾ ಮುದಿತಾಶ್ಚ ಹ ।
ನ್ಯಸ್ತಶಸ್ತ್ರೇಷು ದೈತ್ಯೇಷು ಸ್ವಾನ್ ವೈ ಜಗ್ಮುರ್ಯಥಾಗತಾನ್॥ ೧೧೪ ॥

ತತಸ್ತಾನಬ್ರವೀತ್ ಕಾವ್ಯಃ ಕಂಚಿತ್ಕಾಲಂ ಪ್ರತೀಕ್ಷ್ಯತಾಮ್ ।
ನಿರುತ್ಸುಕಾಸ್ತಪೋಯುಕ್ತಾಃ ಕಾಲಃ ಕಾರ್ಯಾರ್ಥಸಾಧಕಃ ॥ ೧೧೫ ॥

ಪಿತುರ್ಮಮಾಶ್ರಮಸ್ಥಾ ವೈ ಸಂಪ್ರತೀಕ್ಷತ ದಾನವಾಃ ।
ಸ ಸಂದಿಶ್ಯಾಸುರಾನ್ ಕಾವ್ಯೋ ಮಹಾದೇವಂ ಪ್ರಪದ್ಯ ಚ ॥ ೧೧೬ ॥

---

೧೧೨. ಅನಂತರದಲ್ಲಿ ರಾಕ್ಷಸರು ಪರಸ್ಪರವಾಗಿ ಮಾತನಾಡಿಕೊಂಡವರಾಗಿ ದೇವತೆಗಳನ್ನು ಕುರಿತು ಹೀಗೆ ಹೇಳಿದರು :—ನಾವೆಲ್ಲರೂ ಶಸ್ತ್ರಸನ್ನ್ಯಾಸಮಾಡಿರುವೆವು ; ನೀವೆಲ್ಲರೂ ಲೋಕಗಳನ್ನು ಆಕ್ರಮಿಸಿರಿ.

೧೧೩. ನಾವು ಚೀರವಸ್ತ್ರವನ್ನು ಉಟ್ಟುಕೊಂಡು ಅರಣ್ಯದಲ್ಲಿ ತಪವನ್ನು ಆಚರಿಸುವೆವು. ಪ್ರಹ್ಲಾದನು ವಂಚನೆಯಿಲ್ಲದೆ ಸತ್ಯವಾಗಿ ಆಡಿದ ಆ ವಚನವನ್ನು ದೇವತೆಗಳು ಕೇಳಿದರು.

೧೧೪. ಹಾಗೆ ದೈತ್ಯರು ಶಸ್ತ್ರಸನ್ನ್ಯಾಸ ಮಾಡಿದ ಸಮಯದಲ್ಲಿ ದೇವತೆಗಳು ವಿಷಾದವನ್ನು ಬಿಟ್ಟು ಸಂತೋಷಗೊಂಡವರಾಗಿ ಮತ್ತೆ ಹಿಂದಕ್ಕೆ ಬಂದು ಯಥಾಕ್ರಮವಾಗಿ ತಮ್ಮ ಲೋಕಗಳನ್ನು ಹೊಂದಿದರು.

೧೧೫. ತರುವಾಯ ಶುಕ್ರಾಚಾರ್ಯನು ಮತ್ತೊಂದುಸಲ ಅಸುರರಿಗೆ ಹೇಳಿದನು, ನೀವು ತಪವನ್ನು ಮಾಡುತ್ತ ಮುಂದಿನ ಉದ್ಯಮಗಳಲ್ಲಿ ನಿರುತ್ಸಾಹಿಗಳಾಗಿ ಸ್ವಲ್ಪ ಕಾಲವನ್ನು ಪ್ರತೀಕ್ಷಿಸಿ. ಸಮಸ್ತ ಅರ್ಥಗಳನ್ನು ಸಾಧಿಸಲು ಕಾಲವು ಮುಖ್ಯ ಸಾಧನವು.

೧೧೬. ದಾನವರೆ! ಅದುವರೆಗೆ ನನ್ನ ಜನಕನ ಆಶ್ರಮದಲ್ಲಿದ್ದು ನಿರೀಕ್ಷಣೆ ಮಾಡಿರಿ, ಶುಕ್ರಾಚಾರ್ಯನು ಅಸುರರಿಗೆ ಈ ರೀತಿ ಸಂದೇಶವನ್ನು ಕೊಟ್ಟು ತಾನು ಮಹಾದೇವನಾದ ಈಶ್ವರನ ಸನ್ನಿಧಿಗೆ ಹೋದನು.

ಪ್ರಣಮ್ಯೈವಮುವಾಚಾಯಂ ಜಗತ್ಪ್ರಭವಮೀಶ್ವರಮ್ ।
ಮಂತ್ರಾನಿಚ್ಛಾಮಿ ಹೇ ದೇವ ಯೇ ನ ಸಂತಿ ಬೃಹಸ್ಪತೌ ॥ ೧೧೭ ॥

ಪರಾಭವಾಯ ದೇವಾನಾಮಸುರೇಷ್ವಭಯಾವಹಾನ್ ।
ಏವಮುಕ್ತೋಽಬ್ರವೀದ್ದೇವೋ ಮಂತ್ರಾನಿಚ್ಛಸಿ ವೈ ದ್ವಿಜ ॥ ೧೧೮ ॥

ವ್ರತಂ ಚರ ಮಯೋದ್ದಿಷ್ಟಂ ಬ್ರಹ್ಮಚಾರೀ ಸಮಾಹಿತಃ ।
ಪೂರ್ಣಂ ವರ್ಷಸಹಸ್ರಂ ವೈ ಕುಂಡಧೂಮಮವಾಕ್‌ಶಿರಾಃ ॥ ೧೧೯ ॥

ಯದಿ ಪಾಸ್ಯತಿ ಭದ್ರಂ ತೇ ಮತ್ತೋ ಮಂತ್ರಮವಾಪ್ಸ್ಯಸಿ ।
ತಥೋಕ್ತೋ ದೇವದೇವೇನ ಸ ಶುಕ್ರಸ್ತು ಮಹಾತಪಾಃ ॥ ೧೨೦ ॥

ಪಾದೌ ಸಂಸ್ಪೃಶ್ಯ ದೇವಸ್ಯ ಬಾಢಮಿತ್ಯಭ್ಯಭಾಷತ ।
ವ್ರತಂ ಚರಾಮ್ಯಹಂ ದೇವ ಯಥೋದ್ದಿಷ್ಟೋಽಸ್ಮಿ ವೈ ಪ್ರಭೋ ॥ ೧೨೧ ॥

---

೧೧೭. ಅಲ್ಲಿ ಜಗದಾದಿಕಾರಣನೂ ನಿಯಾಮಕನೂ ಆದ ಈಶ್ವರನನ್ನು ವಂದಿಸಿ ಈ ರೀತಿಯಾಗಿ ಹೇಳಿದನು. ದೇವೋತ್ತಮನೆ! ಬೃಹಸ್ಪತಿಯಲ್ಲಿ ಇಲ್ಲದೆ ಇರುವ ಹೊಸ ರಹಸ್ಯ ಮಂತ್ರಗಳನ್ನು ಇಚ್ಛಿಸುತ್ತೇನೆ.

೧೧೮. ದೇವತೆಗಳಿಗೆ ಅಪಜಯವನ್ನೂ ಅಸುರರಿಗೆ ಅಭಯವನ್ನೂ ಉಂಟು ಮಾಡುವಂತಹ ಮಂತ್ರಗಳನ್ನು ಹೊಂದಲು ಇಷ್ಟಪಡುತ್ತೇನೆ. ಆಗ ಮಹಾತಪಸ್ವಿಯಾದ ಶುಕ್ರನು ದೇವೋತ್ತಮನಾದ ಈಶ್ವರನಿಂದ ಹೀಗೆ ಹೇಳಲ್ಪಟ್ಟನು.

೧೧೯. ನೀನು ಬ್ರಹ್ಮಚರ್ಯ ಮತ್ತು ಚಿತ್ತಸಮಾಧಾನವುಳ್ಳವನಾಗಿ ಒಂದು ಸಹಸ್ರ ವರ್ಷಗಳು ಪೂರ್ಣವಾಗುವವರೆಗೆ ಅಗ್ನಿಕುಂಡದ ಮೇಲುಗಡೆಯಲ್ಲಿ ಅಧೋಮುಖನಾಗಿ ಧೂಮವನ್ನು ಪಾನಮಾಡುತ್ತ ಇದ್ದು ನಾನು ಉಪದೇಶಿಸುವ ವ್ರತವನ್ನು ಆಚರಿಸು.

೧೨೦. ಹಾಗೆ ಧೂಮಪಾನವನ್ನು ಮಾಡುವುದಾದರೆ ನನ್ನಿಂದ ಮಂತ್ರಗಳನ್ನು ಹೊಂದುತ್ತೀ, ಆ ಮಹಾತಪಸ್ವಿಯಾದ ಶುಕ್ರನು ದೇವದೇವನಾದ ಈಶ್ವರನಿಂದ ಈ ರೀತಿಯಾಗಿ ಹೇಳಲ್ಪಟ್ಟನು.

೧೨೧. ಆಗ ಮಹೇಶ್ವರನ ಚರಣಗಳನ್ನು ಮುಟ್ಟಿ ನಮಸ್ಕರಿಸಿ ಹಾಗೆ ಆಗಲಿ ಎಂದು ಹೇಳಿದನು. ಪ್ರಭುದೇವನೆ, ನಿನ್ನಿಂದ ಆಜ್ಞಾಪಿಸಲ್ಪಟ್ಟಂತೆ ನಾನು ವ್ರತವನ್ನು ಆಚರಿಸುವೆನು.

ತತೋ ನಿಯುಕ್ತೋ ದೇವೇನ ಕುಂಡಧಾರೋಽಸ್ಯ ಧೂಮಕೃತ್ ।
ಅಸುರಾಣಾಂ ಹಿತಾರ್ಥಾಯ ತಸ್ಮಿನ್ಛುಕ್ರೇ ಗತೇ ತದಾ ॥ ೧೨೨ ॥

ಮಂತ್ರಾರ್ಥಂ ತತ್ರ ವಸತಿ ಬ್ರಹ್ಮಚರ್ಯಂ ಮಹೇಶ್ವರೇ ।
ತದ್ಬುದ್ಧ್ವಾ ನೀತಿಪೂರ್ವಂ ತು ರಾಷ್ಟ್ರಂ ನ್ಯಸ್ತಂ ತದಾಸುರೈಃ ॥ ೧೨೩ ॥

ತಸ್ಮಿನ್ಛಿದ್ರೇ ತದಾಮರ್ಷಾದ್ದೇವಾಸ್ತಾನ್ ಸಮಭಿದ್ರವನ್ ।
ಪ್ರಗೃಹೀತಾಯುಧಾಃ ಸರ್ವೇ ಬೃಹಸ್ಪತಿಪುರೋಗಮಾಃ ॥ ೧೨೪ ॥

ದೃಷ್ಟ್ವಾಸುರಗಣಾ ದೇವಾನ್ ಪ್ರಗೃಹೀತಾಯುಧಾನ್ ಪುನಃ ।
ಉತ್ಪೇತುಃ ಸಹಸಾ ಸರ್ವೇ ಸಂತ್ರಸ್ತಾಸ್ತೇ ತತೋಽಭವನ್ ॥ ೧೨೫ ॥

ನ್ಯಸ್ತೇ ಶಸ್ತ್ರೇಽಭಯೇ ದತ್ತೇ ಹ್ಯಾಚಾರ್ಯೇ ವ್ರತಮಾಸ್ಥಿತೇ ।
ಸಂತ್ಯಜ್ಯ ಸಮಯಂ ದೇವಾಸ್ತೇ ಸಪತ್ನಜಿಘಾಂಸವಃ ॥ ೧೨೬ ॥

---

೧೨೨. ತರುವಾಯ ಶಂಕರನಿಂದ ನಿದೇಶ ಹೊಂದಿ ಆ ಶುಕ್ರನು ಅಸುರರ ಹಿತಕ್ಕೋಸ್ಕರ ಅಗ್ನಿಕುಂಡವನ್ನು ಧರಿಸಿ ಅದರ ಧೂಮವನ್ನು ಅಧೋಮುಖನಾಗಿ ಪಾನ ಮಾಡುತ್ತ ವ್ರತವನ್ನು ಆಚರಿಸಿದನು.

೧೨೩. ಹೀಗೆ ಶುಕ್ರಗುರುವು ಮಂತ್ರಗಳಿಗೋಸ್ಕರ ಮಹೇಶ್ವರನಲ್ಲಿ ಬ್ರಹ್ಮಚರ್ಯದಿಂದ ಇರುತ್ತಿರಲು ಅಸರರು ಅದನ್ನು ತಿಳಿದು ತಮ್ಮ ರಾಷ್ಟ್ರವನ್ನು ನೀತಿಪೂರ್ವಕವಾಗಿ ದೇವತೆಗಳಿಗೆ ಬಿಟ್ಟುಕೊಟ್ಟರು.

೧೨೪. ಆ ಛಿದ್ರಸಮಯದಲ್ಲಿ ಬೃಹಸ್ಪತಿ ಮುಂತಾದ ಸಮಸ್ತ ದೇವತೆಗಳು ಆಯುಧ ಧಾರಿಗಳಾಗಿ ರೋಷಾವೇಶದಿಂದ ರಾಕ್ಷಸರನ್ನು ಆಕ್ರಮಿಸಿದರು.

೧೨೫. ಆಗ ಅಸುರರ ಗುಂಪುಗಳು ಮತ್ತೆ ಧರಿಸಲ್ಪಟ್ಟ ಆಯುಧಗಳುಳ್ಳ ದೇವತೆಗಳನ್ನು ಕಂಡು ಭೀತಿಗೊಂಡುವುಗಳಾಗಿ ಶೀಘ್ರವಾಗಿ ಅಲ್ಲಿಂದ ಎಲ್ಲಿಯೋ ಹಾರಿಹೋದುವು.

೧೨೬. ರಾಕ್ಷಸರು ಶಸ್ತ್ರಗಳನ್ನಿರಿಸಿ ಅಭಯವನ್ನು ಕೊಡಲಾಗಿ ಮತ್ತು ಅಸುರ ಗುರುವು ವ್ರತವನ್ನು ಕೈಗೊಂಡಿರಲಾಗಿ ಆ ದೇವತೆಗಳು ಅಂಗೀಕರಿಸಿದ ಸಮಯವನ್ನು ಉಲ್ಲಂಘಿಸಿ ಶತ್ರುಗಳನ್ನು ಕೊಂದುಹಾಕುವ ಇಷ್ಟವನ್ನು ಹೊಂದಿದರು.

ಅನಾಚಾರ್ಯಾಸ್ತು ಭದ್ರಂ ವೋ ವಿಶ್ವಸ್ತಾಸ್ತಪಸೇ ಸ್ಥಿತಾಃ ।
ಚೀರವಲ್ಕಾಜಿನಧರಾ ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥ ೧೨೭ ॥

ರಣೇ ವಿಜೇತುಂ ದೇವಾನ್ ವೈ ನ ಶಕ್ಷ್ಯಾಮಃ ಕಥಂಚನ ।
ಅಯುದ್ಧೇನ ಪ್ರಪದ್ಯಾಮಃ ಶರಣಂ ಕಾವ್ಯಮಾತರಮ್ ॥ ೧೨೮ ॥

ಪ್ರಾಪದ್ಯಂತ ತತೋ ಭೀತಾಸ್ತಯಾ ಚೈವ ತದಾಽಭಯಮ್ ।
ದತ್ತಂ ತೇಷಾಂ ತು ಭೀತಾನಾಂ ದೈತ್ಯಾನಾಮುಭಯಾರ್ಥಿನಾಮ್ ॥ ೧೨೯ ॥

ತಯಾ ಚಾಭ್ಯುಪಪನ್ನಾಂಸ್ತಾನ್ ದೃಷ್ಟ್ವಾ ದೇವಾಸ್ತದಾಽಸುರಾನ್ ।
ಅಭಿಜಘ್ನುಃ ಪ್ರಸಹ್ಯೈತಾನ್ ವಿಚಾರ್ಯ ಚ ಬಲಾಬಲಮ್ ॥ ೧೩೦ ॥

ತತಸ್ತಾನ್ ವಧ್ಯಮಾನಾಂಸ್ತು ದೇವೈರ್ದೃಷ್ಟ್ವಾಸುರಾಂಸ್ತದಾ ।
ದೇವೀ ಕ್ರುದ್ಧಾಬ್ರವೀದೇನಾನನಿಂದ್ರತ್ವಂ ಕರೋಮ್ಯಹಮ್ ॥ ೧೩೧ ॥

---

೧೨೭. ಆಚಾರ್ಯ ರಹಿತರಾದ ಅಸುರರು ಕಲ್ಯಾಣಾರ್ಥಿಗಳಾಗಿ ಚೀರ–ವಲ್ಕಲಗಳನ್ನು ಧರಿಸಿದವರೂ ಸಮಸ್ತ ಇತರ ವ್ಯಾಪಾರಗಳನ್ನು ಬಿಟ್ಟವರೂ, ಸರ್ವ ಉಪಕರಣಾಭಿಮಾನ ಶೂನ್ಯರೂ ಮತ್ತು ವಿಶ್ವಾಸವುಳ್ಳವರೂ ಆಗಿ ತಪೋನಿರತರಾದರು.

೧೨೮. ಆಗ ಅವರು ರಣದಲ್ಲಿ ದೇವರನ್ನು ಹೇಗಾದರೂ ಜಯಿಸುವುದು ತಮಗೆ ಅಶಕ್ಯವೆಂದೂ, ಆದುದರಿಂದ ಯುದ್ಧವನ್ನು ಬಿಟ್ಟು ಶುಕ್ರಾಚಾರ್ಯನ ಜನನಿಯನ್ನು ಶರಣ ಹೊಂದಬೇಕೆಂದೂ ಆಲೋಚಿಸಿದರು.

೧೨೯. ಹಾಗೆಯೆ ಅಸುರರು ಶುಕ್ರಾಚಾರ್ಯನ ಮಾತೆಗೆ ಭಯದಿಂದ ಶರಣಾಗತರಾದರು. ಆಗ ಆಕೆಯು ಭೀತರೂ ಅಭಯಾರ್ಥಿಗಳೂ ಆಗಿ ಬಂದಿರುವ ದೈತ್ಯರಿಗೆ ಅಭಯವನ್ನು ನೀಡಿದಳು.

೧೩೦. ಭಾರ್ಗವ ಮಾತೆಯಿಂದ ಆ ಅಸುರರು ಶರಣಕೊಟ್ಟು ರಕ್ಷಿಸಲ್ಪಟ್ಟಿರುವುದನ್ನು ನೋಡಿ ದೇವತೆಗಳು ಆಗಿನ ಬಲಾಬಲಗಳನ್ನು ವಿಮರ್ಶಮಾಡಿ ಅಸುರರನ್ನು ಬಲಾತ್ಕಾರದಿಂದ ಹೊಡೆದರು.

೧೩೧. ಆಗ ದೇವತೆಗಳಿಂದ ರಾಕ್ಷಸರು ವಧಿಸಲ್ಪಡುತ್ತಿರುವುದನ್ನು ನೋಡಿ ದೇವಿಯಾದ ಶುಕ್ರನ ತಾಯಿಯು ಕ್ರೋಧದಿಂದ "ಈಗ ನಾನು ಇಂದ್ರನನ್ನು ಸ್ತಂಭಿಸಿ ಇಂದ್ರನಿಲ್ಲದಂತೆ ಮಾಡುವೆನು" ಎಂದು ಹೇಳಿದಳು.

ಸಂಸ್ತಭ್ಯ ಶೀಘ್ರಂ ಸಂರಂಭಾದಿಂದ್ರಂ ಸಾಭ್ಯಚರತ್ತತಃ ।
ತತಃ ಸಂಸ್ತಂಭಿತಂ ದೃಷ್ಟ್ವಾ ಶಕ್ರಂ ದೇವಾಸ್ತು ಮೂಢವತ್ ॥ ೧೩೨ ॥

ವ್ಯದ್ರವಂತ ತತೋ ಭೀತಾ ದೃಷ್ಟ್ವಾ ಶಕ್ರಂ ವಶೀಕೃತಮ್ ।
ಗತೇಷು ಸುರಸಂಘೇಷು ವಿಷ್ಣುರಿಂದ್ರಮುಭಾಷತ ॥ ೧೩೩ ॥

ಮಾಂ ತ್ವಂ ಪ್ರವಿಶ ಭದ್ರಂ ತೇ ನೇಷ್ಯಾಮಿ ತ್ವಾಂ ಸುರೇಶ್ವರ ।
ಏವಮುಕ್ತಸ್ತತೋ ವಿಷ್ಣುಂ ಪ್ರವಿವೇಶ ಪುರಂದರಃ ॥ ೧೩೪ ॥

ವಿಷ್ಣುನಾ ರಕ್ಷಿತಂ ದೃಷ್ಟ್ವಾ ದೇವೀ ಕ್ರುದ್ಧಾ ವಚೋಽವದತ್ ।
ಏಷಾ ತ್ವಾಂ ವಿಷ್ಣುನಾ ಸಾರ್ಧಂ ದಹಾಮಿ ಮಘವನ್ ಬಲಾತ್ ॥ ೧೩೫ ॥

ಮಿಷತಾಂ ಸರ್ವಭೂತಾನಾಂ ದೃಶ್ಯತಾಂ ಮೇ ತಪೋಬಲಮ್ ।
ತಯಾಭಿಭೂತೌ ತೌ ದೇವಾವಿಂದ್ರಾವಿಷ್ಣೂ ಜಜಲ್ಪತುಃ ॥ ೧೩೬ ॥

---

೧೩೨. ಮತ್ತು ವೇಗವಾಗಿ ಇಂದ್ರನನ್ನು ಸ್ತಂಭಿಸಿ ಸಂರಂಭ ವ್ಯಾಪಾರವಿಲ್ಲದವನನ್ನಾಗಿ ಮಾಡಿ ಅವಳು ತನ್ನ ಉದ್ಯಮವನ್ನು ತೋರ್ಪಡಿಸಿದಳು. ಆಗ ದೇವತೆಗಳು ಸ್ತಂಭಿಸಲ್ಪಟ್ಟ ಇಂದ್ರನನ್ನು ನೋಡಿ ನಿರಾಶ್ರಯರಾಗಿ ಮೂಢರಂತೆ ಧಾವಿಸಿದರು.

೧೩೩. ಎಲ್ಲ ದೇವತೆಗಳು ಸ್ತಂಭಿತನಾಗಿ ಇಂದ್ರನು ವಶೀಕರಿಸಲ್ಪಟ್ಟಿರುವುದನ್ನು ನೋಡಿ ಭಯದಿಂದ ಪಲಾಯನ ಮಾಡಿದರು. ಹಾಗೆ ದೇವತೆಗಳು ಹೊರಟು ಹೋಗಲಾಗಿ ವಿಷ್ಣುವು ಇಂದ್ರನನ್ನು ಕುರಿತು ಹೇಳಿದನು.

೧೩೪. ದೇವರಾಜನೆ! ನೀನು ನನ್ನಲ್ಲಿ ಪ್ರವೇಶಹೊಂದು, ನಿನಗೆ ಮಂಗಳವಾಗಲಿ, ನಾನು ನಿನ್ನನ್ನು ಒಯ್ಯುತ್ತೇನೆ. ಹೀಗೆಂದು ವಿಷ್ಣುವಿನಿಂದ ಹೇಳಲ್ಪಟ್ಟ ಇಂದ್ರನು ವಿಷ್ಣುವನ್ನು ಪ್ರವೇಶಮಾಡಿದನು.

೧೩೫, ವಿಷ್ಣುವಿನಿಂದ ಇಂದ್ರನು ರಕ್ಷಣ ಹೊಂದಿರುವುದನ್ನು ನೋಡಿ ದೇವಿಯು ಕುಪಿತಳಾಗಿ ಹೀಗೆ ಮಾತನಾಡಿದಳು. ಇಂದ್ರನೆ! ಈ ನಾನು ವಿಷ್ಣುವಿನ ಸಂಗಡ ನಿನ್ನನ್ನು ದಹಿಸುವೆನು.

೧೩೬. ಸರ್ವ ಭೂತಗಳು ಪ್ರತ್ಯಕ್ಷ ನೋಡುತ್ತಿರುವಾಗಲೆ ಈ ಸಾಹಸವನ್ನು ತೋರಿಸುವ ನನ್ನ ತಪೋಬಲವು ಪರೀಕ್ಷಿಸಲ್ಪಡಲಿ. ಹೀಗೆಂದು ಹೇಳಿ ಆ ದೇವಿಯಿಂದ ತಿರಸ್ಕರಿಸಲ್ಪಟ್ಟಿರುವ ಇಂದ್ರ ಮತ್ತು ವಿಷ್ಣುವು ಇಬ್ಬರು ಮಾತನಾಡಿಕೊಂಡರು.

ಕಥಂ ಮುಚ್ಯೇವ ಸಹಿತೌ ವಿಷ್ಣುರಿಂದ್ರಮಭಾಷತ ।
ಇಂದ್ರೋಽಬ್ರವೀಜ್ಜಹಿ ಹ್ಯೇನಾಂ ಯಾವನ್ನೋ ನ ದಹೇದ್ವಿಭೋ ॥ ೧೩೭ ॥

ವಿಶೇಷೇಣಾಭಿಭೂತೋಽಹಮಿಮಾಂ ತಜ್ಜಹಿ ಮಾ ಚಿರಮ್ ।
ತತಃ ಸಮೀಕ್ಷ್ಯ ತಾಂ ವಿಷ್ಣುಸ್ಸ್ತ್ರೀವಧಂ ಕರ್ತುಮಾಸ್ಥಿತಃ ॥ ೧೩೮ ॥

ಅಭಿಧ್ಯಾಯ ತತಃ ಶಕ್ರಮಾಪನ್ನಂ ಸತ್ವರಂ ಪ್ರಭುಃ ।
ತಸ್ಯಾಃ ಸಂತ್ವರಮಾಣಾಯಾಃ ಶೀಘ್ರಂಕಾರೀ ಸುರಾರಿಹಾ ॥ ೧೩೯ ॥

ತ್ರಿಧಾವಿಷ್ಣುಸ್ತತೋ ದೇವಃ ಕ್ರೂರಂ ಬುದ್ಧ್ವಾ ಚಿಕೀರ್ಷಿತಮ್ ।
ಕ್ರುದ್ಧಸ್ತದಸ್ತ್ರಮಾವಿಧ್ಯ ಶಿರಶ್ಚಿಚ್ಛೇದ ಮಾಧವಃ ॥ ೧೪೦ ॥

ತಂ ದೃಷ್ಟ್ವಾ ಸ್ತ್ರೀವಧಂ ಘೋರಂ ಚುಕೋಪ ಭೃಗುರೀಶ್ವರಃ ।
ತತೋಽಭಿಶಪ್ತೋ ಭೃಗುಣಾ ವಿಷ್ಣುರ್ಭಾರ್ಯಾವಧೇ ತದಾ ॥ ೧೪೧ ॥

---

೧೩೭. " ಈ ರೀತಿಯಾಗಿ ಒಟ್ಟಿಗೆ ಸೇರಿ ಬದ್ಧರಾದ ನಾವು ಹೇಗೆ ಬಿಡುಗಡೆಯನ್ನು ಹೊಂದುವೆವು " ಎಂದು ವಿಷ್ಣುವು ಇಂದ್ರನಿಗೆ ಹೇಳಿದನು. ಆಗ ಇಂದ್ರನು ವಿಷ್ಣುವಿಗೆ ಈ ರೀತಿಯಾಗಿ ಬೋಧಿಸಿದನು. ಪ್ರಭುವೆ! ಈಕೆಯು ನಮ್ಮನ್ನು ದಹಿಸುವುದರೊಳಗೆ ಈಕೆಯನ್ನು ಸಂಹರಿಸು.

೧೩೮. ಈಕೆಯಿಂದ ನಾನೀಗ ಹೆಚ್ಚಾಗಿ ಪೀಡಿಸಲ್ಪಟ್ಟಿರುವೆನು. ಆದುದರಿಂದ ಶೀಘ್ರವಾಗಿ ಇವಳನ್ನು ಕೊಲ್ಲು. ಅನಂತರದಲ್ಲಿ ವಿಷ್ಣುವು ಅವಳನ್ನು ನೋಡಿ ಸ್ತ್ರೀಹತ್ಯೆಯನ್ನು ಆಚರಿಸಲು ಸಿದ್ಧನಾದನು.

೧೩೯. ದೊಡ್ಡ ವಿಪತ್ತಿಗೆ ಗುರಿಯಾದ ಇಂದ್ರನನ್ನು ನೋಡಿ ಪ್ರಭುವಾದ ವಿಷ್ಣುವು ದೇವ ಶತ್ರು ನಿಗ್ರಹದಲ್ಲಿ ತ್ವರೆಯ ಭಾವವನ್ನು ಹೊಂದಿ ತನಗೆ ವಿರೋಧವಾಗಿ ತ್ವರೆ ಪಡುತ್ತಲಿದ್ದ ದೇವಿಯನ್ನು ನೋಡಿದನು.

೧೪೦. ಮತ್ತು ಲಕ್ಷ್ಮೀಪತಿಯಾದ ವಿಷ್ಣು ಪರಮಾತ್ಮನು ಆ ಸ್ತ್ರೀಯ ಕ್ರೂರ ಕೃತ್ಯವನ್ನು ತಿಳಿದು ಬಹಳ ಕ್ರೋಧಗೊಂಡವನಾಗಿ ತನ್ನ ಅಸ್ತ್ರವನ್ನು ಪ್ರಯೋಗಿಸಿ ಆಕೆಯ ಶಿರವನ್ನು ಛೇದಿಸಿದನು.

೧೪೧. ಸರ್ವ ಶಕ್ತನಾದ ಭೃಗುಮುನಿಯು ಘೋರವಾದ ಆ ಸ್ತ್ರೀವಧವನ್ನು ನೋಡಿ ಕೋಪಗೊಂಡನು. ತರುವಾಯ ಭಾರ್ಯೆಯನ್ನು ಕೊಂದುಹಾಕಿದ ನಿಮಿತ್ತದಿಂದ ಭೃಗುಮುನಿಯಿಂದ ಆಗ ವಿಷ್ಣುವು ಶಪಿಸಲ್ಪಟ್ಟನು.

ಯಸ್ಮಾತ್ತೇ ಜಾನತಾ ಧರ್ಮಮವಧ್ಯಾ ಸ್ತ್ರೀ ನಿಷೂದಿತಾ ।
ತಸ್ಮಾತ್ತ್ವಂ ಸಪ್ತಕೃತ್ವೋ ವೈ ಮಾನುಷ್ಯೇಷು ಪ್ರಪದ್ಯಸೇ ॥ ೧೪೨ ।

ತತಸ್ತೇನಾಭಿಶಾಪೇನ ನಷ್ಟೇ ಧರ್ಮೇ ಪುನಃ ಪುನಃ ।
ಸರ್ವಲೋಕಹಿತಾರ್ಥಾಯ ಜಾಯತೇ ಮಾನುಷೇಷ್ವಿಹ ॥ ೧೪೩

ಅನುವ್ಯಾಹೃತ್ಯ ವಿಷ್ಣುಂ ಸ ತದಾದಾಯ ಶಿರಃ ಸ್ವಯಮ್ ।
ಸಮಾನೀಯ ತತಃ ಕಾಯೇ ಸಮಾಯೋಜ್ಯೇದಮಬ್ರವೀತ್ ॥ ೧೪೪ ।

ಏತಾಂ ತ್ವಾಂ ವಿಷ್ಣುನಾ ಸತ್ಯಂ ಹತಾಂ ಸಂಜೀವಯಾಮ್ಯಹಮ್ ।
ಯದಿ ಕೃತ್ಸ್ನೋ ಮಯಾ ಧರ್ಮಶ್ಚರಿತೋ ಜ್ಞಾಯತೇಽಪಿ ವಾ ॥ ೧೪೫ ।

ತೇನ ಸತ್ಯೇನ ಜೀವಸ್ವ ಯದಿ ಸತ್ಯಂ ಬ್ರವೀಮ್ಯಹಮ್ ।
ಸತ್ಯಾಭಿವ್ಯಾಹೃತಾತ್ತಸ್ಯ ದೇವೀ ಸಂಜೀವಿತಾ ತದಾ ॥ ೧೪೬ ॥

---

೧೪೨. ಯಾವ ಕಾರಣದಿಂದ ಧರ್ಮಮರ್ಮವನ್ನು ಅರಿತ ನಿನ್ನಿಂದ ಅವಧ್ಯಳಾಗಿರುವ ನಾರಿಯು ಸಂಹರಿಸಲ್ಪಟ್ಟಳೋ ಆ ಕಾರಣದಿಂದ ನೀನು ಏಳು ಸಲ ಮನುಷ್ಯ ಜಾತಿಯಲ್ಲಿ ಜನ್ಮವನ್ನು ಹೊಂದುತ್ತೀಯೆ.

೧೪೩. ಅನಂತರದಲ್ಲಿ ವಿಷ್ಣುವು ಆ ಶಾಪ ಬಲದಿಂದ ಧರ್ಮಮಾರ್ಗವು ಖಿಲವಾಗಿ ಹೋದ ಸಮಯದಲ್ಲಿ ಸರ್ವಲೋಕಗಳ ಹಿತಕ್ಕೋಸ್ಕರ ಮನುಷ್ಯ ಯೋನಿಯಲ್ಲಿ ಮತ್ತೆ ಮತ್ತೆ ಹುಟ್ಟುತ್ತಾನೆ.

೧೪೪. ಭೃಗುಮುನಿಯು ವಿಷ್ಣುವಿಗೆ ಈ ಶಾಪವಚನವನ್ನು ಇತ್ತು ಆಕೆಯ ಶಿರವನ್ನು ತಾನು ತೆಗೆದುಕೊಂಡು ಬಂದು ಅವಳ ದೇಹದಲ್ಲಿ ಅದನ್ನು ಸೇರಿಸಿಟ್ಟು ಈ ವಚನವನ್ನು ಹೇಳಿದನು.

೧೪೫. ವಿಷ್ಣುವಿನಿಂದ ಪರಮಾರ್ಥವಾಗಿ ಸಂಹರಿಸಲ್ಪಟ್ಟಿರುವ ನಿನ್ನನ್ನು ನಾನು ಈಗ ಸಂಜೀವನ ಗೊಳಿಸುವೆನು. ನನ್ನಿಂದ ಸಮಸ್ತ ಧರ್ಮಕಾರ್ಯಗಳು ಆಚರಿಸಲ್ಪಟ್ಟಿದ್ದು ನಿಜವಾದರೆ ಅದರಂತೆ ತಿಳಿಯುವುದಾದರೆ ನನ್ನ ಕಾರ್ಯವು ಸಾರ್ಥಕವಾಗಲಿ.

೧೪೬. ನಾನು ಸತ್ಯವಚನವನ್ನು ನುಡಿಯುವೆನಾದರೆ ಆ ಸತ್ಯದಿಂದ ನೀನು ಜೀವಿಸು, ಹೀಗೆಂದು ಹೇಳಲು ಭೃಗುಮುನಿಯ ಆ ಸತ್ಯಮಹಿಮೆಯಿಂದ ಆಗ ದೇವಿಯು ಸಂಜೀವನ ಹೊಂದಿದಳು.

ತದಾ ತಾಂ ಪ್ರೋಕ್ಷ್ಯ ಶೀತಾಭಿರದ್ಭಿರ್ಜೀವೇತಿ ಸೋಽಬ್ರವೀತ್ ।
ತತಸ್ತಾಂ ಸರ್ವಭೂತಾನಾಂ ದೃಷ್ಟ್ವಾ ಸುಪ್ತೋತ್ಥಿತಾಮಿವ ॥ ೧೪೭ ॥

ಸಾಧು ಸಾಧ್ವಿತ್ಯದೃಶ್ಯಾನಾಂ ವಾಚಸ್ತಾಃ ಸಸ್ವನುರ್ದಿಶಃ ।
ದೃಷ್ಟ್ವಾ ಸಂಜೀವಿತಾಮೇವಂ ದೇವೀಂ ತಾಂ ಭೃಗುಣಾ ತದಾ ॥ ೧೪೮ ॥

ಮಿಷತಾಂ ಸರ್ವಭೂತಾನಾಂ ತದದ್ಭುತಮಿವಾಭವತ್ ।
ಅಸಂಭ್ರಾಂತೇನ ಭೃಗುಣಾ ಪತ್ನೀಂ ಸಂಜೀವಿತಾಂ ತತಃ ॥ ೧೪೯ ॥

ದೃಷ್ಟ್ವಾ ಶಕ್ರೋ ನ ಲೇಭೇಽಥ ಶರ್ಮ ಕಾವ್ಯಭಯಾತ್ತತಃ ।
ಪ್ರಜಾಗರೇ ತತಶ್ಚೇಂದ್ರೋ ಜಯಂತೀಮಾತ್ಮನಃ ಸುತಾಮ್ ॥ ೧೫೦ ॥

ಪ್ರೋವಾಚ ಮತಿಮಾನ್ ವಾಕ್ಯಂ ಸ್ವಾಂ ಕನ್ಯಾಂ ಪಾಕಶಾಸನಃ ।
ಏಷ ಕಾವ್ಯೋ ಹ್ಯನಿಂದ್ರಾಯ ಚರತೇ ದಾರುಣಂ ತಪಃ ॥ ೧೫೧ ॥

---

೧೪೭. ಆಗ ಭೃಗುಮುನಿಯು ಶೀತವಾದ ಉದಕದಿಂದ ಅವಳನ್ನು ಪ್ರೋಕ್ಷಿಸಿ "ಬದುಕು" ಎಂದು ಹೇಳಿದನು. ಆಗ ಸಕಲ ಭೂತಗಳು ನೋಡುತ್ತಿರುವ ಹಾಗೆ ನಿದ್ದೆಯಿಂದ ಎಚ್ಚೆತ್ತು ಎದ್ದಿರುವಂತೆ ಅವಳು ಎದ್ದಳು.

೧೪೮. ಆಗ ಭೃಗು ಮುನಿಯಿಂದ ಈ ರೀತಿಯಾಗಿ ದೇವಿಯು ಸಂಜೀವನ ಹೊಂದಿರುವುದನ್ನು ನೋಡಿ ಅದೃಶ್ಯವಾದ ಸರ್ವಭೂತಗಳ "ಸಾಧು-ಸಾಧು" ಎಂಬ ಸಾಧುವಾದಗಳು ದಿಗಂತಗಳಲ್ಲಿ ಪ್ರತಿ ಧ್ವನಿಯನ್ನುಂಟುಮಾಡಿದುವು.

೧೪೯. ಸಮಸ್ತ ಭೂತಗಳು ಪ್ರತ್ಯಕ್ಷವಾಗಿ ನೋಡುತ್ತಿರುವ ಹಾಗೆ ಅದೊಂದು ಆಶ್ಚರ್ಯ ಸಂಗತಿಯಂತೆ ನಡೆಯಿತು. ಮತ್ತು ಈ ರೀತಿಯಲ್ಲಿ ಭೃಗು ಮುನಿಯು ಯಾವುದೊಂದು ಸಂಭ್ರಮವೂ ಇಲ್ಲದಂತೆ ಪತ್ನಿಯನ್ನು ಸಂಜೀವನಗೊಳಿಸಿದನು.

೧೫೦. ಅದನ್ನು ನೋಡಿ ಇಂದ್ರನು ಶುಕ್ರಾಚಾರ್ಯನ ಭೀತಿಯಿಂದ ಯಾವಾಗಲೂ ಶಾಂತಿ-ಸೌಖ್ಯಗಳನ್ನು ಹೊಂದಲಿಲ್ಲ. ತರುವಾಯ ಇಂದ್ರನು ಒಂದು ಉಪಾಯವನ್ನು ಯೋಚಿಸಿ ಎಚ್ಚರಹೊಂದಿದನು. ತನ್ನ ಜಯಂತಿ ಎಂಬ ಮಗಳನ್ನು ಸಮಿಾಪಕ್ಕೆ ಕರೆದನು.

೧೫೧. ಪಾಕಾಸುರನನ್ನು ಶಾಸನಮಾಡಿದ ಮತ್ತು ಬುದ್ಧಿಶಾಲಿಯಾದ ದೇವೇಂದ್ರನು ತನ್ನ ಪುತ್ರಿಯನ್ನು ಕುರಿತು ಈ ವಚನವನ್ನು ಹೇಳಿದನು. ಈ ಶುಕ್ರಾಚಾರ್ಯನು ಇಂದ್ರನಿಲ್ಲದಂತೆ ಮಾಡಲು ಉಗ್ರವಾದ ತಪವನ್ನು ಆಚರಿಸುತ್ತಿರುವನು.

ತೇನಾಹಂ ವ್ಯಾಕುಲಃ ಪುತ್ರಿ ಕೃತೋ ಧೃತಿಮತಾ ದೃಢಮ್ ।
ಗಚ್ಛ ಸಂಭಾವಯಸ್ವೈನಂ ಶ್ರಮಾಪನಯನೈಃ ಶುಭೇ ॥ ೧೫೩ ॥

ತೈಸ್ತೈರ್ಮನೋಽನುಕೂಲೈಶ್ಚ ಹ್ಯುಪಚಾರೈರತಂದ್ರಿತಾ ।
ದೇವೀ ಸಾ ಹೀಂದ್ರದುಹಿತಾ ಜಯಂತೀ ಶುಭಚಾರಿಣೀ ॥ ೧೫೪ ॥

ಸುಸ್ವರೂಪಧರಾಗಾತ್ತಂ ದುರ್ವಹಂ ವ್ರತಮಾಸ್ಥಿತಮ್ ।
ಪಿತ್ರಾ ಯಥೋಕ್ತಂ ವಾಕ್ಯಂ ಸಾ ಕಾವ್ಯೇ ಕೃತವತೀ ತದಾ ॥ ೧೫೫ ॥

ಗೀರ್ಭಿಶ್ಚೈವಾನುಕೂಲಾಭಿಃ ಸ್ತುವಂತೀ ವಲ್ಗುಭಾಷಿಣೀ ।
ಗಾತ್ರಸಂವಾಹನೈಃ ಕಾಲೇ ಸೇವಮಾನಾ ತ್ವಚಾಸುಖೈಃ ॥ ೧೫೬ ॥

ಶುಶ್ರೂಷಂತ್ಯನುಕೂಲಾ ಚ ಉವಾಸ ಬಹುಲಾಃ ಸಮಾಃ ।
ಪೂರ್ಣೇ ಧೂಮವ್ರತೇ ಚಾಪಿ ಘೋರೇ ವರ್ಷಸಹಸ್ರಕೇ ॥ ೧೫೭ ॥

---

೧೫೩. ಪುತ್ರಿಯೆ! ಯಾವಾಗಲೂ ಧೀರವಾದ ಮಾನಸವುಳ್ಳ ನಾನು ಶುಕ್ರಾಚಾರ್ಯನಿಂದ ಅತಿಶಯವಾಗಿ ವ್ಯಾಕುಲನಾಗಿ ಮಾಡಲ್ಪಟ್ಟಿರುವೆನು. ಮಂಗಳಶೀಲಳೆ! ಅಲ್ಲಿಗೆ ಹೋಗಿ ಅವನಿಗೆ ಉಂಟಾದ ಶ್ರಮವನ್ನು ಹೋಗಲಾಡಿಸಿ ಅವನನ್ನು ಉಪಚರಿಸು.

೧೫೪. ಅವನ ಮನಸ್ಸಿಗೆ ಹಿತಕರವಾದ ಆಯಾಯ ಉಪಚಾರಗಳಿಂದ ಬೇಸರವಿಲ್ಲದೆ ಅವನನ್ನು ಸೇವಿಸು, ಮಂಗಳಕರವಾದ ನಡತೆಯುಳ್ಳ ಇಂದ್ರನ ಪುತ್ರಿಯಾದ ಜಯಂತೀ ದೇವಿಯು ಇಂದ್ರನಿಂದ ಹೀಗೆ ಹೇಳಲ್ಪಟ್ಟಳು.

೧೫೫. ತರುವಾಯ ಅವಳು ಸುಂದರವಾದ ಸ್ವರೂಪವನ್ನು ಧರಿಸಿ ಕಠಿನವಾದ ವ್ರತವನ್ನು ಸೇವಿಸಿಕೊಂಡಿದ್ದ ಶುಕ್ರಾಚಾರ್ಯನ ಸನ್ನಿಧಿಗೆ ಹೋದಳು, ಮತ್ತು ಅವನಲ್ಲಿ ತಂದೆಯು ಹೇಳಿರುವಂತೆ ನಡೆದುಕೊಂಡಳು.

೧೫೬. ಮಧುರವಾದ ಭಾಷಣವುಳ್ಳ ಜಯಂತಿಯು ಶ್ರವಣೇಂದ್ರಿಯಕ್ಕೆ ಇಂಪಾದ ಮಾತುಗಳಿಂದ ಸ್ತುತಿಸಿದಳು, ಮತ್ತು ಶ್ರಮವಾದ ಸಮಯದಲ್ಲಿ ಸುಖವಾದ ಸ್ಪರ್ಶ ಸುಖವು ದೊರೆಯುವಂತೆ ಅವಯವಗಳನ್ನು ಒತ್ತಿ ಸೇವಿಸಿದಳು.

೧೫೭. ಹೀಗೆ ಅವನಿಗೆ ಅನುಕೂಲಳಾಗಿ ಅನೇಕ ಸಂವತ್ಸರಗಳವರೆಗೆ ಅಲ್ಲಿಯೇ ವಾಸಮಾಡಿದಳು, ಘೋರವಾದ ಆ ಧೂಮವ್ರತವು ಸಹಸ್ರ ವರ್ಷಗಳವರೆಗೆ ನಡೆದು ಪೂರ್ತಿಗೊಂಡಿತು.

ವರೇಣ ಚ್ಛಂದಯಾಮಾಸ ಕಾವ್ಯಂ ಪ್ರೀತೋ ಭವಸ್ತದಾ ।
ಏವಂ ವ್ರತಂ ತ್ವಯೈಕೇನ ಚೀರ್ಣಂ ನಾನ್ಯೇನ ಕೇನಚಿತ್ ॥ ೧೫೭ ॥

ತಸ್ಮಾತ್ತ್ವಂ ತಪಸಾ ಬುದ್ಧ್ಯಾ ಶ್ರುತೇನ ಚ ಬಲೇನ ಚ ।
ತೇಜಸಾ ವಾಪಿ ವಿಬುಧಾನ್ ಸರ್ವಾನಭಿಭವಿಷ್ಯಸಿ ॥ ೧೫೮ ॥

ಯಚ್ಚ ಕಿಂಚಿನ್ಮಮ ಬ್ರಹ್ಮ ವಿದ್ಯತೇ ಭೃಗುನಂದನ ।
ಸಾಂಗಂ ಚ ಸರಹಸ್ಯಂ ಚ ಯಜ್ಞೋಪನಿಷದಸ್ತಥಾ ॥ ೧೫೯ ॥

ಪ್ರತಿಭಾಸ್ಯತಿ ತೇ ಸರ್ವಂ ತದ್ವಾಚ್ಯಂ ತು ನ ಕಸ್ಯಚಿತ್ ।
ಸರ್ವಾಭಿಭಾವೀ ತೇನ ತ್ವಂ ದ್ವಿಜಶ್ರೇಷ್ಠೋ ಭವಿಷ್ಯಸಿ ॥ ೧೬೦ ॥

ಏವಂ ದತ್ತ್ವಾ ವರಂ ತಸ್ಮೈ ಭಾರ್ಗವಾಯ ಭವಃ ಪುನಃ ।
ಪ್ರಜೇಶತ್ವಂ ಧನೇಶತ್ವಮವಧ್ಯತ್ವಂ ಚ ವೈ ದದೌ ॥ ೧೬೧ ॥

---

೧೫೭. ಆಗ ವ್ರತದಿಂದ ಸುಪ್ರೀತನಾದ ಈಶ್ವರನು ಶುಕ್ರನನ್ನು ವರಪ್ರದಾನದಿಂದ ಪ್ರೀತಿಗೊಳಿಸಿದನು. ಇಂತಹ ವ್ರತವು ನಿನ್ನಿಂದ ಮಾತ್ರವೇ ಆಚರಿಸಲ್ಪಟ್ಟಿರುವುದು, ಇಂತಹ ವ್ರತವು ಇನ್ನಾರಿಂದಲೂ ಮಾಡಲ್ಪಡಲಿಲ್ಲ.

೧೫೮. ಆದುದರಿಂದ ನೀನು ತಪಸ್ಸು, ಬುದ್ಧಿ, ಶ್ರುತ, ಬಲ, ಮತ್ತು ತೇಜಸ್ಸುಗಳ ಮಹತ್ವದಿಂದ ಸಮಸ್ತ ದೇವತೆಗಳನ್ನು ತಿರಸ್ಕಾರಮಾಡುತ್ತೀ.

೧೫೯. ಭೃಗುಪುತ್ರನಾದ ಶುಕ್ರನೆ! ನನ್ನಲ್ಲಿ ಯಾವ ಯಾವ ರಹಸ್ಯ ವಿದ್ಯೆಗಳಿರುವುವೋ, ಅಂಗ, ರಹಸ್ಯ, ಮತ್ತು ಯಜ್ಞವಿದ್ಯಾ, ಉಪನಿಷದ್ವಿದ್ಯಾ ಸಹಿತವಾಗಿ ಆರಹಸ್ಯ ವಿದ್ಯಾಗಣವು ನಿನಗೆ ಉಂಟಾಗಲಿ.

೧೬೦. ಆ ವಾಙ್ಮಯವು ಎಲ್ಲವೂ ನಿನಗೆ ಹೊಳೆಯುವುದು, ಅದನ್ನು ನೀನು ಮತ್ತಾರಿಗೂ ಹೇಳಬಾರದು. ಆದುದರಿಂದ ನೀನು ಎಲ್ಲರನ್ನೂ ತಿರಸ್ಕರಿಸುವ ಬ್ರಾಹ್ಮಣಶ್ರೇಷ್ಠನಾಗುತ್ತೀಯೆ.

೧೬೧. ಮಹೇಶ್ವರನು ಈ ರೀತಿಯಾಗಿ ಆ ಶುಕ್ರಾಚಾರ್ಯನಿಗೆ ವರವನ್ನು ಕೊಟ್ಟು ಪ್ರಜೆಗಳ ಈಶ್ವರತ್ವ, ಧನಾಧಿಪತ್ಯ, ಮತ್ತು ಅವಧ್ಯತೆ ಎಂಬ ವರಗಳನ್ನೂ ಅನುಗ್ರಹಿಸಿದನು.

ಏತಾಂಲ್ಲಬ್ಧ್ವಾ ವರಾನ್ ಕಾವ್ಯಃ ಸಂಪ್ರಹೃಷ್ಟತನೂರುಹಃ ।
ಹರ್ಷಾತ್ಪ್ರಾದುರ್ಬಭೌ ತಸ್ಯ ದಿವ್ಯಂ ಸ್ತೋತ್ರಂ ಮಹೇಶಿತುಃ ॥ ೧೬೨ ॥

ತದಾ ತಿರ್ಯಕ್‌ಸ್ಥಿತಸ್ತ್ವೇವಂ ತುಷ್ಟುವೇ ನೀಲಲೋಹಿತಮ್ ।
ನಮೋಽಸ್ತು ಶಿತಿಕಂಠಾಯ ಸುರಾದ್ಯಾಯ ಸುವರ್ಚಸೇ ॥ ೧೬೩ ॥

ಲೇಲಿಹಾನಾಯ ಲೇಹ್ಯಾಯ ವತ್ಸರಾಯ ಜಗತ್ಪತೇ ।
ಕಪರ್ದಿನೇ ಹ್ಯೂರ್ಧ್ವರೋಮ್ಣೇ ಹರ್ಯಕ್ಷವರದಾಯ ಚ ॥ ೧೬೪ ॥

ಸಂಸ್ತುತಾಯ ಸುತೀರ್ಥಾಯ ದೇವದೇವಾಯ ರಂಹಸೇ ।
ಉಷ್ಣೀಷಿಣೇ ಸುವಕ್ತ್ರಾಯ ಸಹಸ್ರಾಕ್ಷಾಯ ಮೀಢುಷೇ ॥ ೧೬೫ ॥

ವಸುರೇತಾಯ ರುದ್ರಾಯ ತಪಸೇ ಚೀರವಾಸಸೇ ।
ನಿಸ್ವಾಯ ಮುಕ್ತಕೇಶಾಯ ಸೇನಾನ್ಯೇ ರೋಹಿತಾಯ ಚ ॥ ೧೬೬ ॥

---

೧೬೨. ಶುಕ್ರಾಚಾರ್ಯನು ಈ ವರಗಳನ್ನು ಹೊಂದಿ ಆನಂದದಿಂದ ರೋಮಾಂಚ ಹೊಂದಿದನು. ಆಗ ಅವನಿಗೆ ಸಂತೋಷಾತಿರೇಕದಿಂದ ಈಶ್ವರನ ದಿವ್ಯ ಸ್ತೋತ್ರವು ಸ್ಫುರಿಸಿ ಆವಿರ್ಭವಿಸಿತು.

೧೬೩. ಅಗ ನಮ್ರವಾಗಿ ನಿಂತು ಈ ರೀತಿಯಾಗಿ ಕಂಠದಲ್ಲಿ ಕಪ್ಪಾಗಿಯೂ ಕೇಶಗಳಲ್ಲಿ ಕೆಂಪಾಗಿಯೂ ಇರುವ ಈಶ್ವರನನ್ನು ಸ್ತುತಿಸಿದನು, ನೀಲವಾದ ಕಂಠವುಳ್ಳವನೂ, ದೇವತೆಗಳಿಗೆ ಆದಿಯೂ, ಮತ್ತು ಉತ್ತಮವಾದ ವರ್ಚಸ್ಸುಳ್ಳವನೂ ಆದ ಶಂಕರನಿಗೆ ನನ್ನ ನಮಸ್ಕಾರಗಳು.

೧೬೪ ಕಲ್ಪಾಂತರೂಪದಿಂದ ಜಗತ್ತನ್ನು ಆಸ್ವಾದಿಸುವನೂ, ಲೇಹ್ಯವಸ್ತು ರೂಪನೂ, ಸಂವತ್ಸರ ಸ್ವರೂಪನೂ, ಜಗತ್ಪತಿಯೂ, ಜಟಾಜೂಟ ಧಾರಿಯೂ, ಊರ್ಧ್ವಾಗ್ರವಾದ ರೋಮವುಳ್ಳವನೂ, ಮತ್ತು ಕುಬೇರನಿಗೆ ವರಪ್ರದನೂ ಆದ ಶಿವನಿಗೆ ನಮಸ್ಕಾರವು.

೧೬೫. ಸ್ತುತಿಸಲು ಅರ್ಹನೂ, ಪರಮ ಪವಿತ್ರನೂ, ದೇವಾಧಿದೇವನೂ, ವೇದರೂಪಿಯೂ, ಶಿರಸ್ಸಿನ ಆವರಣವನ್ನು ಹೊಂದಿರುವನೂ, ಸುಂದರವಾದ ಮುಖವುಳ್ಳವನೂ, ಮತ್ತು ಭಕ್ತರ ಕಾಮುಗಳನ್ನು ವರ್ಷಿಸುವವನೂ ಆದ ಶಂಕರನನ್ನು ವಂದಿಸುವೆನು.

೧೬೬. ಹಿರಣ್ಯದ ಉತ್ಪತ್ತಿಗೆ ಬೀಜಭೂತನೂ, ಭೀಷಣಮೂರ್ತಿಯೂ, ಆಲೋಚನರೂಪವಾದ ಜ್ಞಾನವೃತ್ತಿರೂಪನೂ, ಚೀರವಸ್ತ್ರವನ್ನು ಧರಿಸಿರುವವನೂ, ಸಂಪತ್ತಿಯಿಂದ ರಹಿತನೂ, ನಿರ್ಮುಕ್ತವಾದ ಕೇಶಭಾರವುಳ್ಳವನೂ, ಸೇನಾನಾಯಕನೂ ಮತ್ತು ರಕ್ತವರ್ಣದ ಅವಯವಗಳುಳ್ಳವನೂ ಆದ ಶಿವನಿಗೆ ನಮಸ್ಕಾರವು.

ಕವಯೇ ರಾಜವೃದ್ಧಾಯ ತಕ್ಷಕಕ್ರೀಡನಾಯ ಚ ।
ಗಿರೀಶಾಯಾರ್ಕನೇತ್ರಾಯ ಯತಯೇ ಚಾಜ್ಯಪಾಯ ಚ ॥ ೧೬೭ ॥

ಸುವೃತ್ತಾಯ ಸುಹಸ್ತಾಯ ಧನ್ವಿನೇ ಭಾರ್ಗವಾಯ ಚ ।
ಸಹಸ್ರಬಾಹವೇ ಚೈವ ಸಹಸ್ರಾಮಲಚಕ್ಷುಷೇ ॥ ೧೬೮ ॥

ಸಹಸ್ರಕುಕ್ಷಯೇ ಚೈವ ಸಹಸ್ರಚರಣಾಯ ಚ ।
ಸಹಸ್ರಶಿರಸೇ ಚೈವ ಬಹುರೂಪಾಯ ವೇಧಸೇ ॥ ೧೬೯ ॥

ಭವಾಯ ವಿಶ್ವರೂಪಾಯ ಶ್ವೇತಾಯ ಪುರುಷಾಯ ಚ ।
ನಿಷಂಗಿಣೇ ಕವಚಿನೇ ಸೂಕ್ಷ್ಮಾಯ ಕ್ಷಪಣಾಯ ಚ ॥ ೧೭೦ ॥

ತಾಮ್ರಾಯ ಚೈವ ಭೀಮಾಯ ಉಗ್ರಾಯ ಚ ಶಿವಾಯ ಚ ।
ಮಹಾದೇವಾಯ ಸರ್ವಾಯ ವಿಶ್ವರೂಪಶಿವಾಯ ಚ ॥ ೧೭೧ ॥

---

೧೬೭. ತ್ರಿಕಾಲಜ್ಞನೂ, ವೃದ್ಧಿಯುಳ್ಳ ವಸ್ತುಗಳಲ್ಲಿ ರಾಜನೂ, ತಕ್ಷಕಸರ್ಪವನ್ನು ಕ್ರೀಡಾಸಾಮಗ್ರಿಯನ್ನಾಗಿರಚಿಸಿಕೊಂಡವನೂ ಕೈಲಾಸಗಿರಿಗೆ ಅಧೀಶ್ವರನೂ, ಸೂರ್ಯರೂಪವಾದ ನೇತ್ರವುಳ್ಳವನೂ, ಜಿತೇಂದ್ರಿಯನೂ, ಮತ್ತು ಆಜ್ಯಹವಿಸ್ಸನ್ನು ಭುಂಜಿಸುವವನೂ ಆದ ದೇವನಿಗೆ ನಮಸ್ಕಾರವು.

೧೬೮. ಉತ್ತಮವಾದ ಚರಿತ, ಪ್ರಕಾಶಿಸುವ ಹಸ್ತ, ಮತ್ತು ಬಿಲ್ಲಿನಿಂದ ಕೂಡಿದವನೂ, ಭಾರ್ಗವರೂಪಿಯೂ, ಸಹಸ್ರಬಾಹುಗಳಿಂದ ಶೋಭಿಸಲ್ಪಟ್ಟವನೂ ಮತ್ತುನಿರ್ಮಲವಾದ ಸಹಸ್ರನೇತ್ರಗಳುಳ್ಳವನೂ ಆದ ಪರಮಾತ್ಮನಿಗೆ ನಮಸ್ಕಾರವು.

೧೬೯. ವಿಶ್ವದಲ್ಲಿರುವ ನಿಖಿಲ ಜಂಗಮ ಪ್ರಾಣಿರೂಪನಾಗಿರುವುದರಿಂದ ಸಹಸ್ರಾರು ಸಂಖ್ಯೆಯ ಉದರ, ಚರಣ ಮತ್ತು ಶಿರಸ್ಸುಗಳಿಂದ ಕೂಡಿದವನೂ, ಅನೇಕ ರೂಪಗಳನ್ನು ತೋರ್ಪಡಿಸುವವನೂ ಹಾಗು ವಿಧಾತ ರೂಪನೂ ಆದ ದೇವನಿಗೆ ನಮಸ್ಕಾರವು.

೧೭೦. ವಿಶ್ವೋತ್ಪತ್ತಿಗೆ ಕಾರಣನೂ, ವಿಶ್ವರೂಪಿಯೂ, ಶ್ವೇತವರ್ಣ ಶೋಭಿತನೂ, ಪೂರ್ಣ ಸ್ವರೂಪವುಳ್ಳವನೂ, ಬತ್ತಳಿಕೆಗಳುಳ್ಳವನೂ, ಕವಚವನ್ನು ಧರಿಸಿದವನೂ ಸೂಕ್ಷ್ಮಪರಿಮಾಣವುಳ್ಳವನೂ ಮತ್ತು ಸರ್ವ ಸಂಹಾರಕನೂ ಆದ ಶಂಕರಿಗೆ ನಮಸ್ಕಾರವು.

೧೭೧. ಕೆಂಪು ವರ್ಣವುಳ್ಳವನೂ, ಭೀಮರೂಪಿಯೂ, ಉಗ್ರವಾದ ಮೂರ್ತಿಯುಳ್ಳವನೂ, ಮಂಗಳಪ್ರದನೂ, ದೇವೋತ್ತಮನೂ, ಸರ್ವಾತ್ಮಕನೂ ಮತ್ತು ವಿಶ್ವರೂಪಗಳನ್ನು ಧರಿಸಿರುವ ಮಂಗಳರೂಪಿಯೂ ಆದ ದೇವನಿಗೆ ನಮಸ್ಕಾರವು.

ಹಿರಣ್ಯಾಯ ವಸಿಷ್ಠಾಯ ವರ್ಷಾಯ ಮಧ್ಯಮಾಯ ಚ ।
ಧಾಮ್ನೇ ಚೈವ ಪಿಶಂಗಾಯ ಪಿಂಗಲಾಯಾರುಣಾಯ ಚ ॥ ೧೬೨ ॥

ಪಿನಾಕಿನೇ ಚೇಷುಮತೇ ಚಿತ್ರಾಯ ರೋಹಿತಾಯ ಚ ।
ದುಂದುಭ್ಯಾಯೈಕಪಾದಾಯ ಅರ್ಹಾಯ ಬುದ್ಧಯೇ ತಥಾ ।
ಮೃಗವ್ಯಾಧಾಯ ಸರ್ವಾಯ ಸ್ಥಾಣವೇ ಭೀಷಣಾಯ ಚ ॥ ೧೬೩ ॥

ಬಹುರೂಪಾಯ ಚೋಗ್ರಾಯ ತ್ರಿಣೇತ್ರಾಯೇಶ್ವರಾಯ ಚ ।
ಕಪಿಲಾಯೈಕವೀರಾಯ ಮೃತ್ಯವೇ ತ್ರ್ಯಂಬಕಾಯ ಚ ॥ ೧೬೪ ॥

ವಾಸ್ತೋಷ್ಪತೇ ಪಿನಾಕಾಯ ಶಂಕರಾಯ ಶಿವಾಯ ಚ ।
ಅರಣ್ಯಾಯ ಗೃಹಸ್ಥಾಯ ಯತಯೇ ಬ್ರಹ್ಮಚಾರಿಣೇ ॥ ೧೬೫ ॥

ಸಾಂಖ್ಯಾಯ ಚೈವ ಯೋಗಾಯ ಧ್ಯಾಯಿನೇ ದೀಕ್ಷಿತಾಯ ಚ ।
ಅಂತರ್ಹಿತಾಯ ಸರ್ವಾಯ ತಪ್ಯಾಯ ವ್ಯಾಪಿನೇ ತಥಾ ॥ ೧೬೬ ॥

---

೧೬೨. ಸುವರ್ಣದಂತೆ ಭಾಸಿಸುವನೂ. ವಾಸಪ್ರದನೂ, ವೃಷ್ಟಿನಿಮಿತ್ತನೂ, ಮಧ್ಯಮಪರಿಮಾಣವುಳ್ಳ ವಸ್ತುರೂಪಿಯೂ, ತೇಜಃಪುಂಜಾಕಾರವುಳ್ಳವನೂ, ಪಿಶಂಗ-ಪಿಂಗಳ ವರ್ಣಗಳಿಂದ ರಾಜಿಸುವವನೂ, ಮತ್ತು ಕೆಂಪಾದ ವಿಗ್ರಹವುಳ್ಳವನೂ ಆದ ಸಾಂಬಶಿವನಿಗೆ ನಮಸ್ಕಾರವು.

೧೬೩. ಪಿನಾಕವೆಂಬ ಬಿಲ್ಲನ್ನು ಧರಿಸಿರುವವನೂ, ಬಾಣಗಳುಳ್ಳವನೂ, ಚಿತ್ರವರ್ಣದಿಂದ ಉಜ್ಜ್ವಲನೂ, ರೋಹಿತ ಕಾಂತಿಯುಳ್ಳವನೂ, ದುಂದುಭಿ ಶಬ್ದಸ್ವರೂಪನೂ, ಏಕ ಪಾದ ಮಾತ್ರದಿಂದ ಸರ್ವವ್ಯಾಪಕನೂ, ಪೂಜ್ಯನೂ, ಬುದ್ಧಿಸ್ವರೂಪನೂ, ಮೃಗವ್ಯಾಧನೆಂಬ ಧಾರ್ಮಿಕಸ್ವರೂಪನೂ, ಸರ್ವಾತ್ಮಕನೂ, ಶಾಶ್ವತನೂ ಮತ್ತು ಭಯಂಕರಮೂರ್ತಿಯೂ ಆದ ಶಿವನಿಗೆ ನಮಸ್ಕಾರವು.

೧೬೪. ನಾನಾರೂಪಧಾರಿಯೂ, ಉಗ್ರಸ್ವರೂಪನೂ, ತ್ರಿನಯನಗಳುಳ್ಳವನೂ, ಸಕಲ ನಿಯಾಮಕನೂ, ಕಪಿಲ ವರ್ಣದಿಂದ ರಾಜಿಸುವವನೂ, ಮುಖ್ಯವೀರ ಸ್ವರೂಪನೂ, ಸಂಹಾರಕನೂ ಮತ್ತು ತ್ರ್ಯಂಬಕರೂಪನೂ ಆದ ಶಿವನಿಗೆ ನಮಸ್ಕಾರವು.

೧೬೫. ಗೃಹಕ್ಷೇತ್ರಾದಿ ವಸ್ತು ಅಧೀಶ್ವರನೂ, ಪಿನಾಕಧನುರ್ಧಾರಿಯೂ, ಶಂಕರನೂ. ಶಿವಸ್ವರೂಪನೂ, ವಾನಪ್ರಸ್ಥ, ಗೃಹಸ್ಥ, ಯತಿ, ಮತ್ತು ಬ್ರಹ್ಮಚಾರಿ ಎಂಬ ಚತುರಾಶ್ರಮಿಗಳ ಸ್ವರೂಪನೂ ಆದ ಶಿವನಿಗೆ ನಮಸ್ಕಾರವು.

೧೬೬. ತತ್ತ್ವಜ್ಞಾನಸ್ವರೂಪನೂ, ಯೋಗಾತ್ಮಕನೂ, ಧ್ಯಾನಗಮ್ಯನೂ, ದೀಕ್ಷಾಧಾರಿಯೂ, ಅಂತರ್ಯಾಮಿಯೂ, ಸರ್ವಸ್ವರೂಪನೂ, ತಪದಿಂದ ಕೂಡಿರುವ ವಸ್ತು ಸ್ವರೂಪನೂ ಮತ್ತು ಸರ್ವವ್ಯಾಪಕನೂ ಆಗಿರುವ ಶಿವನಿಗೆ ನಮಸ್ಕಾರವು.

ಬುದ್ಧಾಯ ಚೈವ ಶುದ್ಧಾಯ ಮುಕ್ತಾಯ ಕೇವಲಾಯ ಚ ।
ರೋಧಸೇ ಚೈಕಿತಾನಾಯ ಬ್ರಹ್ಮಿಷ್ಠಾಯ ಮಹರ್ಷಯೇ ॥ ೧೭೭ ॥

ಚತುಷ್ಪಾದಾಯ ಮೇಧ್ಯಾಯ ವರ್ಮಿಣೇ ಶೀಘ್ರಗಾಯ ಚ ।
ಶಿಖಂಡಿನೇ ಕಪಾಲಾಯ ದಂಡಿನೇ ವಿಶ್ವಮೇಧಸೇ ॥ ೧೭೮ ॥

ಅಪ್ರತೀತಾಯ ದೀಪ್ತಾಯ ಭಾಸ್ಕರಾಯ ಸುಮೇಧಸೇ ।
ಕ್ರೂರಾಯ ವಿಕೃತಾಯೈವ ಬೀಭತ್ಸಾಯ ಶಿವಾಯ ಚ ॥ ೧೭೯ ॥

ಶುಚಯೇ ಪರಿಧಾನಾಯ ಸದ್ಯೋಜಾತಾಯ ಮೃತ್ಯವೇ ।
ಪಿಶಿತಾಶಾಯ ಶರ್ವಾಯ ಮೇಘಾಯ ವೈದ್ಯುತಾಯ ಚ ॥ ೧೮೦ ॥

ದಕ್ಷಾಯ ಚ ಜಘನ್ಯಾಯ ಲೋಕಾನಾಮೀಶ್ವರಾಯ ಚ ।
ಅನಾಮಯಾಯ ಚೇಧ್ಮಾಯ ಹಿರಣ್ಯಾಯೈಕಚಕ್ಷುಷೇ ॥ ೧೮೧ ॥

---

೧೭೭. ಚೇತನರೂಪಿಯೂ, ಸರ್ವದೋಷವರ್ಜಿತನೂ, ಮುಕ್ತಸ್ವರೂಪನೂ, ಸರ್ವಧರ್ಮವರ್ಜಿತನೂ, ಉನ್ಮಾರ್ಗನಿರೋಧಕನೂ, ಪ್ರಜ್ಞಾತ್ಮಕನೂ, ಬ್ರಹ್ಮಿಷ್ಠನೂ ಮತ್ತು ಮಹರ್ಷಿಸ್ವರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು.

೧೭೮. ನಿಖಿಲ ಚತುಷ್ಪಾತ್ ಪ್ರಾಣಿ ಸ್ವರೂಪನೂ, ಯಜ್ಞಗಳಲ್ಲ ಪೂಜ್ಯನೂ, ಕವಚಧರನೂ, ವೇಗವಾದ ಗತಿಶೀಲನೂ, ಶಿಖಂಡರೂಪವಾದ ಜಟೆಗಳನ್ನು ಧರಿಸಿದವನೂ, ಭಿಕ್ಷಾಕಪಾಲಧಾರಿಯೂ, ದಂಡಧರನೂ ಮತ್ತು ವಿಶ್ವಜ್ಞಾನ ಸಂಪನ್ನನೂ ಆದ ಶಿವನಿಗೆ ನಮಸ್ಕಾರವು.

೧೭೯. ಪ್ರಮಾಣವೃತ್ತಿಗಳಿಗೆ ವೇದ್ಯನಲ್ಲದವನೂ, ದೀಪ್ತಿಸ್ವರೂಪನೂ, ಸೂರ್ಯಾದಿ ತೇಜೋರೂಪನೂ, ಪ್ರಜ್ಞಾನ ಘನಮೂರ್ತಿಯೂ, ಕ್ರೂರ-ವಿಕಾರ ಮತ್ತು ಜುಗುಪ್ಸಾಕರವಾದ ಆಕಾರವುಳ್ಳವನೂ, ಮಂಗಳ ವಿಗ್ರಹನೂ ಆದ ಶಂಕರನಿಗೆ ನಮಸ್ಕಾರವು

೧೮೦. ಪರಿಶುದ್ಧನೂ, ವಿಶ್ವಾವಾರಕನೂ, ಸದ್ಯೋಜಾತರೂಪನೂ, ಮೃತ್ಯುಸ್ವರೂಪನೂ, ಮಾಂಸಾಶನವುಳ್ಳವನೂ, ಸುಖಕರನೂ, ಮೇಘಸ್ವರೂಪವುಳ್ಳವನೂ, ವಿದ್ಯುತ್ಪುಂಜದಲ್ಲಿ ಸ್ಫುರಿಸುವ ಮೂರ್ತಿಯುಳ್ಳವನೂ ಆದ ಶಿವನಿಗೆ ನಮಸ್ಕಾರವು.

೧೮೧. ಸರ್ವಸಮರ್ಥನೂ, ಜಘನದಲ್ಲಿ ಉತ್ಪತ್ತಿಹೊಂದುವ ತಿರ್ಯಕ್ಪ್ರಾಣಿಸ್ವರೂಪನೂ, ಲೋಕಗಳಿಗೆ ಪ್ರಭುವೂ, ರೋಗವರ್ಜಿತನೂ, ಇಧ್ಮವೆಂಬ ಯಜ್ಞಾಂಗರೂಪನೂ, ಹಿರಣ್ಯ ಸ್ವರೂಪನೂ ಮತ್ತು ಜ್ಞಾನಮಯವಾದ ಮುಖ್ಯ ನೇತ್ರವುಳ್ಳವನೂ ಆದ ಶಿವನಿಗೆ ನಮಸ್ಕಾರವು.

ಶ್ರೇಷ್ಠಾಯ ವಾಮದೇವಾಯ ಈಶಾನಾಯ ಚ ಧೀಮತೇ ।
ಮಹಾಕಲ್ಪಾಯ ದೀಪ್ತಾಯ ರೋದನಾಯ ಹಸಾಯ ಚ ॥ ೧೮೨ ॥

ದೃಢಧನ್ವಿನೇ ಕವಚಿನೇ ರಥಿನೇ ಚ ವರೂಥಿನೇ ।
ಭೃಗುನಾಥಾಯ ಶುಕ್ರಾಯ ಗಹ್ವರಿಷ್ಠಾಯ ಧೀಮತೇ ॥ ೧೮೩ ॥

ಅಮೋಘಾಯ ಪ್ರಶಾಂತಾಯ ಸದಾ ವಿಪ್ರಪ್ರಿಯಾಯ ಚ ।
ದಿಗ್ವಾಸಃಕೃತ್ತಿವಾಸಾಯ ಭಗಘ್ನಾಯ ನಮೋಽಸ್ತು ತೇ ॥ ೧೮೪ ॥

ಪಶೂನಾಂ ಪತಯೇ ಚೈವ ಭೂತಾನಾಂ ಪತಯೇ ನಮಃ ।
ಪ್ರಭವೇ ಋಗ್ಯಜುಃಸಾಮ್ನೇ ಸ್ವಾಹಾಯೈ ಚ ಸುಧಾಯ ಚ ॥ ೧೮೫ ॥

ವಷಟ್ಕಾರತಮಾಯೈವ ತುಭ್ಯಂ ಮಂತ್ರಾತ್ಮನೇ ನಮಃ ।
ಸ್ರಷ್ಟ್ರೇ ಧಾತ್ರೇ ತಥಾ ಕರ್ತ್ರೇ ಹರ್ತ್ರೇ ಚ ಕ್ಷಪಣಾಯ ಚ ॥ ೧೮೬ ॥

---

೧೮೨. ಶ್ರೇಷ್ಠನೂ, ವಾಮದೇವ ಮೂರ್ತಿಯೂ, ಈಶಾನ ಮೂರ್ತಿಯೂ, ಜ್ಞಾನಮಯನೂ, ಮಹಾಕಲ್ಪಾವಿರ್ಭಾವನಿಮಿತ್ತನೂ, ದೀಪ್ತವಾದ ಗಾತ್ರವುಳ್ಳವನೂ, ರೋದನ ನಿಮಿತ್ತನೂ ಮತ್ತು ಹಾಸ್ಯಾದಿ ಕಾರಣನೂ ಆದ ಶಿವನಿಗೆ ನಮಸ್ಕಾರವು

೧೮೩. ದೃಢವಾದ ಧನು, ಕವಚ, ರಥ, ಮತ್ತು ರಥದೊಳಗಿನ ಆಸನಗಳೆಂಬ ಸಮರಸಾಮಗ್ರೀ ಸಂಪೂರ್ಣನೂ, ಭೃಗುವಂಶದ ತಪಸ್ವಿಗಳಿಗೆ ಪ್ರಭುವೂ, ಶುಕ್ರಾಚಾರ್ಯಸ್ವರೂಪನೂ, ಗಹನಸ್ಥಾನಗಳಲ್ಲಿ ವಾಸಿಸುವವನೂ, ಮತು ಜ್ಞಾನಸಂಪನ್ನನೂ ಆದ ಶಿವನಿಗೆ ನಮಸ್ಕಾರವು.

೧೮೪. ಸತ್ಯ ಸ್ವರೂಪನೂ, ಶಾಂತವಾದ ಆಕಾರವುಳ್ಳವನೂ, ನಿರಂತರವಾಗಿ ಬ್ರಾಹ್ಮಣ ಪ್ರಿಯನೂ, ದಿಗಂಬರನೂ ಮತ್ತು ಗಜಚರ್ಮಾಂಬರಧಾರಿಯೂ, ಮತ್ತು ಭಗಾಸುರ ವಿಧ್ವಂಸಕನೂ ಆದ ಶಂಕರದೇವನಿಗೆ ನಮಸ್ಕಾರವು.

೧೮೫. ನಿಖಿಲ ಪಶು ಸಂರಕ್ಷಕನೂ, ಸರ್ವ ಭೂತ ಪರಿಪಾಲಕನೂ, ವಿಶ್ವನಿಯಾಮಕನೂ, ಋಕ್-ಯಜುಃ-ಸಾಮವೆಂಬ ವೇದತ್ರಯ ಪ್ರವರ್ತಕನೂ, ದೇವಹವಿಃಸ್ವರೂಪನೂ ಮತ್ತು ಅಮೃತ ರೂಪಿಯೂ ಆದ ದೇವನಿಗೆ ನಮಸ್ಕಾರವು.

೧೮೬. ಯಜ್ಞದಲ್ಲಿ ವಷಟ್ಕಾರಪೂರ್ವಕವಾಗಿ ಅರ್ಪಿಸುವ ಹವಿಃಸ್ವರೂಪನೂ, ನಿಖಿಲ ಮಂತ್ರ ಸ್ವರೂಪನೂ, ಸೃಷ್ಟಿಕಾರಕನೂ, ವಿಧಾನಕರ್ತನೂ, ಸರ್ವ ನಿರ್ಮಾಪಕನೂ, ಸರ್ವ ಸಂಹರ್ತೃವೂ, ಮತ್ತು ಹಾನಿಕರನೂ ಆದ ಶಿವನಿಗೆ ನಮಸ್ಕಾರವು.

ಭೂತಭವ್ಯಭವೇಶಾಯ ತುಭ್ಯಂ ಕರ್ಮಾತ್ಮನೇ ನಮಃ ।
ವಸವೇ ಚೈವ ಸಾಧ್ಯಾಯ ರುದ್ರಾದಿತ್ಯಾಶ್ವಿನಾಯ ಚ ॥ ೧೮೭ ॥

ವಿಶ್ವಾಯ ಮರುತೇ ಚೈವ ತುಭ್ಯಂ ದೇವಾತ್ಮನೇ ನಮಃ ।
ಅಗ್ನೀಷೋಮವಿಧಿಜ್ಞಾಯ ಪಶುಮಂತ್ರೌಷಧಾಯ ಚ ॥ ೧೮೮ ॥

ದಕ್ಷಿಣಾವಭೃಥಾಯೈವ ತುಭ್ಯಂ ಯಜ್ಞಾತ್ಮನೇ ನಮಃ ।
ತಪಸೇ ಚೈವ ಸತ್ಯಾಯ ತ್ಯಾಗಾಯ ಚ ಶಮಾಯ ಚ ॥ ೧೮೯ ॥

ಅಹಿಂಸಾಯಾಥ ಲೋಭಾಯ ಸುವೇಷಾಯಾನಿಶಾಯ ಚ ।
ಸರ್ವಭೂತಾತ್ಮಭೂತಾಯ ತುಭ್ಯಂ ಯೋಗಾತ್ಮನೇ ನಮಃ ॥ ೧೯೦ ॥

ಪೃಥಿವ್ಯೈ ಚಾಂತರಿಕ್ಷಾಯ ಮಹಸೇ ತ್ರಿದಿವಾಯ ಚ ।
ಜನಸ್ತಪಾಯ ಸತ್ಯಾಯ ತುಭ್ಯಂ ಲೋಕಾತ್ಮನೇ ನಮಃ ॥ ೧೯೧ ॥

---

೧೮೭. ಭೂತಕಾಲ-ಭವಿಷ್ಯಕಾಲ-ವರ್ತಮಾನಕಾಲಗಳ ವಸ್ತು ಪ್ರಪಂಚಕ್ಕೆ ಈಶ್ವರನೂ, ಕರ್ಮಾಧ್ಯಕ್ಷನೂ, ವಸು-ಸಾಧ್ಯ-ರುದ್ರ-ಆದಿತ್ಯ-ಅಶ್ವಿ ಎಂಬ ಗಣದೇವತಾತ್ಮಕನೂ ಆಗಿರುವ ಈಶ್ವರನಿಗೆ ನಮಸ್ಕಾರವು.

೧೮೮. ಹಾಗು ವಿಶ್ವದೇವಗಣ. ಮರುದ್ದೇವಗಣಗಳ ಸ್ವರೂಪನೂ, ಅಗ್ನೀಷೋಮದೇವರಿಂದ ಉಪಲಕ್ಷಿತವಾದ ನಿಖಿಲಕರ್ಮ ವಿಧಾನವನ್ನು ಅರಿತವನೂ, ಪಶು ಮಂತ್ರ-ಓಷಧಗಳ ವಿಧಾನವನ್ನು ತಿಳಿದವನೂ ಆದ ಶಂಕರನಿಗೆ ನಮಸ್ಕಾರವು.

೧೮೯. ದಕ್ಷಿಣಾಸ್ವರೂಪನೂ, ಅವಭೃಥಕರ್ಮರೂಪಿಯೂ, ಸಮಸ್ತ ಯಜ್ಞಭೋಕ್ತೃವೂ, ತಪೋರೂಪನೂ, ಸತ್ಯಾತ್ಮಕನೂ, ತ್ಯಾಗಸ್ವರೂಪನೂ, ಮತ್ತು ಶಮಗುಣಾತ್ಮಕನೂ ಆದ ಶಂಕರನಿಗೆ ನಮಸ್ಕಾರವು.

೧೯೦. ಹಿಂಸಾವರ್ಜಿತನೂ, ಲೋಭಗುಣ ಸ್ವರೂಪನೂ, ಅಲಂಕೃತವಾದ ವೇಷವನ್ನು ಧರಿಸಿದವನೂ, ನಿಶಾರೂಪವಾದ ಅಜ್ಞಾನಸಂಗ ಶೂನ್ಯನೂ, ಸರ್ವಭೂತಗಳಿಗೆ ಆತ್ಮರೂಪನೂ, ಮತ್ತು ಯೋಗಾತ್ಮಕನೂ ಆದ ಶಿವನಿಗೆ ನಮಸ್ಕಾರವು.

೧೯೧. ಪೃಥಿವೀಲೋಕ, ಅಂತರಿಕ್ಷಲೋಕ, ಮಹರ್ಲೋಕ, ಸ್ವರ್ಗಲೋಕ, ಜನೋಲೋಕ, ತಪೋಲೋಕ, ಮತ್ತು ಸತ್ಯಲೋಕಗಳೆಂಬ ಸಪ್ತಲೋಕ ಸ್ವರೂಪನಾಗಿರುವುದರಿಂದ ಸಮಷ್ಟಿಯಿಂದ ಸರ್ವ ಲೋಕಾತ್ಮಕಕನಾದ ಶಂಕರನಿಗೆ ನಮಸ್ಕಾರವು.

ಅವ್ಯಕ್ತಾಯಾಥ ಮಹತೇ ಭೂತಾಯ್ಯೆವೇಂದ್ರಿಯಾಯ ಚ ।
ತನ್ಮಾತ್ರಾಯಾಥ ಮಹತೇ ತುಭ್ಯಂ ತತ್ತ್ವಾತ್ಮನೇ ನಮಃ ॥ ೧೯೨ ॥

ನಿತ್ಯಾಯ ಚಾಪ್ಯಲಿಂಗಾಯ ಸೂಕ್ಷ್ಮಾಯ ಚೇತರಾಯ ಚ ।
ಶುದ್ಧಾಯ ವಿಭವೇ ಚೈವ ತುಭ್ಯಂ ನಿತ್ಯಾತ್ಮನೇ ನಮಃ ॥ ೧೯೩ ॥

ನಮಸ್ತೇ ತ್ರಿಷು ಲೋಕೇಷು ಸ್ವರಂ ತೇಷು ಭುವಾದಿಷು ।
ಸತ್ಯಾಂತ ಮಹರಾದ್ಯೇಷು ಚತುರ್ಷು ಚ ನಮೋಽಸ್ತು ತೇ ॥ ೧೯೪ ॥

ನಾಮಸ್ತೋತ್ರೇ ಮಯಾ ಹ್ಯಸ್ಮಿನ್ ಯದಸದ್ವ್ಯಾಹೃತಂ ಪ್ರಭೋ ।
ಮದ್ಭಕ್ತ ಇತಿ ಬ್ರಹ್ಮಣ್ಯ ಸರ್ವಂ ತತ್ ಕ್ಷಂತುಮರ್ಹಸಿ ॥ ೧೯೫ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ದ್ವಿಸಪ್ತತಿತಮೋಽಧ್ಯಾಯಃ

---

೧೯೨. ಅವ್ಯಕ್ತತತ್ತ್ವ, ಮಹತ್ತತ್ತ್ವ, ಪಂಚಮಹಾಭೂತ, ಇಂದ್ರಿಯ, ಮತ್ತು ಪಂಚಭೂತತನ್ಮಾತ್ರಗಳೆಂಬ ಸಾಂಖ್ಯಶಾಸ್ತ್ರ ಪ್ರಸಿದ್ಧವಾದ ಆಯಾಯ ತತ್ತ್ವಗಳ ರೂಪದಿಂದ ಕೂಡಿ ಸಮಷ್ಟಿದೃಷ್ಟಿಯಿಂದ ಸರ್ವ ತತ್ತ್ವ ರೂಪಿಯಾದ ಶಿವನಿಗೆ ನಮಸ್ಕಾರವು.

೧೯೩. ಶಾಶ್ವತ ಸ್ವರೂಪನೂ, ಲಿಂಗಶರೀರ ವರ್ಜಿತನೂ, ಸೂಕ್ಷ್ಮ ಸ್ವರೂಪನೂ, ಸೂಕ್ಷ್ಮೇತರವಾದ ಬೃಹದ್ರೂಪವುಳ್ಳವನೂ, ಶುದ್ಧನೂ, ವ್ಯಾಪಕನೂ, ಮತ್ತು ಸಂತತವಾದ ಅಸ್ತಿತ್ವವುಳ್ಳವನೂ ಆದ ಶಿವನಿಗೆ ನಮಸ್ಕಾರವು.

೧೯೪. ದೇವನೇ! ಭೂಲೋಕ ಮೊದಲಾಗಿರುವ ಭೂರ್ಲೋಕ, ಭುವರ್ಲೋಕ ಮತ್ತು ಸ್ವರ್ಲೋಕಗಳಲ್ಲಿಯೂ ಹಾಗು ಮಹರ್ಲೋಕ ಆದಿಯಾಗಿ ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳಲ್ಲಿಯೂ ಒಟ್ಟಾಗಿ ಸೇರಿ ಸಪ್ತಲೋಕ ವ್ಯಾಪಕನಾದ ನಿನಗೆ ನಮಸ್ಕಾರವು.

೧೯೫ ಬ್ರಾಹ್ಮಣವತ್ಸಲನಾದ ಪ್ರಭುದೇವನೇ! ನಾನು ಹೇಳಿರುವ ಈ ನಾಮಸ್ತೋತ್ರದಲ್ಲಿ ದುಷ್ಟವಾದ ಅಂಶವನ್ನು ನುಡಿದಿದ್ದಲ್ಲಿ ನನ್ನಲ್ಲಿ ಭಕ್ತವಾತ್ಸಲ್ಯವನ್ನು ತೋರಿ ಭಕ್ತನಾದ ನನ್ನ ಆ ನುಡಿಯನ್ನು ಕ್ಷಮಿಸಲು ಯೋಗ್ಯನಿದ್ದೀಯೆ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಎಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತವು.

# ತ್ರಿಸಪ್ತತಿತಮೋಽಧ್ಯಾಯಃ

**ಸೂತ ಉವಾಚ :—**

**ಏವಮಾರಾಧ್ಯ ದೇವೇಶಮೀಶಾನಂ ನೀಲಲೋಹಿತಮ್ ।**
**ಪ್ರಹ್ವೋಽತಿಪ್ರಣತಸ್ತಸ್ಮೈ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೧ ॥**

**ಕಾವ್ಯಸ್ಯ ಗಾತ್ರಂ ಸಂಸ್ಪೃಶ್ಯ ಹಸ್ತೇನ ಪ್ರೀತಿಮಾನ್ ಭವಃ ।**
**ನಿಕಾಮಂ ದರ್ಶನಂ ದತ್ತ್ವಾ ತತ್ರೈವಾಂತರಧಾದ್ಧರಃ ॥ ೨ ॥**

**ತತಃ ಸೋಽಂತರ್ಹಿತೇ ತಸ್ಮಿನ್ ದೇವೇ ಸಾನುಚರೇ ತದಾ ।**
**ತಿಷ್ಠಂತೀಂ ಪ್ರಾಂಜಲಿರ್ಭೂತ್ವಾ ಜಯಂತೀಮಿದಮಬ್ರವೀತ್ ॥ ೩ ॥**

**ಕಸ್ಯ ತ್ವಂ ಸುಭಗೇ ಕಾ ವಾ ದುಃಖಿತೇ ಮಯಿ ದುಃಖಿತಾ ।**
**ಮಹತಾ ತಪಸಾ ಯುಕ್ತಂ ಕಿಮರ್ಥಂ ಮಾಂ ಜಿಗೀಷಸಿ ॥ ೪ ॥**

---

೧ ಸೂತಮುನಿಯು ಇಂತೆಂದನು :—ಶುಕ್ರಾಚಾರ್ಯನು ದೇವೋತ್ತಮನೂ ಸರ್ವನಿಯಾಮಕನೂ ನೀಲ-ಲೋಹಿತ ಸ್ವರೂಪನೂ ಆದ ಶಿವನನ್ನು ಆರಾಧಿಸಿ ವಿನಯದಿಂದ ನಮಸ್ಕಾರಮಾಡಿ ಅಂಜಲಿಯನ್ನು ಕಟ್ಟಿಕೊಂಡವನಾಗಿ ಈ ರೀತಿ ಯಾಗಿ ವಚನವನ್ನು ವಿಜ್ಞಾಪಿಸಿಕೊಂಡನು.

೨. ಆಗ ಜಗದುತ್ಪತ್ತಿಗೆ ಕಾರಣನೂ, ಸರ್ವ ಸಂಹಾರಕನೂ ಆದ ಶಿವನು ಪ್ರೀತಿಯುಳ್ಳವನಾಗಿ ಶುಕ್ರಾಚಾರ್ಯನ ಗಾತ್ರವನ್ನು ಸ್ಪರ್ಶಿಸಿ ಅವನ ಇಷ್ಟಾನುಸಾರ ವಾಗಿ ದರ್ಶನವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೩. ತರುವಾಯ ಸ್ವಪರಿವಾರಸಹಿತನಾಗಿ ಶಂಕರನು ಅದೃಶ್ಯನಾಗಲು ಆಗ ಆ ಶುಕ್ರಾಚಾರ್ಯನು ವಿನಯದಿಂದ ಅಂಜಲಿಯನ್ನು ಕಟ್ಟಿಕೊಂಡು ನಿಂತಿರುವ ಜಯಂತಿಯನ್ನು ನೋಡಿ ಈ ರೀತಿಯಾಗಿ ಹೇಳಿದನು.

೪. ಸೌಭಾಗ್ಯಶಾಲಿನಿಯೇ! ನೀನು ಯಾರು? ಯಾರಿಗೆ ಸಂಬಂಧಿನಿಯಾಗಿ ರುತ್ತೀ? ನಾನು ದುಃಖಗೊಂಡರೆ ನೀನು ದುಃಖಗೊಳ್ಳುತ್ತ ಮಹತ್ತಾದ ತಪಸ್ಸಿನಲ್ಲಿ ನಿರತನಾದ ನನ್ನನ್ನು ಸೇವೆಮಾಡಿ ಏಕೆ ಗೆಲ್ಲಲು ಇಷ್ಟವುಳ್ಳವಳಾಗಿದ್ದೀ?

**ಅನಯಾ ಸತತಂ ಭಕ್ತ್ಯಾ ಪ್ರಶ್ರಯೇಣ ದಮೇನ ಚ ।**
**ಸ್ನೇಹೇನ ಚೈವ ಸುಶ್ರೋಣಿ ಪ್ರೀತೋಽಸ್ಮಿ ವರವರ್ಣಿನಿ ॥ ೫ ॥**

**ಕಿಮಿಚ್ಛಸಿ ವರಾರೋಹೇ ಕಸ್ತೇ ಕಾಮಃ ಸಮೃಧ್ಯತಾಮ್ ।**
**ಕಂ ತೇ ಸಂಪೂರಯಾಮ್ಯದ್ಯ ಯದ್ಯಪಿ ಸ್ಯಾತ್ಸುದುರ್ಲಭಃ ॥ ೬ ॥**

**ಏವಮುಕ್ತಾಬ್ರವೀದೇನಂ ತಪಸಾ ಜ್ಞಾತುಮರ್ಹಸಿ ।**
**ಚಿಕೀರ್ಷಿತಂ ಮೇ ಬ್ರಹ್ಮಿಷ್ಠ ತ್ವಂ ಹಿ ವೇತ್ಥ ಯಥಾತಥಮ್ ॥ ೭ ॥**

**ಏವಮುಕ್ತೋಽಬ್ರವೀದೇನಾಂ ದೃಷ್ಟ್ವಾ ದಿವ್ಯೇನ ಚಕ್ಷುಷಾ ।**
**ಮಾಹೇಂದ್ರೀ ತ್ವಂ ವರಾರೋಹೇ ಮದ್ಧಿತಾರ್ಥಮಿಹಾಗತಾ ॥ ೮ ॥**

**ಮಯಾ ಸಹ ತ್ವಂ ಸುಶ್ರೋಣಿ ದಶ ವರ್ಷಾಣಿ ಭಾಮಿನಿ ।**
**ಅದೃಶ್ಯಂ ಸರ್ವಭೂತೈಸ್ತು ಸಂಪ್ರಯೋಗಮಿಹೇಚ್ಛಸಿ ॥ ೯ ॥**

---

೫. ಸುಂದರವಾದ ಕಟಿಪ್ರದೇಶವುಳ್ಳ, ಸುಂದರವರ್ಣಾಂಕಿತಳಾದ ನಾರಿಯೆ ! ನಿನ್ನ ಸಂತತವಾದ ಈ ಭಕ್ತಿ, ವಿನಯ, ಇಂದ್ರಿಯ ನಿಗ್ರಹ, ಮತ್ತು ಸ್ನೇಹಭಾವಗಳಿಂದ ನಾನು ನಿನ್ನಲ್ಲಿ ಅತ್ಯಂತವಾಗಿ ಪ್ರೀತಿಗೊಂಡಿರುವೆನು

೬. ಉತ್ತಮವಾದ ನಿತಂಬದಿಂದ ಅಲಂಕೃತಳಾದ ನಾರಿಯೆ ! ನೀನು ಏನನ್ನು ಆಕಾಂಕ್ಷಿಸುತ್ತೀಯೆ ? ನಿನ್ನ ಯಾವ ಇಷ್ಟವು ಸಮೃದ್ಧಿಯನ್ನು ಹೊಂದಲಿ ? ಅಂತಹ ನಿನ್ನ ಇಷ್ಟವು ಬಹು ದುರ್ಲಭವಾಗಿದ್ದರೂ ಕೂಡ ನಾನು ಅದನ್ನು ಪೂರೈಸಿಕೊಡುವೆನು.

೭. ಈ ರೀತಿಯಾಗಿ ಹೇಳಲ್ಪಟ್ಟಿರುವ ಜಯಂತೀದೇವಿಯು ಶುಕ್ರನನ್ನು ಕುರಿತು ಹೀಗೆ ಹೇಳಿದಳು, ಬ್ರಹ್ಮಿಷ್ಠನೆ ! ನೀನು ತಪೋಬಲದಿಂದ ಎಲ್ಲವನ್ನೂ ತಿಳಿಯಲು ಶಕ್ತನಾಗಿದ್ದೀಯೆ ; ನನ್ನ ಕರ್ತವ್ಯದ ಇಷ್ಟವನ್ನು ನೀನು ತಾತ್ತ್ವಿಕವಾಗಿ ತಿಳಿದಿರುತ್ತೀಯೆ.

೮. ಜಯಂತಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ಭಾರ್ಗವನು ಈಕೆಯನ್ನು ದಿವ್ಯದೃಷ್ಟಿಯಿಂದ ಅರಿತು ಹೇಳಿದನು, ಉತ್ತಮವಾದ ನಿತಂಬ ವತಿಯಾದ ನಾರಿಯೆ ! ನೀನು ನನ್ನ ಹಿತಕ್ಕೋಸ್ಕರವಾಗಿ ಇಲ್ಲಿಗೆ ಬಂದಿರುವ ಮಹೇಂದ್ರ ಪುತ್ರಿಯಾಗಿ ಇರುತ್ತೀಯೆ.

೯. ಸುಂದರವಾದ ಕಟಿಭಾಗದಿಂದ ಅಲಂಕೃತಳಾದವಳೂ ಭಾಮಿನಿಯೂ ಆದ ಜಯಂತಿಯೆ ! ಸರ್ವ ಭೂತಗಳಿಗೆ ಅದೃಶ್ಯವಾದ ರೀತಿಯಲ್ಲಿ ಹತ್ತು ವರ್ಷಗಳ ಕಾಲಾವಧಿಯವರೆಗೆ ನನ್ನೊಡನೆ ಸಂಗಸೌಖ್ಯವನ್ನು ಇಚ್ಛಿಸುವಿ.

ದೇವೀಂದ್ರನೀಲವರ್ಣಾಭೇ ವರಾರೋಹೇ ಸುಲೋಚನೇ ।
ಇಮಂ ವೃಣೀಷ್ವ ಕಾಮಂ ತ್ವಂ ಮತ್ತೋ ವೈ-ವಲ್ಗುಭಾಷಿಣಿ ॥ ೧೦ ॥

ಏವಂ ಭವತು ಗಚ್ಛಾವೋ ಗೃಹಾನ್ಮತ್ತೇಭಗಾಮಿನಿ ।
ತತಃ ಸ್ವಗೃಹಮಾಗಮ್ಯ ಜಯಂತ್ಯಾ ಸಹಿತಃ ಪ್ರಭುಃ ॥ ೧೧ ॥

ಸ ತಯಾ ಚಾವಸದ್ದೇವ್ಯಾ ದಶವರ್ಷಾಣಿ ಭಾರ್ಗವಃ ।
ಅದೃಶ್ಯಃ ಸರ್ವಭೂತಾನಾಂ ಮಾಯಯಾ ಸಂವೃತಸ್ತದಾ ॥ ೧೨ ॥

ಕೃತಾರ್ಥಮಾಗತಂ ಜ್ಞಾತ್ವಾ ಕಾವ್ಯಂ ಸರ್ವೇ ದಿತೇಃ ಸುತಾಃ ।
ಅಭಿಜಗ್ಮುರ್ಗೃಹಂ ತಸ್ಯ ಮುದಿತಾಸ್ತಂ ದಿದೃಕ್ಷವಃ ॥ ೧೩ ॥

ಗತಾ ಯದಾ ನ ಪಶ್ಯಂತಿ ಜಯಂತ್ಯಾ ಸಂವೃತಂ ಗುರುಮ್ ।
ಲಕ್ಷಣಂ ತಸ್ಯ ತದ್ಬುದ್ಧ್ವಾ ಪ್ರತಿಜಗ್ಮುರ್ಯಥಾಗತಮ್ ॥ ೧೪ ॥

---

೧೦. ಇಂದ್ರನೀಲಮಣಿಯಂತೆ ರಾಜಿಸುವ ಕಾಂತಿಯುಳ್ಳವಳೆ! ಸುಂದರವಾದ ನಿತಂಬಬಿಂಬವುಳ್ಳವಳೆ! ರಾಜಿಸುವ ನೇತ್ರವುಳ್ಳವಳೆ! ಮತ್ತು ಮಧುರ ಭಾಷಣ ಶೀಲಸಂಪನ್ನಳೆ! ದೇವಿಯೆ! ನೀನು ನನ್ನಿಂದ ನಿನ್ನ ಇಷ್ಟವಾದ ಈ ಕಾಮವನ್ನು ಪ್ರಾರ್ಥಿಸು.

೧೧. ಮದ್ದಾನೆಯಂತೆ ಗಮನವುಳ್ಳ ಜಯಂತಿಯೆ! ನಿನ್ನ ಇಷ್ಟಕಾಮವು ಹಾಗೆಯೇ ನೆರವೇರಲಿ, ನಾವಿಬ್ಬರು ನಮ್ಮ ಮನೆಗೆ ಹೋಗೋಣ. ಎಂದು ಹೇಳಿ ಪ್ರಭುವಾದ ಶುಕ್ರದೇವನು ಜಯಂತಿದೇವಿಯೊಡನೆ ತನ್ನ ಗೃಹಕ್ಕೆ ಬಂದನು.

೧೨. ಆಗ ಆ ಭಾರ್ಗವ ಮುನಿಯು ಮಾಯೆಯಿಂದ ಆವರಿಸಲ್ಪಟ್ಟವನಾಗಿ ಸಮಸ್ತ ಭೂತಗಳಿಗೆ ಅದೃಶ್ಯನಾಗಿ ಆ ಜಯಂತೀದೇವಿಯೊಡನೆ ಹತ್ತು ವರ್ಷಗಳ ವರೆಗೆ ವಾಸಮಾಡಿದನು.

೧೩. ಆಗ ದಿತಿದೇವಿಯ ಪುತ್ರರಾದ ಸಮಸ್ತ ಅಸುರರು ಶುಕ್ರಾಚಾರ್ಯನು ಕೃತಕೃತ್ಯನಾಗಿ ಹಿಂದಿರುಗಿ ಬಂದಿರುವುದನ್ನು ತಿಳಿದು ಸಂತೋಷಗೊಂಡವರಾಗಿ ಅವನನ್ನು ಸಂದರ್ಶಿಸಲು ಇಷ್ಟವುಳ್ಳವರಾಗಿ ಶುಕ್ರ ಗುರುವಿನ ಗೃಹಕ್ಕೆ ತೆರಳಿದರು.

೧೪. ಅಸುರರು ಜಯಂತೀದೇವಿಯೊಡನೆ ರಹಸ್ಯದಲ್ಲಿ ವಾಸಮಾಡಿದ್ದ ಗುರುವನ್ನು ಯಾವಾಗ ಕಾಣಲಿಲ್ಲವೋ ಆಗ ಅವರು ಶುಕ್ರ ಗುರುವಿನ ದರ್ಶನವು ದೊರಕದಿರುವ ಲಕ್ಷಣವನ್ನು ತಿಳಿದು ಬಂದಿರುವ ಮಾರ್ಗದಿಂದ ಹಿಂದಕ್ಕೆ ತೆರಳಿದರು.

ಬೃಹಸ್ಪತಿಸ್ತು ಸಂರುದ್ಧಂ ಜ್ಞಾತ್ವಾ ಕಾವ್ಯಂ ವರೇಣ ಹ ।
ಪ್ರೀತ್ಯರ್ಥೇ ದಶವರ್ಷಾಣಿ ಜಯಂತ್ಯಾ ಹಿತಕಾಮ್ಯಯಾ ॥ ೧೫ ॥

ಬುದ್ಧ್ವಾ ತದಂತರಂ ಸೋಽಥ ದೇವಾನಾಂ ಮಂತ್ರಚೋದಿತಃ ।
ಕಾವ್ಯಸ್ಯ ರೂಪಮಾಸ್ಥಾಯ ಸೋಽಸುರಾನ್ ಸಮಭಾಷತ ॥ ೧೬ ॥

ತತಃ ಸೋಽಭ್ಯಾಗತಾನ್ ದೃಷ್ಟ್ವಾ ಬೃಹಸ್ಪತಿರುವಾಚ ತಾನ್ ।
ಸ್ವಾಗತಂ ಮಮ ಯಾಜ್ಯಾನಾಂ ಸಂಪ್ರಾಪ್ತೋಽಸ್ಮಿ ಹಿತಾಯ ಚ ॥ ೧೭ ॥

ಅಹಂ ವೋಽಧ್ಯಾಪಯಿಷ್ಯಾಮಿ ಪ್ರಾಪ್ತಾ ವಿದ್ಯಾ ಮಯಾ ಹಿ ಯಾಃ ।
ತತಸ್ತೇ ಹೃಷ್ಟಮನಸೋ ವಿದ್ಯಾರ್ಥಮುಪಪೇದಿರೇ ॥ ೧೮ ॥

ಪೂರ್ಣೇ ಕಾವ್ಯಸ್ತದಾ ತಸ್ಮಿನ್ ಸಮಯೇ ದಶವಾರ್ಷಿಕೇ ।
ಸಮಯಾಂತೇ ದೇವಯಾನೀ ಸದ್ಯೋಜಾತಮತಿಸ್ತಥಾ ॥ ೧೯ ॥

---

೧೫. ಆಗ ಬೃಹಸ್ಪತಿಯು ಹಿತವನ್ನು ಬಯಸುತ್ತಿರುವ ಜಯಂತೀದೇವಿಯಿಂದ ಪ್ರೇಮನಿಮಿತ್ತದಿಂದ ಹತ್ತು ವರ್ಷಗಳವರೆಗೆ ವರಲಾಭವನ್ನು ನೆಪಮಾಡಿ ಶುಕ್ರಾಚಾರ್ಯನು ಬಂಧಿತನಾಗಿರುವುದನ್ನು ತಿಳಿದನು.

೧೬. ಆ ಬೃಹಸ್ಪತಿಯು ದೇವತೆಗಳೊಡನೆ ನಡೆಯಿಸಿದ ಮಂತ್ರಾಲೋಚನೆಯಂತೆ ಪ್ರೇರಿತನಾಗಿ ಆ ಅಂತರವನ್ನು ತಿಳಿದು ತಾನು ಶುಕ್ರಾಚಾರ್ಯನ ರೂಪವನ್ನು ಧರಿಸಿಕೊಂಡು ರಾಕ್ಷಸರೊಡನೆ ಈ ರೀತಿಯಾಗಿ ಸಂಭಾಷಣ ಮಾಡಿದನು.

೧೭. ತರುವಾಯ ಆ ಬೃಹಸ್ಪತಿಯು ಸಂಭಾಷಣಕ್ಕೆ ಬಂದಿರುವ ಅಸುರರನು ಕಂಡು ಮೊದಲು ಈ ರೀತಿಯಾಗಿ ಹೇಳಿದನು, ನನ್ನ ಯಾಜ್ಯಶಿಷ್ಯರಾದ ನಿಮಗೆಲ್ಲ ಸುಖಾಗಮನವೆ? ನಿಮ್ಮ ಹಿತಕ್ಕೋಸ್ಕರ ಇಲ್ಲಿಗೆ ಬಂದಿರುವೆನು.

೧೮. ನನ್ನಿಂದ ಯಾವ ಉತ್ತಮ ವಿದ್ಯೆಗಳು ಹೊಂದಲ್ಪಟ್ಟಿವೆಯೋ ಆ ವಿದೆಗಳನ್ನು ನಿಮಗೆ ಉಪದೇಶಕೊಡುತ್ತೇನೆ, ಹೀಗೆಂದು ಶುಕ್ರ ಗುರುವು ಹೇಳುತ್ತಿರಲು ಆ ಶಿಷ್ಯರು ಸಂತೋಷಗೊಂಡ ಮಾನಸವುಳ್ಳವರಾಗಿ ವಿದ್ಯಾರ್ಜನೆಗೋಸ್ಕರ ಗುರು ಸಮೀಪಕ್ಕೆ ಬಂದರು.

೧೯. ಆಗ ಹತ್ತು ಸಂವತ್ಸರಗಳ ಸಮಯಾವಧಿಯು ಪೂರ್ತಿಯಾಗಿ ಮುಗಿಯಲು ಅಸುರ ಗುರುವಾದ ಶುಕ್ರಾಚಾರ್ಯನು ವರವಾಗಿ ಕೊಟ್ಟ ಸಮಯವು ಕಳೆದು ಆಗ ಕರ್ತವ್ಯದಲ್ಲಿ ಕೂಡಲೆ ವಿವೇಕವುಳ್ಳವನಾದನು.

ಬುದ್ಧಿಂ ಚಕ್ರೇ ತತಶ್ಚಾಪಿ ಯಾಜ್ಯಾನಾಂ ಪ್ರತ್ಯವೇಕ್ಷಣೇ ।
ಶುಕ್ರ ಉವಾಚ :—
ದೇವಿ ಗಚ್ಛಾಮ್ಯಹಂ ದ್ರಷ್ಟುಂ ಮಮ ಯಾಜ್ಯಾನ್ ಶುಚಿಸ್ಮಿತೇ॥ ೨೦ ॥

ವಿಭ್ರಾಂತಪ್ರೇಕ್ಷಿತೇ ಸಾಧ್ವಿ ತ್ರಿವರ್ಣಾಯತಲೋಚನೇ ।
ಏವಮುಕ್ತಾಬ್ರವೀದ್ದೇವೀ ಭಜ ಭಕ್ತಾಂ ಮಹಾವ್ರತ ।
ಏಷ ಬ್ರಹ್ಮನ್ ಸತಾಂ ಧರ್ಮೋ ನ ಧರ್ಮಂ ಲೋಪಯಾಮಿ ತೇ
॥ ೨೧ ॥
ಸೂತ ಉವಾಚ :—
ತತೋ ಗತ್ವಾಽಸುರಾನ್ ದೃಷ್ಟ್ವಾ ದೇವಾಚಾರ್ಯೇಣ ಧೀಮತಾ ॥ ೨೨ ॥
ವಂಚಿತಾನ್ ಕಾವ್ಯರೂಪೇಣ ವಚಸಾ ಪುನರಬ್ರವೀತ್ ।
ಕಾವ್ಯಂ ಮಾಮನುಜಾನೀಧ್ವಮೇಷ ಹ್ಯಾಂಗಿರಸೋ ಮುನಿಃ ॥ ೨೩ ॥

---

೨೦. ತರುವಾಯ ತನ್ನ ಯಾಜ್ಯ ಶಿಷ್ಯರನ್ನು ನೋಡಿ ಅನುಗ್ರಹಮಾಡಬೇಕೆಂಬ ಸಂಕಲ್ಪವನ್ನು ಸ್ಥಿರಮಾಡಿಕೊಂಡನು, ಆಗ ಶುಕ್ರಾಚಾರ್ಯನು ಇಂತೆಂದನು :—ಶುದ್ಧವಾದ ಮಂದಹಾಸವುಳ್ಳ ಜಯಂತೀದೇವಿಯೆ! ಈಗ ನನ್ನ ಶಿಷ್ಯರನ್ನು ನೋಡಲು ನಾನು ಹೊರಡುತ್ತೇನೆ.

೨೧. ಚಂಚಲವಾದ ದೃಷ್ಟಿಯುಳ್ಳವಳೆ! ಪತಿವ್ರತೆಯೆ! ಮತ್ತು ಶುಕ್ಲ ನೀಲ-ರಕ್ತವೆಂಬ ತ್ರಿರಂಗ ರಂಜಿತವಾದ ವಿಶಾಲಲೋಚನವುಳ್ಳ ಪ್ರಿಯೆಯೆ! ನಾನೀಗ ಹೋಗುವುದನ್ನು ಸಮ್ಮತಿಸು, ಈ ರೀತಿಯಾಗಿ ಹೇಳಲ್ಪಟ್ಟ ಜಯಂತಿದೇವಿಯು ಮಹಾವ್ರತಶೀಲನೆ! ನಿನ್ನ ಭಕ್ತರನ್ನು ನೀನು ಕರುಣಿಸು, ಬ್ರಹ್ಮಜ್ಞಾನಿಯೆ! ಇದು ಸತ್ಪುರುಷರ ಕರ್ತವ್ಯ ಧರ್ಮವು. ನಾನು ನಿನ್ನ ಧರ್ಮಕ್ಕೆ ಲೋಪವನ್ನು ತರಲಾರೆನು.

೨೨. ಸೂತ ಮುನಿಯು ಇಂತೆಂದನು :—ಜಯಂತೀದೇವಿಯು ಹೀಗೆ ಹೇಳಿದ ತರುವಾಯ ಶುಕ್ರಾಚಾರ್ಯನು ದೇವಗುರುವಾದ ಬೃಹಸ್ಪತಿಯಿಂದ ಉಪದೇಶವನ್ನು ಹೊಂದುತ್ತಿದ್ದ ಅಸುರರನ್ನು ನೋಡಿದನು.

೨೩. ಆಗ ತನ್ನ ರೂಪವನ್ನು ಧರಿಸಿ ಬಂದಿರುವ ಬೃಹಸ್ಪತಿಯ ವಚನದಿಂದ ಮೋಸಹೊಂದಿದ ಅಸುರರನ್ನು ಕುರಿತು ಮತ್ತೆ ಹೇಳಿದನು. ಅಸುರರೆ! ನನ್ನನ್ನು ನಿಮ್ಮ ಗುರುವಾದ ಶುಕ್ರನೆಂದು ಅರಿಯಿರಿ. ಇವನು ಅಂಗಿರೋಮುನಿಯ ಪುತ್ರನಾದ ಬೃಹಸ್ಪತಿಯಾಗಿರುವನು.

ವಂಚಿತಾ ಬತ ಯೂಯಂ ವೈ ಮಯಿ ಸಕ್ತೇ ತು ದಾನವಾಃ ।
ಶ್ರುತ್ವಾ ತಥಾ ಬ್ರುವಾಣಂ ತಂ ಸಂಭ್ರಾಂತಾ ದಿತಿಜಾಸ್ತತಃ ॥ ೨೪ ॥

ಸಂಪ್ರೇಕ್ಷಂತಾವುಭೌ ತತ್ರ ಸ್ಥಿರಾಸೀನೌ ಶುಚಿಸ್ಮಿತೌ ।
ಸಂಪ್ರಮೂಢಾಃ ಸ್ಥಿತಾಃ ಸರ್ವೇ ಪ್ರಾಪದ್ಯಂತ ನ ಕಿಂಚನ ॥ ೨೫ ॥

ತತಸ್ತೇಷು ಪ್ರಮೂಢೇಷು ಕಾವ್ಯಸ್ತಾನ್ ಪುನರಬ್ರವೀತ್ ।
ಆಚಾರ್ಯೋ ಯೋ ಹ್ಯಯಂ ಕಾವ್ಯೋ ದೇವಾಚಾರ್ಯೋಽಯಮಂಗಿರಾಃ ॥ ೨೬ ॥

ಅನುಗಚ್ಛತ ಮಾಂ ಸರ್ವೇ ತ್ಯಜತೈನಂ ಬೃಹಸ್ಪತಿಮ್ ।
ಏವಮುಕ್ತೇ ತು ತೇ ಸರ್ವೇ ತಾವುಭೌ ಸಮವೇಕ್ಷ್ಯ ಚ ॥ ೨೭ ॥

ತದಾಸುರಾ ವಿಶೇಷಂ ತು ನ ವ್ಯಜಾನಂಸ್ತಯೋರ್ದ್ವಯೋಃ ।
ಬೃಹಸ್ಪತಿರುವಾಚೈನಾನಸಂಭ್ರಾಂತೋಽಯಮಂಗಿರಾಃ ॥ ೨೮ ॥

---

೨೪. ದಾನವರೆ! ನಾನು ನನ್ನ ಪ್ರಬಲವಾದ ಉದ್ಯಮದಲ್ಲಿರಲು ಅಸುರರಾದ ನೀವೆಲ್ಲರೂ ಇವನಿಂದ ವಂಚಿಸಲ್ಪಟ್ಟಿರುವಿರಿ. ಹೀಗೆ ಶುಕ್ರಾಚಾರ್ಯನು ಹೇಳಿದ ವಚನವನ್ನು ಕೇಳಿ ದೈತ್ಯರೆಲ್ಲರೂ ಗಾಬರಿಗೊಂಡವರಾದರು.

೨೫. ಆಗ ಗುರು-ಶುಕ್ರರಿಬ್ಬರೂ ಚಲಿಸದೆ ಸ್ಥಿರವಾದ ಆಸನದಲ್ಲಿ ಕುಳಿತುಕೊಂಡು ಶುಭವಾಗಿ ಪ್ರಕಾಶಿಸುವ ಮಂದಹಾಸವುಳ್ಳವರಾಗಿ ಸಂದರ್ಭವನ್ನು ನೋಡುತ್ತಲಿದ್ದರು, ಆ ಎಲ್ಲ ಅಸುರರು ಇದನ್ನು ನೋಡಿ ಮೂಢರಾಗಿ ಏನನ್ನೂ ತಿಳಿಯಲಾರದೆ ಹೋದರು.

೨೬. ತರುವಾಯ ಅಸುರರು ಮೂಢರಾಗಿರುವ ಸಮಯದಲ್ಲಿ ಅವರನ್ನು ಎಚ್ಚರಿಸಲು ಶುಕ್ರಾಚಾರ್ಯನು ಮತ್ತೆ ಅವರನ್ನು ಕುರಿತು ಬೋಧಿಸಿದನು. ನಿಮಗೆ ನಿಜವಾಗಿ ಗುರುವಾಗಿದ್ದ ಶುಕ್ರಾಚಾರ್ಯನು ನಾನು; ದೇವಗುರುವಾದ ಬೃಹಸ್ಪತಿಯು ಇವನು.

೨೭. ನೀವೆಲ್ಲರೂ ನನ್ನನ್ನು ಅನುಸರಿಸಿರಿ; ಈ ಬೃಹಸ್ಪತಿಯನ್ನು ತ್ಯಜಿಸಿರಿ. ಶುಕ್ರನಿಂದ ಈ ರೀತಿಯಾಗಿ ಹೇಳಲ್ಪಡುತ್ತಿರಲು ಮತ್ತೆ ಆ ರಾಕ್ಷಸರು ಅವರಿಬ್ಬರನ್ನು ಚನ್ನಾಗಿ ನೋಡಿದರು.

೨೮. ಆಗ ಆ ಅಸುರರು ಗುರು-ಶುಕ್ರರಿಬ್ಬರಲ್ಲಿ ನಿಜರೂಪವನ್ನು ಕಂಡು ಹಿಡಿಯಲು ಯಾವುದೊಂದು ತಾರತಮ್ಯವನ್ನೂ ತಿಳಿಯಲಿಲ್ಲ. ಆಗ ಅಂಗಿರೋಮುನಿ ಪುತ್ರನಾದ ಬೃಹಸ್ಪತಿಯು ಗಾಬರಿಗೊಳ್ಳದೆ ಸಮಾಧಾನ ಚಿತ್ತದಿಂದ ಅಸುರರಿಗೆ ಹೇಳಿದನು.

ಕಾವ್ಯೋಽಹಂ ವೋ ಗುರುರ್ದೈತ್ಯಾ ಮದ್ರೂಪೋಽಯಂ ಬೃಹಸ್ಪತಿಃ ।
ಸಮ್ಮೋಹಯತಿ ರೂಪೇಣ ಮಾಮಕೇನೈಷ ವೋಽಸುರಾಃ ॥ ೨೯ ॥

ಶ್ರುತ್ವಾ ತಸ್ಯ ವಚಸ್ತೇ ವೈ ಸಮ್ಮಂತ್ರ್ಯಾಥ ವಚೋಽಬ್ರುವನ್ ।
ಅಯಂ ನೋ ದಶವರ್ಷಾಣಿ ಸತತಂ ಶಾಸ್ತಿ ವೈ ಪ್ರಭುಃ ॥ ೩೦ ॥

ಏಷ ವೈ ಗುರುರಸ್ಮಾಕಮಂತರೇಪ್ಸುರಯಂ ದ್ವಿಜಃ ।
ತತಸ್ತೇ ದಾನವಾಃ ಸರ್ವೇ ಪ್ರಣಿಪತ್ಯಾಭಿವಾದ್ಯ ಚ ॥ ೩೧ ॥

ವಚನಂ ಜಗೃಹುಸ್ತಸ್ಯ ವಿದ್ಯಾಭ್ಯಾಸೇನ ಮೋಹಿತಾಃ ।
ಊಚುಸ್ತಮಸುರಾಃ ಸರ್ವೇ ಕ್ರುದ್ಧಾಃ ಸಂರಕ್ತಲೋಚನಾಃ ॥ ೩೨ ॥

ಅಯಂ ಗುರುರ್ಹಿತೋಽಸ್ಮಾಕಂ ಗಚ್ಛ ತ್ವಂ ನಾಸಿ ನೋ ಗುರುಃ ।
ಭಾರ್ಗವೋಽಂಗಿರಸೋ ವಾಯಂ ಭವತ್ವೇಷೈವ ನೋ ಗುರುಃ ॥ ೩೩ ॥

---

೨೯. ದೈತ್ಯರೆ! ನಾನು ನಿಮ್ಮ ಗುರುವಾದ ಶುಕ್ರಾಚಾರ್ಯನು ಅಸುರರೆ! ನನ್ನ ರೂಪವನ್ನು ಧರಿಸಿ ಬಂದಿರುವ ಈ ಬೃಹಸ್ಪತಿಯು ನನ್ನ ರೂಪದಿಂದ ನಿಮ್ಮೆಲ್ಲರನ್ನು ಮೋಹಪಡಿಸಿ ವಂಚಿಸುತ್ತಿರುವನು.

೩೦. ಬೃಹಸ್ಪತಿಯ ಈ ವಚನವನ್ನು ಕೇಳಿ ಅಸುರರು ತಮ್ಮಲ್ಲಿ ಪರಸ್ಪರವಾಗಿ ಮಂತ್ರಾಲೋಚನೆಯನ್ನು ಮಾಡಿ ಹೀಗೆಂದು ಹೇಳಿದರು:—ಪ್ರಭುವಾದ ಈ ನಮ್ಮ ಗುರುವು ಹತ್ತು ವರ್ಷಗಳಿಂದ ಸಂತತವಾಗಿ ನಮಗೆ ಉಪದೇಶಕೊಡುತ್ತಿರುವನು.

೩೧. ಇವನು ನಮ್ಮೆಲ್ಲರಿಗೆ ನಿಜವಾದ ಗುರುವಾಗಿರುವನು. ಈ ದ್ವಿಜನು ನಮ್ಮಲ್ಲಿ ರಂಧ್ರಾನ್ವೇಷಿಯಾಗಿ ಬಂದಿರುವನು. ಹೀಗೆಂದು ತೀರ್ಮಾನಿಸಿ ಆ ಎಲ್ಲ ದಾನವರು ಬೃಹಸ್ಪತಿಯನ್ನು ಅಭಿವಾದನಪೂರ್ವಕವಾಗಿ ನಮಸ್ಕರಿಸಿದನು.

೩೨. ಮತ್ತು ಅವನು ಉಪದೇಶಿಸಿದ ವಿದ್ಯಾಭ್ಯಾಸದಿಂದ ಮೋಹಗೊಂಡವರಾಗಿ ಅವನ ವಚನವನ್ನು ನಂಬಿದರು. ಆದರಿಂದ ಕೋಪದಿಂದ ಕೆಂಪಾದ ನೇತ್ರವುಳ್ಳವರಾಗಿ ಎಲ್ಲ ಅಸುರರೂ ಸೇರಿ ಶುಕ್ರಾಚಾರ್ಯನನ್ನು ಕುರಿತು ಈ ರೀತಿಯಾಗಿ ಹೇಳಿದರು.

೩೩. ನಮಗೆ ಈ ಗುರುವು ಹಿತೈಷಿಯಾಗಿರುವನು, ನೀನು ಹೊರಡು, ನೀನು ನಮಗೆ ಗುರುವಲ್ಲ, ಇವನು ಶುಕ್ರಾಚಾರ್ಯನಾದರೂ ಆಗಲಿ; ಬೃಹಸ್ಪತಿಯಾದರೂ ಆಗಲಿ; ಇವನೇ ನಮ್ಮ ಗುರುವು.

ಸ್ಥಿತಾ ವಯಂ ನಿದೇಶೇಽಸ್ಯ ಗಚ್ಛ ತ್ವಂ ಸಾಧು ಮಾ ಚಿರಮ್ ।
ಏವಮುಕ್ತ್ವಾ ಸುರಾಃ ಸರ್ವೇ ಪ್ರಾಪದ್ಯಂತ ಬೃಹಸ್ಪತಿಮ್ ॥ ೩೪ ॥

ಯದಾ ನ ಪ್ರತಿಪದ್ಯಂತೇ ತೇನೋಕ್ತಂ ತನ್ಮಹದ್ಧಿತಮ್ ।
ಚುಕೋಪ ಭಾರ್ಗವಸ್ತೇಷಾಮವಲೇಪೇನ ವೈ ತದಾ ॥ ೩೫ ॥

ಬೋಧಿತಾಪಿ ಮಯಾ ಯುಸ್ಮಾನ್ನ ಮಾಂ ಭಜಥ ದಾನವಾಃ ।
ತಸ್ಮಾತ್ ಪ್ರಣಷ್ಟಸಂಜ್ಞಾ ವೈ ಪರಾಭವಮವಾಪ್ಸ್ಯಥ ॥ ೩೬ ॥

ಇತಿ ವ್ಯಾಹೃತ್ಯ ತಾನ್ ಕಾವ್ಯೋ ಜಗಾಮಾಥ ಯಥಾಗತಮ್ ।
ಶಪ್ತಾಂಸ್ತಾನಸುರಾಞ್ಜ್ಞಾತ್ವಾ ಕಾವ್ಯೇ ನ ತು ಬೃಹಸ್ಪತಿಃ ॥ ೩೭ ॥

ಕೃತಾರ್ಥಃ ಸ ತದಾ ಹೃಷ್ಟಃ ಸ್ವರೂಪಂ ಪ್ರತ್ಯಪದ್ಯತ ।
ಬುದ್ಧ್ವಾಸುರಾಂಸ್ತದಾ ಭ್ರಷ್ಟಾನ್ ಕೃತಾರ್ಥೋಽಂತರ್ಧಿಮಾಗಮತ್
॥ ೩೮ ॥

---

೩೪. ನಾವು ಇವನ ಆಜ್ಞಾನುಸಾರವಾಗಿ ಇರುವೆವು. ನೀನು ಬೇಗ ಇಲ್ಲಿಂದ ಹೊರಡುವುದು ಉತ್ತಮವು. ವಿಳಂಬಮಾಡಬೇಡ, ಹೀಗೆಂದು ಎಲ್ಲ ರಾಕ್ಷಸರು ಹೇಳಿ ಶುಕ್ರಾಚಾರ್ಯನನ್ನು ತ್ಯಜಿಸಿ ಬೃಹಸ್ಪತಿಗೆ ಶರಣಾಗತರಾದರು.

೩೫. ಆಗ ಭಾರ್ಗವನಿಂದ ಹೇಳಲ್ಪಟ್ಟ ಮಹತ್ತರವಾದ ತಮ್ಮ ಹಿತವನ್ನು ಅಸುರರು ತಿಳಿಯದಿರಲಾಗಿ ಭಾರ್ಗವಾಚಾರ್ಯನು ಆಗ ಆ ಶಿಷ್ಯಜನರು ತೋರಿಸಿರುವ ಅಹಂಕಾರಮದದಿಂದ ಕೋಪಗೊಂಡನು.

೩೬. ದಾನವರೆ! ನನ್ನಿಂದ ಬೋಧಿಸಲ್ಪಟ್ಟಿದ್ದಾಗ್ಯೂ ಕೂಡ ನನ್ನನ್ನು ನೀವು ಸೇವಿಸದೇ ಅನಾದರ ತೋರಿಸಿದ ಕಾರಣದಿಂದ ಪ್ರಜ್ಞೆಯ ವಿಪರ್ಯಯವನ್ನು ಹೊಂದಿದವರಾಗಿ ಶತ್ರುಗಳಿಂದ ಪರಾಭವವನ್ನು ಹೊಂದುತ್ತೀರಿ.

೩೭. ಶುಕ್ರಾಚಾರ್ಯನು ಈ ರೀತಿಯಾಗಿ ಅಸುರರನ್ನು ಶಪಿಸಿ ತಾನು ಬಂದಂತೆ ಹಿಂಪಕ್ಕೆ ಹೊರಟುಹೋದನು. ಆಗ ಬೃಹಸ್ಪತಿಯು ಶುಕ್ರಾಚಾರ್ಯನಿಂದ ಅಸುರರು ಶಪಿಸಲ್ಪಟ್ಟಿರುವುದನ್ನು ತಿಳಿದನು.

೩೮. ಮತ್ತು ಆಗ ಕೃತಕೃತ್ಯತೆಯನ್ನು ಹೊಂದಿದ ಆ ಬೃಹಸ್ಪತಿಯು ತನ್ನ ನಿಜರೂಪವನ್ನು ಪರಿಗ್ರಹಿಸಿದನು, ಹಾಗು ಅಸುರರು ಶಾಪಪ್ರಭಾವದಿಂದ ಭ್ರಷ್ಟರಾದುದನ್ನು ತಿಳಿದು ಅಲ್ಲಿಂದ ಅಂತರ್ಧಾನವನ್ನು ಹೊಂದಿದನು.

**ತತಃ ಪ್ರಣಷ್ಟೇ ತಸ್ಮಿಂಸ್ತೇ ವಿಭ್ರಾಂತಾ ದಾನವಾಸ್ತದಾ ।**
**ಅಹೋ ಧಿಗ್ವಂಚಿತಾಃ ಸ್ನೇಹಾತ್ಪರಸ್ಪರಮಥಾಬ್ರುವನ್ ॥ ೩೯ ॥**

**ಧರ್ಮತೋ ವಿಮುಖಾಶ್ಚೈವ ಕಾರಿತಾ ವೇಧಸಾ ವಯಮ್ ।**
**ದಗ್ಧಾಶ್ಚೈವೋಪಧಾಯೋಗಾತ್ ಸ್ವೇ ಸ್ವೇ ಕಾರ್ಯೇ ತು ಮಾಯಯಾ ॥ ೪೦ ॥**

**ತತೋಽಸುರಾಃ ಪರಿತ್ರಸ್ತಾ ದೇವೇಭ್ಯಸ್ತ್ವರಿತಾ ಯಯುಃ ।**
**ಪ್ರಹ್ಲಾದಮಗ್ರತಃ ಕೃತ್ವಾ ಕಾವ್ಯಸ್ಯಾನುಗಮಂ ಪುನಃ ॥ ೪೧ ॥**

**ತತಃ ಕಾವ್ಯಂ ಸಮಾಸಾದ್ಯ ಹ್ಯಭಿತಸ್ಥುರವಾಙ್ಮುಖಾಃ ।**
**ತಾನಾಗತಾನ್ ಪುನರ್ದೃಷ್ಟ್ವಾ ಕಾವ್ಯೋ ಯಾಜ್ಯಾನುವಾಚ ಹ ॥ ೪೨ ॥**

**ಮಯಾ ಸಂಬೋಧಿತಾಃ ಕಾಲೇ ಯತೋ ಮಾಂ ನಾಭ್ಯನಂದಥ ।**
**ತತಸ್ತೇನಾವಲೇಪೇನ ಗತಾ ಯೂಯಂ ಪರಾಭವಮ್ ॥ ೪೩ ॥**

---

೩೯. ತರುವಾಯ ಬೃಹಸ್ಪತಿಯು ಅಲ್ಲಿಂದ ಮಾಯವಾಗಲು ಆಗ ಆ ದಾನವರು ಪ್ರೀತಿ-ವಿಶ್ವಾಸಗಳಿಂದ ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು. ನಾವು ವಂಚಿಸಲ್ಪಟ್ಟಿರುವೆವು. ಅಯ್ಯೋ! ಧಿಕ್ಕಾರವು!

೪೦. ನಾವು ಸೃಷ್ಟಿಕರ್ತನಿಂದ ಧರ್ಮಾಚರಣೆಯಿಂದ ಶೂನ್ಯರಾಗಿ ಮಾಡಲ್ಪಟ್ಟಿರುವೆವು. ಮತ್ತು ನಾವೀಗ ನಮ್ಮ ಕರ್ತವ್ಯದಲ್ಲಿಯೂ ಮಾಯೆಯಿಂದ ತಿಳಿಯಲಾಗದ ಒಂದು ಕೃತ್ರಿಮಸನ್ನಿವೇಶಕ್ಕೆ ಬಿದ್ದು ದಗ್ಧರಾಗಿರುವೆವು.

೪೧. ತರುವಾಯ ಎಲ್ಲ ಅಸುರರು ದೇವತೆಗಳಿಂದ ಭಯಪಟ್ಟವರಾಗಿ ಪ್ರಹ್ಲಾದನನ್ನು ನಾಯಕನನ್ನಾಗಿ ಮುಂದಿರಿಸಿಕೊಂಡು ಶುಕ್ರಾಚಾರ್ಯನನ್ನು ಮತ್ತೆ ಅನುಸರಿಸಲು ತ್ವರೆಯಿಂದ ಪ್ರಯಾಣಮಾಡಿದರು.

೪೨. ಆ ಮೇಲೆ ದಾನವರು ಶುಕ್ರಾಚಾರ್ಯನ ಸನ್ನಿಧಿಯನ್ನು ಹೊಂದಿ ನಮ್ರವಾದ ಮುಖವುಳ್ಳವರಾಗಿ ನಿಂತರು. ಆಗ ಶುಕ್ರಾಚಾರ್ಯನು ಮತ್ತೆ ತನ್ನ ಬಳಿಗೆ ಬಂದ ತನ್ನ ಶಿಷ್ಯರಾದ ಅಸುರರನ್ನು ಕಂಡು ಹೀಗೆ ಹೇಳಿದನು.

೪೩. ಸಕಾಲದಲ್ಲಿ ನನ್ನಿಂದ ಬೋಧಿಸಲ್ಪಟ್ಟಿದ್ದರೂ ನೀವು ನನ್ನನ್ನು ಯಾವ ಕಾರಣದಿಂದ ಅಭಿನಂದಿಸಲಿಲ್ಲವೋ ಆ ಕಾರಣದಿಂದ ನಿಮ್ಮ ಅಹಂಕಾರ ನಿಮಿತ್ತದಿಂದ ನೀವು ಪರಾಭವವನ್ನು ಹೊಂದಿರುತ್ತೀರಿ.

ಪ್ರಹ್ಲಾದಸ್ತಮಥೋವಾಚ ಮಾ ನಸ್ತ್ವಂ ತ್ಯಜ ಭಾರ್ಗವ ।
ಸ್ವಾನ್ ಯಾಜ್ಯಾನ್ ಭಜಮಾನಾಂಶ್ಚ ಭಕ್ತಾಂಶ್ಚೈವ ವಿಶೇಷತಃ ॥ ೪೪ ॥

ತ್ವಯ್ಯದೃಷ್ಟೇ ವಯಂ ತೇನ ದೇವಾಚಾರ್ಯೇಣ ಮೋಹಿತಾಃ ।
ಭಕ್ತಾನರ್ಹಸಿ ನಸ್ತ್ರಾತುಂ ಜ್ಞಾತ್ವಾ ದೀರ್ಘೇಣ ಚಕ್ಷುಷಾ ॥ ೪೫ ॥

ಯದಿನಸ್ತ್ವಂ ನ ಕುರುಷೇ ಪ್ರಸಾದಂ ಭೃಗುನಂದನ ।
ಅಪಧ್ಯಾತಾಸ್ತ್ವಯಾ ಹ್ಯದ್ಯ ಪ್ರವೇಕ್ಷ್ಯಾಮೋ ರಸಾತಲಮ್ ॥ ೪೬ ॥

**ಸೂತ ಉವಾಚ :—**

ಜ್ಞಾತ್ವಾ ಕಾವ್ಯೋ ಯಥಾತತ್ತ್ವಂ ಕಾರುಣ್ಯೇನ ಮಹೀಯಸಾ ।
ಏವಂ ಶುಕ್ರೋಽನುನೀತಸ್ಸಂಸ್ತತಃ ಕೋಪಂ ನ್ಯವರ್ತಯತ್ ॥ ೪೭ ॥

ಉವಾಚೇದಂ ನ ಭೇತವ್ಯಂ ಗಂತವ್ಯಂ ನ ರಸಾತಲಮ್ ।
ಅವಶ್ಯಂಭಾವೀ ಹ್ಯರ್ಥೋಽಯಂ ಪ್ರಾಪ್ತೋ ವೋ ಮಯಿ ಜಾಗ್ರತಿ ॥ ೪೮ ॥

---

೪೪. ಅನಂತರದಲ್ಲಿ ಪ್ರಹ್ಲಾದನು ಗುರುವನ್ನು ಕುರಿತು ಹೀಗೆ ವಿಜ್ಞಾಪಿಸಿದನು. ಭಾರ್ಗವ ಗುರುವೆ! ನಿನ್ನಲ್ಲಿ ವಿಶೇಷವಾದ ಭಕ್ತಿಯುಳ್ಳವರಾಗಿ ನಿನ್ನನ್ನು ಸೇವಿಸುತ್ತಿರುವ, ಶಿಷ್ಯರಾಗಿ ಸೇರಿರುವ ನಮ್ಮನ್ನು ಬಿಡಬೇಡ.

೪೫. ನೀನು ನಮಗೆ ಕಾಣದಿರುವ ಸಮಯವನ್ನು ನೋಡಿ ಆ ದೇವಾಚಾರ್ಯನಾದ ಬೃಹಸ್ಪತಿಯಿಂದ ನಾವು ಮೋಹಗೊಳಿಸಲ್ಪಟ್ಟೆವು. ಇದನ್ನು ನೀನು ದೀರ್ಘದೃಷ್ಟಿಯಿಂದ ತಿಳಿದು ಭಕ್ತರಾದ ನಮ್ಮನ್ನು ಪರಿತ್ರಾಣಮಾಡಲು ಅರ್ಹನಾಗಿದ್ದೀಯೆ.

೪೬. ಭೃಗುಮುನಿಪುತ್ರನಾದ ಗುರುವೆ! ನೀನೀಗ ನಮ್ಮಲ್ಲಿ ಅನುಗ್ರಹವನ್ನು ತೋರಿಸದಿರುವ ಪಕ್ಷಕ್ಕೆ ನಿನ್ನಿಂದ ಕೆಟ್ಟಭಾವನೆಯಿಂದ ತಿರಸ್ಕರಿಸಲ್ಪಟ್ಟ ನಾವು ಈಗಲೇ ಪಾತಾಳಲೋಕಕ್ಕೆ ಪ್ರವೇಶಿಸುವೆವು.

೪೭. ಸೂತಮುನಿಯು ಇಂತೆಂದನು :—ಆಗ ಶುಕ್ರಗುರುವು ಹೆಚ್ಚಾದ ಕಾರುಣ್ಯದಿಂದ ಅಸುರರ ತಾತ್ತ್ವಿಕ ವಿಷಯವನ್ನು ತಿಳಿದುಕೊಂಡನು. ಹೀಗೆ ರಾಕ್ಷಸರಿಂದ ಸಂತೈಸಲ್ಪಟ್ಟ ಶುಕ್ರಾಚಾರ್ಯನು ಅಸುರರ ಮೇಲಿನ ಕೋಪವನ್ನು ತ್ಯಜಿಸಿದನು.

೪೮. ಮತ್ತು ಈ ರೀತಿಯಾಗಿ ಹೇಳಿದನು :—ನೀವು ಈಗ ಭಯಪಡಲಾಗದು, ಮತ್ತು ರಸಾತಲಕ್ಕೆ ಹೋಗುವುದೂ ಸರಿಯಲ್ಲ, ನಾನು ಜಾಗರೂಕನಾಗಿದ್ದರೂ ಅವಶ್ಯಭವಿತವ್ಯವಾದ ಈ ಅರ್ಥವು ನಿಮಗೆ ಒದಗಿರುವುದಾಗಿದೆ.

ನ ಶಕ್ಯಮನ್ಯಥಾಕರ್ತುಂ ದಿಷ್ಟಂ ಹಿ ಬಲವತ್ತರಮ್ ।
ಸಂಜ್ಞಾ ಪ್ರಣಷ್ಟಾ ಯಾ ಚೇಯಂ ಕಾಮಂ ತಾಂ ಪ್ರತಿಲಪ್ಸ್ಯಥ ॥೪೯॥

ಪ್ರಾಪ್ತಃ ಪರ್ಯಾಯಕಾಲೋ ವ ಇತಿ ಬ್ರಹ್ಮಾಭ್ಯಭಾಷತ ।
ಮತ್ಪ್ರಸಾದಾಚ್ಚ ಯುಷ್ಮಾಭಿರ್ಭುಕ್ತಂ ತ್ರೈಲೋಕ್ಯಮೂರ್ಜಿತಮ್
॥ ೫೦ ॥

ಯುಗಾಖ್ಯಾ ದಶ ಸಂಪೂರ್ಣಾ ದೇವಾನಾಕ್ರಮ್ಯ ಮೂರ್ಧನಿ ।
ತಾವಂತಮೇವ ಕಾಲಂ ವೈ ಬ್ರಹ್ಮಾ ರಾಜ್ಯಮಭಾಷತ ॥ ೫೧ ॥

ಸಾವರ್ಣಿಕೇ ಪುನಸ್ತುಭ್ಯಂ ರಾಜ್ಯಂ ಕಿಲ ಭವಿಷ್ಯತಿ ।
ಲೋಕಾನಾಮೀಶ್ವರೋ ಭಾವೀ ಪೌತ್ರಸ್ತವ ಪುನರ್ಬಲಿಃ ॥ ೫೨ ॥

ಏವಂ ಕಾಲಮಯಂ ಪ್ರೋಕ್ತಃ ಪ್ರೋಕ್ತಸ್ತೇ ಬ್ರಹ್ಮಣಾಸ್ವಯಮ್ ।
ತಥಾಹೃತೇಷು ಲೋಕೇಷು ನ ಶೋಕೋ ನ ಕಿಲಾಭವತ್ ॥ ೫೩ ॥

---

೪೯. ವಿಶ್ವಪರಿವರ್ತನದಲ್ಲಿ ಬಲವತ್ತರವಾದ ದೈವಗತಿಯನ್ನು ಬದಲಾಯಿಸಲು ಯಾರಿಗೂ ಅಸಾಧ್ಯವು, ನಿಮಗೆ ಈಗ ಯಾವ ಸಂಜ್ಞೆಯು ವಿಪರ್ಯಯ ಹೊಂದಿ ಲುಪ್ತವಾಗಿರುವುದೊ ಅದನ್ನು ನೀವು ನಿಮ್ಮ ಇಷ್ಟದಂತೆ ಮತ್ತೆ ಹೊಂದುವಿರಿ.

೫೦. ನಿಮಗೆ ಈಗ ಪರಿವೃತ್ತಿಯ ಕಾಲವು ಪ್ರಾಪ್ತವಾಗಿರುವುದೆಂಬುದಾಗಿ ಬ್ರಹ್ಮದೇವನು ಹೇಳಿರುವನು. ಇದುವರೆಗೆ ನೀವು ನನ್ನ ಪ್ರಸಾದದಿಂದ ಊರ್ಜಿತವಾದ ತ್ರೈಲೋಕ್ಯವನ್ನು ಅನುಭವಿಸಿದಿರಿ.

೫೧. ನೀವು ದೇವತೆಗಳ ಶಿರಸ್ಸುಗಳನ್ನು ಆಕ್ರಮಿಸಿ ಹತ್ತು ಯುಗಪರಿಮಾಣದ ಕಾಲವು ಕಳೆಯಿತು. ಬ್ರಹ್ಮದೇವನು ನಿಮ್ಮ ರಾಜ್ಯದ ಆಡಳಿತಕ್ಕೆ ಅಷ್ಟುಮಾತ ಕಾಲಾವಧಿಯನ್ನು ಹೇಳಿರುವನು.

೫೨. ಮತ್ತೆ ಸಾವರ್ಣಿಕವೆಂಬ ಮನ್ವಂತರಾವಧಿಯಲ್ಲಿ ನಿಮಗೆ ರಾಜ್ಯವು ಅಧೀನವಾಗುವುದು. ಆಗ ನಿನ್ನ ಪೌತ್ರನಾಗಿ ಜನಿಸುವ ಬಲಿಚಕ್ರವರ್ತಿಯು ಲೋಕಗಳಿಗೆಲ್ಲ ಪ್ರಭುವಾಗಿ ಆಳುವನು.

೫೩. ಆ ಕಾಲದ ಅವಧಿಯಲ್ಲಿ ನಿನ್ನ ಪೌತ್ರನಾದ ಬಲೀಂದ್ರನು ರಾಜ್ಯವನ್ನಾಳುವನೆಂದು ಬ್ರಹ್ಮದೇವನಿಂದ ಸಾಕ್ಷಾತ್ತಾಗಿ ಹೇಳಲ್ಪಟ್ಟಿರುವುದು. ಆದುದರಿಂದ ಬ್ರಹ್ಮದೇವನ ಆಜ್ಞಾನುಸಾರ ಕಾಲವಶದಿಂದ ಈಗ ಲೋಕಗಳು ದೇವತೆಗಳಿಂದ ಅಪಹೃತವಾಗಿರುವುದಕ್ಕೆ ಶೋಕಿಸುವುದು ಸಮಂಜಸವಲ್ಲ.

ಯಸ್ಮಾತ್ಪ್ರವೃತ್ತಯಶ್ಚಾಸ್ಯ ನ ಕಾಮ್ಯೈರಭಿಸಂಧಿತಾಃ ।
ತಸ್ಮಾದಜೇನ ಪ್ರೀತೇನ ದತ್ತಂ ಸಾವರ್ಣಿಕೇಽಂತರೇ ॥ ೫೪ ॥

ದೇವರಾಜ್ಯಂ ಬಲೇರ್ಭಾವ್ಯಮಿತಿ ಮಾಮೀಶ್ವರೋಽಬ್ರವೀತ್ ।
ತಸ್ಮಾದದೃಶ್ಯೋ ಭೂತಾನಾಂ ಕಾಲಾಕಾಂಕ್ಷೀ ಸ ತಿಷ್ಠತಿ ॥ ೫೫ ॥

ಪ್ರೀತೇನ ಚಾಮರತ್ವಂ ವೈ ದತ್ತಂ ತುಭ್ಯಂ ಸ್ವಯಂಭುವಾ ।
ತಸ್ಮಾನ್ನಿರುತ್ಸುಕಸ್ತ್ವಂ ವೈ ಪರ್ಯಾಯಂ ಸಹಸಾಕುಲಃ ॥ ೫೬ ॥

ನ ಚ ಶಕ್ಯಂ ಮಯಾ ತುಭ್ಯಂ ಪುರಸ್ತಾದ್ವೈ ವಿಸರ್ಜಿತುಮ್ ।
ಬ್ರಹ್ಮಣಾ ಪ್ರತಿಷಿದ್ಧೋಽಸ್ಮಿ ಭವಿಷ್ಯಂ ಜಾನತಾ ಪ್ರಭೋ ॥ ೫೭ ॥

ಇಮೌ ಚ ಶಿಷ್ಯೌ ದ್ವೌ ಮಹ್ಯಂ ತುಲ್ಯಾವೇತೌ ಬೃಹಸ್ಪತೇಃ ।
ದೈವತೈಃ ಸಹ ಸಂರಬ್ಧಾನ್ ಸರ್ವಾನ್ ವೋ ಧಾರಯಿಷ್ಯತಃ ॥ ೫೮ ॥

---

೫೪. ಬ್ರಹ್ಮದೇವನ ಆಜ್ಞಾಪ್ರವೃತ್ತಿಗಳು ಕಾಮಾಧೀನವಾಗಿ ಬೆಳೆಯುವುವು ಗಳಾಗಿಲ್ಲ. ಆದ್ದರಿಂದ ಸ್ವಭಾವಾನುಗುಣವಾಗಿ ಮತ್ತೆ ಸಾವರ್ಣಿಕ ಮನ್ವಂತರದಲ್ಲಿ ಪ್ರೀತನಾದ ಬ್ರಹ್ಮದೇವನು ರಾಜ್ಯವನ್ನು ನಿಮಗೆ ಕೊಟ್ಟಿರುವನು.

೫೫. ದೇವತೆಗಳ ರಾಜ್ಯವು ಬಲಿಚಕ್ರವರ್ತಿಯ ಅಧೀನವಾಗಿರತಕ್ಕದ್ದು ಎಂದು ನನಗೆ ಈಶ್ವರನು ಹೇಳಿರುವನು. ಆದುದರಿಂದ ತನ್ನ ಆಜ್ಞೆಯು ಅನ್ಯಥಾ ಪರಿವರ್ತನ ಹೊಂದದಂತೆ ಸರ್ವಭೂತಗಳಿಗೆ ಅದೃಶ್ಯನಾದ ಮಹೇಶ್ವರನು ಕಾಲವನ್ನು ನಿರೀಕ್ಷಿಸು ತ್ತಿರುವನು.

೫೬. ಬ್ರಹ್ಮದೇವನು ನಿನ್ನಲ್ಲಿ ಸುಪ್ರೀತನಾಗಿ ನಿನಗೆ ಅಮರಣಭಾವವನ್ನು ಕೊಟ್ಟಿರುವನು. ಆದ್ದರಿಂದ ನೀನು ಈಗ ರಾಜ್ಯಪ್ರಾಪ್ತಿ ವಿಷಯದಲ್ಲಿ ಉತ್ಸಾಹವನ್ನು ತ್ಯಜಿಸು. ಸ್ವಾಭಾವಿಕವಾಗಿ ಒದಗುವ ನಿಮ್ಮ ಪರ್ಯಾಯವನ್ನು ಪ್ರತೀಕ್ಷೆಮಾಡು.

೫೭. ಮುಂದೆ ದೊರೆಯಬಹುದಾದ ದೇವರಾಜ್ಯವನ್ನು ಈಗಲೆ ನಿನ್ನಲ್ಲಿ ಇರಿಸಲು ನನ್ನಿಂದ ಶಕ್ಯವಲ್ಲ. ಅಸುರರಾಜನೆ! ಈ ವಿಷಯದಲ್ಲಿ ಭವಿಷ್ಯವನ್ನು ತಿಳಿದ ಬ್ರಹ್ಮನಿಂದ ನಾನು ನಿಷೇಧಿಸಲ್ಪಟ್ಟಿರುವೆನು.

೫೮. ಷಂಡ-ಅಮರ್ಕರೆಂಬ ಈ ನನ್ನ ಬ್ರಾಹ್ಮಣ ಶಿಷ್ಯರಿಬ್ಬರು ಬೃಹಸ್ಪತಿಗೆ ಸಮಾನರಾದ ಪ್ರಭಾವಶಾಲಿಗಳಾಗಿರುವರು. ದೇವತೆಗಳೊಂದಿಗೆ ಸಮರೋದ್ಯಮ ವನ್ನು ಹೊಂದಿದ ನಿಮ್ಮೆಲ್ಲರನ್ನೂ ಇವರು ರಕ್ಷಿಸುವರು.

**ಸೂತ ಉವಾಚ :—**

ಏವಮುಕ್ತಾಸ್ತು ದೈತೇಯಾಃ ಕಾವ್ಯೇನಾಕ್ಲಿಷ್ಟಕರ್ಮಣಾ ।
ತತಸ್ತಾಭ್ಯಾಂ ಯಯುಃ ಸಾರ್ಧಂ ಪ್ರಹ್ಲಾದಪ್ರಮುಖಾಸ್ತದಾ ॥ ೫೯ ॥

ಅವಶ್ಯಭಾವ್ಯಮರ್ಥಂ ತಂ ಶ್ರುತ್ವಾ ದೈತೇಯದಾನವಾಃ ।
ಸಹಸಾ ಶಂಸಮಾನಾಸ್ತೇ ಜಯಂ ಕಾವ್ಯೇನ ಭಾಷಿತಮ್ ॥ ೬೦ ॥

ದಂಶಿತಾಃ ಸಾಯುಧಾಃ ಸರ್ವೇ ತತೋ ದೇವಾನ್ ಸಮಾಹ್ವಯನ್ ।
ಅಥ ದೇವಾಸುರಾನ್ ದೃಷ್ಟ್ವಾ ಸಂಗ್ರಾಮೇ ಸಮುಪಸ್ಥಿತಾನ್ ॥ ೬೧ ॥

ತತಃ ಸಂವೃತಸನ್ನಾಹಾ ದೇವಾಸ್ತಾನ್ ಸಮಯೋಧಯನ್ ।
ದೇವಾಸುರೇ ತತಸ್ತಸ್ಮಿನ್ ವರ್ತಮಾನೇ ಶತಂ ಸಮಾಃ
ಅಜಯಂತಾಸುರಾ ದೇವಾನ್ನಗ್ನಾ ದೇವಾ ಅಮಂತ್ರಯನ್ ॥ ೬೨ ॥

---

೫೯. ಸೂತಮುನಿಯು ಇಂತೆಂದನು :—ಕ್ಲೇಶಕರವಲ್ಲದಂತೆ ಪ್ರಶಸ್ತವಾದ ಕರ್ಮಾಚರಣಶೀಲವುಳ್ಳ ಶುಕ್ರಾಚಾರ್ಯನಿಂದ ಹೀಗೆಂದು ಹೇಳಲ್ಪಟ್ಟವರಾಗಿ ಪ್ರಹ್ಲಾದ ಮುಂತಾದ ಸಮಸ್ತ ದೈತ್ಯರು ಶಂಡ-ಅಮರ್ಕರಿಂದೊಡಗೂಡಿ ಪ್ರಯಾಣ ಮಾಡಿದರು.

೬೦. ಮತ್ತು ಆ ದೈತ್ಯ-ದಾನವರು ಆಗ ನಡೆದಿರುವ ಸಮಸ್ತ ವೃತ್ತಾಂತವನ್ನೂ ಅವಶ್ಯಂಭಾವಿಯೆಂಬುದನ್ನು ಶುಕ್ರಗುರುವಿನಿಂದ ತಿಳಿದು ಶುಕ್ರಾಚಾರ್ಯನಿಂದ ಸೂಚಿಸಲ್ಪಟ್ಟಿರುವ ಜಯವು ಬೇಗ ದೊರೆಯಬೇಕೆಂದು ಕೋರಿದರು.

೬೧. ಮತ್ತು ಎಲ್ಲ ರಾಕ್ಷಸರು ಕವಚವನ್ನು ತೊಟ್ಟು ಆಯುಧಗಳನ್ನು ಧರಿಸಿ ಯುದ್ಧಸಿದ್ಧತೆಯಿಂದ ದೇವತೆಗಳನ್ನು ಯುದ್ಧರಂಗಕ್ಕೆ ಕರೆದರು. ಆಗ ಯುದ್ಧಾಂಗಣಕ್ಕೆ ದೇವತೆಗಳು ಬಂದಿರುವುದನ್ನು ದೈತ್ಯರು ನೋಡಿದರು.

೬೨. ತರುವಾಯ ಅಸುರರು ರಹಸ್ಯವಾದ ಯುದ್ಧಸನ್ನಾಹವುಳ್ಳವರಾಗಿ ಪ್ರಬಲರಾಗಿ ದೇವತೆಗಳೊಂದಿಗೆ ಯುದ್ಧ ಮಾಡಿದರು. ಅನಂತರದಲ್ಲಿ ಆ ದೇವ-ದಾನವ ಯುದ್ಧವು ನೂರಾರು ವರ್ಷಗಳ ವರೆಗೆ ದೀರ್ಘವಾಗಿ ನಡೆಯಿತು. ಆಗ ರಾಕ್ಷಸರು ದೇವತೆಗಳನ್ನು ಜಯಿಸಿದರು. ಪರಾಜಯವನ್ನು ಹೊಂದಿದ ದೇವತೆಗಳು ಆಗ ಚಿಂತಿಸಿದರು.

ದೇವಾ ಊಚುಃ :—

ಶಂಡಾಮರ್ಕಪ್ರಭಾವೇಣ ಜಿತಾಃ ಸ್ಮಸ್ತ್ವಸುರೈರ್ವಯಮ್ ।
ತಸ್ಮಾದ್ಯಜ್ಞಂ ಸಮುದ್ದಿಶ್ಯ ಕಾರ್ಯಂ ಚಾತ್ಮಹಿತಂ ಚ ಯತ್ ॥ ೬೩ ॥

ಯಜ್ಞೇ ಸೋಪಾಹ್ವಯಿಷ್ಯಾಮಸ್ತತೋ ಜೇಷ್ಯಾಮಹೇಽಸುರಾನ್ ।
ಅಥೋಪಾಮಂತ್ರಯನ್ ದೇವಾಃ ಶಂಡಾಮರ್ಕೌ ತು ತಾವುಭೌ ॥ ೬೪ ॥

ಯಜ್ಞೇ ಚಾಹೂಯ ತೌ ಪ್ರೋಕ್ತೌ ತ್ಯಜಂತಾಮಸುರಾ ದ್ವಿಜೌ ॥ ೬೫ ॥

ಗ್ರಹಂ ತು ವಾಂ ಗ್ರಹೀಷ್ಯಾಮೋ ಹ್ಯಸುಜಿತ್ಯ ತು ದಾನವಾನ್ ।
ಏವಂ ತತ್ಯಜತುಸ್ತೌ ತು ಶಂಡಾಮರ್ಕೌ ತದಾಸುರಾನ್ ॥ ೬೬ ॥

ತತೋ ದೇವಾ ಜಯಂ ಪ್ರಾಪ್ತಾ ದಾನವಾಶ್ಚ ಪರಾಭವಮ್ ।
ದೇವಾಸುರಾನ್ ಪರಾಭಾವ್ಯ ಶಂಡಾಮರ್ಕಾವುಪಾಗಮನ್ ॥ ೬೭ ॥

---

೬೩. ದೇವತೆಗಳು ಹೀಗೆ ಯೋಚಿಸಿದರು :—ಶಂಡ–ಅಮರ್ಕರ ಪ್ರಭಾವದಿಂದ ನಾವು ಅಸುರರಿಂದ ಪರಾಜಯವನ್ನು ಹೊಂದಿರುತ್ತೇವೆ. ಆದುದರಿಂದ ಈಗ ನಮ್ಮ ಹಿತಸಾಧನವಾದ ಒಂದು ಯಜ್ಞಕಾರ್ಯವನ್ನು ಉದ್ದೇಶಿಸಿ ಯತ್ನಿಸಬೇಕು.

೬೪. ಯಜ್ಞದ ಸಂದರ್ಭದಲ್ಲಿ ಶಂಡ–ಅಮರ್ಕರನ್ನು ಆಹ್ವಾನಿಸಬೇಕು ಮತ್ತು ಆಗ ನಿಸ್ಸಹಾಯರಾದ ಅಸುರರನ್ನು ನಿಗ್ರಹಿಸಬೇಕು. ಹೀಗೆಂದು ಯೋಚಿಸಿ ಶಂಡ–ಅಮರ್ಕರೆಂಬ ಇಬ್ಬರನ್ನು ತಮ್ಮ ಸನ್ನಿಧಿಗೆ ಆಮಂತ್ರಿಸಿದರು.

೬೫. ಮತ್ತು ನೀವಿಬ್ಬರು ನಮ್ಮ ಯಜ್ಞಕರ್ಮದಲ್ಲಿ ಸನ್ನಿಹಿತರಾಗಬೇಕೆಂದು ಆಹ್ವಾನಿಸಿ 'ನಿಮ್ಮಿಂದ ಅಸುರರು ತ್ಯಜಿಸಲ್ಪಡಬೇಕೆಂದು" ದೇವತೆಗಳಿಂದ ಅವರು ಹೇಳಲ್ಪಟ್ಟರು.

೬೬. ನಾವು ಯುದ್ಧದಲ್ಲಿ ಶಂಡಾಮರ್ಕರನ್ನು ಜಯಿಸಿ ಯಜ್ಞದಲ್ಲಿ ನಿಮಗೆ ಪ್ರೀತಿಕರವಾದ ಸೋಮಗ್ರಹವನ್ನು ಸಿದ್ಧಪಡಿಸುವೆವು. ಎಂದು ದೇವತೆಗಳು ಪ್ರಾರ್ಥಿಸಿಕೊಂಡಿರುವಂತೆ ಶಂಡ–ಅಮರ್ಕರು ಆಗ ಅಸುರರನ್ನು ತ್ಯಜಿಸಿದರು.

೬೭. ತರುವಾಯ ದೇವತೆಗಳು ಜಯಶಾಲಿಗಳಾದರು ; ಅಸುರರು ಅಪಜಯವನ್ನು ಹೊಂದಿದರು. ಆಗ ದೇವತೆಗಳು ಅಸುರರನ್ನು ಜಯಿಸಿ ಶಂಡ–ಅಮರ್ಕರ ಬಳಿಗೆ ಬಂದರು.

ಕಾವ್ಯಶಾಪಾಭಿಭೂತಾಶ್ಚ ಅನಾಥಾರಾಶ್ಚ ತೇ ಪುನಃ ।
ಬಾಧ್ಯಮಾನಾಸ್ತದಾ ದೇವೈರ್ನಿವಿಶುಸ್ತೇ ರಸಾತಲಮ್ ॥ ೬೮ ॥

ಏವಂ ನಿರುದ್ಯಮಾಸ್ತೇ ವೈ ಕೃತಾಃ ಶಕ್ರೇಣ ದಾನವಾಃ ।
ತತಃ ಪ್ರಭೃತಿ ಶಾಪೇನ ಭೃಗುನೈಮಿತ್ತಿಕೇನ ಚ ॥ ೬೯ ॥

ಯಜ್ಞೇ ಪುನಃ ಪುನರ್ವಿಷ್ಣುರ್ಯಜ್ಞೇಽಥ ಶಿಥಿಲೇ ಪ್ರಭುಃ ।
ಕರ್ತುಂ ಧರ್ಮವ್ಯವಸ್ಥಾನಮಧರ್ಮಸ್ಯ ಪ್ರಣಾಶನಮ್ ॥ ೭೦ ॥

ಪ್ರಹ್ರಾದಸ್ಯ ನಿದೇಶೇ ತು ಯೇಽಸುರಾ ನ ವ್ಯವಸ್ಥಿತಾಃ ।
ಮನುಷ್ಯವಧ್ಯಾಂಸ್ತಾನ್ ಸರ್ವಾನ್ ಬ್ರಹ್ಮಾ ವ್ಯಾಹರತ ಪ್ರಭುಃ ॥ ೭೧ ॥

ಧರ್ಮಾನ್ನಾರಾಯಣಸ್ತಸ್ಮಾತ್ ಸಂಭೂತಶ್ಚಾಕ್ಷುಷೇಽಂತರೇ ।
ಯಜ್ಞಂ ಪ್ರವರ್ತಯಾಮಾಸ ವೈನ್ಯೋ ವೈವಸ್ವತೇಽಂತರೇ ॥ ೭೨ ॥

---

೬೮. ಶುಕ್ರಾಚಾರ್ಯನ ಶಾಪದಿಂದ ತಿರಸ್ಕರಿಸಲ್ಪಟ್ಟು ನಿರ್ವೀರ್ಯರೂ, ಆಶ್ರಯಶೂನ್ಯರೂ ಆದ ಅಸುರರು ದೇವತೆಗಳಿಂದ ಉಪದ್ರವಗೊಳಿಸಲ್ಪಟ್ಟವರಾಗಿ ಪಾತಾಲಲೋಕಕ್ಕೆ ಪ್ರವೇಶಮಾಡಿದರು.

೬೯. ಈ ರೀತಿಯಾಗಿ ಮಹೇಂದ್ರನಿಂದ ಆ ದಾನವರು ವೀರ್ಯಮದ ರಹಿತರಾಗಿ ನಿರುದ್ಯಮರಾಗಿ ಮಾಡಲ್ಪಟ್ಟರು. ಆ ಮೊದಲುಗೊಂಡು ಭೃಗುಮುನಿಯ ನಿಮಿತ್ತದಿಂದ ವಿಷ್ಣು ಪರಮಾತ್ಮನಿಗೆ ಶಾಪವು ಪ್ರಾಪ್ತವಾಯಿತು.

೭೦. ವೈದಿಕವಾದ ಯಜ್ಞಾದಿ ಕರ್ಮಸಂತಾನವು ಶಿಥಿಲವಾಗುತ್ತ ಬರುತ್ತಿರಲು ವಿಷ್ಣುಪರಮಾತ್ಮನು ಧರ್ಮವನ್ನು ವ್ಯವಸ್ಥೆಮಾಡಿ ಅಧರ್ಮವನ್ನು ನಾಶಮಾಡಲು ಮತ್ತೆ ಮತ್ತೆ ಅನೇಕ ವಿಧವಾದ ಜನ್ಮಗಳನ್ನು ಸ್ವೀಕರಿಸುವನು.

೭೧. ಆಗ ಯಾವ ಅಸುರರು ಪ್ರಹ್ಲಾದನ ಆಜ್ಞಾನುಸಾರವಾಗಿ ಇರುವ ವ್ಯವಸ್ಥೆಯನ್ನು ಅಂಗೀಕರಿಸಲಿಲ್ಲವೋ, ಅವರೆಲ್ಲರೂ ಮಾನವರಿಂದ ವಧ್ಯರಾಗುವರೆಂದು ಪ್ರಭುವಾದ ಬ್ರಹ್ಮನು ಆಜ್ಞೆಯಿತ್ತಿರುವನು.

೭೨. ಚಾಕ್ಷುಷ ಮನ್ವಂತರದಲ್ಲಿ ಧರ್ಮಪ್ರಜಾಪತಿಯಿಂದ ನಾರಾಯಣನು ಜನಿಸಿ ಯಜ್ಞಕರ್ಮವನ್ನು ಪ್ರಚಾರಮಾಡಿ ವ್ಯವಸ್ಥಾಪನಮಾಡಿದನು. ವೈವಸ್ವತ ಮನ್ವಂತರದಲ್ಲಿ ವೈನ್ಯರಾಜನು ಧರ್ಮೋದ್ಧಾರಕ್ಕೆ ಜನಿಸಿದನು.

ಪ್ರಾದುರ್ಭಾವೇ ತು ವೈನ್ಯಸ್ಯ ಬ್ರಹ್ಮೈವಾಸೀತ್ ಪುರೋಹಿತಃ ।
ಚತುರ್ಥ್ಯಾಂ ತು ಯುಗಾಖ್ಯಾಯಾಮಾಪನ್ನೇಷು ಸುರೇಷ್ವಥ ॥ ೭೩ ॥

ಸಂಭೂತಃ ಸ ಸಮುದ್ರಾಂತರ್ಹಿರಣ್ಯಕಶಿಪೋರ್ವಧೇ ।
ದ್ವಿತೀಯೋ ನರಸಿಂಹೋಽಭೂದ್ರೌದ್ರಃ ಸುತಪುರಃ ಸರಃ ॥ ೭೪ ॥

ಯಜಮಾನಂ ತು ದೈತ್ಯೇಂದ್ರಮದಿತ್ಯಾಃ ಕುಲನಂದನಃ ।
ದ್ವಿಜೋ ಭೂತ್ವಾ ಶುಭೇ ಕಾಲೇ ಬಲಿಂ ವೈರೋಚನಿಂ ಜಗೌ ॥ ೭೫ ॥

ತ್ರೈಲೋಕ್ಯಸ್ಯ ಭವಾನ್ ರಾಜಾ ತ್ವಯಿ ಸರ್ವಂ ಪ್ರತಿಷ್ಠಿತಮ್ ।
ದಾತುಮರ್ಹಸಿ ಮೇ ರಾಜನ್ ವಿಕ್ರಮಾಂಸ್ತ್ರೀನಿತಿ ಪ್ರಭುಃ ॥ ೭೬ ॥

ದದಾಮೀತ್ಯೇವ ತಂ ರಾಜಾ ಬಲಿರ್ವೈರೋಚನೋಽಬ್ರವೀತ್ ।
ವಾಮನಂ ತಂ ಚ ವಿಜ್ಞಾಯ ತತೋಽದಾನ್ಮುದಿತಃ ಸ್ವಯಮ್ ॥ ೭೭॥

---

೭೩. ವೈನ್ಯರಾಜನ ಪ್ರಾದುರ್ಭಾವ ಸಮಯದಲ್ಲಿ ಬ್ರಹ್ಮದೇವನು ಪುರೋಹಿತನಾಗಿ ಅವತರಿಸಿದನು. ಮತ್ತೆ ಕೆಲವುಕಾಲ ಪರಿವೃತ್ತಿಯಲ್ಲಿ ನಾಲ್ಕನೆಯ ಯುಗ ಪ್ರಸಂಗದಲ್ಲಿ ದೇವತೆಗಳು ಒಂದು ಸಂಕಟಕ್ಕೆ ಭಾಗಿಗಳಾದರು.

೭೪. ಆಗ ಆ ಪರಮಾತ್ಮನು ಸಮುದ್ರಮಧ್ಯದಲ್ಲಿ ಅವತರಿಸಿದನು. ಮತ್ತೆ ಹಿರಣ್ಯಕಶಿಪು ರಾಕ್ಷಸನ ವಧಾರ್ಥನಾಗಿ ರೌದ್ರವಾದ ಮತ್ತೊಂದು ನರಸಿಹ್ಮರೂಪವನ್ನು ಪರಿಗ್ರಹಿಸಿದನು. ಆ ರೂಪದಿಂದ ಮುಂದಿರುವ ದೇವಕಂಟಕರನ್ನು ನಿಗ್ರಹಿಸಿದನು.

೭೫. ದೈತ್ಯರಾಜನೂ ವಿರೋಚನಾಸುರನ ಪುತ್ರನೂ ಆದ ಬಲಿಚಕ್ರವರ್ತಿಯು ಯಾಗದಲ್ಲಿ ದೀಕ್ಷಿತನಾಗಿ ಯಜಮಾನರೂಪದಿಂದಿರುವಾಗ ಅದಿತಿಯ ವಂಶವನ್ನು ಆನಂದಪಡಿಸುವ ಅದಿತಿಪುತ್ರನಾಗಿ ದ್ವಿಜವಂಶದಲ್ಲಿ ಜನಿಸಿ ಶುಭಸಮಯದಲ್ಲಿ ಬಲಿಯನ್ನು ಜಯಿಸಿದನು.

೭೬. ಆಗ ಪ್ರಭುವಾದ ವಾಮನಮೂರ್ತಿಯು ಬಲಿಚಕ್ರವರ್ತಿಯನ್ನು ಕುರಿತು ನೀನು ತ್ರಿಲೋಕಗಳಿಗೆ ರಾಜನಾಗಿರುತ್ತೀಯೆ; ಎಲ್ಲವೂ ನಿನಗೆ ಅಧೀನವಾಗಿ ಪ್ರತಿಷ್ಠೆ ಹೊಂದಿರುವುದು. ರಾಜನೆ! ನನಗೆ ಮೂರು ಹೆಜ್ಜೆಯಷ್ಟು ಸ್ಥಳವನ್ನು ಕೊಡಲು ಅರ್ಹನಾಗಿದ್ದೀಯೆ, ಎಂದು ಕೇಳಿಕೊಂಡನು.

೭೭. ವಿರೋಚನನ ಪುತ್ರನಾದ ಬಲಿರಾಜನು ವಾಮನನನ್ನು ಕುರಿತು ಕೊಡುತ್ತೇನೆ ಎಂದು ವಾಗ್ದಾನಮಾಡಿದನು. ತರುವಾಯ ವಿಷ್ಣುವು ಕಪಟ ವಾಮನಮೂರ್ತಿಯ ರೂಪದಿಂದ ಬಂದಿರುವುದನ್ನು ತಿಳಿದು ಸಂತೋಷದಿಂದ ತಾನಾಗಿ ಮೂರು ಹೆಜ್ಜೆ ಸ್ಥಳವನ್ನು ದಾನಮಾಡಿದನು.

ಸ ವಾಮನೋ ದಿವಂ ಖಂ ಚ ಪೃಥಿವೀಂ ಚ ದ್ವಿಜೋತ್ತಮಾಃ ।
ತ್ರಿಭಿಃ ಕ್ರಮೈರ್ವಿಶ್ವಮಿದಂ ಜಗದಾಕ್ರಾಮತ ಪ್ರಭುಃ ॥ ೭೮ ॥

ಅತ್ಯರಿಚ್ಯತ ಭೂತಾತ್ಮಾ ಭಾಸ್ಕರಂ ಸ್ವೇನ ತೇಜಸಾ ।
ಪ್ರಕಾಶಯನ್ ದಿಶಃ ಸರ್ವಾಃ ಪ್ರದಿಶಶ್ಚ ಮಹಾಯಶಾಃ ॥ ೭೯ ॥

ಶುಶುಭೇ ಸಮಹಾಬಾಹುಃ ಸರ್ವಲೋಕಾನ್ ಪ್ರಕಾಶಯನ್ ।
ಆಸುರೀಂ ಶ್ರಿಯಮಾಹೃತ್ಯ ತ್ರೀಂಲ್ಲೋಕಾಂಶ್ಚ ಜನಾರ್ದನಃ ॥ ೮೦ ॥

ಸ ಪುತ್ರಪೌತ್ರಾನಸುರಾನ್ ಪಾತಾಲತಲಮಾನಯನ್ ।
ನಮುಚಿಃ ಶಂಬರಶ್ಚೈವ ಪ್ರಹ್ರಾದಶ್ಚೈವ ವಿಷ್ಣುನಾ ॥ ೮೧ ॥

ಕ್ರೂರಾ ಹತಾ ವಿನಿರ್ಧೂತಾ ದಿಶಃ ಸಂಪ್ರತಿಪೇದಿರೇ ।
ಮಹಾಭೂತಾನಿ ಭೂತಾತ್ಮಾ ಸವಿಶೇಷಾಣಿ ಮಾಧವಃ ॥ ೮೨ ॥

---

೭೮. ದ್ವಿಜವರ್ಯರೆ! ಆಗ ಸರ್ವನಿಯಾಮಕನಾದ ವಾಮನಮೂರ್ತಿಯು ತನ್ನ ಮೂರು ಹೆಜ್ಜೆಗಳಿಂದ ದ್ಯುಲೋಕ, ಅಂತರಿಕ್ಷಲೋಕ ಮತ್ತು ಪೃಥ್ವೀಲೋಕ ಗಳನ್ನು ವ್ಯಾಪಿಸಿ ಸಮಸ್ತ ಜಗತ್ತನ್ನು ಆಕ್ರಮಿಸಿದನು.

೭೯. ಮತ್ತು ಮಹಾಯಶಃ ಪುಂಜದಿಂದ ಹೊಳೆಯುವವನೂ ಸರ್ವಭೂತಾತ್ಮಕನೂ ಆದ ವಾಮನಮೂರ್ತಿಯು ತನ್ನ ಅಗಾಧವಾದ ತೇಜೋರಾಶಿಯಿಂದ ದಿಕ್ಕುಗಳನ್ನೂ ದಿಗಂತರಗಳನ್ನೂ ಪ್ರಕಾಶಪಡಿಸುತ್ತ ಸೂರ್ಯಮಂಡಲವನ್ನು ಮೀರಿದನು.

೮೦. ಮಹಾಬಾಹು ಬಲಶಾಲಿಯೂ ದುಷ್ಟಶಿಕ್ಷಕನೂ ಆದ ತ್ರಿವಿಕ್ರಮ ಮೂರ್ತಿಯು ಅಸುರರ ಸಂಪತ್ತಿಯನ್ನೂ ಮೂರು ಲೋಕಗಳನ್ನೂ ವಶೀಕರಿಸಿ ಸಮಸ್ತ ಲೋಕಗಳನ್ನು ಬೆಳಗುತ್ತ ಪ್ರಕಾಶಿಸಿದನು.

೮೧. ಪುತ್ರ–ಪೌತ್ರಾದಿ ಪರಿವಾರದಿಂದ ಸಹಿತವಾದ ಅಸುರರನ್ನು ಪಾತಾಲಕ್ಕೆ ಕಳುಹಿಸಿದನು. ಆಗ ನಮುಚಿ, ಶಂಬರ ಮತ್ತು ಪ್ರಹ್ಲಾದ ಮುಂತಾದ ಪ್ರಧಾನ ರಾದ ಅಸುರರು ದೂರ ಓಡಿಸಲ್ಪಟ್ಟವರಾದರು.

೮೨. ದೈತ್ಯಪುಂಗವರೆನಿಸಿದ ಕ್ರೂರ ರಾಕ್ಷಸರು ವಿಷ್ಣು ಪರಮಾತ್ಮನಿಂದ ನಿಗ್ರಹಿಸಲ್ಪಟ್ಟು ದೂರ ಓಡಿಸಲ್ಪಟ್ಟವರಾಗಿ ದಿಗಂತಗಳಿಗೆ ಸೇರಿದರು. ಆಗ ಲಕ್ಷ್ಮೀಪತಿಯೂ ಸರ್ವ ಭೂತಾತ್ಮಕನೂ ಆದ ವಿಷ್ಣುವು ಸಮಸ್ತ ವಿಶೇಷ ಸಹಿತವಾದ ಮಹಾ ಭೂತಗಳನ್ನು ಆಕ್ರಮಿಸಿದನು.

ಬಲಂ ಚ ಸಬಲಂ ವಿಪ್ರಾಸ್ತತ್ರಾದ್ಭುತಮದರ್ಶಯತ್ ।
ತಸ್ಯ ಗಾತ್ರೇ ಜಗತ್ಸರ್ವಮಾತ್ಮಾನಮನುಪಶ್ಯತಿ ॥ ೮೩ ॥

ನ ಕಿಂಚಿದಸ್ತಿ ಲೋಕೇಷು ಯದವ್ಯಾಪ್ತಂ ಮಹಾತ್ಮನಾ ।
ತದ್ವೈ ರೂಪಮುಪೇಂದ್ರಸ್ಯ ದೇವದಾನವಮಾನವಾಃ ॥ ೮೪ ॥

ದೃಷ್ಟ್ವಾ ಸಮ್ಮುಮುಹುಃ ಸರ್ವೇ ವಿಷ್ಣುತೇಜೋವಿಮೋಹಿತಾಃ ।
ಬಲಿಃ ಸಿತೋ ಮಹಾಪಾಶೈಃ ಸಬಂಧುಃ ಸಸುಹೃದ್ಗಣಃ ॥ ೮೫ ॥

ವಿರೋಚನಕುಲಂ ಸರ್ವಂ ಪಾತಾಲೇ ಸನ್ನಿವೇಶಿತಮ್ ।
ತತಃ ಸರ್ವಾಮರೈಶ್ವರ್ಯಂ ದತ್ತ್ವೇಂದ್ರಾಯ ಮಹಾತ್ಮನೇ ॥ ೮೬ ॥

ಮಾನುಷೇಷು ಮಹಾಬಾಹುಃ ಪ್ರಾದುರಾಸ ಜನಾರ್ದನಃ ।
ಏತಾಸ್ತಿಸ್ರಃ ಸ್ಮೃತಾಸ್ತಸ್ಯ ದಿವ್ಯಾಃ ಸಂಭೂತಯಃ ಶುಭಾಃ ॥ ೮೭ ॥

---

೮೩. ದ್ವಿಜವರ್ಯರೆ! ಬಲಪರಿವಾರ ಸಮೇತನಾದ ಬಲಿರಾಜನಿಗೆ ಪರಮಾತ್ಮನು ಒಂದು ಅದ್ಭುತವನ್ನು ತೋರಿಸಿದನು. ಆಗ ಬಲಿಯು ವಿಶ್ವರೂಪನ ದೇಹದಲ್ಲಿ ಸಮಸ್ತ ಜಗದ್ರೂಪವನ್ನೂ ತನ್ನನ್ನೂ ನೋಡುವವನಾದನು.

೮೪. ಸಮಸ್ತ ಲೋಕಗಳಲ್ಲಿ ಮಹಾತ್ಮನಾದ ವಿಷ್ಣುಪರಮಾತ್ಮನಿಂದ ವ್ಯಾಪಿಸಲ್ಪಡದಿರುವ ಯಾವುದೊಂದು ವಸ್ತುವೂ ಇರುವುದಿಲ್ಲ. ದೇವ-ದಾನವ-ಮಾನವರ ಸಮಸ್ತ ವ್ಯಕ್ತಿಗಳೂ ಉಪೇಂದ್ರ ರೂಪಿಯಾದ ವಾಮನ ಮೂರ್ತಿಯ ಆಕಾರವು.

೮೫. ಆಗ ತ್ರಿವಿಕ್ರಮ ಮೂರ್ತಿಯನ್ನು ನೋಡಿ ಸಮಸ್ತ ಜನರು ವಿಷ್ಣುವಿನ ಅಪಾರ ತೇಜಃಪುಂಜದಿಂದ ಮೋಹಹೊಂದಿದರು. ಆಗ ಬಂಧುವರ್ಗ-ಮಿತ್ರವರ್ಗದಿಂದ ಸಹಿತನಾಗಿ ಬಲಿರಾಜನು ಪಾಶಗಳಿಂದ ಬಂಧಿಸಲ್ಪಟ್ಟನು.

೮೬. ಆಗ ವಿರೋಚನಾಸುರನ ವಂಶದ ಸಮಸ್ತ ಪ್ರಜೆಯು ಪಾತಾಲದಲ್ಲಿ ಇರಿಸಲ್ಪಟ್ಟಿತು. ಜನಾರ್ದನನು ಸಮಸ್ತ ದೇವೈಶ್ವರ್ಯವನ್ನು ಮಹಾತ್ಮನಾದ ಇಂದ್ರನಿಗೆ ಪ್ರದಾನಮಾಡಿದನು.

೮೭. ಮಹಾಬಾಹು ಬಲಶಾಲಿಯಾದ ಮತ್ತು ದುಷ್ಟಜನ ಶಿಕ್ಷಕನಾದ ವಿಷ್ಣುವು ಮನುಷ್ಯಯೋನಿಯಲ್ಲಿ ಪ್ರಾದುರ್ಭವಿಸಿದನು. ಹೀಗೆ ಆ ಪರಮಾತ್ಮನಿಗೆ ದಿವ್ಯವೂ ಮಂಗಳಕರವೂ ಆದ ಮೂರು ಜನ್ಮಗಳು ಸ್ಮರಿಸಲ್ಪಟ್ಟಿರುವುವು.

ಮಾನುಷ್ಯಃ ಸಪ್ತ ಯಾಸ್ತಸ್ಯ ಸಾಗ್ರಗಾಸ್ತಾ ನಿಬೋಧತ ।
ತ್ರೇತಾಯುಗೇ ತು ದಶಮೇ ದತ್ತಾತ್ರೇಯೋ ಬಭೂವ ಹ ॥ ೮೮ ॥

ನಷ್ಟೇ ಧರ್ಮೇ ಚತುರ್ಥಶ್ಚ ಮಾರ್ಕಂಡೇಯಪುರಃಸರಃ ।
ಪಂಚಮಃ ಪಂಚದಶ್ಯಾಂ ತು ತ್ರೇತಾಯಾಂ ಸಂಬಭೂವ ಹ ॥ ೮೯ ॥

ಮಾಂಧಾತಾ ಚಕ್ರವರ್ತಿತ್ವೇ ತಸ್ಯೋತಥ್ಯಃ ಪುರಸ್ಸರಃ ।
ಏಕೋನವಿಂಶ್ಯಾಂ ತ್ರೇತಾಯಾಂ ಸರ್ವಕ್ಷತ್ರಾಂತಕೃದ್ವಿಭುಃ ॥ ೯೦ ॥

ಜಾಮದಗ್ನ್ಯಸ್ತದಾ ಷಷ್ಠೇ ವಿಶ್ವಾಮಿತ್ರಪುರಸ್ಸರಃ ।
ಚತುರ್ವಿಂಶೇ ಯುಗೇ ರಾಮೋ ವಸಿಷ್ಠೇನ ಪುರೋಧಸಾ ॥ ೯೧ ॥

ಸಪ್ತಮೋ ರಾವಣಸ್ಯಾರ್ಥೇ ಜಜ್ಞೇ ದಶರಥಾತ್ಮಜಃ ।
ಅಷ್ಟಮೋ ದ್ವಾಪರೇ ವಿಷ್ಣುರಷ್ಟಾವಿಂಶೇ ಪರಾಶರಾತ್ ॥ ೯೨ ॥

---

೮೮. ಇನ್ನು ಕೇವಲ ಮಾನುಷಭಾವದಿಂದ ಕೂಡಿದ ಸಂಪೂರ್ಣ ಲೀಲಾ ಗರ್ಭಿತನಾದ ಏಳು ಆವಿರ್ಭಾವಗಳನ್ನು ಶ್ರವಣಮಾಡಿರಿ. ಹತ್ತನೆಯ ತ್ರೇತಾ ಯುಗದಲ್ಲಿ ದತ್ತಾತ್ರೇಯ ರೂಪದಿಂದ ಅವತರಿಸಿದನು.

೮೯. ಧರ್ಮವು ನಷ್ಟವಾಗಿರುವ ಸಂದರ್ಭದಲ್ಲಿ ಮಾರ್ಕಂಡೇಯ ಮುನಿಯ ಪುರೋನೇತೃತ್ವದಿಂದ ಕೂಡಿದ ದತ್ತಾತ್ರೇಯ ರೂಪವಾದ ನಾಲ್ಕನೆಯ ಅವತಾರ ವಾಗಿರುವುದು. ಹದಿನೈದನೆಯ ತ್ರೇತಾಯುಗದಲ್ಲಿ ಐದನೆಯ ಅವತಾರವು ಉಂಟಾಗಿರುವುದು

೯೦. ಆಗ ಮಾಂಧಾತೃರೂಪದಿಂದ ಅವತಾರವಾಯಿತು. ಆ ಅವತಾರಕ್ಕೆ ಉತಥ್ಯ ಮುನಿಯು ನಾಯಕನಾಗಿರುವನು. ಹತ್ತೊಂಭತ್ತನೆಯ ತ್ರೇತಾಯುಗದಲ್ಲಿ ಸರ್ವ ಕ್ಷತ್ರಿಯಾಂತಕನಾದ ಮತ್ತು ಸರ್ವ ಶಕ್ತನಾದ ಭಾರ್ಗವ ರಾಮನ ಅವತಾರ ವಾಗಿರುವುದು.

೯೧. ಆರನೆಯದಾದ ಜಮದಗ್ನಿ ಪುತ್ರನಾದ ಭಾರ್ಗವರಾಮನ ಅವತಾರದಲ್ಲಿ ವಿಶ್ವಾಮಿತ್ರ ಮುನಿಯು ಪುರೋಹಿತನಾಗಿದ್ದನು, ಇಪ್ಪತ್ತನಾಲ್ಕನೆಯ ತ್ರೇತಾಯುಗ ದಲ್ಲಿ ವಸಿಷ್ಠನೆಂಬ ಪುರೋಹಿತನಿಂದ ಕೂಡಿ ರಾಮಾವತಾರವು ಸಂಭವಿಸಿತು.

೯೨. ಏಳನೆಯ ಆ ರಾಮಾವತಾರದ ಸಮಯದಲ್ಲಿ ದುಷ್ಟ ರಾವಣನ ವಧಾರ್ಥವಾಗಿ ದಶರಥರಾಜನ ಪುತ್ರನಾಗಿ ಜನಿಸಿರುವನು ಮತ್ತು ವಿಷ್ಣುಪರಮಾ ತ್ಮನು ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ ಪರಾಶರ ಮುನಿಯಿಂದ ಎಂಟನೆಯ ಅವತಾರವನ್ನು ಹೊಂದಿದನು.

ವೇದವ್ಯಾಸಸ್ತತೋ ಜಜ್ಞೇ ಜಾತೂಕರ್ಣ್ಯಪುರಃಸರಃ ।
ತಥೈವ ನವಮೋ ವಿಷ್ಣುರದಿತ್ಯಾಃ ಕಶ್ಯಪಾತ್ಮಜಃ ॥ ೯೩ ॥

ದೇವಕ್ಯಾಂ ವಸುದೇವಾತ್ತು ಜಾತೋ ಗಾರ್ಗ್ಯಪುರಃಸರಃ ।
ಅಪ್ರಮೇಯೋ ನಿಯೋಗಶ್ಚ ಯತಕಾಮವರೋ ವಶೀ ॥ ೯೪ ॥

ಕ್ರೀಡತೇ ಭಗವಾಂಲ್ಲೋಕೇ ಬಾಲಃ ಕ್ರೀಡನಕೈರಿವ ।
ನ ಪ್ರಮಾತುಂ ಮಹಾಬಾಹುಃ ಶಕ್ಯೋಽಸೌ ಮಧುಸೂದನಃ ॥ ೯೫ ॥

ಪರಂ ಹ್ಯವರಮೇತಸ್ಮಾದ್ವಿಶ್ವರೂಪಾನ್ನ ವಿದ್ಯತೇ ।
ಅಷ್ಟಾವಿಂಶತಿಕೇ ತದ್ವದ್ದ್ವಾಪರಸ್ಯಾಥ ಸಂಕ್ಷಯೇ ॥ ೯೬ ॥

ನಷ್ಟೇ ಧರ್ಮೇ ತದಾ ಜಜ್ಞೇ ವಿಷ್ಣುರ್ವೃಷ್ಣಿಕುಲೇ ಪ್ರಭುಃ ।
ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಮ್ ॥ ೯೭ ॥

---

೯೩. ಎಂಟನೆಯ ಅವತಾರದಲ್ಲಿ ಜಾತೂಕರ್ಣ್ಯಮುನಿಯ ಪುರೋಹಿತ ಕರ್ಮಾನುವೃತ್ತಿಯಿಂದ ಕೂಡಿ ವೇದವ್ಯಾಸ ಮುನಿರೂಪದಿಂದ ಪ್ರಾದುರ್ಭವಿಸಿದನು, ಹಾಗೆಯೇ ಮಹಾ ವಿಷ್ಣುವು ಒಂಭತ್ತನೆಯ ಅವತಾರದಲ್ಲಿ ಕಶ್ಯಪ ಮುನಿಯ ಪುತ್ರನಾಗಿ ಅದಿತಿ ದೇವಿಯಲ್ಲಿ ಜನಿಸಿದನು.

೯೪. ತರುವಾಯ ಗಾರ್ಗ್ಯಮುನಿಯ ಆಚಾರ್ಯತ್ವದಿಂದ ಕೂಡಿ ವಸುದೇವನಿಂದ ದೇವಕೀ ದೇವಿಯಲ್ಲಿ ಪುತ್ರನಾಗಿ ಜನಿಸಿದನು, ಇಂತಹ ಪರಮಾತ್ಮನು ಪ್ರಮಾಣಾಗಮ್ಯನೂ, ನಿಯೋಗಕ್ಕೆ ವಿಷಯನಲ್ಲದವನೂ, ಕಾಮಗಳನ್ನು ಜಯಿಸಿದವರಲ್ಲಿ ಅಗ್ರಗಣ್ಯನೂ ಮತ್ತು ಜಿತೇಂದ್ರಿಯನೂ ಆಗಿರುವನು.

೯೫. ಅಂತಹ ಭಗವಂತನು ಆಯಾಯ ಸಾಮಗ್ರಿಗಳಿಂದ ಬಾಲಕರು ಆಟ-ಪಾಟಗಳನ್ನಾಡುತ್ತಿರುವಂತೆ ಕ್ರೀಡಿಸುತ್ತಿರುವನು. ಮಹಾಬಾಹುಬಲದಿಂದ ಮಧು ಎಂಬ ರಾಕ್ಷಸನನ್ನು ವಧಿಸಿದ ವಿಷ್ಣುವನ್ನು ಅಳೆಯಲು ಸಾಧ್ಯವಿಲ್ಲ.

೯೬. ಇಂತಹ ವಿಶ್ವರೂಪಿಯಾದ ಪರಮಾತ್ಮನ ತತ್ತ್ವಕ್ಕಿಂತ ಬೇರೆಯಾದ ಕಾರಣ-ಅಥವಾ ಕಾರ್ಯವು ಯಾವುದೂ ಇಲ್ಲ. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಅವಸಾನಕಾಲದಲ್ಲಿ ಈ ಶ್ರೀ ಕೃಷ್ಣಾವತಾರವು ಸಂಭವಿಸಿತು.

೯೭. ಆಗ ಯೋಗೇಶ್ವರ ರೂಪಿಯೂ ಸರ್ವ ಸಮರ್ಥನೂ ಆದ ವಿಷ್ಣು ಪರಮಾತ್ಮನು ಧರ್ಮಮಾರ್ಗವನ್ನು ಪ್ರತಿಷ್ಠೆಮಾಡುವುದಕ್ಕೋಸ್ಕರವೂ ಅಸುರರ ಮರ್ದನವನ್ನು ಮಾಡುವುದಕ್ಕೋಸ್ಕರವೂ ಸಮಸ್ತ ಭೂತಗಳಿಗೆ ಮೋಹವನ್ನು ಉಂಟುಮಾಡುತ್ತ ಧರ್ಮಸೇತುವು ನಷ್ಟವಾಗಿರುವ ಸಮಯದಲ್ಲಿ ಯೋಗಮಾಯೆಯಿಂದ ಜನಿಸಿದನು.

ಮೋಹಯನ್ ಸರ್ವಭೂತಾನಿ ಯೋಗಾತ್ಮಾ ಯೋಗಮಾಯಯಾ ।
ಪ್ರವಿಷ್ಟೋ ಮಾನುಷೀಂ ಯೋನಿಂ ಪ್ರಚ್ಛನ್ನಶ್ಚರತೇ ಮಹೀಮ್ ॥೯೮॥

ವಿಹಾರಾರ್ಥಂ ಮನುಷ್ಯೇಷು ಸಾಂದೀಪನಿಪುರಃಸರಃ ।
ಯತ್ರ ಕಂಸಂ ಚ ಶಾಲ್ವಂ ಚ ದ್ವಿವಿದಂ ಚ ಮಹಾಸುರಮ್ ॥ ೯೯ ॥

ಅರಿಷ್ಟಂ ವೃಷಭಂ ಚೈವ ಪೂತನಾಂ ಕೇಶಿನಂ ಹಯಮ್ ।
ನಾಗಂ ಕುವಲಯಾಪೀಡಂ ಮಲ್ಲಂ ರಾಜಗೃಹಾಧಿಪಮ್ ॥ ೧೦೦ ॥

ದೈತ್ಯಾನ್ ಮಾನುಷದೇಹಸ್ಥಾನ್ ಸೂದಯಾಮಾಸ ವೀರ್ಯವಾನ್ ।
ಛಿನ್ನಂ ಬಾಹುಸಹಸ್ರಂ ಚ ಬಾಣಸ್ಯಾದ್ಭುತಕರ್ಮಣಾ ॥ ೧೦೧ ॥

ನರಕಶ್ಚ ಹತಃ ಸಂಖ್ಯೇ ಯವನಶ್ಚ ಮಹಾಬಲಃ ।
ಹೃತಾನಿ ಚ ಮಹೀಪಾನಾಂ ಸರ್ವರತ್ನಾನಿ ತೇಜಸಾ ॥ ೧೦೨ ॥

---

೯೮. ಆಗ ಯೋಗಮಾಯೆಯಿಂದ ಭಗವಂತನು ಮನುಷ್ಯ ಯೋನಿಯನ್ನು ಪ್ರವೇಶಿಸಿ ಜನ್ಮವೆತ್ತಿ ಪ್ರಚ್ಛನ್ನ ರೂಪದಿಂದ ಭೂಮಿಯಲ್ಲಿ ಸಂಚರಿಸುತ್ತಿರುವನು.

೯೯. ಇದೊಂದು ವಿಹಾರಸುಖವನ್ನು ಅನುಭವಿಸಲು ಸಾಂದೀಪನಿಮುನಿಯ ಆಚಾರ್ಯತ್ವದಲ್ಲಿ ಮನುಷ್ಯ ಜನ್ಮವನ್ನು ಎತ್ತಿದನು, ಆ ಅವತಾರದಲ್ಲಿ ಧರ್ಮ ದ್ವೇಷಿಗಳಾದ ಕಂಸ, ಶಾಲ್ವ, ದ್ವಿವಿದ ಮುಂತಾದ ಮಹಾ ಅಸುರರನ್ನು ಸಂಹರಿಸಿದನು.

೧೦೦. ಮತ್ತು ಅರಿಷ್ಟ, ವೃಷಭ, ಪೂತನಾ, ಕೇಶಿ ಎಂಬ ಅಶ್ವ, ಕುವಲಯಾಪೀಡ ನಾಮಾಂಕಿತವಾದ ಗಜ ಮತ್ತು ರಾಜಗೃಹಾಧಿಕಾರಿಯಾದ ಮಲ್ಲ-ಮುಂತಾದ ಅನೇಕ ಮಹಾ ಅಸುರ ಜಾತಿಯನ್ನು ಮರ್ದಿಸಿದನು.

೧೦೧. ಮತ್ತು ವೀರ್ಯಶಾಲಿಯಾದ ಮನುಷ್ಯದೇಹದಿಂದ ಮೆರೆಯುವ ಅನೇಕ ದೈತ್ಯರನ್ನು ಸಂಹರಿಸಿದನು, ಹಾಗು ಬಾಣಾಸುರನ ಸಹಸ್ರ ಬಾಹುಗಳನ್ನು ಅದ್ಭುತ ಕರ್ಮದಿಂದ ಛೇದಿಸದನು.

೧೦೨. ಮತ್ತು ರಣರಂಗದಲ್ಲಿ ನರಕನೆಂಬ ಅಸುರನೂ ಮಹಾಬಲಿಷ್ಠನಾದ ಯವನಾಸುರನೂ ಸಂಹರಿಸಲ್ಪಟ್ಟರು. ಅಲ್ಲದೆ ಅನೇಕ ರಾಜರ ಸಮಸ್ತ ರತ್ನಪ್ರಾಯ ವಸ್ತುಗಳು ತೇಜೋಬಲದಿಂದ ಅಪಹರಿಸಲ್ಪಟ್ಟವು.

ಕುರುವೀರಾಶ್ಚ ನಿಹತಾಃ ಪಾರ್ಥಿವಾ ಯೇ ರಸಾತಲೇ ।
ಏತೇ ಲೋಕಹಿತಾರ್ಥಾಯ ಪ್ರಾದುರ್ಭಾವಾ ಮಹಾತ್ಮನಃ ॥ ೧೦೩ ॥

ಅಸ್ಮಿನ್ನೇವ ಯುಗೇ ಕ್ಷೀಣೇ ಸಂಧ್ಯಾಶಿಷ್ಟೇ ಭವಿಷ್ಯತಿ ।
ಕಲ್ಕಿರ್ವಿಷ್ಣುಯಶಾ ನಾಮ ಪಾರಾಶರ್ಯಃ ಪ್ರತಾಪವಾನ್ ॥ ೧೦೪ ॥

ದಶಮೋ ಭಾವ್ಯಸಂಭೂತೌ ಯಾಜ್ಞವಲ್ಕ್ಯಪುರಃ ಸರಃ ।
ಅನುಕರ್ಷನ್ ಸ ವೈ ಸೇನಾಂ ಹಸ್ತ್ಯಶ್ವರಥಸಂಕುಲಾಮ್ ॥ ೧೦೫ ॥

ಪ್ರಗೃಹೀತಾಯುಧೈರ್ವಿಪ್ರೈರ್ವೃತಃ ಶತಸಹಸ್ರಶಃ ।
ನಾತ್ಯರ್ಥಂ ಧಾರ್ಮಿಕಾ ಯೇ ಚ ಯೇ ಚ ಧರ್ಮದ್ವಿಷಃ ಕ್ವಚಿತ್
॥ ೧೦೬ ॥

ಉದೀಚ್ಯಾನ್ಮಧ್ಯದೇಶಾಂಶ್ಚ ತಥಾ ವಿಂಧ್ಯಾಪರಾಂತಿಕಾನ್ ।
ತಥೈವ ದಾಕ್ಷಿಣಾತ್ಯಾಂಶ್ಚ ದ್ರವಿಡಾನ್ ಸಿಂಹಲೈಃ ಸಹ ॥ ೧೦೭ ॥

---

೧೦೩. ಮತ್ತು ಭೂಮಂಡಲದಲ್ಲಿ ರಾಜರಾಗಿದ್ದ ಅನೇಕ ಕುರುವಂಶದ ವೀರರು ಸಂಹರಿಸಲ್ಪಟ್ಟರು. ಹೀಗೆ ಮಹಾತ್ಮನಾದ ಮಹಾ ವಿಷ್ಣುವಿನ ಲೋಕಕಲ್ಯಾಣಾರ್ಥವಾದ ಅವತಾರಗಳು ಅನೇಕವಾಗಿ ನಡೆದಿರುವುವು.

೧೦೪. ಈಗ ನಡೆಯುತ್ತಲಿರುವ ಕಲಿಯುಗವು ಕ್ಷೀಣವಾಗಿ ಸಂಧ್ಯಾಂಶವು ಮಾತ್ರ ಮಿಕ್ಕಿರುವ ಸಮಯದಲ್ಲಿ ಮಹಾ ವಿಷ್ಣುವು ಪರಾಶರ ವಂಶದಲ್ಲಿ ಪ್ರತಾಪವಂತನಾದ ವಿಷ್ಣುಯಶ ಎಂಬ ವಿಪ್ರರೂಪದಿಂದ ಕಲ್ಕಿಯು ಅವತಾರ ಮಾಡುವನು.

೧೦೫. ಹತ್ತನೆಯದಾಗಿ ಮುಂದೆ ಸಂಭವಿಸುವ ಆ ಅವತಾರದಲ್ಲಿ ಯಾಜ್ಞವಲ್ಕ್ಯ ಮುನಿಯು ಪುರಸ್ಕಾರಾರ್ಹನಾದ ಗುರುವಾಗಿರುವನು, ಕಲ್ಕಿ ರೂಪಿಯಾದ ಪರಮಾತ್ಮನು ಗಜ-ಅಶ್ವ-ರಥಗಳಿಂದ ಪೂರ್ಣವಾದ ಮಹಾ ಸೇನೆಯನ್ನು ನಡೆಸಿಕೊಂಡು ದುಷ್ಟನಿಗ್ರಹಕ್ಕೆ ಹೊರಡುವನು.

೧೦೬. ಅತ್ಯಂತ ಧಾರ್ಮಿಕರಲ್ಲದ ಹಾಗು ಕೆಲವು ಧರ್ಮದ್ವೇಷಿಗಳೂ ಆದ ವ್ಯಕ್ತಿಗಳಿಂದ ತುಂಬಿದ ಆ ಸೈನ್ಯದಲ್ಲಿರುವ ಶತ-ಸಹಸ್ರ ಮುಂತಾದ ಅಧಿಕ ಸಂಖ್ಯೆಯ ಆಯುಧಧಾರಿಗಳಾದ ವಿಪ್ರರಿಂದ ಸುತ್ತುವರಿಯಲ್ಪಟ್ಟು ಜೈತ್ರಯಾತ್ರೆಗೆ ಹೊರಡುವನು.

೧೦೭. ಮತ್ತು ಉತ್ತರ ದೇಶ, ಮಧ್ಯದೇಶ, ವಿಂಧ್ಯಪರ್ವತದ ಅಪರಾಂತಿಕ ದೇಶ, ದಕ್ಷಿಣದೇಶ, ದ್ರವಿಡದೇಶ ಮತ್ತು ಸಿಂಹಲ ದೇಶಗಳಲ್ಲಿ ವಾಸ ಮಾಡುವ ದುಷ್ಟ ಜನರನ್ನು ಸಂಹರಿಸುವನು.

ಗಾಂಧಾರಾನ್ ಪಾರದಾಂಶ್ಚೈವ ಪಹ್ಲವಾನ್ ಯವನಾಞ್ಛಕಾನ್ ।
ತುಬರಾಞ್ಛಬರಾಂಶ್ಚೈವ ಪುಲಿಂದಾನ್ ವರದಾನ್ ಖಸಾನ್ ॥ ೧೦೮ ॥

ಲಂಪಾಕಾನಾಂಧ್ರಕಾನ್ ಪುಂಡ್ರಾನ್ ಕಿರಾತಾಂಶ್ಚೈವ ಸ ಪ್ರಭುಃ ।
ಪ್ರವೃತ್ತಚಕ್ರೋ ಬಲವಾನ್ ಮ್ಲೇಚ್ಛಾನಾಮಂತಕೃದ್ಬಲೀ ॥ ೧೦೯ ॥

ಅದೃಶ್ಯಃ ಸರ್ವಭೂತಾನಾಂ ಪೃಥಿವೀಂ ವಿಚರಿಷ್ಯತಿ ।
ಮಾನವಃ ಸ ತು ಸಂಜಜ್ಞೇ ದೇವಸೇನಸ್ಯ ಧೀಮತಃ ॥ ೧೧೦ ॥

ಪೂರ್ವಜನ್ಮನಿ ವಿಷ್ಣುರ್ಯಃ ಪ್ರಮಿತಿರ್ನಾಮ ವೀರ್ಯವಾನ್ ।
ಗೋತ್ರೇಣ ವೈ ಚಂದ್ರಮಸಃ ಪೂರ್ಣೇ ಕಲಿಯುಗೇಽಭವತ್ ॥ ೧೧೧ ॥

ಇತ್ಯೇತಾಸ್ತಸ್ಯ ದೇವಸ್ಯ ದಶ ಸಂಭೂತಯಃ ಸ್ಮೃತಾಃ ।
ತಂ ತಂ ಕಾಲಂ ಚ ಕಾರ್ಯಂ ಚ ತತ್ತದುದ್ದಿಶ್ಯ ಕಾರಣಮ್ ॥ ೧೧೨ ॥

---

೧೦೮. ಹಾಗು ಗಾಂಧಾರ, ಪಾರದ, ಪಹ್ಲವ, ಯವನ, ಶಕ, ತುಬರ, ಶಬರ, ಪುಲಿಂದ, ಬರದ, ಮತ್ತು ಖಸ ಎಂಬ ಅನೇಕ ನಾಸ್ತಿಕ-ಮ್ಲೇಚ್ಛಪ್ರಾಯರಾದ ಜನರನ್ನು ನಿರ್ಮೂಲ ಮಾಡುವನು.

೧೦೯. ಮತ್ತು ಲಂಪಾಕ, ಆಂಧ್ರಕ, ಪಂಡ್ರ, ಕಿರಾತ ಮುಂತಾದ ವಿವಿಧ ದುಷ್ಟಜನರನ್ನು ಸೈನ್ಯ ಸಹಿತನೂ, ಬಲಿಷ್ಠನೂ ಮತ್ತು ಚಕ್ರಾಯುಧಧಾರಿಯೂ ಆದ ಕಲ್ಕಿ ಪುರುಷನು ಮ್ಲೇಚ್ಛ ಜನರ ಸಂಹಾರ ಕಾರ್ಯವನ್ನು ನೆರವೇರಿಸುವನು.

೧೧೦. ಹೀಗೆ ಭಗವಂತನು ಸಮಸ್ತ ಭೂತಗಳಿಗೆ ಆದೃಶ್ಯನಾಗಿ ಪೃಥಿವಿಯಲ್ಲಿ ಸಂಚರಿಸುವನು, ಮತ್ತು ಜ್ಞಾನಿಯಾದ ದೇವಸೇನನೆಂಬ ವಿಪ್ರನಲ್ಲಿ ಮಾನವ ರೂಪದಿಂದ ಜನ್ಮವನ್ನು ತಾಳಿದನು

೧೧೧. ಕಲಿಯುಗವು ಪೂರ್ಣವಾಗಲು ಹಿಂದಿನ ಜನ್ಮದಲ್ಲಿ ಚಂದ್ರನ ವಂಶ ದಲ್ಲಿ ಜನಿಸಿದ ವೀರ್ಯವಂತನಾದ ಪ್ರಮಿತಿ ಎಂಬ ರಾಜನ ರೂಪದಿಂದ ಮಹಾ ವಿಷ್ಣುವು ಸಂಭವಿಸಿದ್ದನು.

೧೧೨. ವಿಷ್ಣುಪರಮಾತ್ಮನಿಗೆ ಈ ರೀತಿಯಾಗಿ ಹತ್ತು ಅವತಾರಗಳು ಸ್ಮರಿಸ ಲ್ಪಟ್ಟಿರುವುವು, ಪ್ರತಿಯೊಂದು ಅವತಾರದಲ್ಲಿಯೂ ಆಯಾಯ ಕಾಲ ಮತ್ತು ಅವತಾ ರದ ಕಾರಣಗಳನ್ನು ಯೋಚಿಸಿ ಉಚಿತನಾದ ವಿಗ್ರಹವನ್ನು ಸ್ವೀಕರಿಸುವನು.

ಅಂಶೇನ ತ್ರಿಷು ಲೋಕೇಷು ತಾಸ್ತಾ ಯೋನೀಃ ಪ್ರಪತ್ಸ್ಯತೇ ।
ಪಂಚವಿಂಶೇ ಸ್ಥಿತಃ ಕಲ್ಪೇ ಪಂಚವಿಂಶತ್ಸ ವೈ ಸಮಾಃ ॥ ೧೧೩ ॥

ವಿನಿಘ್ನನ್ ಸರ್ವಭೂತಾನಿ ಮಾನುಷಾನೇವ ಸರ್ವಶಃ ।
ಕೃತ್ವಾ ಬೀಜಾವಶೇಷಾಂ ತು ಮಹೀಂ ಕ್ರೂರೇಣ ಕರ್ಮಣಾ॥ ೧೧೪ ॥

ಶಾಂತಯಿತ್ವಾ ತು ವೃಷಲಾನ್ ಪ್ರಾಯಶಸ್ತಾನಧಾರ್ಮಿಕಾನ್ ।
ತತಃ ಸ ವೈ ತದಾ ಕಲ್ಕಿಶ್ಚರಿತಾರ್ಥಃ ಸಸೈನಿಕಃ ॥ ೧೧೫ ॥

ಕರ್ಮಣಾ ನಿಹತಾ ಯೇ ತು ಸಿದ್ಧಾಸ್ತೇ ತು ಪುನಃ ಸ್ವಯಮ್ ।
ಅಕಸ್ಮಾತ್ಕುಪಿತಾನ್ಯೋಽನ್ಯಂ ಭವಿಷ್ಯಂತಿ ಚ ಮೋಹಿತಾಃ ॥ ೧೧೬ ॥

ಕ್ಷಪಯಿತ್ವಾ ತು ತಾನ್ ಸರ್ವಾನ್ ಭಾವಿನಾರ್ಥೇನ ಚೋದಿತಃ ।
ಗಂಗಾಯಮುನಯೋರ್ಮಧ್ಯೇ ನಿಷ್ಠಾಂ ಪ್ರಾಪ್ಸ್ಯತಿ ಸಾನುಗಃ ॥೧೧೭॥

---

೧೧೩. ಮೂರು ಲೋಕಗಳಲ್ಲಿಯೂ ತನ್ನ ದಿವ್ಯಾಂಶದಿಂದ ಕೂಡಿ ಆಯಾಯ ಯೋನಿಗಳನ್ನು ಪ್ರವೇಶಿಸುವನು, ಇಪ್ಪತ್ತೈದನೆಯ ಕಲ್ಪದಲ್ಲಿ ಅವತಾರಮಾಡಿ ಇಪ್ಪತ್ತೈದು ವರ್ಷಗಳವರೆಗೆ ಭೂಮಿಯಲ್ಲಿ ಇರುವನು.

೧೧೪. ಆಗ ಸರ್ವ ರೀತಿಗಳಿಂದ ಸಮಸ್ತ ಭೂತಗಳನ್ನೂ ಎಲ್ಲ ಮಾನವರನ್ನೂ ಸಂಹಾರಮಾಡುತ್ತ ಕ್ರೂರವಾದ ಕರ್ಮದಿಂದ ಭೂಮಿಯಲ್ಲಿ ಬೀಜ ಮಾತ್ರ ಶೇಷವಾಗಿರುವಂತೆ ಎಲ್ಲವನ್ನೂ ನಿರ್ಮೂಲ ಮಾಡುವನು.

೧೧೫. ಮತ್ತು ಪ್ರಾಯಶಃವಾಗಿ ಅಧರ್ಮದಲ್ಲಿ ನಿರತವಾಗಿರುವ ವೃಷಲ ಜಾತಿಯನ್ನು ನಾಶಮಾಡಿ ತರುವಾಯ ಸೈನ್ಯಸಮೇತವಾದ ಕಲ್ಕಿ ಮೂರ್ತಿಯು ಕೃತಕೃತ್ಯನಾಗುವನು.

೧೧೬. ಸ್ವಕರ್ಮಬಲದಿಂದ ಅಧೋಗತಿಯನ್ನು ಹೊಂದಿ ನಾಶಕ್ಕೆ ಸಿದ್ಧರಾಗಿ ಇರುವ ಕೆಲವು ವ್ಯಕ್ತಿಗಳು ಭಗವನ್ಮಾಯೆಯಿಂದ ಮೋಹಿತರಾಗಿ ನಿಷ್ಕಾರಣವಾಗಿ ಅನ್ಯೋನ್ಯ ವಿಷಯದಲ್ಲಿ ಕುಪಿತರಾಗುವರು.

೧೧೭. ಆಗ ಕಲ್ಕಿಮೂರ್ತಿಯು ಅವಶ್ಯಂಭಾವಿಯಾದ ಅರ್ಥದಿಂದ ಪ್ರೇರೇಪಿಸಲ್ಪಟ್ಟವನಾಗಿ ಅವರನ್ನೆಲ್ಲ ನಾಶಮಾಡಿ ತನ್ನ ಪರಿವಾರ ಸಮೇತವಾಗಿ ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ ಪ್ರತಿಷ್ಠೆಯನ್ನು ಹೊಂದುವನು.

ತತೋ ವ್ಯತೀತೇ ಕಲ್ಪೇ ತು ಸಮಾಪ್ತೇ ಸಹಸೈನಿಕೇ ।
ನೃಪೇಷ್ವಥ ವಿನಷ್ಟೇಷು ತದಾತ್ವಪ್ರಗ್ರಹಾಃ ಪ್ರಜಾಃ ॥ ೧೧೮ ॥

ರಕ್ಷಣೇ ವಿನಿವೃತ್ತೇ ತು ಹತ್ವಾ ಚಾನ್ಯೋನ್ಯಮಾಹವೇ ।
ಪರಸ್ಪರಹೃತಸ್ವಾಶ್ಚ ನಿರಾನಂದಾಃ ಸುದುಃಖಿತಾಃ ॥ ೧೧೯ ॥

ಪುರಾಣಿ ಹಿತ್ವಾ ಗ್ರಾಮಾಂಶ್ಚ ತುಲ್ಯಾಸ್ತಾ ನಿಷ್ಪರಿಗ್ರಹಾಃ ।
ಪ್ರಣಷ್ಟಶ್ರುತಿಧರ್ಮಾಶ್ಚ ನಷ್ಟಧರ್ಮಾಶ್ರಮಾಸ್ತಥಾ ॥ ೧೨೦ ॥

ಹ್ರಸ್ವಾ ಅಲ್ಪಾಯುಷಶ್ಚೈವ ಭವಿಷ್ಯಂತಿ ವನೌಕಸಃ ।
ಸರಿತ್ಪರ್ವತಸೇವಿನ್ಯಃ ಪತ್ರಮೂಲಫಲಾಶನಾಃ ॥ ೧೨೧ ॥

ಚೀರಪತ್ರಾಜಿನಧರಾಃ ಸಂಕರಂ ಘೋರಮಾಸ್ಥಿತಾಃ ।
ಅಲ್ಪಾಯುಷೋ ನಷ್ಟವಾರ್ತಾ ಬಹ್ವಾಬಾಧಾಃ ಸುದುಃಖಿತಾಃ ॥೧೨೨॥

---

೧೧೮. ಆಗಿನ ಆ ಕಲ್ಪವು ಕಳೆದು ಸಮಾಪ್ತಿಯನ್ನು ಹೊಂದಿರುವ ಸಮಯದಲ್ಲಿ ಸೈನ್ಯಸಹಿತವಾಗಿ ದುಷ್ಟ ರಾಜರು ವಿನಾಶವನ್ನು ಹೊಂದಿರಲು ಪ್ರಜೆಗಳು ನಿರಂಕುಶರಾಗುವರು.

೧೧೯. ಮತ್ತು ಒಂದು ರಕ್ಷಣವು ಶೂನ್ಯವಾಗಿಲು ಕದನಮಾಡಿ ಪರಸ್ಪರವಾಗಿ ಹೊಡೆದುಕೊಂಡು, ಪರಸ್ಪರವಾಗಿ ಆಸ್ತಿ-ಪಾಸ್ತಿಗಳನ್ನು ಅಪಹರಿಸಿ ಸ್ವಲ್ಪವೂ ಆನಂದಾನುಭವವಿಲ್ಲದೆ ದುಃಖಸಾಗರದಲ್ಲಿ ಮುಳುಗುವರು.

೧೨೦. ಮತ್ತು ಪುರ-ಗ್ರಾಮಗಳ ಆಶ್ರಯವನ್ನು ಬಿಟ್ಟು ಸಕಲ ಪರಿವಾರ ವರ್ಜಿತರೂ ವೇದಧರ್ಮದಿಂದ ಭ್ರಷ್ಟರೂ ಮತ್ತು ನಷ್ಟವಾದ ಧಾರ್ಮಿಕಾಶ್ರಮವುಳ್ಳವರೂ ಆಗಿ ಎಲ್ಲ ಪ್ರಜೆಗಳು ಒಂದೇ ವಿಧವಾಗಿ ಸಾಂಕರ್ಯವನ್ನು ಹೊಂದುವರು.

೧೨೧. ಮತ್ತು ಆಗ ಪ್ರಜೆಗಳು ಅಲ್ಪಾಯುಗಳೂ ಅಲ್ಲಲ್ಲಿ ವನಪ್ರದೇಶವನ್ನು ಆಶ್ರಯಿಸಿರುವರೂ, ಮತ್ತು ನದೀತೀರ-ಪರ್ವತಶ್ರೇಣಿಗಳನ್ನು ಆಶ್ರಯಿಸಿ ಪತ್ರ-ಮೂಲ-ಫಲಗಳನ್ನು ಭಕ್ಷಿಸುವವರೂ ಆಗಿ ಕಷ್ಟಕ್ಕೆ ಭಾಗಿಗಳಾಗುವರು.

೧೨೨. ಹಾಗು ನಾರು, ಎಲೆ, ಚರ್ಮಗಳ ವಸ್ತ್ರವನ್ನು ಧರಿಸಿದವರೂ, ಅತಿ ಕಠಿನವಾದ ಸಾಂಕರ್ಯವನ್ನು ಹೊಂದಿದವರೂ, ಅಲ್ಪವಾದ ಆಯುಷ್ಯವುಳ್ಳವರೂ ಚ್ಯುತವಾದ ಜೀವನೋಪಾಯವುಳ್ಳವರೂ, ಅನೇಕ ಬಾಧೆಗಳಿಗೆ ಗುರಿಯಾದವರೂ ಮತ್ತು ಬಹು ದುಃಖಿಗೊಂಡವರೂ ಆಗುವರು.

ಏವಂ ಕಾಷ್ಠಾಮನುಪ್ರಾಪ್ತಾಃ ಕಲಿಸಂಧ್ಯಾಂಶಕೇ ತದಾ ।
ಪ್ರಜಾಃ ಕ್ಷಯಂ ಪ್ರಯಾಸ್ಯಂತಿ ಸಾರ್ಧಂ ಕಲಿಯುಗೇನ ತು ॥ ೧೨೩ ॥
ಕ್ಷೀಣೇ ಕಲಿಯುಗೇ ತಸ್ಮಿನ್ ಪ್ರವೃತ್ತೇ ಚ ಕೃತೇ ಪುನಃ ।
ಪ್ರಪತ್ಸ್ಯಂತೇ ಯಥಾನ್ಯಾಯಂ ಸ್ವಭಾವಾದೇವ ನಾನ್ಯಥಾ ॥ ೧೨೪ ॥

ಇತ್ಯೇತತ್ಕೀರ್ತಿತಂ ಸರ್ವಂ ದೇವಾಸುರವಿಚೇಷ್ಟಿತಮ್ ।
ಯದುವಂಶಪ್ರಸಂಗೇನ ಮಹದ್ವೋ ವೈಷ್ಣವಂ ಯಶಃ ॥ ೧೨೫ ॥

ತುರ್ವಸೋಸ್ತು ಪ್ರವಕ್ಷ್ಯಾಮಿ ಪೂರೋರ್ದ್ರುಹ್ಯೋರನೋಸ್ತಥಾ
॥ ೧೨೬ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ತ್ರಿಸಪ್ತತಿತಮೋಽಧ್ಯಾಯಃ

---

೧೨೩. ಕಲಿಯುಗದ ಸಂಧ್ಯಾಂಶ ಸಮಯದಲ್ಲಿ ಈ ರೀತಿಯಾಗಿ ಕಷ್ಟದ ಎಲ್ಲೆಯನ್ನು ಹೊಂದಿದ ಪ್ರಜೆಗಳು ಕಲಿಯುಗದ ಸಂಗಡ ಸಂಪೂರ್ಣವಾಗಿ ನಾಶವನ್ನು ಹೊಂದುವರು.

೧೨೪. ಹಾಗೆ ಆ ಕಲಿಯುಗವು ಪೂರ್ತಿಯಾಗಿ ಕ್ಷಯಿಸಿ ಮತ್ತೆ ಕೃತಯುಗವು ಪ್ರವರ್ತಿಸುತ್ತಿರಲು ಎಲ್ಲ ವಸ್ತುಗಳು ಸ್ವಭಾವವಶದಿಂದ ಮತ್ತೆ ನಿಯತವಾದ ಸ್ಥಿತಿಯನ್ನು ಹೊಂದುವುವು. ಅನ್ಯ ವಿಧವಾದ ಸ್ಥಿತಿಯನ್ನು ಹೊಂದುವುದಿಲ್ಲ.

೧೨೫. ಈ ರೀತಿಯಾಗಿ ಯಾದವ ವಂಶವನ್ನು ನಿರೂಪಿಸುವ ಪ್ರಸಂಗದಿಂದ ವಿಷ್ಣುಪರಮಾತ್ಮನ ಮಹತ್ತಾದ ಮತ್ತು ಯಶಸ್ವಿಯಾದ ಚರಿತವೂ ಮತ್ತು ದೇವ-ಅಸುರರ ಚೇಷ್ಟಾಮಯವಾದ ಚರಿತ್ರವೂ ನಿಮಗೆ ಕೀರ್ತಿಸಲ್ಪಟ್ಟಿದೆ.

೧೨೬. ಇನ್ನು ಮುಂದೆ ಇದರಂತೆ ತುರ್ವಸು, ಪೂರು, ದ್ರುಹ್ಯು ಮತ್ತು ಅನು ಎಂಬ ಯಯಾತಿ ರಾಜನ ಪುತ್ರರ ವಂಶಾವಳಿ-ಚರಿತ್ರಗಳನ್ನು ವರ್ಣಿಸುತ್ತೇನೆ.

ಬ್ರಹ್ಮಾಂಡಪುರಾಣದಲ್ಲಿ ಉತ್ತರಾರ್ಧದಲ್ಲಿ ಎಪ್ಪತ್ತ ಮೂರನೆಯ ಅಧ್ಯಾಯವು ಸಮಾಪ್ತವು.

# ಚತುಸ್ಸಪ್ತತಿತಮೋಽಧ್ಯಾಯಃ

**ಸೂತ ಉವಾಚ :–**

**ತುರ್ವಸೋಸ್ತು ಸುತೋ ವಹ್ನಿರ್ವಹ್ನೇರ್ಗೋಭಾನೇರಾತ್ಮಜಃ ।**
**ಗೋಭಾನೋಸ್ತು ಸುತೋ ವೀರಸ್ತ್ರಿಸಾನುರಪರಾಜಿತಃ ॥ ೧ ॥**

**ಕರಂಧಮಸ್ತು ತ್ರೈಸಾನೋ ಮರುತ್ತಸ್ತಸ್ಯ ಚಾತ್ಮಜಃ ।**
**ಅನ್ಯಸ್ತ್ವಾವಿಕ್ಷಿತೋ ರಾಜಾ ಮರುತ್ತಃ ಕಥಿತಃ ಪುರಾ ॥ ೨ ॥**

**ಅನಪತ್ಯೋ ಮರುತ್ತಸ್ತು ಸ ರಾಜಾಸೀದಿತಿ ಶ್ರುತಮ್ ।**
**ದುಷ್ಯಂತಂ ಪೌರವಂ ಚಾಪಿ ಸ ವೈ ಪುತ್ರಮಕಲ್ಪಯತ್ ॥ ೩ ॥**

**ಏಂ ಯಯಾತಿಶಾಪೇನ ಜರಾಸಂಕ್ರಮಣೇ ಪುರಾ ।**
**ತುರ್ವಸೋಃ ಪೌರವಂ ವಂಶಂ ಪ್ರವಿವೇಶ ಪುರಾ ಕಿಲ ॥ ೪ ॥**

---

೧. ಸೂತ ಮುನಿಯು ಇಂತೆಂದನು :–ತುರ್ವಸುವಿಗೆ ವಹ್ನಿ ಎಂಬ ಪುತ್ರನೂ, ವಹ್ನಿಗೆ ಗೋಭಾನು ಎಂಬ ಪುತ್ರನೂ, ಗೋಭಾನುವಿಗೆ ಯುದ್ಧದಲ್ಲಿ ಪರಾಜಯವನ್ನು ಹೊಂದದಂತಹ ವೀರನಾದ ತ್ರಿಸಾನು ಎಂಬ ಪುತ್ರನೂ ಜನಿಸಿದರು.

೨. ಮುಂದೆ ತ್ರಿಸಾನು ಎಂಬುವನಿಗೆ ಕರಂಧಮನೆಂಬ ಪುತ್ರನೂ ಕರಂಧಮನಿಗೆ ಮರುತ್ತ ಮತ್ತು ಆವಿಕ್ಷಿತ ಎಂಬ ಪುತ್ರರೂ ಜನಿಸಿದರು, ಮರುತ್ತನು ರಾಜನಾಗಿ ಆಳಿದನೆಂದು ಪೂರ್ವದಲ್ಲಿ ಹೇಳಲ್ಪಟ್ಟಿದೆ.

೩. ಆ ಮರುತ್ತ ರಾಜನು ಸಂತತಿಯಿಂದ ರಹಿತನಾಗಿದ್ದನೆಂದು ಚರಿತ್ರೆಯು ಕೇಳಲ್ಪಟ್ಟಿರುವುದು, ಆಗ ಪುರುವಂಶಸಂಭೂತನಾದ ದುಷ್ಯಂತ ಎಂಬುವನನ್ನು ಮರುತ್ತನು ಪುತ್ರನನ್ನಾಗಿ ಕಲ್ಪಿಸಿಕೊಂಡನು.

೪. ಹೀಗೆ ಪೂರ್ವದಲ್ಲಿ ಜರಾವಸ್ಥೆಯನ್ನು ಮತ್ತೊಬ್ಬನಲ್ಲಿ ಸಂಕ್ರಮವಾದ ಪ್ರಸಂಗದಲ್ಲಿ ಯಯಾತಿ ರಾಜನ ಶಾಪಬಲದಿಂದ ತುರ್ವಸು ಸಂತತಿಯು ಕ್ರಮವಾಗಿ ಪೌರವ ವಂಶವನ್ನು ಪ್ರವೇಶಿಸಿತು.

ದುಷ್ಯಂತಸ್ಯ ತು ದಾಯಾದಃ ಸರೂಪ್ಯೋ ನಾಮ ಪಾರ್ಥಿವಃ ।
ಸರೂಪ್ಯಾತ್ತು ತಥಾಂಡೀರಶ್ಚತ್ವಾರಸ್ತಸ್ಯ ಚಾತ್ಮಜಾಃ ॥ ೫ ॥

ಪಾಂಡ್ಯಶ್ಚ ಕೇರಲಶ್ಚೈವ ಚೋಲಃ ಕುಲ್ಯಸ್ತಥೈವ ಚ ।
ತೇಷಾಂ ಜನಪದಾಃ ಕುಲ್ಯಾಃ ಪಾಂಡ್ಯಾಶ್ಚೋಲಾಃ ಸಕೇರಲಾಃ ॥ ೬ ॥

ದ್ರುಹ್ಯೋಶ್ಚ ತನಯೌ ವೀರೌ ಬಭ್ರುಃ ಸೇತುಶ್ಚ ವಿಶ್ರುತೌ ।
ಅರುದ್ಧಃ ಸೇತುಪುತ್ರಸ್ತು ಬಾಭ್ರವೋ ರಿಪುರುಚ್ಯತೇ ॥ ೭ ॥

ಯೌವನಾಶ್ವೇನ ಸಮಿತೌ ಕೃಚ್ಛ್ರೇಣ ನಿಹತೋ ಬಲೀ ।
ಯುದ್ಧಂ ಸುಮಹದಾಸೀತ್ತು ಮಾಸಾನ್ ಪರಿಚತುರ್ದಶ ॥ ೮ ॥

ಅರುದ್ಧಸ್ಯ ತು ದಾಯಾದೋ ಗಾಂಧಾರೋ ನಾಮ ಪಾರ್ಥಿವಃ ।
ಖ್ಯಾಯತೇ ಯಸ್ಯ ನಾಮ್ನಾ ತು ಗಾಂಧಾರವಿಷಯೋ ಮಹಾನ್ ॥ ೯ ॥

---

೫. ದುಷ್ಯಂತನಿಗೆ ಸರೂಪ್ಯ ಎಂಬ ರಾಜನು ಪುತ್ರನಾಗಿ ಜನಿಸಿದನು, ಸರೂಪ್ಯನಿಂದ ಆಂಡೀರನೆಂಬ ಪುತ್ರನು ಹುಟ್ಟಿದನು, ಆಂಡೀರನಿಗೆ ನಾಲ್ಕು ಮಂದಿ ಪುತ್ರರು ಜನಿಸಿದರು.

೬. ಆ ನಾಲ್ಕು ಮಂದಿ ಪುತ್ರರು ಪಾಂಡ್ಯ, ಕೇರಳ, ಚೋಲ, ಮತ್ತು ಕುಲ್ಯ ಎಂಬ ನಾಮಾಂಕಿತರಾಗಿದ್ದರು, ಇವರು ಆಳಿದ ದೇಶಗಳು ಪಾಂಡ್ಯ, ಕೇರಳ, ಚೋಳ ಮತ್ತು ಕುಲ್ಯ ಎಂಬುದಾಗಿ ರಾಜನಾಮಾಂಕಿತಗಳಾಗಿದ್ದುವು.

೭. ದ್ರುಹ್ಯು ಎಂಬುವನಿಗೆ ವೀರರಾದ ಬಭ್ರು, ಸೇತು ಎಂಬ ಇಬ್ಬರು ಪುತ್ರರು ಪ್ರಖ್ಯಾತರಾಗಿದ್ದರು, ಇವರಲ್ಲಿ ಸೇತುವಿಗೆ ಅರುದ್ಧ ಎಂಬ ಪುತ್ರನೂ, ಬಭ್ರು ಎಂಬುವನಿಗೆ ರಿಪು ಎಂಬ ಪುತ್ರನೂ ಜನಿಸಿದರು.

೮. ರಿಪುವಿಗೆ ಯೌವನಾಶ್ವನೊಡನೆ ಹದಿನಾಲ್ಕು ಮಾಸಗಳವರೆಗೆ ನಡೆದ ಮಹಾ ಯುದ್ಧದಲ್ಲಿ ಯೌವನಾಶ್ವನಿಂದ ಮಹಾ ಬಲಿಷ್ಠನಾದ ರಿಪುವು ಕಷ್ಟದಿಂದ ಕೊಲ್ಲಲ್ಪಟ್ಟನು.

೯. ಅರುದ್ಧನೆಂಬುವನಿಗೆ ಗಂಧಾರ ಎಂಬ ಸುಪ್ರಸಿದ್ಧನಾದ ರಾಜನು ಪುತ್ರನಾಗಿ ಜನಿಸಿದನು, ಅವನು ಆಳಿರುವ ಮಹಾ ದೇಶವು ರಾಜನ ಹೆಸರಿನಿಂದ ಗಾಂಧಾರ ದೇಶವೆಂದು ಪ್ರಸಿದ್ಧಿಯನ್ನು ಹೊಂದಿರುವುದು.

ಗಾಂಧಾರದೇಶಜಾಶ್ಚಾಪಿ ತುರಗಾ ವಾಜಿನಾಂ ವರಾಃ ।
ಗಾಂಧಾರಪುತ್ರೋ ಧರ್ಮಸ್ತು ಧೃತಸ್ತಸ್ಯ ಸುತೋಽಭವತ್ ॥ ೧೦ ॥

ಧೃತಸ್ಯ ದುರ್ದಮೋ ಜಜ್ಞೇ ಪ್ರಚೇತಾಸ್ತಸ್ಯ ಚಾತ್ಮಜಃ ।
ಪ್ರಚೇತಸಃ ಪುತ್ರಶತಂ ರಾಜಾನಃ ಸರ್ವ ಏವ ತೇ ॥ ೧೧ ॥

ಮ್ಲೇಚ್ಛರಾಷ್ಟ್ರಾಧಿಪಾಃ ಸರ್ವೇ ಹ್ಯುದೀಚೀಂ ದಿಶಮಾಸ್ಥಿತಾಃ ।
ಅನೋಶ್ಚೈವ ಸುತಾ ವೀರಾಸ್ತ್ರಯಃ ಪರಮಧಾರ್ಮಿಕಾಃ ॥ ೧೨ ॥

ಸಭಾನರಃ ಕಾಲಚಕ್ಷುಃ ಪರಾಕ್ಷಶ್ಚೇತಿ ವಿಶ್ರುತಾಃ ।
ಸಭಾನರಸ್ಯ ಪುತ್ರಸ್ತು ವಿದ್ವಾನ್ ಕಾಲಾನಲೋ ನೃಪಃ ॥ ೧೩ ॥

ಕಾಲಾನಲಸ್ಯ ಧರ್ಮಾತ್ಮಾ ಸೃಂಜಯೋ ನಾಮ ವಿಶ್ರುತಃ ।
ಸೃಂಜಯಸ್ಯಾಭವತ್ಪುತ್ರೋ ವೀರೋ ನಾಮ್ನಾ ಪುರಂಜಯಃ ॥ ೧೪ ॥

---

೧೦. ಅಂತಹ ಗಾಂಧಾರ ದೇಶದಲ್ಲಿ ಜನಿಸಿದ ಅಶ್ವಗಳು ಅಶ್ವ ಜಾತಿಯಲ್ಲಿ ಉತ್ತಮವಾಗಿರುವುವು. ಗಂಧಾರ ರಾಜನಿಗೆ ಧರ್ಮ ಎಂಬ ಪುತ್ರನೂ ಧರ್ಮನಿಗೆ ಧೃತ ಎಂಬ ಪುತ್ರನೂ ಇದ್ದರು.

೧೧. ಧೃತನಿಗೆ ದುರ್ದಮನೆಂಬ ಕುಮಾರನು ಜನಿಸಿದನು. ದುರ್ದಮನಿಗೆ ಪ್ರಚೇತ ಎಂಬ ಪುತ್ರನಿದ್ದನು, ಮತ್ತು ಪ್ರಚೇತ ಎಂಬುವನಿಗೆ ಒಂದುನೂರು ಮಂದಿ ಪುತ್ರರಿದ್ದರು. ಅವರೆಲ್ಲರೂ ರಾಜರಾಗಿ ರಾಜ್ಯಭಾರವನ್ನು ವಹಿಸಿದ್ದರು.

೧೨. ಆ ಎಲ್ಲ ರಾಜರೂ ಮ್ಲೇಚ್ಛಪ್ರಾಯವಾದ ರಾಷ್ಟ್ರಕ್ಕೆ ಅಧಿಪತಿಗಳಾಗಿ ಉತ್ತರ ದಿಕ್ಕನ್ನು ಆಶ್ರಯಿಸಿದ್ದರು. ಅನು ಎಂಬುವನಿಗೆ ಅತ್ಯಂತ ಧಾರ್ಮಿಕರೂ ವೀರರೂ ಆದ ಮೂರು ಮಂದಿ ಪುತ್ರರಿದ್ದರು.

೧೩. ಆ ಮೂರು ಮಂದಿಯು ಸಭಾನರ, ಕಾಲಚಕ್ಷು, ಮತ್ತು ಪರಾಕ್ಷ ಎಂದು ನಾಮಾಂಕಿತರಾಗಿ ಪ್ರಸಿದ್ಧರಾಗಿದ್ದರು. ಸಭಾನರನಿಗೆ ವಿದ್ವಾಂಸನಾದ ಕಾಲಾನಲನೆಂಬ ರಾಜನು ಪುತ್ರನಾಗಿ ಜನಿಸಿದನು.

೧೪. ಕಾಲಾನಲನಿಗೆ ಧರ್ಮಾತ್ಮಕನಾದ ಸೃಂಜಯನೆಂದು ಪ್ರಸಿದ್ಧನಾದ ಪುತ್ರನು ಜನಿಸಿದನು. ಸೃಂಜಯನಿಗೆ ಪುರಂಜಯನೆಂಬ ನಾಮಾಂಕಿತನಾದ ವೀರ ಪುತ್ರನು ಇದ್ದನು.

20

ಆಸೀದಿಂದ್ರಸಮೋ ರಾಜಾ ಪ್ರತಿಷ್ಠಿತಯಶಾ ದಿವಿ ।
ಮಹಾಮನಾಃ ಸುತಸ್ತಸ್ಯ ಮಹಾಶಾಲಸ್ಯ ಧಾರ್ಮಿಕಃ ॥ ೧೫ ॥

ಸಪ್ತದ್ವೀಪೇಶ್ವರೋ ರಾಜಾ ಚಕ್ರವರ್ತೀ ಮಹಾಯಶಾಃ ।
ಮಹಾಮನಾಸ್ತು ದ್ವೌ ಪುತ್ರೌ ಜನಯಾಮಾಸ ವಿಶ್ರುತೌ ॥ ೧೬ ॥

ಉಶೀನರಂ ಚ ಧರ್ಮಜ್ಞಂ ತಿತಿಕ್ಷುಂ ಚೈವ ಧಾರ್ಮಿಕಮ್ ।
ಉಶೀನರಸ್ಯ ಪತ್ನ್ಯಸ್ತು ಪಂಚ ರಾಜರ್ಷಿವಂಶಜಾಃ ॥ ೧೭ ॥

ನೃಗಾ ಕೃಮಿಾ ನವಾ ದರ್ವಾ ಪಂಚಮಿಾ ಚ ದೃಷದ್ವತೀ ।
ಉಶೀನರಸ್ಯ ಪುತ್ರ್ಯಸ್ತು ಪಂಚ ತಾಸು ಕುಲೋದ್ವಹಾಃ ॥ ೧೮ ॥

ತಪಸ್ಯತಃ ಸುಮಹತೋ ಜಾತಾ ವೃದ್ಧಸ್ಯ ಧಾರ್ಮಿಕಾಃ ।
ನೃಗಾಯಾಸ್ತು ನೃಗಃ ಪುತ್ರೋ ನವಾಯಾ ನವ ಏವ ತು ॥ ೧೯ ॥

---

೧೫. ಆ ಪುರಂಜಯರಾಜನು ದೇವಲೋಕದಲ್ಲಿ ನೆಲೆಸಿದ ಕೀರ್ತಿಯುಳ್ಳವನಾಗಿ ಇಂದ್ರನಿಗೆ ಸಮಾನನಾಗಿದ್ದನು. ಅನೇಕ ಯಜ್ಞಶಾಲೆಗಳನ್ನು ರಚಿಸಿಕೊಂಡಿರುವ ಆ ಪುರಂಜಯರಾಜನಿಗೆ ಧಾರ್ಮಿಕನಾದ ಮಹಾಮನಾ ಎಂಬ ಪುತ್ರನಿದ್ದನು.

೧೬. ಮಹಾಮನಾ ಎಂಬುವ ರಾಜನು ಮಹಾ ಕೀರ್ತಿಸಂಪನ್ನನೂ ಮತ್ತು ಸಪ್ತದ್ವೀಪಗಳಿಗೆ ಈಶ್ವರನಾದ ಚಕ್ರವರ್ತಿಯೂ ಆಗಿದ್ದನು. ಅಂತಹ ಮಹಾಮನನು ಪ್ರಸಿದ್ಧರಾದ ಇಬ್ಬರು ಪುತ್ರರನ್ನು ಹೊಂದಿದನು.

೧೭. ಆ ಕುಮಾರರು ಧರ್ಮವನ್ನು ತಿಳಿದ ಉಶೀನರ ಮತ್ತು ಧಾರ್ಮಿಕನಾದ ತಿತಿಕ್ಷು ಎಂಬ ನಾಮಾಂಕಿತರಾಗಿದ್ದರು. ಉಶೀನರನಿಗೆ ರಾಜರ್ಷಿ ವಂಶದಲ್ಲಿ ಹುಟ್ಟಿದ ಐದು ಮಂದಿ ಪತ್ನಿಯರಿದ್ದರು.

೧೮. ಆ ಐದು ಮಂದಿಯು ನೃಗಾ, ಕೃಮಿಾ, ನವಾ, ದರ್ವಾ ಮತ್ತು ದೃಷದ್ವತೀ ಎಂಬ ಪವಿತ್ರ ನಾಮಾಂಕಿತರಾಗಿದ್ದರು. ಉಶೀನರನಿಗೆ ಆ ಐದು ಮಂದಿ ಪತ್ನಿಯರಲ್ಲಿ ವಂಶವನ್ನು ಬೆಳಗುವಂತಹ ಸಚ್ಚರಿತ್ರಶೀಲರಾದ ಐದು ಮಂದಿ ಕನ್ಯೆಯರು ಜನಿಸಿದರು.

೧೯. ವೃದ್ಧನಾಗಿ ತಪಸ್ಸನ್ನು ಆಚರಿಸುತ್ತಿದ್ದ ಮಹಾತ್ಮನಾದ ಉಶೀನರನಿಗೆ ಐದು ಕನ್ಯೆಯರು ಜನಿಸಿದರು. ಅವರಲ್ಲಿ ನೃಗಾ ಎಂಬುವಳಲ್ಲಿ ನೃಗನೆಂಬ ಪುತ್ರನೂ, ನವಾ ಎಂಬಾಕೆಯಲ್ಲಿ ನವನೆಂಬ ಪುತ್ರನೂ ಜನಿಸಿದರು.

ಕೃಮ್ಯಾಃ ಕೃಮಿಸ್ತು ದರ್ವಾಯಾಃ ಸುವ್ರತೋ ನಾಮ ಧಾರ್ಮಿಕಃ ।
ದೃಷದ್ವತೀಸುತಶ್ಚಾಪಿ ಶಿಬಿರೌಶೀನರೋ ದ್ವಿಜಾಃ ॥ ೨೦ ॥

ಶಿಬೇಃ ಶಿವಪುರಂ ಖ್ಯಾತಂ ಯೌಧೇಯಂ ತು ನೃಗಸ್ಯ ಚ ।
ನವಸ್ಯ ನವರಾಷ್ಟ್ರಂ ತು ಕೃಮೇಸ್ತು ಕೃಮಿಲಾ ಪುರೀ ॥ ೨೧ ॥

ಸುವ್ರತಸ್ಯ ತಥಾಂಬಷ್ಠಾ ಶಿಬಿಪುತ್ರಾನ್ನಿಬೋಧತ ।
ಶಿಬೇಸ್ತು ಶಿಬಯಃ ಪುತ್ರಾಶ್ಚತ್ವಾರೋ ಲೋಕಸಮ್ಮತಾಃ ॥ ೨೨ ॥

ವೃಷದರ್ಭಃ ಸುವೀರಸ್ತು ಕೇಕಯೋ ಮದ್ರಕಸ್ತಥಾ ।
ತೇಷಾಂ ಜನಪದಾಃ ಸ್ಫೀತಾಃ ಕೇಕಯಾ ಮದ್ರಕಾಸ್ತಥಾ ॥ ೨೩ ॥

ವೃಷದರ್ಭಾಃ ಸುವೀರಾಶ್ಚ ತಿತಿಕ್ಷೋಃ ಶೃಣುತ ಪ್ರಜಾಃ ।
ತಿತಿಕ್ಷುರಭವದ್ರಾಜಾ ಪೂರ್ವಸ್ಯಾಂ ದಿಶಿ ವಿಶ್ರುತಃ ॥ ೨೪ ॥

---

೨೦. ದ್ವಿಜರೆ! ಹಾಗೆ ಕೃಮಿ ಎಂಬುವಳಲ್ಲಿ ಕೃಮಿ ಎಂಬ ಪುತ್ರನೂ ದರ್ವಾ ಎಂಬಾಕೆಯಲ್ಲಿ ಧಾರ್ಮಿಕನಾದ ಸುವ್ರತ ಎಂಬ ಪುತ್ರನೂ ಜನಿಸಿದರು. ಮತ್ತು ದೃಷದ್ವತೀ ಎಂಬುವಳಲ್ಲಿ ಉಶೀನರನಿಂದ ಶಿಬಿ ಎಂಬ ಪುತ್ರನು ಜನ್ಮವೆತ್ತಿದನು.

೨೧. ಇವರಲ್ಲಿ ಶಿಬಿಯು ಆಳಿದ ನಗರವು ಶಿವಪುರವೆಂದು ಪ್ರಖ್ಯಾತವಾಗಿದೆ. ನೃಗನಿಗೆ ಯೌಧೇಯ ನಗರವೂ, ನವನಿಗೆ ನವರಾಷ್ಟ್ರವೂ ಮತ್ತು ಕೃಮಿಗೆ ಕೃಮಿಲಾ ನಗರವೂ ರಾಜಧಾನಿಗಳಾಗಿದ್ದುವು.

೨೨. ಹಾಗೆ ಸುವ್ರತನಿಗೆ ಅಂಬಷ್ಠಾ ನಗರಿಯು ಅಧೀನವಾಗಿದ್ದಿತು. ಇನ್ನು ಮುಂದೆ ಶಿಬಿಯ ಪುತ್ರರನ್ನು ಶ್ರವಣಮಾಡಿರಿ. ಶಿಬಿರಾಜನಿಗೆ ಶಿಬಿ ಎಂಬ ಉಪನಾಮದಿಂದ ಕೂಡಿರುವ ನಾಲ್ಕು ಮಂದಿ ಪುತ್ರರು ಲೋಕಗಳಿಗೆ ಮಾನ್ಯರಾಗಿದ್ದರು.

೨೩. ಅವರಿಗೆ ವೃಷದರ್ಭ, ಸುವೀರ, ಕೇಕಯ ಮತ್ತು ಮದ್ರಕ ಎಂಬ ನಾಮಧೇಯಗಳಿದ್ದುವು. ಅವರು ಆಳಿದ ರಾಷ್ಟ್ರಗಳು ಬಹು ಸಮೃದ್ಧಿಯಿಂದ ಪೂರ್ಣವಾಗಿದ್ದುವು. ಅವುಗಳಲ್ಲಿ ಕೇಕಯ, ಮದ್ರಕ ಎಂಬ ರಾಷ್ಟ್ರಗಳು ಸೇರಿವೆ.

೨೪. ಅದರಂತೆ ವೃಷದರ್ಭ, ಸುವೀರ ಎಂಬ ಮತ್ತೆರಡು ರಾಷ್ಟ್ರಗಳು ಅವುಗಳಲ್ಲಿ ಸೇರಿಕೊಂಡಿವೆ. ತಿತಿಕ್ಷುರಾಜನ ಪ್ರಜೆಯನ್ನು ಕೇಳಿರಿ, ತಿತಿಕ್ಷು ಎಂಬುವನು ಪೂರ್ವದಿಕ್ಕಿನಲ್ಲಿ ಪ್ರಖ್ಯಾತಿ ಹೊಂದಿದ ರಾಜನಾಗಿದ್ದನು.

ಉಶದ್ರಥೋ ಮಹಾಬಾಹುಸ್ತಸ್ಯ ಹೇಮಃ ಸತೋಽಭವತ್ ।
ಹೇಮಸ್ಯ ಸುತಪಾ ಜಜ್ಞೇ ಸುತಃ ಸುತಪಸೋ ಬಲಿಃ ॥ ೨೫ ॥

ಜಾತೋ ಮನುಷ್ಯಯೋನ್ಯಾಂ ವೈ ಕ್ಷೀಣೇ ವಂಶೇ ಪ್ರಜೇಪ್ಸಯಾ ।
ಮಹಾಯೋಗೀ ಸ ತು ಬಲಿರ್ಬದ್ಧೋ ಯಃ ಸ ಮಹಾಮನಾಃ॥ ೨೬ ॥

ಪುತ್ರಾನುತ್ಪಾದಯಾಮಾಸ ಚಾತುರ್ವರ್ಣ್ಯಕರಾನ್ ಭುವಿ ।
ಅಂಗಂ ಸ ಜನಯಾಮಾಸ ವಂಗಂ ಸುಹ್ಮಂ ತಥೈವ ಚ ॥ ೨೭ ॥

ಪುಂಡ್ರಂ ಕಲಿಂಗಂ ಚ ತಥಾ ವಾಲೇಯಂ ಕ್ಷತ್ರಮುಚ್ಯತೇ ।
ಬಾಲೇಯಾ ಬ್ರಾಹ್ಮಣಾಶ್ಚೈವ ತಸ್ಯ ವಂಶಕರಾಃ ಪ್ರಭೋಃ ॥ ೨೮ ॥

ಬಲೇಸ್ತು ಬ್ರಹ್ಮಣಾ ದತ್ತಾ ವರಾಃ ಪ್ರೀತೇನ ಧೀಮತಃ ।
ಮಹಾಯೋಗಿತ್ವಮಾಯುಶ್ಚ ಕಲ್ಪಸ್ಯ ಪರಿಮಾಣಕಮ್ ॥ ೨೯ ॥

---

೨೫. ತಿತಿಕ್ಷುವಿಗೆ ಮಹತ್ತಾದ ರಥವುಳ್ಳವನೂ, ಮಹಾ ಬಾಹುಬಲ ಶಾಲಿಯೂ ಆಗಿದ್ದ ಹೇಮ ಎಂಬ ಮಗನಿದ್ದನು. ಹೇಮನಿಗೆ ಸುತಪ ಎಂಬ ಪುತ್ರನು ಹುಟ್ಟಿದನು. ಮತ್ತು ಸುತಪನಿಗೆ ಬಲಿ ಎಂಬ ಪುತ್ರನಿದ್ದನು.

೨೬. ಮಹಾಯೋಗಿಯೂ ಮಹಾಮಾನಿಯೂ ಮತ್ತು ಪೂರ್ವದಲ್ಲಿ ಬಂಧಿಸಲ್ಪಟ್ಟವನೂ ಆದ ಬಲಿರಾಜನು ಆ ತನ್ನ ವಂಶವು ಕ್ಷಯಿಸಿಹೋಗಲಾಗಿ ಪ್ರಜಾಪ್ರಾಪ್ತಿಯ ಸಂಕಲ್ಪದಿಂದ ಮನುಷ್ಯಯೋನಿಯಲ್ಲಿ ಜನಿಸಿದನು.

೨೭. ಆ ಬಲಿರಾಜನು ಭೂಮಿಯಲ್ಲಿ ಚಾತುರ್ವರ್ಣ್ಯವನ್ನು ಪ್ರತಿಷ್ಠೆಗೊಳಿಸುವ ಪುತ್ರರನ್ನು ಸೃಷ್ಟಿಸಿದನು. ಅವರಲ್ಲಿ ಅಂಗ, ವಂಗ ಮತ್ತು ಸುಹ್ಮ ಎಂಬ ಆಯಾಯ ದೇಶಾಧೀಶ್ವರರಾದ ಪುತ್ರರನ್ನು ಹೊಂದಿದನು.

೨೮. ಹಾಗು ಪುಂಡ್ರ, ಕಲಿಂಗ ಮತ್ತು ವಾಲೇಯ ಎಂಬ ಕ್ಷತ್ರ ಜಾತಿಯಿಂದ ಕೂಡಿದ ಪುತ್ರರು ಜನಿಸಿದರೆಂದು ಪ್ರಾಜ್ಞರಿಂದ ಹೇಳಲ್ಪಟ್ಟಿದೆ. ಇವರಲ್ಲಿ ವಾಲೇಯರೂ ಮತ್ತು ಬ್ರಾಹ್ಮಣರಾಗಿ ಹುಟ್ಟಿದ ಪುತ್ರರೂ ಪ್ರಭುವಾದ ಬಲಿರಾಜನ ವಂಶ ಪ್ರತಿಷ್ಠಾಪಕರಾದರು.

೨೯. ಸುಪ್ರೀತನಾದ ಬ್ರಹ್ಮದೇವನಿಂದ ಜ್ಞಾನವಂತನಾದ ಬಲಿರಾಜನಿಗೆ ಅನೇಕ ವರಗಳು ಅನುಗ್ರಹಿಸಲ್ಪಟ್ಟುವು. ಅವುಗಳಲ್ಲಿ ಮಹಾಯೋಗಿತ್ವ ಮತ್ತು ಕಲ್ಪಕಾಲವನ್ನು ಅಳೆಯುವಷ್ಟು ದೀರ್ಘಾಯುಷ್ಯ ಎಂಬ ವರಗಳು ಪ್ರಾಪ್ತವಾಗಿವೆ.

ಸಂಗ್ರಾಮೇ ಚಾಪ್ಯಜೇಯತ್ವಂ ಧರ್ಮೇ ಚೈವ ಪ್ರಭಾವತಃ ।
ತ್ರೈಲೋಕ್ಯದರ್ಶನಂ ಚೈವ ಪ್ರಾಧಾನ್ಯಂ ಪ್ರಸವೇ ತಥಾ || ೩೦ ||

ಬಲೇಶ್ಚಾಪ್ರತಿಮತ್ವಂ ವೈ ಧರ್ಮತತ್ತ್ವಾರ್ಥದರ್ಶನಮ್ ।
ಚತುರೋ ನಿಯತಾನ್ ವರ್ಣಾಂಸ್ತ್ವಂ ವೈ ಸ್ಥಾಪಯಿತೇತಿ ವೈ|| ೩೧ ||

ಇತ್ಯುಕ್ತೋ ವಿಭುನಾ ರಾಜಾ ಬಲಿಃ ಶಾಂತಿಂ ಪರಾಂ ಯಯೌ ।
ಕಾಲೇನ ಮಹತಾ ವಿದ್ವಾನ್ ಸ್ವಂ ಚ ಸ್ಥಾನಮುಪಾಗತಃ || ೩೨ ||

ತೇಷಾಂ ಜನಪದಾಃ ಸ್ಫೀತಾ ಅಂಗವಂಗಾಶ್ಚ ಸುಹ್ಮಕಾಃ
ಪುಂಡ್ರಾಃ ಕಲಿಂಗಾಶ್ಚ ತಥಾ ತೇಷಾಂ ವಂಶಂ ನಿಬೋಧತ || ೩೩ ||

ತಸ್ಯ ತೇ ತನಯಾಃ ಸರ್ವೇ ಕ್ಷೇತ್ರಜಾ ಮುನಿಸಂಭವಾಃ ।
ಸಂಭೂತಾ ದೀರ್ಘತಮಸಃ ಸುದೇಷ್ಣಾಯಾಂ ಮಹೌಜಸಃ || ೩೪ ||

---

೩೦. ಮತ್ತು ಸಂಗ್ರಾಮದಲ್ಲಿ ಅಜಯ್ಯತ್ವವನ್ನೂ, ಧರ್ಮಾನುಷ್ಠಾನದಲ್ಲಿ ಅಪಾರ ಪ್ರಭಾವವನ್ನೂ, ತ್ರೈಲೋಕ್ಯದ ದರ್ಶನವನ್ನೂ ಮತ್ತು ಪ್ರಧಾನವಾದ ಪ್ರಜಾಪರ್ಗವನ್ನೂ ವರಗಳನ್ನಾಗಿ ಬಲಿರಾಜನು ಹೊಂದಿರುವನು.

೩೧. ಹಾಗು ಬಲಿರಾಜನಿಗೆ ನಿರುಪಮತ್ವ, ಧರ್ಮತತ್ತ್ವದ ದರ್ಶನ ಮತ್ತು ನಿಯಮಿತವಾಗಿರುವಂತೆ ಚಾತುರ್ವರ್ಣ್ಯಸ್ಥಾಪಕತ್ವ ಮುಂತಾದ ಉತ್ತಮ ವರಗಳು ಕೊಡಲ್ಪಟ್ಟಿರುವುವು.

೩೨. ಸರ್ವೇಶ್ವರನಾದ ಬ್ರಹ್ಮದೇವನಿಂದ ಈ ರೀತಿಯಾಗಿ ವರದಾದ ವಚನಗಳು ಹೇಳಲ್ಪಡಲಾಗಿ ಬಲಿರಾಜನು ಅಪಾರವಾದ ಶಾಂತಿಯನ್ನು ಹೊಂದಿದನು. ಮತ್ತು ಜ್ಞಾನಿಯಾದ ಆ ರಾಜನು ದೀರ್ಘಕಾಲದಲ್ಲಿ ತನ್ನ ಸ್ಥಾನವನ್ನು ಹೊಂದಿದನು.

೩೩. ಆ ಬಲಿರಾಜನ ಪುತ್ರರಿಗೆ ಅಂಗ, ವಂಗ, ಕಲಿಂಗ, ಸುಹ್ಮ ಮತ್ತು ಪುಂಡ್ರ ಎಂಬ ಸಮೃದ್ಧಿಯಿಂದ ಕೂಡಿದ ದೇಶಗಳು ಸೇರಿದುವುಗಳಾಗಿದ್ದುವು, ಮುಂದೆ ಬಲಿರಾಜನ ಪುತ್ರರ ವಂಶಾವಳಿಯನ್ನು ಶ್ರವಣಮಾಡಿರಿ.

೩೪. ಅವನ ಆ ಎಲ್ಲ ಪುತ್ರರು ಮುನಿಯಿಂದ ಅವನ ಕ್ಷೇತ್ರದಲ್ಲಿ ಹುಟ್ಟಿದವರಾಗಿರುವರು. ಮಹಾ ಓಜಸ್ವಿಗಳಾದ ಆ ಪುತ್ರರು ದೀರ್ಘತಮ ಎಂಬ ಮುನಿಯಿಂದ ಬಲಿರಾಜನ ಪತ್ನಿಯಾದ ಸುದೇಷ್ಣೆಯಲ್ಲಿ ಉತ್ಪನ್ನರಾಗಿರುವರು.

ಋಷಯ ಊಚುಃ :—

ಕಥಂ ಬಲೇಃ ಸುತಾಃ ಪಂಚ ಜನಿತಾಃ ಕ್ಷೇತ್ರಜಾಃ ಪ್ರಭೋ ।
ಋಷಿಣಾ ದೀರ್ಘತಮಸಾ ಹ್ಯೇತತ್ಪ್ರಬ್ರೂಹಿ ಪೃಚ್ಛತಾಮ್ ॥ ೩೫ ॥

ಸೂತ ಉವಾಚ :—

ಉಶಿಜೋ ನಾಮ ವಿಖ್ಯಾತ ಆಸೀದ್ಧೀಮಾನ್ಋಷಿಃ ಪುರಾ ।
ಭಾರ್ಯಾ ವೈ ಮಮತಾ ನಾಮ ಬಭೂವಾಸ್ಯ ಮಹಾತ್ಮನಃ ॥ ೩೬ ॥

ಉಶಿಜಸ್ಯ ಕನೀಯಾಂಸ್ತು ಪುರೋಧಾ ಯೋ ದಿವೌಕಸಾಮ್ ।
ಬೃಹಸ್ಪತಿರ್ಬೃಹತ್ತೇಜಾ ಮಮತಾಂ ಸೋಽಭ್ಯಪದ್ಯತ ॥ ೩೭ ॥

ಉವಾಚ ಮಮತಾ ತಂ ತು ಬೃಹಸ್ಪತಿಮನಿಚ್ಛತೀ ।
ಅಂತರ್ವತ್ನ್ಯಸ್ಮಿ ತೇ ಭ್ರಾತುರ್ಜ್ಯೇಷ್ಠಸ್ಯಾಸ್ಯ ಚ ಭಾಮಿನೀ ॥ ೩೮ ॥

---

೩೫. ಆಗ ಋಷಿಗಳು ಇಂತೆಂದರು :—ಪ್ರಭುವಾದ ಮುನಿಯೆ! ಬಲಿರಾಜನ ಐದು ಮಂದಿ ಪುತ್ರರು ದೀರ್ಘತಮಾ ಎಂಬ ತಪಸ್ವಿಮುನಿಯಿಂದ ಕ್ಷೇತ್ರಜರಾಗಿ ಹೇಗೆ ಹುಟ್ಟಿದರು? ಈ ವಿಷಯವನ್ನು ಪ್ರಶ್ನಿಸುತ್ತಿರುವ ನಮಗೆ ಹೇಳು.

೩೬. ಸೂತ ಮುನಿಯು ಇಂತೆಂದನು :—ಪೂರ್ವದಲ್ಲಿ ಉಶಿಜ ಎಂಬ ನಾಮಾಂಕನದಿಂದ ವಿಖ್ಯಾತಿಹೊಂದಿದ ಒಬ್ಬ ಜ್ಞಾನಿಯಾದ ಮಹರ್ಷಿಯಿದ್ದನು. ಮಹಾತ್ಮನಾದ ಈ ಮುನಿಗೆ ಮಮತಾ ಎಂಬ ಭಾರ್ಯೆಯಿದ್ದಳು.

೩೭. ಆಗ ಸ್ವರ್ಗಲೋಕವಾಸಿಗಳಾದ ದೇವತೆಗಳಿಗೆ ಪುರೋಹಿತನೂ ಉಶಿಜ ಮುನಿಯ ಅನುಜನೂ ಮತ್ತು ಮಹಾತೇಜಃಶಾಲಿಯೂ ಆದ ಬೃಹಸ್ಪತಿಯು ಜ್ಯೇಷ್ಠ ಭ್ರಾತೃ ಪತ್ನಿಯಾದ ಮಮತೆಯನ್ನು ಕಾಮಿಸಿ ರಹಸ್ಸಿನಲ್ಲಿ ಸೇರಿದನು.

೩೮. ಆಗ ಮಮತೆಯು ಆ ಬೃಹಸ್ಪತಿಯ ಸಂಗವನ್ನು ಇಚ್ಛಿಸದೆ ಅವನನ್ನು ಕುರಿತು ಹೀಗೆ ಹೇಳಿದಳು :—ನಿನ್ನ ಜ್ಯೇಷ್ಠಭ್ರಾತೃವಿನ ಪತ್ನಿಯಾದ ನಾನು ಗರ್ಭವತಿಯಾಗಿರುವೆನು.

ಅಯಂ ಹಿ ಮೇ ಮಹಾನ್ ಗರ್ಭೋ ರೋರವೀತಿ ಬೃಹಸ್ಪತೇ ।
ಅಜಸ್ರಂ ಬ್ರಹ್ಮ ಚಾಭ್ಯಸ್ಯ ಷಡಂಗಂ ವೇದಮುದ್ಗಿರನ್ ॥ ೩೯ ॥

ಅಮೋಘರೇತಾಸ್ತ್ವಂ ಚಾಪಿ ನ ಮಾಂ ಭಜಿತುಮರ್ಹಸಿ ।
ಅಸ್ಮಿನ್ನೇವ ಯಥಾಕಾಲೇ ಯಥಾ ವಾ ಮನ್ಯಸೇ ವಿಭೋ ॥ ೪೦ ॥

ಏವಮುಕ್ತಸ್ತಯಾ ಸಮ್ಯಗ್ಬೃಹತ್ತೇಜಾ ಬೃಹಸ್ಪತಿಃ ।
ಕಾಮಾತ್ಮಾನಂ ಮಹಾತ್ಮಾಪಿ ನಾತ್ಮಾನಂ ಸೋಽಭ್ಯಧಾರಯತ್ ॥ ೪೧ ॥

ಸಂಬಭೂವೈವ ಧರ್ಮಾತ್ಮಾ ತಯಾ ಸಾರ್ಧಂ ಬೃಹಸ್ಪತಿಃ ।
ಉತ್ಸೃಜಂತಂ ತದಾ ರೇತೋ ಗರ್ಭಸ್ಥಃ ಸೋಽಸ್ಯ ಭಾಷತ ॥ ೪೨ ॥

ಶುಕ್ರಂ ತ್ಯಾಕ್ಷೀಶ್ಚ ಮಾ ಜೀವ ದ್ವಯೋರ್ನೇಹಾಸ್ತಿ ಸಂಭವಃ ।
ಅಮೋಘರೇತಾಸ್ತ್ವಂ ವಾಪಿ ಪೂರ್ವಂ ಚಾಹಮಿಹಾಗತಃ ॥ ೪೩ ॥

---

೩೯. ಬೃಹಸ್ಪತಿಯೆ! ಈ ನನ್ನ ಗರ್ಭಸ್ಥವಾದ ಮಹಾಶಿಶುವು ನಿರಂತರವಾಗಿ ಶಿಕ್ಷಾದಿಷಡಂಗಗಳಿಂದ ಕೂಡಿದ ವೇದವನ್ನು ಅಭ್ಯಾಸಮಾಡುತ್ತ ಧ್ವನಿಮಾಡುತ್ತಿರುವುದು.

೪೦. ವಿಭುವೆ! ನೀನು ಕೂಡ ಅಮೋಘವಾದ ಬೀಜವುಳ್ಳವನಾಗಿದ್ದೀಯೆ! ಆದ್ದರಿಂದ ನೀನು ಈಗ ಸಂಕಲ್ಪಿಸಿರುವಂತೆ ಈ ಸಮಯದಲ್ಲಿ ನನ್ನನ್ನು ಸಂಗಮಾಡಲು ಅರ್ಹನಾಗಿಲ್ಲ.

೪೧. ಮಹಾ ತೇಜಸ್ವಿಯಾದ ಬೃಹಸ್ಪತಿಯು ಆ ಮಮತೆಯಿಂದ ಸಮಂಜಸವಾಗಿ ಹೀಗೆ ಹೇಳಲ್ಪಟ್ಟವನಾದನು. ಆಗ ಮಹಾತ್ಮನಾದ ಬೃಹಸ್ಪತಿಯು ಕಾಮವಶನಾದ ತನ್ನನ್ನು ಸ್ಥಿರಪಡಿಸಲು ಶಕ್ತನಾಗಲಿಲ್ಲ.

೪೨. ಆಗ ಧರ್ಮಾತ್ಮನಾದ ಬೃಹಸ್ಪತಿಯು ಮಮತೆಯೊಡನೆ ಸಂಗಮಾಡಿದನು. ಆಗ ಮಮತೆಯಲ್ಲಿ ರೇತಸ್ಸನ್ನು ಸೇಚನಮಾಡುತ್ತಲಿದ್ದ ಬೃಹಸ್ಪತಿಯನ್ನು ಕುರಿತು ಗರ್ಭರೂಪವಾದ ಶಿಶುವು ಹೀಗೆ ಹೇಳಿತು.

೪೩. ಬೃಹಸ್ಪತಿಯೆ! ನೀನು ಇಲ್ಲಿ ಬೀಜವನ್ನು ಆಧಾನಮಾಡಬೇಡ, ಎರಡು ಪ್ರಜೆಗಳಿಗೆ ಇಲ್ಲಿ ಉತ್ಪತ್ತಿಯು ಆಗಲಾರದು. ನೀನು ಅಮೋಘವಾದ ರೇತಸ್ಸುಳ್ಳವನು, ಮತ್ತು ನಾನು ಪೂರ್ವದಲ್ಲಿ ಗರ್ಭವನ್ನು ಪ್ರವೇಶಿಸಿರುವೆನು.

ಶಶಾಪ ತಂ ತದಾ ಕ್ರುದ್ಧ ಏವಮುಕ್ತೋ ಬೃಹಸ್ಪತಿಃ ।
ಉಶಿಜಸ್ಯ ಸುತಂ ಭ್ರಾತುರ್ಗರ್ಭಸ್ಥಂ ಭಗವಾನೃಷಿಃ ॥ ೪೪ ॥

ಯಸ್ಮಾತ್ತ್ವಮೀದೃಶೇ ಕಾಲೇ ಸರ್ವಭೂತೇಪ್ಸಿತೇ ಸತಿ ।
ಮಾಮೇವಮುಕ್ತವಾನ್ ಮೋಹಾತ್ತಮೋ ದೀರ್ಘಂ ಪ್ರವೇಕ್ಷ್ಯಸಿ
॥ ೪೫ ॥

ತತೋ ದೀರ್ಘತಮಾ ನಾಮ ಶಾಪಾದೃಷಿರಜಾಯತ ।
ಅಥೌಶಿಜೋ ಬೃಹತ್ಕೀರ್ತಿರ್ಬೃಹಸ್ಪತಿರಿವೌಜಸಾ ॥ ೪೬ ॥

ಊರ್ಧ್ವರೇತಾಸ್ತತಶ್ಚಾಪಿ ನ್ಯವಸದ್ಭ್ರಾತುರಾಶ್ರಮೇ ।
ಗೋಧರ್ಮಂ ಸೌರಭೇಯಾತ್ತು ವೃಷಭಾಚ್ಛ್ರುತವಾನ್ ಪ್ರಭೋಃ
॥ ೪೭ ॥

ತಸ್ಯ ಭ್ರಾತಾ ಪಿತೃವ್ಯಸ್ತು ಚಕಾರ ಭವನಂ ತದಾ ।
ತಸ್ಮಿನ್ ಹಿ ತತ್ರ ವಸತಿ ಯದೃಚ್ಛಾಭ್ಯಾಗತೋ ವೃಷಃ ॥ ೪೮ ॥

---

೪೪. ಹೀಗೆ ಹೇಳಲ್ಪಟ್ಟ ಭಗವಂತನಾದ ಬೃಹಸ್ಪತಿ ಮುನಿಯು ಜ್ಯೇಷ್ಠ ಭ್ರಾತೃವಾದ ಉಶಿಜನ ಗರ್ಭಸ್ಥನಾದ ಪುತ್ರನಲ್ಲಿ ಆಗ ಬಹಳ ಕೋಪಗೊಂಡವನಾಗಿ ಅವನನ್ನು ಶಪಿಸಿದನು.

೪೫. ಸರ್ವಪ್ರಾಣಿಗಳಿಂದಲೂ ಕಾಮಿತವಾದ ಇಂತಹ ಕಾಮಿನೀ ಸಂಗಸೌಖ್ಯ ಪ್ರಸಂಗ ಸಮಯದಲ್ಲಿ ನೀನು ಮೋಹದಿಂದ ನನಗೆ ಈ ರೀತಿಯಾಗಿ ಹೇಳುತ್ತಿರುವುದರಿಂದ ದೀರ್ಘವಾದ ತಮಸ್ಸನ್ನು ಪ್ರವೇಶಿಸುತ್ತೀ, ಹೀಗೆಂದು ಶಾಪಕೊಟ್ಟನು.

೪೬. ತರುವಾಯ ಮಹತ್ತಾದ ಕೀರ್ತಿಶಾಲಿಯೂ ಓಜೋಗುಣದಿಂದ ಬೃಹಸ್ಪತಿಗೆ ತುಲ್ಯನೂ ಆದ ಉಶಿಜಮುನಿಯ ಪುತ್ರನು ಬೃಹಸ್ಪತಿಯ ಶಾಪದಿಂದ ತಮೋಗುಣಭೂಯಿಷ್ಠನಾಗಿ ದೀರ್ಘತಮಾ ಎಂಬ ಅನ್ವರ್ಥನಾಮ ಪ್ರಸಿದ್ಧಿಯುಳ್ಳವನಾಗಿ ಜನಿಸಿದನು.

೪೭. ಅನಂತರದಲ್ಲಿ ತಾನು ಊರ್ಧ್ವರೇತನಾಗಿ ಭ್ರಾತೃವಿನ ಆಶ್ರಮ ಸಮೀಪದಲ್ಲಿ ವಾಸಮಾಡಿದನು. ಮತ್ತು ಸರ್ವೇಶ್ವರನೂ ಸುರಭಿ ಪುತ್ರನೂ ಆದ ವೃಷಭಮೂರ್ತಿಯಿಂದ ಗೋಧರ್ಮವನ್ನು ಶ್ರವಣಮಾಡಿದನು.

೪೮. ಆಗ ಅವನ ಭ್ರಾತೃವೂ ಪಿತೃವ್ಯನೂ ಕೂಡ ಗೃಹವನ್ನು ಮಾಡಿಕೊಂಡು ಗೃಹಸ್ಥಧರ್ಮದಿಂದ ಇದ್ದರು. ಆ ಗೃಹದಲ್ಲಿ ದೀರ್ಘತಮ ಋಷಿಯು ವಾಸಿಸುತ್ತಿರಲು ಆಕಸ್ಮಿಕವಾಗಿ ಒಂದು ವೃಷಭವು ಅಲ್ಲಿಗೆ ಬಂದಿತು.

**ದರ್ಶಾರ್ಥಮಾಸ್ತೃತಾನ್ ದರ್ಭಾಞ್ಜಚಾರ ಸುರಭೀಸುತಃ ।**
**ಜಗ್ರಾಹ ತಂ ದೀರ್ಘತಮಾ ವಿಸ್ಫುರಂತಂ ತು ಶೃಂಗಯೋಃ ॥ ೪೯ ॥**

**ಸ ತೇನ ನಿಗೃಹೀತಸ್ತು ನ ಚಚಾಲ ಪದಾತ್ಪದಮ್ ।**
**ತತೋಽಬ್ರವೀದ್ವೃಷಸ್ತಂ ವೈ ಮುಂಚ ಮಾಂ ಬಲಿನಾಂ ವರ ॥ ೫೦ ॥**

**ನ ಮಯಾಸಾದಿತಸ್ತಾತ ಬಲವಾಂಸ್ತ್ವದ್ವಿಧಃ ಕ್ವಚಿತ್ ।**
**ತ್ರ್ಯಂಬಕಂ ವಹತಾ ದೇವಂ ಯತೋ ಜಾತೋಽಸ್ಮಿ ಭೂತಲೇ॥ ೫೧ ॥**

**ಮುಂಚ ಮಾಂ ಬಲಿನಾಂ ಶ್ರೇಷ್ಠ ಪ್ರೀತಿಸ್ತೇಹಂ ವರಂ ವೃಣು ।**
**ಏವಮುಕ್ತೋಽಬ್ರವೀದೇನಂ ಜೀವಂಸ್ತ್ವಂ ಮೇ ಕ್ವ ಯಾಸ್ಯಸಿ॥ ೫೨ ॥**

**ತೇನ ತ್ವಾಹಂ ನ ಮೋಕ್ಷ್ಯಾಮಿ ಪರಸ್ವಾದಂ ಚತುಷ್ಪದಮ್ ।**
**ತತಸ್ತಂ ದೀರ್ಘತಮಸಂ ಸ ವೃಷಃ ಪ್ರತ್ಯುವಾಚ ಹ ॥ ೫೩ ॥**

---

೪೯. ಕಾಮಧೇನು ಪುತ್ರನಾದ ಆ ವೃಷಭವು ದರ್ಶೇಷ್ಟಿಗೋಸ್ಕರ ವೇದಿಯಲ್ಲಿ ಹಾಸಿರುವ ದರ್ಭಗಳನ್ನು ಭಕ್ಷಿಸಿತು. ಆಗ ದೀರ್ಘತಮ ಮುನಿಯು ಹೋರಾಡುತ್ತಿರುವ ಆ ವೃಷಭವನ್ನು ಶೃಂಗಗಳಲ್ಲಿ ಹಿಡಿದನು.

೫೦. ದೀರ್ಘತಮ ಮುನಿಯಿಂದ ಹಿಡಿದು ನಿಲ್ಲಿಸಲ್ಪಟ್ಟ ವೃಷಭವು ಒಂದು ಹೆಜ್ಜೆ ಕೂಡ ಚಲಿಸಲಾಗಲಿಲ್ಲ. ತರುವಾಯ ವೃಷಭವು ಮುನಿಯನ್ನು ಕುರಿತು ಹೇಳಿತು. ಶಕ್ತಿವಂತರಲ್ಲಿ ಗಣ್ಯನಾದವನೆ! ನನ್ನನ್ನು ಬಿಡು.

೫೧. ಪೂಜ್ಯನೆ, ಶಂಕರನಿಗೆ ವಾಹನವಾಗಿ ಅವನನ್ನು ವಹಿಸಿರುವ ನಾನು ಭೂಮಂಡಲ್ಲಿ ಜನಿಸಿರುವೆನು. ಇಂತಹ ನಾನು ಎಲ್ಲಿಯೂ ನಿನ್ನಂತೆ ಬಲಿಷ್ಠನಾದ ಮಾನವನನ್ನು ಹೊಂದಲಿಲ್ಲ.

೫೨. ಬಲವಂತರಲ್ಲಿ ಗಣ್ಯನಾದ ಮುನಿಯೆ! ನನ್ನನ್ನು ಬಿಡು, ನನ್ನನ್ನು ಬಿಟ್ಟು ವಿಶ್ವಾಸಕ್ಕೆ ಬದಲಾಗಿ ವರವನ್ನು ನನ್ನಲ್ಲಿ ಕೇಳು, ಹೀಗೆಂದು ವೃಷಭದಿಂದ ಹೇಳಲ್ಪಟ್ಟ ದೀರ್ಘತಮ ಮುನಿಯು ಪ್ರತ್ಯುತ್ತರವಿತ್ತನು:—ನನ್ನಿಂದ ನೀನು ಜೀವಂತನಾಗಿ ಹೋಗುವುದು ಎಲ್ಲಿ ಬಂತು?

೫೩. ಆದುದರಿಂದ ಪರಸ್ವವನ್ನು ಭಕ್ಷಿಸಿರುವ ಚತುಷ್ಪಾದ ಪ್ರಾಣಿಯಾದ ನಿನ್ನನ್ನು ನಾನು ಬಿಡುವುದಿಲ್ಲ. ಆಗ ಆ ವೃಷಭವು ಮತ್ತೆ ದೀರ್ಘತಮುವನ್ನು ಕುರಿತು ಹೇಳಿತು.

ನಾಽಸ್ಮಾಕಂ ವಿದ್ಯತೇ ತಾತ ಪಾತಕಂ ಸ್ತೇಯಮೇವ ಚ ।
ಭಕ್ಷ್ಯಾಭಕ್ಷ್ಯಂ ನ ಜಾನೀಮಃ ಪೇಯಾಪೇಯಂ ಚ ಸರ್ವಶಃ ॥ ೫೪ ॥

ಕಾರ್ಯಾಕಾರ್ಯಂ ಚ ವೈ ವಿಪ್ರ ಗಮ್ಯಾಗಮ್ಯಂ ತಥೈವ ಚ ।
ನ ಪಾಪ್ಮಾನೋ ವಯಂ ವಿಪ್ರ ಧರ್ಮೋ ಹ್ಯೇಷ ಗವಾಂ ಶ್ರುತಃ ॥ ೫೫ ॥

ಗವಾಂ ನಾಮ ಸ ವೈ ಶ್ರುತ್ವಾ ಸಂಭ್ರಾಂತಸ್ತಮಮುಂಚತ ।
ಭಕ್ತ್ಯಾ ಚಾನುಶ್ರವಿಕಯಾ ಗೋಸುತಂ ವೈ ಪ್ರಸಾದಯನ್ ॥ ೫೬ ॥

ಪ್ರಸಾದತೋ ವೃಷೇಂದ್ರಸ್ಯ ಗೋಧರ್ಮಂ ಜಗೃಹೇಽಥ ಸಃ ।
ಮನಸೈವ ತದಾ ದಧ್ರೇ ತನ್ನಿಷ್ಠಸ್ತತ್ಪರಾಯಣಃ ॥ ೫೭ ॥

ತತೋ ಯವೀಯಸಃ ಪತ್ನೀಮೌತಥ್ಯಸ್ಯಾಭ್ಯಮನ್ಯತ ।
ವಿಚೇಷ್ಟಮಾನಾಂ ರುದತೀಂ ದೈವಾತ್ ಸಂಮೂಢಚೇತನಃ ॥ ೫೮ ॥

---

೫೪. ಪೂಜ್ಯನೆ! ನಮಗೆ ಪಾತಕವು ಇಲ್ಲ. ಚೌರ್ಯ, ಭಕ್ಷ್ಯ–ಅಭಕ್ಷ್ಯಗಳ ವಿಭಾಗ ಮತ್ತು ಪೇಯ–ಅಪೇಯಗಳೆಂಬ ವಿಭಾಗ ಇವುಗಳಲ್ಲಿ ಯಾವ ವಿಧಿ–ನಿಷೇಧ ನಿಯಮಗಳೂ ನಮಗೆ ಇರುವದಿಲ್ಲ.

೫೫. ವಿಪ್ರನೆ! ಹಾಗೆ ವಿಧಿ–ನಿಯಮಗಳಿಗೆ ಗೋಚರವಾಗುವ ಕರ್ತವ್ಯ–ಅಕರ್ತವ್ಯ, ಗಮ್ಯ–ಅಗಮ್ಯಗಳ ವಿಭಾಗವು ನಮಗೆ ಇಲ್ಲ. ನಾವು ಪಾಪಸಂಗವುಳ್ಳವರಲ್ಲ. ಇದೆಲ್ಲವೂ ಗೋವುಗಳಿಗೆ ಧರ್ಮವಾಗಿ ಶ್ರುತವಾಗಿರುವುದು.

೫೬. ಹೀಗೆಂದು ಹೇಳಲು ಆ ಮುನಿಯು ಗೋನಾಮವನ್ನು ಶ್ರವಣಮಾಡಿದ ಕೂಡಲೆ ಗಾಬರಿಗೊಂಡವನಾಗಿ ಪುಣ್ಯಲೋಕ ಸಾಧನವಾದ ಗೋಭಕ್ತಿಯಿಂದ ಗೋಮಾತೆಯ ಪುತ್ರನನ್ನು ಸಮಾಧಾನಮಾಡುತ್ತ ಆ ವೃಷಭವನ್ನು ಬಿಟ್ಟನು.

೫೭. ಮತ್ತು ಆ ಮುನಿಯು ವೃಷಭೇಂದ್ರನ ಪ್ರಸಾದದಿಂದ ಗೋಧರ್ಮವನ್ನು ಗ್ರಹಿಸಿದನು. ಅದರಿಂದ ಗವಾತ್ಮಕನಾಗಿ ನಿರಂತರ ಗೋಧರ್ಮಾವಲಂಬನನಿಷ್ಠೆಯುಳ್ಳವನಾಗಿ ಮಾನಸದಿಂದ ಗೋಧರ್ಮವನ್ನು ಧರಿಸಿದನು.

೫೮. ಅನಂತರದಲ್ಲಿ ದೈವಬಲದಿಂದ ಮೋಹಗೊಂಡಿರುವ ಚೇತನಾಶಕ್ತಿಯುಳ್ಳವನಾಗಿ ರೋದನಮಾಡುತ್ತ ಸೆಲೆದಾಡುತ್ತಲಿರುವ ತನ್ನ ಕನಿಷ್ಠಭ್ರಾತೃವಾದ ಔತಥ್ಯನ ಪತ್ನಿಯನ್ನು ಕಾಮಿಸಿದನು.

**ಅವಲೇಪಂ ತು ತಂ ಮತ್ವಾ ಸುರದ್ವಾಂಸ್ತಸ್ಯ ನಾಕ್ಷಮತ್ ।**
**ಗೋಧರ್ಮಂ ವೈ ಬಲಂ ಕೃತ್ವಾ ಸ್ನುಷಾಂ ಸ ಹ್ಯಭ್ಯಮನ್ಯತ ॥ ೫೯ ॥**

**ವಿಪರ್ಯಯಂ ತು ತಂ ದೃಷ್ಟ್ವಾ ಶರದ್ವಾನ್ ಪ್ರವಿಚಿಂತ್ಯ ಚ ।**
**ಭವಿಷ್ಯಮರ್ಥಂ ಜ್ಞಾತ್ವಾ ಚ ಮಹಾತ್ಮಾ ತ್ವವಮತ್ಯ ತಮ್ ॥ ೬೦ ॥**

**ಪ್ರೋವಾಚ ದೀರ್ಘತಮಸಂ ಕ್ರೋಧಾತ್ಸಂರಕ್ತಲೋಚನಃ ।**
**ಗಮ್ಯಾಗಮ್ಯಂ ನ ಜಾನೀಷೇ ಗೋಧರ್ಮಾತ್ ಪ್ರಾರ್ಥಯನ್ ಸ್ನುಷಾಮ್ ॥ ೬೧ ॥**

**ದುರ್ವೃತ್ತಂ ತ್ವಾಂ ತ್ಯಜಾಮ್ಯೇಷ ಗಚ್ಛ ತ್ವಂ ಸ್ವೇನ ಕರ್ಮಣಾ ।**
**ಯಸ್ಮಾತ್ತ್ವಮಂಧೋ ವೃದ್ಧಶ್ಚ ಭರ್ತವ್ಯೋ ದುರನುಷ್ಠಿತಃ ॥ ೬೨ ॥**

**ತೇನಾಸಿ ತ್ವಂ ಪರಿತ್ಯಕ್ತೋ ದುರಾಚಾರೋಽಸಿ ಮೇ ಮತಃ ।**
**ಸೂತ ಉವಾಚ :—**
**ಕರ್ಮಣ್ಯಸ್ಮಿಂಸ್ತತಃ ಕ್ರೂರೇ ತಸ್ಯ ಬುದ್ಧಿರಜಾಯತ ॥ ೬೩ ॥**

---

೫೯. ಔತಥ್ಯ ಅಥವಾ ಶರದ್ವಾನ್ ಎಂಬ ಅನುಜನು ದೀರ್ಘತಮನ ಆ ಮದಾಂಧತೆಯನ್ನು ನೋಡಿ ಕ್ಷಮಿಸಲಾರದೆಹೋದನು. ಆದರೆ ದೀರ್ಘತಮನು ಗೋಧರ್ಮ ಭಾವನೆಯನ್ನು ಭಾವನಾಭ್ಯಾಸದಿಂದ ಬಲಮಾಡಿಕೊಂಡು ಸ್ನುಷೆಯನ್ನು ಮೋಹಿಸಿದನು.

೬೦. ಮಹಾತ್ಮನಾದ ಶರದ್ವಂತನು ಆ ವಿಪರ್ಯವನ್ನು ನೋಡಿ ಮನಸ್ಸಿನಲ್ಲಿ ಚನ್ನಾಗಿ ಯೋಚಿಸಿ ಭವಿಷ್ಯವಾದ ಅರ್ಥವನ್ನು ತಿಳಿದು ಅವನನ್ನು ಅವಮಾನ ದೃಷ್ಟಿಯಿಂದ ನೋಡಿದನು.

೬೧. ಆ ಶರದ್ವಂತನು ಕೋಪದಿಂದ ಕೆಂಪಾದ ನೇತ್ರಗಳುಳ್ಳವನಾಗಿ ದೀರ್ಘತಮನನ್ನು ಕುರಿತು ಹೀಗೆಂದು ಹೇಳಿದನು, ನೀನು ಗೋಧರ್ಮದಿಂದ ಸ್ನುಷೆಯನ್ನು ಪ್ರಾರ್ಥಿಸುತ್ತ ಗಮ್ಯ-ಅಗಮ್ಯ ವಿಭಾಗವನ್ನು ಅರಿಯದೆ ಇರುತ್ತೀಯೆ.

೬೨ ನೀನು ಅಂಧನೂ ವೃದ್ಧನೂ ಆಗಿ ರಕ್ಷಣೀಯನಾಗಿದ್ದರೂ ಕೆಟ್ಟ ನಡತೆಯುಳ್ಳವನಾಗಿದ್ದೀ, ಆ ಕಾರಣದಿಂದ ನಾನು ನಿನ್ನನ್ನು ತ್ಯಜಿಸುತ್ತೇನೆ. ನೀನು ನಿನ್ನ ದುಷ್ಕರ್ಮವಶನಾಗಿ ಹೊರಟುಹೋಗು.

೬೩. ನೀನು ದುರಾಚಾರಿಯೆಂದು ನನಗೆ ತಿಳಿದಿರುವುದು, ಅದರಿಂದ ನೀನು ನನ್ನಿಂದ ತ್ಯಜಿಸಲ್ಪಟ್ಟಿದ್ದೀಯೆ, ಹೀಗೆಂದು ಹೇಳಿದನು. ಆಗ ಸೂತಮುನಿಯು ಮುಂದುವರಿಸಿ ಇಂತೆಂದನು :—ತರುವಾಯ ಅವನ ಕ್ರೂರಕರ್ಮನಿಮಿತ್ತವಾಗಿ ಶರದ್ವಂತನಿಗೆ ಇಂತಹ ಬುದ್ಧಿಯು ಉತ್ಪನ್ನವಾಯಿತು.

**ನಿರ್ಭರ್ತ್ಸ್ಯ ಚೈವ ಬಹುಶೋ ಬಾಹುಭ್ಯಾಂ ಪರಿಗೃಹ್ಯ ಚ ।**
**ಕೋಷ್ಠೇ ಸಮುದ್ರೇ ಪ್ರಕ್ಷಿಪ್ಯ ಗಂಗಾಂಭಸಿ ಸಮುತ್ಸೃಜತ್ ॥ ೬೪ ॥**

**ಉಹ್ಯಮಾನಃ ಸಮುದ್ರಸ್ತು ಸಪ್ತಾಹಂ ಸ್ರೋತಸಾ ತದಾ ।**
**ತಂ ಸಸ್ತ್ರೀಕೋ ಬಲಿರ್ನಾಮ ರಾಜಾ ಧರ್ಮಾರ್ಥತತ್ತ್ವವಿತ್ ॥ ೬೫ ॥**

**ಅಪಶ್ಯನ್ಮಜ್ಜಮಾನಂ ತು ಸ್ರೋತಸೋಽಭ್ಯಾಶಮಾಗತಮ್ ।**
**ತಂ ಗೃಹೀತ್ವಾ ಸ ಧರ್ಮಾತ್ಮಾ ಬಲಿರ್ವೈರೋಚನಸ್ತದಾ ॥ ೬೬ ॥**

**ಅಂತಃಪುರೇ ಜುಗೋಪೈನಂ ಭಕ್ಷ್ಯೈರ್ಭೋಜ್ಯೈಶ್ಚ ತರ್ಪಯನ್ ।**
**ಪ್ರೀತಃ ಸ ವೈ ವರೇಣಾಥ ಛಂದಯಾಮಾಸ ವೈ ಬಲಿಮ್ ॥ ೬೭ ॥**

**ಸ ಚ ತಸ್ಮಾದ್ವರಂ ವವ್ರೇ ಪುತ್ರಾರ್ಥೀ ದಾನವರ್ಷಭಃ ।**

ಬಲಿರುವಾಚ :—

**ಸಂತಾನಾರ್ಥಂ ಮಹಾಭಾಗ ಭಾರ್ಯಾಯಾಂ ಮಮ ಮಾನದ॥ ೬೮ ॥**

---

೬೪. ಅದರಂತೆ ದೀರ್ಘತಮನನ್ನು ಅನೇಕಾವರ್ತಿ ಬೆದರಿಸಿ ಬಾಹುಗಳಿಂದ ಎತ್ತಿಕೊಂಡು ಚೀಲದಲ್ಲಿ ಬಂಧಿಸಿ ಸಮುದ್ರವನ್ನು ಸೇರುವ ಎಡೆಯಲ್ಲಿ ಗಂಗಾನದಿಯ ನೀರಿನಲ್ಲಿ ಬಿಟ್ಟನು.

೬೫. ಆ ಸಮುದ್ರದಲ್ಲಿ ಪ್ರವಾಹದಿಂದ ಏಳುದಿನಗಳ ವರೆಗೆ ತೇಲಿಸಲ್ಪಟ್ಟನು. ಆಗ ನಾರೀಸಹಿತನಾಗಿ ವಿಹಾರಕ್ಕಾಗಿ ಬಂದಿರುವ, ಧರ್ಮ–ಅರ್ಥಗಳ ತತ್ತ್ವವನ್ನು ಅರಿತಿರುವ ಬಲಿರಾಜನು ಅವನನ್ನು ನೋಡಿದನು.

೬೬. ಆಗ ಪ್ರವಾಹದಿಂದ ತೇಲಿಬಂದು ತನ್ನ ಸಮೀಪದಲ್ಲಿ ಮುಳುಗುತ್ತಲಿದ್ದುದನ್ನು ಬಲಿಯು ನೋಡಿದನು. ಆಗ ಧರ್ಮಾತ್ಮನಾಗಿರುವ ವಿರೋಚನ ಪುತ್ರನಾದ ಬಲಿಯು ಅವನನ್ನು ಹಿಡಿದೆತ್ತಿದನು.

೬೭. ಮತ್ತು ಅವನನ್ನು ತನ್ನ ಅಂತಃಪುರದಲ್ಲಿಟ್ಟುಕೊಂಡು ಭಕ್ಷ್ಯಭೋಜ್ಯಗಳಿಂದ ತೃಪ್ತಿಪಡಿಸುತ್ತ ರಕ್ಷಿಸಿದನು. ಅದರಿಂದ ಪ್ರೀತನಾದ ದೀರ್ಘತಮಮುನಿಯು ಆ ಬಲಿರಾಜನಿಗೆ ಇಷ್ಟವರಗಳನ್ನು ಕೊಟ್ಟು ಆನಂದಪಡಿಸಿದನು.

೬೮. ಆಗ ದಾನವರಲ್ಲಿ ಶ್ರೇಷ್ಠನಾದ ಬಲಿಯು ಪುತ್ರಾರ್ಥಿಯಾಗಿ ಮುನಿಯ ಸನ್ನಿಧಿಯಲ್ಲಿ ವರವನ್ನು ಬೇಡಿದನು. ಆ ಸಮಯದಲ್ಲಿ ಬಲಿಯು ಇಂತೆಂದನು :— ಮಾನವನ್ನು ಕರುಣಿಸುವವನೂ ಮಹಾಭಾಗನೂ ಆದ ಮುನಿಯೆ! ನನ್ನ ಭಾರ್ಯೆಯಲ್ಲಿ ಸಂತಾನವನ್ನು ಉಂಟುಮಾಡು.

ಪುತ್ರಾನ್ ಧರ್ಮಾರ್ಥಸಂಯುಕ್ತಾನುತ್ಪಾದಯಿತುಮರ್ಹಸಿ ।
ಏವಮುಕ್ತಸ್ತು ತೇನರ್ಷಿಸ್ತಥಾಸ್ತ್ವಿತ್ಯುಕ್ತವಾನ್ ಹಿ ತಮ್ ॥ ೭೯ ॥

ಸುದೇಷ್ಣಾಂ ನಾಮ ಭಾರ್ಯಾಂ ಸ್ವಾಂ ರಾಜಾಸ್ಮೈ ಪ್ರಾಹಿಣೋತ್ತದಾ।
ಅಂಧಂ ವೃದ್ಧಂ ಚ ತಂ ದೃಷ್ಟ್ವಾ ನ ಸಾ ದೇವೀ ಜಗಾಮ ಹ ॥ ೭೦ ॥

ಸ್ವಾಂ ಚ ಧಾತ್ರೇಯಿಕಾಂ ತಸ್ಮೈ ಭೂಷಯಿತ್ವಾ ವ್ಯಸರ್ಜಯತ್ ।
ಕಕ್ಷೀವಚ್ಚಕ್ಷುಷೌ ತಸ್ಯಾಂ ಶೂದ್ರ್ಯಾಯೋನ್ಯಾವ್ಯೃಷಿರ್ವಶೀ ॥ ೭೧ ॥

ಜನಯಾಮಾಸ ಧರ್ಮಾತ್ಮಾ ಪುತ್ರಾವೇತೌ ಮಹೌಜಸೌ ।
ಕಕ್ಷೀವಚ್ಚಕ್ಷುಷೌ ತೌ ತು ದೃಷ್ಟ್ವಾ ರಾಜಾ ಬಲಿಸ್ತದಾ ॥ ೭೨ ॥

ಅಧೀತೌ ವಿಧಿವತ್ಸಮ್ಯಗೀಶ್ವರೌ ಬ್ರಹ್ಮವಾದಿನೌ ।
ಸಿದ್ಧೌ ಪ್ರತ್ಯಕ್ಷಧರ್ಮಾಣೌ ಬುದ್ಧೌ ಶ್ರೇಷ್ಠತಮಾವಪಿ ॥ ೭೩ ॥

---

೬೯. ನೀನು ಧರ್ಮ-ಅರ್ಥಗಳಿಂದ ಕೂಡಿರುವ ಉತ್ತಮರಾದ ಪುತ್ರರನ್ನು ನನ್ನ ಭಾರ್ಯೆಯಲ್ಲಿ ಸಂಪಾದಿಸಲು ಅರ್ಹನಾಗಿದ್ದೀಯೆ, ಹೀಗೆಂದು ಬಲಿಯಿಂದ ಪ್ರಾರ್ಥಿಸಲ್ಪಟ್ಟ ಮುನಿಯು ಹಾಗಾಗಲಿ ಎಂದು ಹೇಳಿ ಅವನ ಹಿತವನ್ನು ಅಂಗೀಕರಿಸಿದನು.

೭೦. ಮತ್ತು ಆಗ ಸುದೇಷ್ಣಾ ಎಂಬ ತನ್ನ ಭಾರ್ಯೆಯನ್ನು ಬಲಿರಾಜನು ಮುನಿಯ ಸನ್ನಿಧಿಗೆ ಕಳುಹಿಸಿದನು. ಆದರೆ ಆ ರಾಣಿಯು ಮುನಿಯು ಅಂಧನೂ ವೃದ್ಧನೂ ಆಗಿರುವುದನ್ನು ನೋಡಿ ಅವನ ಸಂಗಕ್ಕೆ ಹೋಗಲಿಲ್ಲ.

೭೧. ಮತ್ತು ಶೂದ್ರ ಜಾತಿಯ ತನ್ನ ದಾದಿಯೊಬ್ಬಳನ್ನು ಅಲಂಕರಿಸಿ ಮುನಿಯೊಂದಿಗೆ ಬಿಟ್ಟಳು. ಸ್ವತಂತ್ರನಾದ ದೀರ್ಘತಮ ಮುನಿಯು ಆ ಶೂದ್ರಾಂಗನೆಯಲ್ಲಿ ಕಕ್ಷೀವಾನ್, ಚಕ್ಷು ಎಂಬ ಇಬ್ಬರು ಪುತ್ರರನ್ನು ಸೃಜಿಸಿದನು.

೭೨. ಧರ್ಮರೂಪಿಯಾದ ದೀರ್ಘತಮಮುನಿಯು ಮಹಾಓಜಃಶಾಲಿಗಳಾದ ಈ ಪುತ್ರರನ್ನು ಹೊಂದಿದನು. ಆಗ ಬಲಿರಾಜನು ಕಕ್ಷೀವಾನ್, ಚಕ್ಷು ಎಂಬ ಪುತ್ರಯುಗ್ಮವನ್ನು ನೋಡಿದನು.

೭೩. ಆ ಪುತ್ರರು ವಿಧಿಯನ್ನು ಅನುಸರಿಸಿ ಅಧ್ಯಯನಮಾಡಿದವರೂ, ಉತ್ತಮರಾದ ಐಶ್ವರ್ಯಶಕ್ತಿಸಂಪನ್ನರೂ ಬ್ರಹ್ಮವಾದಿಗಳೂ, ಸಿದ್ಧಿಯನ್ನು ಹೊಂದಿರುವವರೂ, ಪ್ರತ್ಯಕ್ಷ ಧರ್ಮಮಯಮೂರ್ತಿಯುಳ್ಳವರೂ ಮತ್ತು ಬುದ್ಧಿಯಲ್ಲಿ ಅತ್ಯಂತ ಶ್ರೇಷ್ಠರೂ ಆಗಿದ್ದರು.

ಮಮೈತಾವಿತಿ ಹೋವಾಚ ಬಲಿರ್ವೈರೋಚನಸ್ತ್ವೃಷಿಮ್ ।
ನೇತ್ಯುವಾಚ ತತಸ್ತಂ ತು ಮಮೈತಾವಿತಿ ಚಾಬ್ರವೀತ್ ॥ ೭೪ ॥

ಉತ್ಪನ್ನೌ ಶೂದ್ರಯೋನೌ ತು ಭವತಃ ಸ್ಮಾಸುರೋತ್ತಮೌ ।
ಅಂಧಂ ವೃದ್ಧಂ ಚ ಮಾಂ ಮತ್ವಾ ಸುದೇಷ್ಣಾ ಮಹಿಷೀ ತವ ॥ ೭೫ ॥

ಪ್ರಾಹಿಣೋದವಮಾನೀಯ ಶೂದ್ರೀಂ ಧಾತ್ರೇಯಿಕಾಂ ಮಮ ।
ತತಃ ಪ್ರಸಾದಯಾಮಾಸ ಪುನಸ್ತಮೃಷಿಸತ್ತಮಮ್ ॥ ೭೬ ॥

ಬಲಿರ್ಭಾರ್ಯಾಂ ಸುದೇಷ್ಣಾಂ ಚ ಭರ್ತ್ಸಯಾಮಾಸ ವೈ ಪ್ರಭುಃ ।
ಪುನಶ್ಚೈನಾಮಲಂಕೃತ್ಯ ಋಷಯೇ ಪ್ರತ್ಯಪಾದಯತ್ ॥ ೭೭ ॥

ತಾಂ ಸ ದೀರ್ಘತಮಾ ದೇವೀಮಬ್ರವೀದ್ಯದಿ ಮಾಂ ಶುಭೇ ।
ದಧ್ನಾ ಲವಣಮಿಶ್ರೇಣ ಸ್ವಭ್ಯಕ್ತಂ ನಗ್ನಕಂ ತಥಾ ॥ ೭೮ ॥

---

೭೪. ಅವರನ್ನು ನೋಡಿ ವಿರೋಚನಾಸುರ ಪುತ್ರನಾದ ಬಲಿರಾಜನು ಮುನಿಯನ್ನು ಕುರಿತು ಈ ಪುತ್ರರು ನನ್ನವರೆಂದು ಹೇಳಿದನು, ತರುವಾಯ ಮುನಿಯು ಆಗುವುದಿಲ್ಲ; ಇವರು ನನ್ನ ಪುತ್ರರು ಎಂದು ಹೇಳಿದನು.

೭೫. ಈ ದ್ವಿಜೋತ್ತಮರು ಶೂದ್ರಾಂಗನೆಯಲ್ಲಿ ಜನಿಸಿದವರಾಗಿರುವರು. ನಿನ್ನ ಪಟ್ಟದರಸಿಯಾದ ಸುದೇಷ್ಣೆಯು ನನ್ನನ್ನು ಅಂಧನೂ, ವೃದ್ಧನೂ ಆದವನೆಂದು ಜುಗುಪ್ಸೆಯಿಂದ ನೋಡಿದಳು.

೭೬. ಅದರಿಂದ ನನಗೆ ಅವಮಾನಮಾಡಿ ಶೂದ್ರಜಾತಿಯ ತನ್ನ ದಾದಿಯನ್ನು ನನ್ನ ಬಳಿಗೆ ಕಳುಹಿಸಿದಳು. ಆಗ ಬಲಿರಾಜನು ಮತ್ತೆ ಮುನಿಶ್ರೇಷ್ಠನಾದ ಆ ದೀರ್ಘತಮುನನ್ನು ಸಮಾಧಾನಪಡಿಸಿದನು.

೭೭. ಮತ್ತು ಪ್ರಭುವಾದ ಬಲಿರಾಜನು ತನ್ನ ಭಾರ್ಯೆಯಾದ ಸುದೇಷ್ಣಾ ದೇವಿಯನ್ನು ಬೆದರಿಸಿದನು. ಮತ್ತೆ ಅವಳನ್ನು ಚನ್ನಾಗಿ ಅಲಂಕಾರಮಾಡಿಸಿ ಋಷಿಯ ಸನ್ನಿಧಿಯಲ್ಲಿ ಅರ್ಪಿಸಿದನು.

೭೮. ಆಗ ದೀರ್ಘತಮಮುನಿಯು ತನ್ನ ಸನ್ನಿಧಿಗೆ ಬಂದ ಸುದೇಷ್ಣೆಯನ್ನು ನೋಡಿ ಹೀಗೆ ಹೇಳಿದನು:—ಮಂಗಳಶೀಲಳೆ! ನೀನು ನನ್ನನ್ನು ಲವಣ ಮಿಶ್ರವಾದ ದಧಿಯಿಂದ ಸರ್ವಗಾತ್ರದಲ್ಲಿ ಲೇಪಿಸಿ ನಗ್ನನನ್ನಾಗಿ ಇರಿಸು.

ಲೇಹಿಷ್ಯಸ್ಯಜುಗುಪ್ಸಂತೀ ಹ್ಯಾಪಾದತಲಮಸ್ತಕಮ್ ।
ತತಸ್ತ್ವಂ ಪ್ರಾಪ್ಸ್ಯಸೇ ದೇವಿ ಪುತ್ರಾಂಶ್ಚ ಮನಸೇಪ್ಸಿತಾನ್ ॥ ೭೯ ॥

ತಸ್ಯ ಸಾ ತದ್ವಚೋ ದೇವೀ ಸರ್ವಂ ಕೃತವತೀ ತಥಾ ।
ಅಪಾನಂ ಚ ಸಮಾಸಾದ್ಯ ಜುಗುಪ್ಸಂತೀ ಹ್ಯವರ್ಜಯತ್ ॥ ೮೦ ॥

ತಮುವಾಚ ತತಃ ಸರ್ಷಿರ್ಯಸ್ತೇ ಪರಿಹೃತಂ ಶುಭೇ ।
ವಿನಾಪಾನಂ ಕುಮಾರಂ ತ್ವಂ ಜನಯಿಷ್ಯಸಿ ಪೂರ್ವಜಮ್ ॥ ೮೧ ॥

ತತಸ್ತು ದೀರ್ಘತಮಸಂ ಸಾ ದೇವೀ ಪ್ರತ್ಯುವಾಚ ಹ ।
ನಾರ್ಹಸಿ ತ್ವಂ ಮಹಾಭಾಗ ಪುತ್ರಂ ದಾತುಂ ಮಮೇದೃಶಮ್ ॥ ೮೨ ॥

ಋಷಿರುವಾಚ :—

ತವಾಪರಾಧೋ ದೇವ್ಯೇಷ ನಾನ್ಯಥಾ ಭವಿತಾ ತು ವೈ ।
ದೇವೀದೃಶಂ ಚ ತೇ ಪೌತ್ರಮಹಂ ದಾಸ್ಯಾಮಿ ಸುವ್ರತೇ ॥ ೮೩ ॥

---

೭೯. ಹಾಗು ನನ್ನ ಗಾತ್ರದಲ್ಲಿ ಪಾದಾದಿಶಿರಃ ಪರ್ಯಂತವಾದ ಸಕಲಾವಯವಗಳನ್ನು ಜುಗುಪ್ಸೆಪಡದೆ ಲೇಹನಮಾಡು. ದೇವಿಯೆ! ಹಾಗಾದರೆ ನಿನ್ನ ಮನಸ್ಸೊಪ್ಪುವ ಉತ್ತಮ ಪುತ್ರರನ್ನು ನೀನು ಹೊಂದುತ್ತೀಯೆ.

೮೦. ಅದನ್ನು ಕೇಳಿ ಆ ದೇವಿಯು ಮುನಿಯ ವಚನವನ್ನು ಎಲ್ಲ ಹಾಗೆಯೇ ನೆರವೇರಿಸಿದಳು. ಸಕಲಾವಯವಗಳಲ್ಲಿ ಅಪಾನ ಪ್ರದೇಶವನ್ನು ಮಾತ್ರ ಜುಗುಪ್ಸೆಯಿಂದ ಲೇಹನಮಾಡದೆ ಬಿಟ್ಟಳು.

೮೧. ತರುವಾಯ ಆ ಮುನಿಯು ರಾಣಿಯನ್ನು ಕುರಿತು ಹೇಳಿದನು :— ಮಂಗಳಸ್ವರೂಪಳೇ! ನನ್ನ ಅಪಾನಾವಯವವನ್ನು ನೀನು ಬಿಟ್ಟಿರುವುದರಿಂದ ಅಪಾನೇಂದ್ರಿಯವಿಲ್ಲದ ಅಗ್ರಜನಾದ ಕುಮಾರನನ್ನು ನೀನು ಪ್ರಸವಿಸುತ್ತೀಯೆ.

೮೨. ಆಗ ಆ ದೇವಿಯು ದೀರ್ಘತಮಮುನಿಯನ್ನು ಕುರಿತು ಪ್ರತಿವಚನವನ್ನು ಆಡಿದಳು. ಮಹಾಭಾಗನೆ! ನೀನು ನನಗೆ ಇಂತಹ ಪುತ್ರನನ್ನು ಕೊಡುವುದು ಉಚಿತವಲ್ಲ.

೮೩. ಅದಕ್ಕೆ ಮುನಿಯು ಹೀಗೆ ಪ್ರತ್ಯುತ್ತರವನ್ನಿತ್ತನು :—ದೇವಿಯೆ! ಇದು ನಿನ್ನ ಅಪರಾಧವಾಗಿರುವುದು. ಇದೆಂದಿಗೂ ಅನ್ಯಥಾ ಆಗುವುದಿಲ್ಲ. ಉತ್ತಮ ನಿಯಮಾಸಕ್ತಳಾದ ದೇವಿಯೆ! ಆದರೆ ಅಪಾನ ಶೂನ್ಯನಾದ ಪೌತ್ರನನ್ನು ಕೊಡುವೆನು.

ತಸ್ಯಾಪಾನಂ ವಿನಾ ಚೈವ ಯೋಗ್ಯಭಾವೋ ಭವಿಷ್ಯತಿ ।
ತಾಂ ಸ ದೀರ್ಘತಮಾಶ್ಚೈವ ಕುಕ್ಷೌ ಸ್ಪೃಷ್ಟ್ವೇದಮಬ್ರವೀತ್ ॥ ೮೪ ॥

ಪ್ರಾಶಿತಂ ದಧಿ ಯತ್ತ್ವೇಽದ್ಯ ಮಮಾಂಗಾದ್ವೈ ಶುಚಿಸ್ಮಿತೇ ।
ತೇನ ತೇ ಪೂರಿತೋ ಗರ್ಭಃ ಪೌರ್ಣಮಾಸ್ಯಾಮಿವೋದಧಿಃ ॥ ೮೫ ॥

ಭವಿಷ್ಯಂತಿ ಕುಮಾರಾಸ್ತೇ ಪಂಚ ದೇವಸುತೋಪಮಾಃ ।
ತೇಜಸ್ವಿನಃ ಪರಾಕ್ರಾಂತಾ ಯಜ್ವಾನೋ ಧಾರ್ಮಿಕಾಸ್ತಥಾ ॥ ೮೬ ॥

ತತೋಽಂಗಸ್ತು ಸುದೇಷ್ಣಾಯಾ ಜ್ಯೇಷ್ಠಪುತ್ರೋ ವ್ಯಜಾಯತ ।
ವಂಗಸ್ತಸ್ಮಾತ್ಕಲಿಂಗಸ್ತು ಪುಂಡ್ರಃ ಸುಹ್ಮಸ್ತಥೈವ ಚ ॥ ೮೭ ॥

ವಂಶಭಾಜಸ್ತು ಪಂಚೈತೇ ಬಲೇಃ ಕ್ಷೇತ್ರೇಽಭವಂಸ್ತದಾ ।
ಇತ್ಯೇತೇ ದೀರ್ಘತಮಸಾ ಬಲೇರ್ದತ್ತಾಃ ಸುತಾಃ ಪುರಾ ॥ ೮೮ ॥

---

೮೪. ಆ ಪೌತ್ರನಿಗೆ ಅಪಾನವಿಲ್ಲದ ನಿಮಿತ್ತದಿಂದ ಶ್ಲಾಘ್ಯವಾದ ಯೋಗ್ಯತಾ ವಿಶೇಷವು ಉಂಟಾಗುವುದು. ಆ ದೀರ್ಘತಮಮುನಿಯು ಆ ರಾಣಿಯನ್ನು ಉದರ ಸ್ಥಳದಲ್ಲಿ ಸ್ಪರ್ಶಿಸಿ ಈ ವಚನವನ್ನು ಹೇಳಿದನು.

೮೫. ಶುಭ್ರವಾದ ಮಂದಹಾಸಕಾಂತಿಯುಳ್ಳವಳೆ! ನನ್ನ ಅಂಗದಿಂದ ನೀನು ದಧಿಯನ್ನು ಪ್ರಾಶನಮಾಡಿರುತ್ತೀಯೆ, ಆದ್ದರಿಂದ ಪೂರ್ಣಿಮಾತಿಥಿಯಲ್ಲಿ ಸಮುದ್ರವು ಪೂರ್ಣವಾಗಿರುವಂತೆ ನಿನ್ನ ಗರ್ಭವು ಪರಿಪೂರ್ಣವಾಗಿ ಬೆಳೆಯುವುದು.

೮೬. ಆ ಪರಿಪೂರ್ಣಗರ್ಭದಲ್ಲಿ ತೇಜಸ್ವಿಗಳೂ, ಪರಾಕ್ರಮಿಗಳೂ, ಯಜ್ಞದೀಕ್ಷಾನುಷ್ಠಾಯಿಗಳೂ, ಅತ್ಯಂತ ಧಾರ್ಮಿಕರೂ ಮತ್ತು ದೇವಪುತ್ರರಿಗೆ ಸಮಾನವಾದ ಮಹಿಮೆಯುಳ್ಳವರೂ ಆದ ಐದು ಮಂದಿ ಕುಮಾರರು ಜನಿಸುವರು.

೮೭. ತರುವಾಯ ಸುದೇಷ್ಣಾದೇವಿಯಲ್ಲಿ ಅಂಗ ಎಂಬ ಜ್ಯೇಷ್ಠಕುಮಾರನು ಜನಿಸಿದನು. ಅವನಿಂದ ಮುಂದೆ ವಂಗ, ಕಲಿಂಗ, ಪುಂಡ್ರ ಮತ್ತು ಸುಹ್ಮ ಎಂಬ ನಾಲ್ವರು ಪುತ್ರರು ಕ್ರಮವಾಗಿ ಜನ್ಮವೆತ್ತಿದರು.

೮೮. ಆಗ ವಂಶಧಾರಕರಾದ ಐದು ಮಂದಿ ಪುತ್ರರು ಬಲಿರಾಜನ ಕ್ಷೇತ್ರದಲ್ಲಿ ಹುಟ್ಟಿದರು. ಹೀಗೆ ಪೂರ್ವಕಾಲದಲ್ಲಿ ದೀರ್ಘತಮಮುನಿಯಿಂದ ಬಲಿರಾಜನಿಗೆ ಈ ಐದು ಮಂದಿ ಪುತ್ರರು ಕೊಡಲ್ಪಟ್ಟರು.

ಪ್ರಜಾ ಹ್ಯುಪಹತಾಸ್ತಸ್ಯ ಬ್ರಹ್ಮಣಾ ಕಾರಣಂ ಪ್ರತಿ ।
ಅಪತ್ಯಮಸ್ಯ ದಾರೇಷು ಸ್ವೇಷು ಮಾಭೂನ್ಮಹಾತ್ಮನಃ　　॥ ೮೯ ॥

ತತೋ ಮನುಷ್ಯಯೋನ್ಯಾಂ ವೈ ಜನಯಾಮಾಸ ಸ ಪ್ರಜಾಃ ।
ಸುರಭಿರ್ದೀರ್ಘತಮಸಮಥ ಪ್ರೀತೋ ವಚೋಽಬ್ರವೀತ್　　॥ ೯೦ ॥

ವಿಚಾರ್ಯ ಯಸ್ಮಾದ್ಗೋಧರ್ಮಂ ತ್ವಮೇವಂ ಕೃತವಾನಸಿ ।
ಭಕ್ತ್ಯಾ ಚಾನನ್ಯಯಾಽಸ್ಮಾಸು ಮುನೇ ಪ್ರೀತಾಸ್ಮಿ ತೇನ ತೇ　॥ ೯೧ ॥

ತಸ್ಮಾತ್ತವ ತಮೋ ದೀರ್ಘಂ ನಿಸ್ತುದಾಮ್ಯದ್ಯ ಪಶ್ಯ ವೈ ।
ಬಾರ್ಹಸ್ಪತ್ಯಂ ಚ ಯತ್ತೇಽನ್ಯತ್ಪಾಪಂ ಸಂತಿಷ್ಠತೇ ತನೌ　　॥ ೯೨ ॥

ಜರಾಮೃತ್ಯುಭಯಂ ಚೈವ ಹ್ಯಾಘ್ರಾಯ ಪ್ರಣುದಾಮಿ ತೇ ।
ಆಘ್ರಾತಮಾತ್ರೋಽಸೌ ಪಶ್ಯತ್ ಸದ್ಯಸ್ತಮಸಿ ನಾಶಿತೇ　　॥ ೯೩ ॥

---

೮೯. ಮಹಾತ್ಮನಾದ ಆ ಬಲಿಚಕ್ರವರ್ತಿಗೆ ತನ್ನ ಭಾರ್ಯೆಯರಲ್ಲಿ ಸಂತತಿಯಾಗದಂತೆ ಬ್ರಹ್ಮದೇವನಿಂದ ಒಂದು ನಿಮಿತ್ತ ವಿಶೇಷದಿಂದ ಔರಸಪ್ರಜೆಯು ಪ್ರತಿಬಂಧಿಸಲ್ಪಟ್ಟಿತು.

೯೦. ತರುವಾಯ ಬಲಿಚಕ್ರವರ್ತಿಯು ಮನುಷ್ಯಯೋನಿಯಲ್ಲಿ ಪ್ರಜಾವರ್ಗವನ್ನು ಹೊಂದಿದನು. ಈ ರೀತಿಯಾದ ಪ್ರಸಂಗದಲ್ಲಿ ನಿರತನಾದ ದೀರ್ಘತಮ ಮುನಿಯಲ್ಲಿ ಕಾಮಧೇನುವು ಸುಪ್ರೀತವಾಗಿ ಬಂದು ಈ ಮಾತನ್ನು ಹೇಳಿತು.

೯೧. ಮುನಿಯೆ! ನಮ್ಮಲ್ಲಿ ಅನನ್ಯ ಸಾಧಾರಣವಾದ ಭಕ್ತಿಯನ್ನು ತೋರಿಸಿ ಗೋಧರ್ಮವನ್ನು ಚನ್ನಾಗಿ ವಿಚಾರಮಾಡಿ ಈ ರೀತಿಯಾಗಿ ನೀನು ನಡೆದುಕೊಂಡು ಇರುವುದರಿಂದ ನಾನು ನಿನ್ನ ವಿಷಯದಲ್ಲಿ ಪ್ರೀತಿಹೊಂದಿರುವೆನು.

೯೨ ಆದ್ದರಿಂದ ನಿನ್ನ ದೀರ್ಘವಾದ ತಪಸ್ಸನ್ನೂ ಮತ್ತು ಬೃಹಸ್ಪತಿಯ ಶಾಪದೋಷದಿಂದ ನಿನ್ನ ದೇಹದಲ್ಲಿ ಅಂಟಿಕೊಂಡಿರುವ ಇತರ ಸಮಸ್ತ ಪಾಪಗಳನ್ನೂ ಈಗ ಹೋಗಲಾಡಿಸುತ್ತೇನೆ, ನೋಡು.

೯೩. ಅಲ್ಲದೆ ನಿನ್ನಲ್ಲಿರುವ ಜರಾ-ಮರಣಗಳ ಭಯವನ್ನು ಕೂಡ ಒಂದು ಸಲ ಮೂಸಿ ನೋಡಿದ ಮಾತ್ರದಿಂದಲೇ ಹೋಗಲಾಡಿಸುತ್ತೇನೆ. ಹೀಗೆಂದು ಹೇಳಿ ಸುರಭಿಯಿಂದ ಮೂಸಿ ನೋಡಲ್ಪಡುವಷ್ಟರಲ್ಲಿ ತಮಸ್ಸು ಪೂರ್ಣವಾಗಿ ನಾಶಹೊಂದಲು ಮುನಿಯು ನೇತ್ರಗಳಿಂದ ನೋಡಿದನು.

ಆಯುಷ್ಮಾಂಶ್ಚ ಯುವಾ ಚೈವ ಚಕ್ಷುಷ್ಮಾಂಶ್ಚ ತತೋಽಭವತ್ ।
ಗವಾ ಹೃತತಮಾಃ ಸೋಽಥ ಗೌತಮಃ ಸಮಪದ್ಯತ ॥ ೯೪ ॥

ಕಕ್ಷೀವಾಂಸ್ತು ತತೋ ಗತ್ವಾ ಸಹ ಪಿತ್ರಾ ಗಿರಿವ್ರಜಮ್ ।
ಯಥೋದ್ದಿಷ್ಟಂ ಹಿ ಪಿತ್ರಾಥ ಚಚಾರ ವಿಪುಲಂ ತಪಃ ॥ ೯೫ ॥

ತತಃ ಕಾಲೇನ ಮಹತಾ ತಪಸಾ ಭಾವಿತಃ ಸ ವೈ ।
ವಿಧೂಯ ಸಾನುಜೋ ದೋಷಾನ್ ಬ್ರಾಹ್ಮಣ್ಯಂ ಪ್ರಾಪ್ತವಾನ್
ಪ್ರಭುಃ ॥ ೯೬ ॥

ತತೋಽಬ್ರವೀತ್ ಪಿತಾ ತ್ವೇನಂ ಪುತ್ರವಾನಸ್ಮ್ಯಹಂ ಪ್ರಭೋ ।
ಸುಪುತ್ರೇಣ ತ್ವಯಾ ತಾತ ಕೃತಾರ್ಥಶ್ಚ ಯಶಸ್ವಿನಾ ॥ ೯೭ ॥

ಯುಕ್ತಾತ್ಮಾನಂ ತತಃ ಸೋಽಥ ಪ್ರಾಪ್ತವಾನ್ ಬ್ರಹ್ಮಣಃ ಕ್ಷಯಮ್ ।
ಬ್ರಾಹ್ಮಣ್ಯಂ ಪ್ರಾಪ್ಯ ಕಕ್ಷೀವಾನ್ ಸಹಸ್ರಮಸೃಜತ್ ಸುತಾನ್ ॥ ೯೮ ॥

---

೯೪. ಮತ್ತು ಅದರ ಪ್ರಸಾದದಿಂದ ಆಯುಷ್ಮಂತನೂ, ತರುಣನೂ ಹಾಗು ದೃಷ್ಟಿಯುಳ್ಳವನೂ ಆದನು. ಹೀಗೆ ಆ ಮುನಿಯು ಗೋವಿನಿಂದ ಹೋಗಲಾಡಿಸಲ್ಪಟ್ಟ ತಮಸ್ಸು ಉಳ್ಳವನಾದ್ದರಿಂದ "ಗೋಹೃತತಮ" ಎಂಬ ಅನ್ವರ್ಥನಾಮವನ್ನು ಹೊಂದಿ ಕ್ರಮವಾಗಿ ಗೋತಮ ಎಂಬ ಲಘುನಾಮಾಕ್ಷರಗಳನ್ನು ಹೊಂದಿದನು.

೯೫. ಅನಂತರದಲ್ಲಿ ಕಕ್ಷೀವಂತನು ಜನಕನೊಡನೆ ಗಿರಿವ್ರಜಕ್ಷೇತ್ರಕ್ಕೆ ಹೋಗಿ ಪಿತನಿಂದ ಉಪದೇಶಹೊಂದಿದ ವಿಧಾನದಿಂದ ಮಹತ್ತಾದ ತಪವನ್ನು ಆಚರಿಸಿದನು

೯೬. ಅನಂತರದಲ್ಲಿ ಅನೇಕ ಕಾಲಗಣವು ಕಳೆಯಲಾಗಿ ಪ್ರಭುವಾದ ಆ ಕಕ್ಷೀವಂತನು ಪರಿಪಕ್ವವಾದ ತಪೋಭಾವನೆಯುಳ್ಳವನಾಗಿ ತನ್ನ ಅನುಜನೊಡನೆ ಪಾಪದೋಷಗಳನ್ನು ಕಳೆದುಕೊಂಡು ಬ್ರಾಹ್ಮಣತ್ವವನ್ನು ಸಂಪಾದಿಸಿದನು.

೯೭. ತರುವಾಯ ಪುತ್ರನನ್ನು ನೋಡಿ ಜನಕನು ಈ ರೀತಿಯಾಗಿ ಹೇಳಿದನು :- ಪ್ರಭುವೆ! ಈಗ ನಾನು ಪುತ್ರವಂತನಾಗಿರುವೆನು. ಮತ್ತು ಯಶಸ್ವಿಯೂ ಸುಪುತ್ರನೂ ಆದ ನಿನ್ನಿಂದ ನಾನು ಕೃತಕೃತ್ಯನಾಗಿರುವೆನು.

೯೮. ಹೀಗೆಂದು ಹೇಳಿ ತೃಪ್ತಿಹೊಂದಿರುವ ದೀರ್ಘತಮ ಮುನಿಯು ಅನಂತರದಲ್ಲಿ ತನ್ನ ಅಂತರಾತ್ಮವನ್ನು ಯೋಗದಲ್ಲಿರಿಸಿ ಬ್ರಹ್ಮಲೋಕವನ್ನು ಹೊಂದಿದನು. ಕಕ್ಷೀವಂತನು ಬ್ರಾಹ್ಮಣತ್ವವನ್ನು ಹೊಂದಿ ಸಹಸ್ರಾರು ಪುತ್ರರನ್ನು ಸೃಜಿಸಿದನು.

ಕೂಷ್ಮಾಂಡಾ ಗೌತಮಾಸ್ತೇ ವೈ ಸ್ಮೃತಾಃ ಕಕ್ಷೀವತಃ ಸುತಾಃ ।
ಇತ್ಯೇಷ ದೀರ್ಘತಮಸೋ ಬಲೇರ್ವೈರೋಚನಸ್ಯ ವೈ ॥ ೯೯ ॥

ಸಮಾಗಮಃ ಸಮಾಖ್ಯಾತಃ ಸಂತಾನಶ್ಚೋಭಯೋಸ್ತಥಾ ।
ಬಲಿಸ್ತಾನಭಿಷಿಚ್ಯೇಹ ಪಂಚ ಪುತ್ರಾನಕಲ್ಮಷಾನ್ ॥ ೧೦೦ ॥

ಕೃತಾರ್ಥಃ ಸೋಽಪಿ ಯೋಗಾತ್ಮಾ ಯೋಗಮಾಶ್ರಿತ್ಯ ಚ ಪ್ರಭುಃ ।
ಅದೃಶ್ಯಃ ಸರ್ವಭೂತಾನಾಂ ಕಾಲಾಕಾಂಕ್ಷೀ ಚರತ್ಯುತ ॥ ೧೦೧ ॥

ತತ್ರಾಂಗಸ್ಯ ತು ರಾಜರ್ಷೇ ರಾಜಾಸೀದ್ದಧಿವಾಹನಃ ।
ಸೋಽಪರಾಧಾತ್ ಸುದೇಷ್ಣಾಯಾ ಅನಪಾನೋಽಭವನ್ನೃಪಃ॥ ೧೦೨ ॥

ಅನಪಾನಸ್ಯ ಪುತ್ರಸ್ತು ರಾಜಾ ದಿವಿರಥಃ ಸ್ಮೃತಃ ।
ಪುತ್ರೋ ದಿವಿರಥಸ್ಯಾಸೀದ್ವಿದ್ವಾನ್ ಧರ್ಮರಥೋ ನೃಪಃ ॥ ೧೦೩ ॥

---

೯೯. ಆ ಕಕ್ಷೀವಂತನ ಪುತ್ರರ ವರ್ಗದಲ್ಲಿರುವವರು ಕೂಷ್ಮಾಂಡ, ಗೋತಮ ಎಂಬ ನಾಮದಿಂದ ಸ್ಮರಿಸಲ್ಪಟ್ಟಿರುವರು. ಈ ರೀತಿಯಾಗಿ ವಿರೋಚನ ಅಸುರನ ಪುತ್ರನಾದ ಬಲಿರಾಜನಿಗೂ ದೀರ್ಘತಮ ಮುನಿಗೂ ಸಮಾಗಮವು ಉಂಟಾಯಿತು.

೧೦೦. ಹೀಗೆ ಇವರಿಬ್ಬರ ಸಮಾಗಮವೂ ಇಬ್ಬರಿಂದ ಉಂಟಾದ ಸಂತಾನವೂ ಪ್ರಾಜ್ಞರಿಂದ ಹೇಳಲ್ಪಟ್ಟಿರುವುದು, ಬಲಿಚಕ್ರವರ್ತಿಯು ನಿರ್ದೋಷಿಗಳಾದ ಐದು ಮಂದಿ ಪುತ್ರರಿಗೆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು.

೧೦೧. ಮತ್ತು ಆಗ ಬಲಿರಾಜನು ಕೃತಾರ್ಥನೂ, ಯೋಗೇಶ್ವರ ರೂಪನೂ, ಪ್ರಭುವೂ ಸರ್ವಭೂತಗಳಿಗೆ ಅದೃಶ್ಯನೂ ಆಗಿ ಯೋಗಾಭ್ಯಾಸವನ್ನು ಆಶ್ರಯಿಸಿ ಕಾಲಾಕಾಂಕ್ಷಿಯಂತೆ ಜಗತ್ತಿನಲ್ಲಿ ಸಂಚರಿಸುವನು.

೧೦೨. ಆ ಬಲಿಪುತ್ರರಲ್ಲಿ ಅಂಗನೆಂಬ ರಾಜರ್ಷಿಗೆ ದಧಿವಾಹನ ಎಂಬ ನಾಮಾಂಕಿತನಾದ ರಾಜನು ಪುತ್ರನಾಗಿ ಜನಿಸಿದನು. ಆ ರಾಜನು ಸುದೇಷ್ಣಾದೇವಿಯ ಅಪರಾಧದಿಂದ ಅಪಾನೇಂದ್ರಿಯ ಶೂನ್ಯನಾದನು.

೧೦೩. ಅನಪಾನನಿಗೆ ದಿವಿರಥನೆಂಬ ರಾಜನು ಪುತ್ರನಾಗಿ ಸ್ಮರಿಸಲ್ಪಟ್ಟಿರುವನು. ಆ ದಿವಿರಥನಿಗೆ ವಿದ್ವಾಂಸನಾದ ಧರ್ಮರಥನೆಂಬ ರಾಜನು ಪುತ್ರನಾಗಿದ್ದನು.

ಏತೇ ಐಕ್ಷ್ವಾಕವಃ ಪ್ರೋಕ್ತಾ ಭವಿತಾರಃ ಕಲೌ ಯುಗೇ ।
ಬೃಹದ್ಬಲಾನ್ವಯೇ ಜಾತಾ ಮಹಾವೀರ್ಯಪರಾಕ್ರಮಾಃ ॥ ೧೦೪ ॥

ಶೂರಾಶ್ಚ ಕೃತವಿದ್ಯಾಶ್ಚ ಸತ್ಯಸಂಧಾ ಜಿತೇಂದ್ರಿಯಾಃ ।
ಅತ್ರಾನುವಂಶಶ್ಲೋಕೋऽಯಂ ಭವಿಷ್ಯಜ್ಞೈರುದಾಹೃತಃ ॥ ೧೦೫ ॥

ಇಕ್ಷ್ವಾಕೂಣಾಮಯಂ ವಂಶಃ ಸುಮಿತ್ರಾಂತೋ ಭವಿಷ್ಯತಿ ।
ಸುಮಿತ್ರಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ॥೧೦೬॥

ಇತ್ಯೇತನ್ಮಾನವಂ ಕ್ಷತ್ರಮೈಲಂ ಚ ಸಮುದಾಹೃತಮ್ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಮಾಗಧೋ ಯೋ ಬೃಹದ್ರಥಃ ॥ ೧೦೭ ॥

ಜರಾಸಂಧಸ್ಯ ಯೇ ವಂಶೇ ಸಹದೇವಾನ್ವಯೇ ನೃಪಾಃ ।
ಅತೀತಾ ವರ್ತಮಾನಾಶ್ಚ ಭವಿಷ್ಯಾಶ್ಚ ತಥಾ ಪುನಃ ॥ ೧೦೮ ॥

---

೧೦೪. ಕಲಿಯುಗದಲ್ಲಿ ಮುಂದೆ ಜನಿಸುವ ಈ ವ್ಯಕ್ತಿಗಳು ಇಕ್ಷ್ವಾಕು ವಂಶೀಕರಾಗಿ ಹೇಳಲ್ಪಟ್ಟಿರುವರು. ಹೀಗೆ ಬೃಹದ್ಬಲರಾಜನ ವಂಶದಲ್ಲಿ ಹುಟ್ಟಿದ ರಾಜರು ಮಹತ್ತಾದ ವೀರ್ಯ-ಪರಾಕ್ರಮಗಳಿಂದ ಕೂಡಿದವರಾಗಿರುವರು.

೧೦೫. ಅವರು ಶೂರರೂ, ವಿದ್ಯಾಭ್ಯಾಸಿಗಳೂ, ಸತ್ಯಸಂಧರೂ ಮತ್ತು ಜಿತೇಂದ್ರಿಯರೂ ಆಗಿರುವರು. ಭವಿಷ್ಯವನ್ನು ಅರಿತಿರುವ ಪ್ರಾಜ್ಞರಿಂದ ಇವರ ವಿಷಯದಲ್ಲಿ ವಂಶ ಮಾಹಾತ್ಮ್ಯವನ್ನು ಪ್ರಶಂಸೆಮಾಡುವ ಶ್ಲೋಕವು ಉದಾಹರಿಸಲ್ಪಟ್ಟಿದೆ.

೧೦೬. ಇಕ್ಷ್ವಾಕು ವಂಶದ ರಾಜರ ಈ ವಂಶವು ಸುಮಿತ್ರರಾಜನ ವರೆಗೆ ನಡೆಯುವುದು. ಕಲಿಯುಗದಲ್ಲಿ ಆ ವಂಶವು ಕಡೆಯವನಾದ ಸುಮಿತ್ರರಾಜನನ್ನು ಹೊಂದಿ ಮುಂದೆ ಸಮಾಪ್ತಿಯನ್ನು ಹೊಂದುವುದು.

೧೦೭. ಈ ರೀತಿಯಾಗಿ ಮನುರಾಜನಿಂದಲೂ ಐಲರಾಜನಿಂದಲೂ ಪ್ರವರ್ತಿಸಿರುವ ಕ್ಷತ್ರವಂಶವು ನನ್ನಿಂದ ವರ್ಣಿಸಲ್ಪಟ್ಟಿರುವುದು. ಇನ್ನು ಮುಂದೆ ಮಗಧ ದೇಶಾಧಿಪನಾದ ಬೃಹದ್ರಥನ ವಂಶಾವಳಿಯನ್ನು ಕೀರ್ತನಮಾಡುತ್ತೇನೆ.

೧೦೮. ಸಹದೇವನ ರಾಜನ ಪರಂಪರೆಯಲ್ಲಿ ಜನಿಸಿದ ಜರಾಸಂಧನ ವಂಶದಲ್ಲಿ ಯಾವ ರಾಜರು ಹಿಂದೆ ಕಳೆದಿರುವರೊ ಮತ್ತಾವ ರಾಜರು ಈಗಿರುವರೊ, ಮತ್ತು ಯಾವ ರಾಜರು ಮುಂದೆ ಜನಿಸುವರೊ, ಅವರ ಪ್ರಸಂಗವನ್ನು ಶ್ರವಣಮಾಡಿರಿ.

ಪ್ರಾಧಾನ್ಯತಃ ಪ್ರವಕ್ಷ್ಯಾಮಿ ಗದತೋ ಮೇ ನಿಬೋಧತ ।
ಸಂಗ್ರಾಮೇ ಭಾರತೇ ತಸ್ಮಿನ್ ಸಹದೇವೋ ನಿಪಾತಿತಃ　॥ ೧೦೯ ॥

ಸೋಮಾಪಿಸ್ತಸ್ಯ ತನಯೋ ರಾಜರ್ಷಿಃ ಸ ಗಿರಿವ್ರಜೇ ।
ಪಂಚಾಶತಂ ತಥಾಷ್ಟೌ ಚ ಸಮಾ ರಾಜ್ಯಮಕಾರಯತ್　॥ ೧೧೦ ॥

ಶ್ರುತಶ್ರವಾಃ ಸಪ್ತಷಷ್ಟಿಃ ಸಮಾಸ್ತಸ್ಯ ಸುತೋಽಭವತ್ ।
ಅಯುತಾಯುಸ್ತು ಷಡ್ವಿಂಶದ್ರಾಜ್ಯಂ ವರ್ಷಾಣ್ಯಕಾರಯತ್ ॥ ೧೧೧ ॥

ಸಮಾಃ ಶತಂ ನಿರಾಮಿತ್ರೋ ಮಹೀಂ ಭುಕ್ತ್ವಾ ದಿವಂ ಗತಃ ।
ಪಂಚಾಶತಂ ಸಮಾಃ ಷಟ್ಚ ಸುಕ್ಷತ್ರಃ ಪ್ರಾಪ್ತವಾನ್ ಮಹೀಮ್॥೧೧೨॥

ತ್ರಯೋವಿಂಶದ್ಬೃಹತ್ಕರ್ಮಾ ರಾಜ್ಯಂ ವರ್ಷಾಣ್ಯಕಾರಯತ್ ।
ಸೇನಾಜಿತ್ ಸಾಂಪ್ರತಂ ಚಾಪಿ ಏತಾ ವೈ ಭೋಕ್ಷ್ಯತೇ ಸಮಾಃ॥ ೧೧೩ ॥

---

೧೦೯. ಅವರಲ್ಲಿ ಪ್ರಧಾನ ವ್ಯಕ್ತಿಗಳನ್ನು ಮಾತ್ರ ವರ್ಣಿಸುವ ನನ್ನ ವಚನವನ್ನು ಲಾಲಿಸಿರಿ. ಆ ಮಹಾಭಾರತ ಸಂಗ್ರಾಮದಲ್ಲಿ ಸಹದೇವನೆಂಬ ರಾಜನು ಸಂಹರಿಸಲ್ಪಟ್ಟನು.

೧೧೦. ಅವನಿಗೆ ಸೋಮಾಪಿ ಎಂಬ ರಾಜರ್ಷಿಯು ಪುತ್ರನಾಗಿದ್ದನು. ಅವನು ಗಿರಿವ್ರಜದಲ್ಲಿ ಐವತ್ತೆಂಟು ಸಂವತ್ಸರಗಳ ವರೆಗೆ ರಾಜ್ಯವನ್ನು ಪರಿಪಾಲನೆಮಾಡಿದನು.

೧೧೧. ಅವನ ಪುತ್ರನಾದ ಶ್ರುತಶ್ರವ ಎಂಬುವನು ಅರವತ್ತೇಳು ವರ್ಷಗಳ ವರೆಗೆ ರಾಜ್ಯಾಧಿಪನಾಗಿದ್ದನು. ಅಯುತಾಯು ಎಂಬುವನು ಇಪ್ಪತ್ತಾರು ಸಂವತ್ಸರಗಳ ವರೆಗೆ ರಾಜ್ಯವನ್ನು ಆಳಿದನು.

೧೧೨. ನಿರಾಮಿತ್ರನು ಒಂದುನೂರು ವರ್ಷಗಳು ಪೂರ್ತಿಯಾಗಿ ಭೂಮಂಡಲವನ್ನು ಆಳಿ ಸ್ವರ್ಗವನ್ನೈದಿದನು. ತರುವಾಯ ಸುಕ್ಷತ್ರನೆಂಬುವನು ಐವತ್ತಾರು ವರ್ಷಗಳ ಕಾಲ ಭೂಮಿಯ ಆಧಿಪತ್ಯವನ್ನು ಹೊಂದಿದನು.

೧೧೩. ಬೃಹತ್ಕರ್ಮ ಎಂಬುವನು ಇಪ್ಪತ್ತಮೂರು ಸಂವತ್ಸರಗಳ ವರೆಗೆ ರಾಜ್ಯಪರಿಪಾಲನವನ್ನು ಮಾಡಿದನು. ಸೇನಾಜಿತನೆಂಬ ದೊರೆಯು ಈಗ ನಡೆಯುತ್ತಿರುವ ಸಂವತ್ಸರ ಸಮಯದಲ್ಲಿ ರಾಜ್ಯಾಧಿಕಾರವನ್ನು ಅನುಭವಿಸುತ್ತಾನೆ.

**ಶ್ರುತಂಜಯಸ್ತು ವರ್ಷಾಣಿ ಚತ್ವಾರಿಂಶದ್ಭವಿಷ್ಯತಿ ।**
**ರಿಪುಂಜಯೋ ಮಹಾಬಾಹುರ್ಮಹಾಬುದ್ಧಿಪರಾಕ್ರಮಃ ॥ ೧೧೪ ॥**

**ಪಂಚತ್ರಿಶತ್ತು ವರ್ಷಾಣಿ ಮಹೀಂ ಪಾಲಯಿತಾ ನೃಪಃ ।**
**ಅಷ್ಟಪಂಚಾಶತಂ ಚಾಬ್ದಾನ್ ರಾಜ್ಯೇ ಸ್ಥಾಸ್ಯತಿ ವೈ ಶುಚಿಃ ॥ ೧೧೫ ॥**

**ಅಷ್ಟಾವಿಂಶತ್ಸಮಾಃ ಪೂರ್ಣಾಃ ಕ್ಷೇಮೋ ರಾಜಾ ಭವಿಷ್ಯತಿ ।**
**ಸುವ್ರತಸ್ತು ಚತುಃಷಷ್ಟಿಂ ರಾಜ್ಯಂ ಪ್ರಾಪ್ಸ್ಯತಿ ವೀರ್ಯವಾನ್ ॥ ೧೧೬ ॥**

**ಪಂಚ ವರ್ಷಾಣಿ ಪೂರ್ಣಾನಿ ಧರ್ಮನೇತ್ರೋ ಭವಿಷ್ಯತಿ ।**
**ಭೋಕ್ಷ್ಯತೇ ನೃಪತಿಶ್ಚೇಮಾ ಅಷ್ಟಪಂಚಾಶತಂ ಸಮಾಃ ॥ ೧೧೭ ॥**

**ಅಷ್ಟತ್ರಿಂಶತ್ಸಮಾ ರಾಷ್ಟ್ರಂ ಸುಶ್ರಮಸ್ಯ ಭವಿಷ್ಯತಿ ।**
**ಚತ್ವಾರಿಂಶದ್ದಶಾಷ್ಟೌ ಚ ದೃಢಸೇನೋ ಭವಿಷ್ಯತಿ ॥ ೧೧೮ ॥**

---

೧೧೪. ಮುಂದೆ ಶ್ರುತಂಜಯನೆಂಬುವನು ನಲವತ್ತು ವರ್ಷ ಪೂರ್ತಿಯಾಗಿ ರಾಜನಾಗುವನು. ಹಾಗೆಯೆ ಮಹಾ ಬಾಹುಗಳಿಂದಲೂ ಅತಿಶಯವಾದ ಬುದ್ಧಿ-ಪರಾಕ್ರಮಗಳಿಂದಲೂ ಕೂಡಿರುವ ರಿಪುಂಜಯ ಎಂಬ ಒಬ್ಬ ರಾಜನಿರುವನು.

೧೧೫. ಅವನು ರಾಜ್ಯಪ್ರಭುವಾಗಿ ಮೂವತ್ತೈದು ಸಂವತ್ಸರಗಳ ವರೆಗೆ ಭೂಮಿಯನ್ನು ರಕ್ಷಿಸುವನು. ಮತ್ತೆ ಶುಚಿ ಎಂಬ ಅರಸನು ಐವತ್ತೆಂಟು ವರ್ಷಗಳ ಕಾಲದಲ್ಲಿ ರಾಜ್ಯ ಪಟ್ಟದಲ್ಲಿರುವನು.

೧೧೬. ಪೂರ್ಣವಾಗಿ ಇಪ್ಪತ್ತೆಂಟು ವರ್ಷಗಳಲ್ಲಿ ಕ್ಷೇಮನೆಂಬ ರಾಜನು ಮುಂದೆ ಇರುವನು. ತರುವಾಯ ವೀರ್ಯಶಾಲಿಯಾದ ಸುವ್ರತರಾಜನು ಅರವತ್ತನಾಲ್ಕು ವರ್ಷಗಳಲ್ಲಿ ರಾಜ್ಯಭಾರವನ್ನು ವಹಿಸುವನು.

೧೧೭. ಐದು ವರ್ಷಕಾಲ ಪೂರ್ಣವಾಗಿ ಧರ್ಮನೇತ್ರನೆಂಬ ರಾಜನು ಅಧಿಕಾರಕ್ಕೆ ಬರುವನು. ಅನಂತರದಲ್ಲಿ ಮತ್ತೊಬ್ಬ ರಾಜನು ಐವತ್ತೆಂಟು ವರ್ಷಗಳ ವರೆಗೆ ರಾಜಪದವನ್ನು ಭುಂಜಿಸುವನು.

೧೧೮. ಸುಶ್ರಮ ಎಂಬ ಧೊರೆಗೆ ಮೂವತ್ತೆಂಟು ವರ್ಷಗಳ ವರೆಗೆ ರಾಜ್ಯವು ಅಧೀನವಾಗಿರುವುದು. ಮುಂದೆ ಮತ್ತೆ ಐವತ್ತೆಂಟು ವರ್ಷಕಾಲದಲ್ಲಿ ದೃಢಸೇನನೆಂಬ ರಾಜನು ಶಾಸಕನಾಗಿರುವನು.

ತ್ರಯಸ್ತ್ರಿಂಶತ್ತು ವರ್ಷಾಣಿ ಸುಮತಿಃ ಪ್ರಾಪ್ಸ್ಯತೇ ತತಃ ।
ಚತ್ವಾರಿಂಶತ್ಸಮಾ ರಾಜಾ ಸುನೇತ್ರೋ ಭೋಕ್ಷ್ಯತೇ ತತಃ ॥೧೧೯॥

ಸತ್ರಜಿತ್ ಪೃಥಿವೀರಾಷ್ಟ್ರಂ ತ್ರ್ಯಶೀತಿಂ ಭೋಕ್ಷ್ಯತೇ ಸಮಾಃ ।
ಪ್ರಾಪ್ಯೇಮಂ ವಿಶ್ವಜಿಚ್ಚಾಪಿ ಪಂಚವಿಂಶದ್ಭವಿಷ್ಯತಿ ॥ ೧೨೦ ॥

ಅರಿಂಜಯಸ್ತು ವರ್ಷಾಣಾಂ ಪಂಚಾಶತ್ ಪ್ರಾಪ್ಸ್ಯತೇ ಮಹೀಮ್ ।
ದ್ವಾವಿಂಶಚ್ಚ ನೃಪಾ ಹ್ಯೇತೇ ಭವಿತಾರೋ ಬೃಹದ್ರಥಾಃ ॥ ೧೨೧ ॥

ಪೂರ್ಣಂ ವರ್ಷಸಹಸ್ರಂ ವೈ ತೇಷಾಂ ರಾಜ್ಯಂ ಭವಿಷ್ಯತಿ ।
ಬೃಹದ್ರಥೇಷ್ವತೀತೇಷು ವೀರಹಂತೃಷ್ವವರ್ತಿಷು ॥ ೧೨೨ ॥

ಶುನಕಃ ಸ್ವಾಮಿನಂ ಹತ್ವಾ ಪುತ್ರಂ ಸಮಭಿಷೇಕ್ಷ್ಯತಿ ।
ಮಿಷತಾಂ ಕ್ಷತ್ರಿಯಾಣಾಂ ಹಿ ಪ್ರದ್ಯೋತಿಂ ನೃಪತಿಂ ಬಲಾತ್ ॥ ೧೨೩ ॥

---

೧೧೯. ಅನಂತರದಲ್ಲಿ ಮೂವತ್ತಮೂರು ವರ್ಷಗಳ ವರೆಗೆ ಸುಮತಿ ಎಂಬ ರಾಜನು ರಾಜ್ಯಭಾರವನ್ನು ಹೊಂದುವನು. ತರುವಾಯ ಸುನೇತ್ರನೆಂಬ ಅರಸನು ನಲವತ್ತು ವತ್ಸರಗಳು ಪೂರ್ತಿಯಾಗಿ ರಾಜ್ಯಭೋಗವನ್ನು ಹೊಂದುತ್ತಾನೆ.

೧೨೦. ಸತ್ಯಜಿತ್ ಎಂಬ ರಾಜನು ಈ ಭೂರಾಜ್ಯವನ್ನು ಎಂಭತ್ತಮೂರು ಸಂವತ್ಸರಕಾಲ ಪೂರ್ತಿಯಾಗಿ ಅನುಭವಿಸುವನು. ತರುವಾಯ ವಿಶ್ವಜಿತ್ ರಾಜನು ಈ ರಾಜಪದವನ್ನು ಇಪ್ಪತ್ತೈದು ವರ್ಷಗಳ ವರೆಗೆ ಅನುಭವಿಸುತ್ತಾನೆ.

೧೨೧. ಅರಿಂಜಯನು ಐವತ್ತು ವರ್ಷಗಳ ವರೆಗೆ ಭೂಮಿಯ ಆಧಿಪತ್ಯವನ್ನು ಹೊಂದುವನು. ಹೀಗೆ ಬೃಹದ್ರಥ ಪುತ್ರಶ್ರೇಣಿಯಲ್ಲಿ ಮೂವತ್ತೆರಡು ಮಂದಿ ರಾಜರು ಜನಿಸಿದರು.

೧೨೨. ಒಂದು ಸಹಸ್ರ ಸಂವತ್ಸರಗಳ ಪೂರ್ಣ ಕಾಲಾವಧಿಯಲ್ಲಿ ರಾಜ್ಯವು ಅವರ ಅಧೀನದಲ್ಲಿರುವುದು. ಮುಂದೆ ಬೃಹದ್ರಥ ರಾಜನು ಅವಸಾನಹೊಂದಿ ವೀರರನ್ನು ವಧಿಸಲು ದಕ್ಷರಾದ ರಾಜರು ಶೂನ್ಯರಾದರು.

೧೨೩. ಆಗ ಸಮಸ್ತ ಕ್ಷತ್ರಿಯರು ನೋಡುತ್ತಿರುವ ಹಾಗೆಯೆ ಶುನಕನೆಂಬುವನು ತನ್ನ ಸ್ವಾಮಿಯನ್ನು ಬಲಾತ್ಕಾರದಿಂದ ಸಂಹರಿಸಿ ತನ್ನ ಪುತ್ರನಾದ ಪ್ರದ್ಯೋತಿಯನ್ನು ರಾಜಪದದಲ್ಲಿ ಪಟ್ಟಾಭಿಷೇಕ ಮಾಡುವನು.

ಸ ವೈ ಪ್ರಣತಸಾಮಂತೋ ಭವಿಷ್ಯೇಣ ಪ್ರವರ್ತಿತಃ ।
ತ್ರಯೋವಿಂಶತ್ ಸಮಾ ರಾಜಾ ಭವಿತಾ ಸ ನರೋತ್ತಮಃ ॥ ೧೨೪ ॥

ಚತುರ್ವಿಂಶತ್ ಸಮಾ ರಾಜಾ ಪಾಲಕೋ ಭವಿತಾ ತತಃ ।
ವಿಶಾಖಯೂಪೋ ಭವಿತಾ ನೃಪಃ ಪಂಚಾಶತಂ ಸಮಾಃ ॥ ೧೨೫ ॥

ಏಕವಿಂಶತ್ಸಮಾ ರಾಜ್ಯಮಜಕಸ್ಯ ಭವಿಷ್ಯತಿ ।
ಭವಿಷ್ಯತಿ ಸಮಾ ವಿಂಶತ್ತತ್ಸುತೋ ನಂದಿವರ್ಧನಃ ॥ ೧೨೬ ॥

ಅಷ್ಟತ್ರಿಂಶಚ್ಛತಂ ಭಾವ್ಯಾಃ ಪ್ರಾದ್ಯೋತಾಃ ಪಂಚ ತೇ ನೃಪಾಃ ।
ಹತ್ವಾ ತೇಷಾಂ ಯಶಃ ಕೃತ್ಸ್ನಂ ಶಿಶುನಾಗೋ ಭವಿಷ್ಯತಿ ॥ ೧೨೭ ॥

ವಾರಾಣಸ್ಯಾಂ ಸುತಸ್ತಸ್ಯ ಸಂಯಾಸ್ಯತಿ ಗಿರಿವ್ರಜಮ್ ।
ಶಿಶುನಾಗಶ್ಚ ವರ್ಷಾಣಿ ಚತ್ವಾರಿಂಶದ್ಭವಿಷ್ಯತಿ ॥ ೧೨೮ ॥

---

೧೨೪. ನಮಸ್ಕಾರ ಮಾಡಿದ ಸಾಮಂತ ರಾಜರುಳ್ಳ ಆ ಪ್ರದ್ಯೋತಿಯು ಭವಿಷ್ಯ ಬಲದಿಂದ ಪ್ರೇರೇಪಿಸಲ್ಪಟ್ಟವನಾಗಿ ಇಪ್ಪತ್ತ ಮೂರು ವರ್ಷಗಳವರೆಗೆ ಉತ್ತಮವಾಗಿ ರಾಜ್ಯಭಾರಮಾಡಿ ಮಾನವರಲ್ಲಿ ಶ್ರೇಷ್ಠನಾದ ರಾಜನಾಗುವನು.

೧೨೫. ತರುವಾಯ ಇಪ್ಪತ್ತ ನಾಲ್ಕು ವರ್ಷಗಳ ವರೆಗೆ ಪಾಲಕನು ರಾಜನಾಗುವನು. ಆಮೇಲೆ ವಿಶಾಖಯೂಪನೆಂಬುವನು ಐವತ್ತು ವರ್ಷಗಳು ಪೂರ್ತಿಯಾಗಿ ರಾಜನಾಗಿ ಆಳುವನು.

೧೨೬. ಮುಂದೆ ಬರುವ ಅಜಕನೆಂಬುವನಿಗೆ ಇಪ್ಪತ್ತೊಂದು ವರ್ಷಗಳ ಪರ್ಯಂತ ರಾಜ್ಯವು ಅಧೀನವಾಗುವುದು. ತರುವಾಯ ಅವನ ಪುತ್ರನಾದ ನಂದಿ ವರ್ಧನನೆಂಬುವನು ಇಪ್ಪತ್ತು ವರ್ಷಪರ್ಯಂತವಾಗಿ ರಾಜನಾಗುವನು.

೧೨೭. ಈ ರೀತಿಯಾಗಿ ಪ್ರದ್ಯೋತಿ ವಂಶೀಕರಾದ ಐದು ಮಂದಿ ರಾಜರು ಒಂದು ನೂರ ಮೂವತ್ತೆಂಟು ಸಂವತ್ಸರಗಳ ವರೆಗೆ ಇರುವರು. ಅನಂತರದಲ್ಲಿ ಆ ರಾಜರ ಸಂಪೂರ್ಣ ಯಶಸ್ಸನ್ನು ನಾಶಗೊಳಿಸಿ ಶಿಶುನಾಗನೆಂಬುವನು ರಾಜನಾಗುವನು.

೧೨೮. ಅವನ ಪುತ್ರನು ವಾರಾಣಸೀನಗರಿಯ ಗಿರಿವ್ರಜಕ್ಕೆ ಹೋಗುವನು. ಶಿಶುನಾಗನು ನಲವತ್ತು ವರ್ಷಗಳು ಪೂರ್ತಿಯಾಗಿ ರಾಜ್ಯಭಾರ ಮಾಡುವನು.

ಕಾಕವರ್ಣಃ ಸುತಸ್ತಸ್ಯ ಷಟ್ತ್ರಿಂಶಚ್ಚ ಭವಿಷ್ಯತಿ ।
ತತಸ್ತು ವಿಂಶತಿಂ ರಾಜಾ ಕ್ಷೇಮಧರ್ಮಾ ಭವಿಷ್ಯತಿ ॥ ೧೨೯ ॥

ಚತ್ವಾರಿಂಶತ್ಸಮಾ ರಾಷ್ಟ್ರಂ ಕ್ಷತ್ರೌಜಾಃ ಪ್ರಾಪ್ಸ್ಯತೇ ತತಃ ।
ಅಷ್ಟತ್ರಿಂಶತ್ಸಮಾ ರಾಜಾ ವಿಧಿಸಾರೋ ಭವಿಷ್ಯತಿ ॥ ೧೩೦ ॥

ಅಜಾತಶತ್ರುರ್ಭವಿತಾ ತ್ರಯಸ್ತ್ರಿಂಶತ್ಸಮಾ ನೃಪಃ ।
ಪಂಚತ್ರಿಂಶತ್ಸಮಾ ರಾಜಾ ದರ್ಭಕಸ್ತು ಭವಿಷ್ಯತಿ ॥ ೧೩೧ ॥

ಉದಯೀ ಭವಿತಾ ತಸ್ಮಾತ್ ತ್ರಯಸ್ತ್ರಿಂಶತ್ಸಮಾ ನೃಪಃ ।
ಸ ವೈ ಪುರವರಂ ರಾಜಾ ಪೃಥಿವ್ಯಾಂ ಕುಸುಮಾಹ್ವಯಮ್ ॥೧೩೨ ॥

ಗಂಗಾಯಾ ದಕ್ಷಿಣೇ ಕೂಲೇ ಚತುರ್ಥೇಽಹ್ನಿ ಕರಿಷ್ಯತಿ ।
ಚತ್ವಾರಿಂಶತ್ ಸಮಾ ಭಾವ್ಯೋ ರಾಜಾ ವೈ ನಂದಿವರ್ಧನಃ ॥ ೧೩೩ ॥

---

೧೨೯. ಅವನ ಪುತ್ರನಾದ ಕಾಕವರ್ಣ ಎಂಬುವನು ಮೂವತ್ತಾರು ವರ್ಷಗಳ ವರೆಗೆ ರಾಜನಾಗುವನು, ತರುವಾಯ ಕ್ಷೇಮಧರ್ಮ ಎಂಬುವನು ಇಪ್ಪತ್ತು ವರ್ಷಗಳ ಪರ್ಯಂತವಾಗಿ ರಾಜ್ಯವನ್ನು ಆಳುವನು.

೧೩೦. ಆಮೇಲೆ ನಲವತ್ತು ಸಂವತ್ಸರ ಪರ್ಯಂತವಾಗಿ ಕ್ಷತ್ರೌಜ ಎಂಬುವನು ರಾಜ್ಯವನ್ನು ಹೊಂದುವನು. ತರುವಾಯ ವಿಧಿಸಾರ ಎಂಬುವನು ಮೂವತ್ತೆಂಟು ವರ್ಷ ಪೂರ್ತಿಯಾಗಿ ರಾಜನಾಗುವನು.

೧೩೧. ಹಾಗೆ ಮುಂದೆ ಇಪ್ಪತ್ತೈದು ಸಂವತ್ಸರಪರ್ಯಂತವಾಗಿ ಅಜಾತಶತ್ರು ಎಂಬ ರಾಜನು ಪ್ರಭುವಾಗುವನು, ಅನಂತರ ಮೂವತ್ತೈದು ವರ್ಷಗಳಲ್ಲಿ ದರ್ಭಕನೆಂಬುವನು ರಾಜನಾಗುವನು.

೧೩೨. ತರುವಾಯ ಮೂವತ್ತ ಮೂರು ವರ್ಷಗಳ ವರೆಗೆ ಉದಯೀ ಎಂಬುವನು ರಾಜನಾಗಿ ರಾಜ್ಯವನ್ನಾಳುವನು. ಆ ರಾಜನು ಪೃಥಿವೀಮಂಡಲದಲ್ಲಿ ಕುಸುಮಪುರವೆಂಬ ಸಂಜ್ಞಾಂಕಿತವಾದ ಉತ್ತಮ ನಗರಿಯನ್ನು ಕಲ್ಪಿಸುವನು.

೧೩೩. ಅವನು ದೊರೆಯಾಗಿ ನಾಲ್ಕನೆಯ ದಿನದಲ್ಲಿ ಗಂಗಾ ನದಿಯ ದಕ್ಷಿಣ ಭಾಗದಲ್ಲಿ ಆ ನಗರವನ್ನು ಕಲ್ಪಿಸುವನು, ನಂದಿವರ್ಧನನು ನಲವತ್ತು ವರ್ಷಗಳ ವರೆಗೆ ರಾಜನಾಗಿರುವನು.

ಚತ್ವಾರಿಂಶತ್ತ್ರಯಶ್ಚೈವ ಸಹಾನಂದಿರ್ಭವಿಷ್ಯತಿ।
ಭವಿಷ್ಯಂತಿ ಚ ವರ್ಷಾಣಿ ಷಷ್ಟ್ಯುತ್ತರಶತತ್ರಯಮ್ ॥ ೧೩೪ ॥

ಶಿಶುನಾಗಾ ದಶೈವ್ಯೈತೇ ರಾಜಾನಃ ಕ್ಷತ್ರಬಂಧವಃ।
ಏತೈಃ ಸಾರ್ಧಂ ಭವಿಷ್ಯಂತಿ ತಾವತ್ಕಾಲಂ ನೃಪಾಃ ಪರೇ ॥ ೧೩೫ ॥

ಐಕ್ಷ್ವಾಕವಶ್ಚತುರ್ವಿಂಶತ್ ಪಂಚಾಲಾಃ ಪಂಚವಿಂಶತಿಃ।
ಕಾಲಕಾಸ್ತು ಚತುರ್ವಿಂಶಚ್ಚತುರ್ವಿಂಶತ್ತು ಹೈಹಯಾಃ ॥ ೧೩೬ ॥

ದ್ವಾತ್ರಿಂಶದೇಕಲಿಂಗಾಸ್ತು ಪಂಚವಿಂಶತ್ತಥಾ ಶಕಾಃ।
ಕುರವಶ್ಚಾಪಿ ಷಟ್ತ್ರಿಂಶದಷ್ಟಾವಿಂಶತಿ ಮೈಥಿಲಾಃ ॥ ೧೩೭ ॥

ಶೂರಸೇನಾಸ್ತ್ರಯೋವಿಂಶದ್ವೀತಿಹೋತ್ರಾಶ್ಚ ವಿಂಶತಿಃ।
ತುಲ್ಯಕಾಲಂ ಭವಿಷ್ಯಂತಿ ಸರ್ವ ಏವ ಮಹೀಕ್ಷಿತಃ ॥ ೧೩೮ ॥

---

೧೩೪. ತರುವಾಯ ನಲವತ್ತ ಮೂರು ಸಂವತ್ಸರಗಳ ಕಾಲದಲ್ಲಿ ಸಹನಂದಿ ಎಂಬುವನು ರಾಜನಾಗುವನು, ಒಟ್ಟಾಗಿ ಇವರು ರಾಜ್ಯಭಾರಮಾಡಿದ ಸಮಯವು ಮೂರು ನೂರ ಅರವತ್ತು ವರ್ಷಪರಿಮಿತವಾಗುವುದು.

೧೩೫. ಶಿಶುನಾಗ ವಂಶಕ್ಕೆ ಸೇರಿದ ಈ ಹತ್ತು ಮಂದಿ ರಾಜರು ಕ್ಷತ್ರವಂಶಕ್ಕೆ ಸಾಮಾನ್ಯವಾಗಿ ಸೇರಿದವರಾಗಿರುವರು. ಇವರ ಸಂಗಡ ಇತರ ಅನೇಕ ರಾಜರು ಅಷ್ಟು ಕಾಲದವರೆಗೆ ರಾಜರಾಗಿರುವರು.

೧೩೬. ಅವರಲ್ಲಿ ಇಕ್ಷ್ವಾಕು ವಂಶಕ್ಕೆ ಸೇರಿದವರು ಇಪ್ಪತ್ತ ನಾಲ್ಕು ಮಂದಿಯೂ, ಪಂಚಾಲವಂಶೀಕರು ಇಪ್ಪತ್ತೈದು ಮಂದಿಯೂ, ಕಾಲಕವಂಶೋತ್ಪನ್ನರು ಇಪ್ಪತ್ತ ನಾಲ್ಕು ಮಂದಿಯೂ ಮತ್ತು ಹೈಹಯಾನ್ವಯದವರು ಇಪ್ಪತ್ತ ನಾಲ್ಕು ಮಂದಿಯೂ ರಾಜರಿರುವರು.

೧೩೭. ಅದರಂತೆ ಮೂವತ್ತೆರಡು ಮಂದಿ ಏಕಲಿಂಗಾನ್ವಯದ ರಾಜರೂ, ಇಪ್ಪತ್ತೈದು ಮಂದಿ ಶಕವಂಶ ರಾಜರೂ, ಮೂವತ್ತಾರು ಮಂದಿ ಕುರುವಂಶಸಂಭೂತರಾದ ರಾಜರೂ, ಮತ್ತು ಇಪ್ಪತ್ತೆಂಟು ಮಂದಿ ಮೈಥಿಲಕುಲದ ರಾಜರೂ ಇರುವರು.

೧೩೮. ಶೂರಸೇನನಾಮಾಂಕಿತರು ಇಪ್ಪತ್ತ ಮೂರು ವ್ಯಕ್ತಿಗಳೂ, ಮತ್ತು ವೀತಿಹೋತ್ರೋಪಪದಧಾರಿಗಳು ಇಪ್ಪತ್ತು ವ್ಯಕ್ತಿಗಳೂ ಇರುವರು, ಇವರೆಲ್ಲರೂ ಸಮಾನ ಕಾಲದಲ್ಲಿ ರಾಜರಾಗಿರುವರು.

ಮಹಾನಂದಿಸುತಶ್ಚಾಪಿ ಶೂದ್ರಾಯಾಃ ಕಾಲಸಂವೃತಃ ।
ಉತ್ಪತ್ಸ್ಯತೇ ಮಹಾಪದ್ಮಃ ಸರ್ವಕ್ಷತ್ರಾಂತಕೃನ್ನೃಪಃ　　|| ೧೩೯ ||

ತತಃ ಪ್ರಭೃತಿ ರಾಜಾನೋ ಭವಿಷ್ಯಾಃ ಶೂದ್ರಯೋನಯಃ ।
ಏಕರಾಟ್ ಸ ಮಹಾಪದ್ಮ ಏಕಚ್ಛತ್ರೋ ಭವಿಷ್ಯತಿ　　|| ೧೪೦ ||

ಅಷ್ಟಾಶೀತಿ ತು ವರ್ಷಾಣಿ ಪೃಥಿವೀಂ ಪಾಲಯಿಷ್ಯತಿ ।
ಸರ್ವಕ್ಷತ್ರಂ ಸಮುದ್ಧೃತ್ಯ ಭಾವಿನೋಽರ್ಥಸ್ಯ ವೈ ಬಲಾತ್　|| ೧೪೧ ||

ತತ್ಪಶ್ಚಾತ್ತತ್ಸುತಾ ಹ್ಯಷ್ಟೌ ಸಮಾ ದ್ವಾದಶ ತೇ ನೃಪಾಃ ।
ಮಹಾಪದ್ಮಸ್ಯ ಪರ್ಯಾಯೇ ಭವಿಷ್ಯಂತಿ ನೃಪಾಃ ಕ್ರಮಾತ್ || ೧೪೨ ||

ಉದ್ಧರಿಷ್ಯತಿ ತಾನ್ ಸರ್ವಾನ್ ಕೌಟಿಲ್ಯೋ ವೈ ದ್ವಿಜರ್ಷಭಃ ।
ಭುಕ್ತ್ವಾ ಮಹೀಂ ವರ್ಷಶತಂ ನರೇಂದ್ರಃ ಸ ಭವಿಷ್ಯತಿ　　|| ೧೪೩ ||

---

೧೩೯. ಮಹಾನಂದಿ ಎಂಬುವನಿಗೆ ಕಾಲಗಿರಿಯಿಂದ ವರಿಸಲ್ಪಟ್ಟ, ಸರ್ವ ಕ್ಷತ್ರಿಯ ಸಂಹಾರಕನಾದ, ಮಹಾಪದ್ಮ ಎಂಬ ರಾಜನು ಶೂದ್ರ ಸ್ತ್ರೀಯಲ್ಲಿ ಪುತ್ರನಾಗಿ ಜನಿಸುವನು.

೧೪೦. ಅದು ಮೊದಲಾಗಿ ಶೂದ್ರಯೋನಿಯಲ್ಲಿ ಜನಿಸಿದ ವ್ಯಕ್ತಿಗಳು ರಾಜರಾಗುವರು. ಆ ಮಹಾಪದ್ಮನು ಸಮಸ್ತಭೂಮಂಡಲಕ್ಕೆ ಏಕರಾಜನಾಗಿ ಏಕಚ್ಛತ್ರಾಧಿಪತ್ಯವನ್ನು ಹೊಂದಿ ಸಾರ್ವಭೌಮನಾಗುವನು.

೧೪೧. ಮತ್ತು ಮುಂದೆ ಅವಶ್ಯಂಭಾವಿಯಾದ ಅರ್ಥಾನುಸಾರವಾಗಿ ಸಮಸ್ತ ಕ್ಷತ್ರಿಯರನ್ನು ಸಂಹಾರಮಾಡಿ ಎಂಭತ್ತೆಂಟು ವರ್ಷಗಳಷ್ಟು ದೀರ್ಘಕಾಲ ಪೃಥಿವಿಯನ್ನು ಪಾಲಿಸುವನು.

೧೪೨. ಅವನ ತರುವಾಯ ಮಹಾಪದ್ಮನ ಎಂಟು ಮಂದಿ ಪುತ್ರರು ಅವನ ವಂಶಪರ್ಯಾಯದಲ್ಲಿ ಜನಿಸಿ ಹನ್ನೆರಡು ವರ್ಷಗಳ ವರೆಗೆ ಕ್ರಮವಾಗಿ ರಾಜ್ಯಭಾರವನ್ನು ನಡೆಸುವರು.

೧೪೩. ಆಗ ಕೌಟಿಲ್ಯನೆಂಬ ದ್ವಿಜೋತ್ತಮನು ಅವರನ್ನೆಲ್ಲ ಸಂಹಾರಮಾಡುವನು, ಅನಂತರದಲ್ಲಿ ಒಂದು ನೂರು ವರ್ಷಗಳ ವರೆಗೆ ಭೂಮಿಯನ್ನು ಪಾಲಿಸಿ ಅವನು ನರೇಂದ್ರನಾಗುವನು.

ಚಂದ್ರಗುಪ್ತಂ ನೃಪಂ ರಾಜ್ಯೇ ಕೌಟಿಲ್ಯಃ ಸ್ಥಾಪಯಿಷ್ಯತಿ ।
ಚತುರ್ವಿಂಶತ್ ಸಮಾ ರಾಜಾ ಚಂದ್ರಗುಪ್ತೋ ಭವಿಷ್ಯತಿ ॥ ೧೪೪ ॥

ಭವಿತಾ ಭದ್ರಸಾರಸ್ತು ಪಂಚವಿಂಶತ್ ಸಮಾ ನೃಪಃ ।
ಷಟ್ತ್ರಿಂಶತ್ತು ಸಮಾ ರಾಜಾ ಅಶೋಕಾನಾಂ ಚ ತೃಪ್ತಿದಃ ॥ ೧೪೫ ॥

ತಸ್ಯ ಪುತ್ರಃ ಕುಶಾಲಸ್ತು ವರ್ಷಾಣ್ಯಷ್ಟೌ ಭವಿಷ್ಯತಿ ।
ಕುಶಾಲಸೂನುರಷ್ಟೌ ಚ ಭೋಕ್ತಾ ವೈ ಬಂಧುಪಾಲಿತಃ ॥ ೧೪೬ ॥

ಬಂಧುಪಾಲಿತದಾಯಾದೋ ಭವಿತಾ ಚೇಂದ್ರಪಾಲಿತಃ ।
ಭವಿತಾ ಸಪ್ತವರ್ಷಾಣಿ ದೇವವರ್ಮಾ ನರಾಧಿಪಃ ॥ ೧೪೭ ॥

ರಾಜಾ ಶತಧನುಶ್ಚಾಪಿ ತಸ್ಯ ಪುತ್ರೋ ಭವಿಷ್ಯತಿ ।
ಬೃಹದ್ರಥಶ್ಚ ವರ್ಷಾಣಿ ಸಪ್ತ ವೈ ಭವಿತಾ ನೃಪಃ ॥ ೧೪೮ ॥

---

೧೪೪. ತರುವಾಯ ಕೌಟಿಲ್ಯನು ಚಂದ್ರಗುಪ್ತ ರಾಜನನ್ನು ರಾಜ್ಯದಲ್ಲಿ ಸ್ಥಾಪಿಸುವನು. ಆ ಚಂದ್ರಗುಪ್ತನು ಇಪ್ಪತ್ತನಾಲ್ಕು ವರ್ಷಗಳ ವರೆಗೆ ರಾಜನಾಗಿ ಬಾಳುವನು.

೧೪೫. ಆ ಮೇಲೆ ಭದ್ರಸಾರ ಎಂಬುವನು ಇಪ್ಪತ್ತೈದು ವರ್ಷಕಾಲ ರಾಜ್ಯ ಶಾಸಕನಾಗುವನು. ಅಶೋಕಜನಾಂಗಕ್ಕೆ ತೃಪ್ತಿಯನ್ನುಂಟುಮಾಡುವ ಒಬ್ಬ ರಾಜನು ಮೂವತ್ತಾರು ವರ್ಷಗಳ ವರೆಗೆ ರಾಜ್ಯವಾಳುವನು.

೧೪೬. ಅವನ ಪುತ್ರನಾದ ಕುಶಾಲ ಎಂಬ ರಾಜನು ಎಂಟು ವರ್ಷಗಳ ವರೆಗೆ ಪ್ರಭುವಾಗುವನು. ಕುಶಾಲ ಪುತ್ರನಾದ ಬಂಧುಪಾಲಿತ ಎಂಬುವನು ಮತ್ತೆ ಎಂಟು ವರ್ಷಗಳ ವರೆಗೆ ರಾಜ್ಯವನ್ನು ಅನುಭವಿಸುವನು.

೧೪೭. ಬಂಧುಪಾಲಿತನಿಗೆ ಇಂದ್ರಪಾಲಿತನೆಂಬ ಪುತ್ರನು ಜನಿಸುವನು. ತರುವಾಯ ದೇವವರ್ಮಾ ಎಂಬುವನು ಏಳು ವರ್ಷಗಳ ವರೆಗೆ ಪ್ರಜಾಪಾಲಕನಾಗಿರುವನು.

೧೪೮. ಅವನಿಗೆ ಶತಧನು ಎಂಬ ರಾಜನು ಪುತ್ರನಾಗಿ ಜನಿಸುವನು. ಅನಂತರದಲ್ಲಿ ಬೃಹದ್ರಥನೆಂಬ ರಾಜನು ಏಳು ವರ್ಷಗಳ ವರೆಗೆ ನೃಪತಿಯಾಗುವನು.

ಇತ್ಯೇತೇ ನವ ಮೌರ್ಯಾ ವೈ ಭೋಕ್ಷ್ಯಂತಿ ಚ ವಸುಂಧರಾಮ್ ।
ಸಪ್ತತ್ರಿಂಶಚ್ಛತಂ ಪೂರ್ಣಂ ತೇಭ್ಯಃ ಶುಂಗೋ ಗಮಿಷ್ಯತಿ ॥ ೧೪೯ ॥

ಪುಷ್ಪಮಿತ್ರಸ್ತು ಸೇನಾನೀರುದ್ಧೃತ್ಯ ತು ಬೃಹದ್ರಥಮ್ ।
ಕಾರಯಿಷ್ಯತಿ ವೈ ರಾಜ್ಯಂ ಸಮಾಃ ಷಷ್ಟಿಂ ಸ ಚೈವ ತು ॥ ೧೫೦ ॥

ಅಗ್ನಿಮಿತ್ರೋ ನೃಪಶ್ಚಾಷ್ಟೌ ಭವಿಷ್ಯಂತಿ ಸಮಾ ನೃಪಃ ।
ಭವಿತಾ ಚಾಪಿ ಸುಜ್ಯೇಷ್ಠಃ ಸಪ್ತ ವರ್ಷಾಣಿ ವೈ ತತಃ ॥ ೧೫೧ ॥

ವಸುಮಿತ್ರಸ್ತತೋ ಭಾವ್ಯೋ ದಶವರ್ಷಾಣಿ ಪಾರ್ಥಿವಃ ।
ತತೋ ಭದ್ರಃ ಸಮೇ ದ್ವೇ ತು ಭವಿಷ್ಯತಿ ನೃಪಶ್ಚ ವೈ ॥ ೧೫೨ ॥

ಭವಿಷ್ಯತಿ ಸಮಾಸ್ತಸ್ಮಾತ್ತಿಸ್ರ ಏವ ಪುಲಿಂದಕಃ ।
ರಾಜಾ ಘೋಷಸ್ತತಶ್ಚಾಪಿ ವರ್ಷಾಣಿ ಭವಿತಾ ತ್ರಯಃ ॥ ೧೫೩ ॥

---

೧೪೯. ಈ ರೀತಿಯಾಗಿ ಮೌರ್ಯಚಂದ್ರಗುಪ್ತ ವಂಶದಲ್ಲಿ ಜನಿಸಿದ ಒಂಭತ್ತು ಮಂದಿ ರಾಜರು ಒಂದುನೂರ ಮೂವತ್ತೇಳು ವರ್ಷಗಳ ಪೂರ್ಣಕಾಲ ಭೂಮಿಯನ್ನು ಪಾಲಿಸುವರು. ಅವರಿಂದ ಮುಂದೆ ಶುಂಗ ಎಂಬ ರಾಜನು ಜನಿಸುವನು.

೧೫೦. ಸೇನಾನಾಯಕನಾದ ಪುಷ್ಪಮಿತ್ರನು ಬೃಹದ್ರಥನನ್ನು ನಿರ್ಮೂಲ ಮಾಡಿ ಅರವತ್ತೇಳು ವರ್ಷಗಳ ವರೆಗೆ ರಾಜ್ಯಭಾರವನ್ನು ನಡೆಯಿಸುವನು.

೧೫೧. ತರುವಾಯ ಅಗ್ನಿಮಿತ್ರನೆಂಬ ರಾಜನು ಎಂಟು ವರ್ಷಗಳ ವರೆಗೆ ರಾಜನಾಗಿ ಆಳುವನು. ತರುವಾಯ ಸುಜ್ಯೇಷ್ಠನೆಂಬುವನು ಏಳು ಸಂವತ್ಸರಗಳ ವರೆಗೆ ಧೊರೆಯಾಗುವನು.

೧೫೨. ಆ ಮೇಲೆ ಹತ್ತು ಸಂವತ್ಸರಗಳು ಕಳೆಯುವ ವರೆಗೆ ವಸುಮಿತ್ರನೆಂಬುವನು ರಾಜನಾಗುವನು. ತರುವಾಯ ಭದ್ರ ಎಂಬ ನೃಪತಿಯು ಎರಡು ವರ್ಷ ಮಾತ್ರ ರಾಜನಾಗಿರುವನು.

೧೫೩. ಅವನಿಂದ ಮುಂದೆ ಪುಲಿಂದಕ ಎಂಬುವನು ಮೂರು ವರ್ಷ ಮಾತ್ರ ರಾಜ್ಯಾಧಿಕಾರಿಯಾಗುವನು. ತರುವಾಯ ಘೋಷ ಎಂಬ ರಾಜನು ಮೂರು ಸಂವತ್ಸರಗಳ ವರೆಗೆ ರಾಜ್ಯವನ್ನಾಳುವನು.

ಸಪ್ತ ವೈ ವಜ್ರಮಿತ್ರಸ್ತು ಸಮಾ ರಾಜಾ ತತಃ ಪುನಃ ।
ದ್ವಾತ್ರಿಂಶದ್ಭವಿತಾ ವಾಪಿ ಸಮಾ ಭಾಗವತೋ ನೃಪಃ ॥ ೧೫೪ ॥

ಭವಿಷ್ಯತಿ ಸುತಸ್ತಸ್ಯ ದೇವಭೂಮಿಃ ಸಮಾ ದಶ ।
ದಶೈತೇ ಶುಂಗರಾಜಾನೋ ಭೋಕ್ಷ್ಯಂತೀಮಾಂ ವಸುಂಧರಾಮ್ ॥ ೧೫೫ ॥

ಶತಂ ಪೂರ್ಣಂ ದಶ ದ್ವೇ ಚ ತೇಭ್ಯಃ ಕಣ್ವಂ ಗಮಿಷ್ಯತಿ ।
ಅಮಾತ್ಯೋ ವಸುದೇವಸ್ತು ಬಾಲ್ಯಾದ್ವ್ಯಸನಿನಂ ನೃಪಮ್ ॥ ೧೫೬ ॥

ದೇವಭೂಮಿಂ ತತೋ ಹತ್ವಾ ಶುಂಗೇಷು ಭವಿತಾ ನೃಪಃ ।
ಭವಿಷ್ಯತಿ ಸಮಾ ರಾಜಾ ಪಂಚ ಕಾಣ್ವಾಯನಸ್ತು ಸಃ ॥ ೧೫೭ ॥

ಭೂಮಿಮಿತ್ರಃ ಸುತಸ್ತಸ್ಯ ಚತುರ್ವಿಂಶದ್ಭವಿಷ್ಯತಿ ।
ಭವಿತಾ ದ್ವಾದಶ ಸಮಾಸ್ತಸ್ಮಾನ್ನಾರಾಯಣೋ ನೃಪಃ ॥ ೧೫೮ ॥

---

೧೫೪. ಅನಂತರದಲ್ಲಿ ಮತ್ತೆ ವಜ್ರಮಿತ್ರನೆಂಬ ರಾಜನು ಏಳು ವರ್ಷಗಳ ವರೆಗೆ ಪ್ರಭುವಾಗುವನು. ಆ ಮೇಲೆ ಕಣ್ವಾಯನನೆಂಬುವನು ಐದು ಸಂವತ್ಸರಗಳ ವರೆಗೆ ರಾಜನಾಗಿರುವನು.

೧೫೫. ಅವನ ಪುತ್ರನಾದ ದೇವಭೂಮಿ ಎಂಬ ರಾಜನು ಹತ್ತು ವರ್ಷಗಳ ವರೆಗೆ ರಾಜನಾಗಿರುವನು. ಶುಂಗನೆಂಬ ಮೂಲಪುರುಷನಿಂದ ಬಂದ ಈ ಹತ್ತು ಮಂದಿ ರಾಜರು ಭೂಮಿಯನ್ನು ಪಾಲಿಸುವರು.

೧೫೬. ಒಟ್ಟು ಶುಂಗ ಭೂಪಾಲಕರು ಆಳಿದ ಸಮಯವು ಒಂದುನೂರ ಹನ್ನೆರಡು ಸಂವತ್ಸರ ಪರಿಮಿತವಾಗುವುದು. ಮುಂದೆ ರಾಜ್ಯವು ಕಣ್ವರಾಜನನ್ನು ಸೇರುವುದು. ದೇವಭೂಮಿ ಎಂಬ ರಾಜನು ಬಾಲ್ಯದಿಂದ ವ್ಯಸನ ಲಂಪಟನಾಗಿರುವನು. ಅವನಿಗೆ ವಸುದೇವನೆಂಬ ಮಂತ್ರಿಯಿದ್ದನು.

೧೫೭. ಆ ಮಂತ್ರಿಯು ದೇವಭೂಮಿ ರಾಜನನ್ನು ಕೊಂದು ಶುಂಗ ದೇಶದಲ್ಲಿ ತಾನು ರಾಜನಾಗುವನು. ಕಣ್ವವಂಶಭೂತನಾದ ಆ ರಾಜನು ಐದು ವರ್ಷಗಳ ವರೆಗೆ ರಾಜನಾಗುವನು.

೧೫೮. ಆ ವಸುದೇವನ ಪುತ್ರನಾದ ಭೂಮಿಮಿತ್ರನು ಇಪ್ಪತ್ತನಾಲ್ಕು ವರ್ಷಗಳ ವರೆಗೆ ರಾಜನಾಗುವನು. ಅವನಿಂದ ಮುಂದೆ ನಾರಾಯಣ ಎಂಬ ರಾಜನು ಹನ್ನೆರಡು ವರ್ಷಗಳ ವರೆಗೆ ರಾಜನಾಗಿರುವನು.

ಸುಶರ್ಮಾ ತತ್ಸುತಶ್ಚಾಪಿ ಭವಿಷ್ಯತಿ ಚತುಃಸಮಾಃ ।
ಕಣ್ವಾಯನಾಸ್ತು ಚತ್ವಾರಶ್ಚತ್ವಾರಿಂಶಚ್ಚ ಪಂಚ ಚ ॥ ೧೫೯ ॥

ಸಮಾ ಭೋಕ್ಷ್ಯಂತಿ ಪೃಥಿವೀಂ ಪುನರಂಧ್ರಾನ್ ಗಮಿಷ್ಯತಿ ।
ಕಣ್ವಾಯನಮಥೋದ್ಧೃತ್ಯ ಸ:ಶರ್ಮಾಣಂ ಪ್ರಸಹ್ಯ ತಮ್ ॥ ೧೬೦ ॥

ಸಿಂಧುಕೋ ಹ್ಯಂಧ್ರಜಾತೀಯಃ ಪ್ರಾಪ್ಸ್ಯತೀಮಾಂ ವಸುಂಧರಾಮ್ ।
ತ್ರಯೋವಿಂಶತ್ ಸಮಾ ರಾಜಾ ಸಿಂಧುಕೋ ಭವಿತಾ ತ್ವಥ ॥ ೧೬೧ ॥

ಕೃಷ್ಣೋ ಭ್ರಾತಾಸ್ಯ ವರ್ಷಾಣಿ ಸೋsಸ್ಮಾದ್ದಶ ಭವಿಷ್ಯತಿ ।
ಶ್ರೀಶಾಂತಕರ್ಣಿರ್ಭವಿತಾ ತಸ್ಯ ಪುತ್ರಸ್ತು ವೈ ಮಹಾನ್ ॥ ೧೬೨ ॥

ಪಂಚಾಶತ್ತು ಸಮಾಃ ಷಟ್ಚ ಶಾಂತಕರ್ಣಿರ್ಭವಿಷ್ಯತಿ ।
ಆಪೋಲವೋ ದ್ವಾದಶ ವೈ ತಸ್ಯ ಪುತ್ರೋ ಭವಿಷ್ಯತಿ ॥ ೧೬೩ ॥

---

೧೫೯. ನಾರಾಯಣರಾಜನ ಪುತ್ರನಾದ ಸುಶರ್ಮಾ ಎಂಬುವನು ನಾಲ್ಕು ವರ್ಷಗಳ ವರೆಗೆ ರಾಜ್ಯವನ್ನು ಆಳುವನು. ಹೀಗೆ ನಲವತ್ತೈದು ಸಂವತ್ಸರಗಳು ಪೂರ್ತಿಯಾಗಿ ಕಣ್ವಾಯನ ರಾಜರು ಆಳುವರು.

೧೬೦. ಕಣ್ವಾಯನ ರಾಜರು ಅಷ್ಟು ಸಂವತ್ಸರಗಳ ವರೆಗೆ ರಾಜ್ಯವನ್ನು ಅನುಭವಿಸುವರು. ತರುವಾಯ ರಾಜ್ಯವು ಅಂಧ್ರರಾಜರ ವಶವಾಗುವುದು. ಆಗ ಅಂಧ್ರರಾಜನೊಬ್ಬನು ಕಣ್ವಾಯನನಾದ ಸುಶರ್ಮ ರಾಜನನ್ನು ಕಿತ್ತು ಹಾಕುವನು.

೧೬೧. ಆಗ ಅಂಧ್ರ ಜಾತಿಯ ಸಿಂಧುಕನೆಂಬುವನು ಈ ಭೂಮಿಯನ್ನು ಹೊಂದುವನು. ಮತ್ತು ಆ ಸಿಂಧುಕನು ಇಪ್ಪತ್ತಮೂರು ವರ್ಷಗಳ ವರೆಗೆ ರಾಜನಾಗಿ ಆಳುವನು.

೧೬೨. ಇವನ ನಂತರದಲ್ಲಿ ಇವನ ಭ್ರಾತೃವಾಗಿದ್ದ ಕೃಷ್ಣನೆಂಬುವನು ಹತ್ತು ವರ್ಷಗಳ ವರೆಗೆ ರಾಜನಾಗಿರುವನು. ಅವನಿಗೆ ಮಹಾಗಂಭೀರನಾದ ಶ್ರೀ ಶಾಂತಕರ್ಣಿ ಎಂಬ ಪುತ್ರನು ಜನಿಸುವನು.

೧೬೩. ಆ ಶಾಂತಕರ್ಣಿ ಎಂಬುವನು ಐವತ್ತಾರು ವರ್ಷಗಳ ವರೆಗೆ ರಾಜ್ಯವನ್ನು ಆಳುತ್ತಾನೆ. ಅವನ ಪುತ್ರನಾದ ಆಪೋಲವ ಎಂಬುವನು ಹನ್ನೆರಡು ವರ್ಷಗಳ ವರೆಗೆ ರಾಜನಾಗುವನು.

ಚತುರ್ವಿಂಶತ್ತು ವರ್ಷಾಣಿ ಪಟುಮಾಂಶ್ಚ ಭವಿಷ್ಯತಿ ।
ಭವಿತಾನಿಷ್ಟಕರ್ಮಾ ತು ವರ್ಷಾಣಾಂ ಪಂಚವಿಂಶತಿಮ್ ॥ ೧೬೪ ॥

ತತಃ ಸಂವತ್ಸರಂ ಪೂರ್ಣಂ ಹಾಲೋ ರಾಜಾ ಭವಿಷ್ಯತಿ ।
ಪಂಚಪತ್ತಲ್ಲಕೋ ನಾಮ ಭವಿಷ್ಯತಿ ಮಹಾಬಲಃ ॥ ೧೬೫ ॥

ಭಾವ್ಯಃ ಪುರೀಷಭೀರುಸ್ತು ಸಮಾಃ ಸೋಽಪ್ಯೇಕವಿಂಶತಿಮ್ ।
ಶಾಂತಕರ್ಣಿರ್ವರ್ಷಮೇಕಂ ಭವಿಷ್ಯತಿ ನರಾಧಿಪಃ ॥ ೧೬೬ ॥

ಅಷ್ಟವಿಂಶತಿವರ್ಷಾಣಿ ಶಿವಸ್ವಾತಿರ್ಭವಿಷ್ಯತಿ ।
ರಾಜಾ ಚ ಗೌತಮೀಪುತ್ರ ಏಕವಿಂಶತ್ಸಮಾ ನೃಪಃ ॥ ೧೬೭ ॥

ಏಕೋನವಿಂಶತಿಂ ರಾಜಾ ಯಜ್ಞಃ ಶ್ರೀ ಶಾತಕರ್ಣ್ಯಥ ।
ಷಡೇವ ಭವಿತಾ ತಸ್ಮಾದ್ವಿಜಯಸ್ತು ಸಮಾ ನೃಪಃ ॥ ೧೬೮ ॥

---

೧೬೪. ಹಾಗೆಯೇ ಪಟುಮಾನ್ ಎಂಬುವನು ಇಪ್ಪತ್ತನಾಲ್ಕು ಸಂವತ್ಸರಗಳ ವರೆಗೆ ರಾಜನಾಗುವನು. ತರುವಾಯ ಅನಿಷ್ಟಕರ್ಮ ಎಂಬುವನು ಇಪ್ಪತ್ತೈದು ವರ್ಷಗಳ ವರೆಗೆ ರಾಜನಾಗಿ ಆಳುವನು.

೧೬೫. ಆ ಮೇಲೆ ಒಂದು ಸಂವತ್ಸರ ಪೂರ್ಣವಾಗಿ ಹಾಲ ಎಂಬ ರಾಜನು ಇರುವನು. ಅನಂತರ ಬಲಿಷ್ಠನಾದ ಪತ್ತಲ್ಲಕ ಎಂಬ ರಾಜನು ಐದು ವರ್ಷಗಳ ವರೆಗೆ ರಾಜ್ಯವನ್ನು ಪಾಲಿಸುವನು.

೧೬೬. ತರುವಾಯ ಪುರೀಷಭೀರುವೆಂಬುವನು ರಾಜನಾಗಿ ಇಪ್ಪತ್ತೊಂದು ವರ್ಷ ರಾಜ್ಯವನ್ನು ಆಳುವನು, ಶಾಂತಕರ್ಣಿ ಎಂಬುವನು ಒಂದು ವರ್ಷ ಮಾತ್ರ ರಾಜನಾಗಿರುವನು.

೧೬೭. ಆ ಮೇಲೆ ಶಿವಸ್ವಾಮಿ ಎಂಬ ರಾಜನು ಇಪ್ಪತ್ತೆಂಟು ವರ್ಷಗಳ ವರೆಗೆ ಪ್ರಭುವಾಗುವನು. ಮತ್ತು ಗೌತಮೀ ಪುತ್ರನು ಇಪ್ಪತ್ತೊಂದು ವರ್ಷಗಳ ವರೆಗೆ ರಾಜನಾಗುವನು.

೧೬೮. ತರುವಾಯ ಯಜ್ಞಶ್ರೀಶಾತಕರ್ಣೀ ಎಂಬುವನು ಇಪ್ಪತ್ತೊಂದು ವರ್ಷಗಳ ವರೆಗೆ ರಾಜ್ಯಾಧಿಕಾರವನ್ನು ಹೊಂದುವನು. ಅನಂತರದಲ್ಲಿ ವಿಜಯ ಎಂಬ ರಾಜನು ಆರು ವರ್ಷ ಮಾತ್ರ ರಾಜನಾಗಿರುವನು.

**ದಂಡಶ್ರೀಶಾಂತಕರ್ಣೀ ಚ ತಸ್ಯ ಪುತ್ರಃ ಸಮಾಸ್ತ್ರಯಃ ।**
**ಪುಲೋಮಾರಿಃ ಸಮಾಃ ಸಪ್ತ ತತಶ್ಚೈಷಾಂ ಭವಿಷ್ಯತಿ ॥ ೧೬೯ ॥**

**ಇತ್ಯೇತೇ ವೈ ನೃಪಾಸ್ತ್ರಿಂಶದಂಧ್ರಾ ಭೋಕ್ಷ್ಯಂತಿ ವೈ ಮಹೀಮ್" ।**
**ಸಮಾಃ ಶತಾನಿ ಚತ್ವಾರಿ ಪಂಚಾಶತ್ ಷಟ್ ತಥೈವ ಚ ॥ ೧೭೦ ॥**

**ಅಂಧ್ರಾಣಾಂ ಸಂಸ್ಥಿತಾಃ ಪಂಚ ತೇಷಾಂ ವಂಶಾಶ್ಚ ಯೇ ಪುನಃ ।**
**ಸಪ್ತೈವ ತು ಭವಿಷ್ಯಂತಿ ದಶಾಭೀರಾಸ್ತತೋ ನೃಪಾಃ ॥ ೧೭೧ ॥**

**ಸಪ್ತ ಗರ್ದಭಿನಶ್ಚಾಪಿ ತತೋಽಥ ದಶ ವೈ ಶಕಾಃ ।**
**ಯವನಾಷ್ಟೌ ಭವಿಷ್ಯಂತಿ ತುಷಾರಾಸ್ತು ಚತುರ್ದಶ ॥ ೧೭೨ ॥**

**ತ್ರಯೋದಶ ಗುರುಂಡಾಶ್ಚ ಮೌನಾ ಹ್ಯೇಕಾದಶ್ಯೈವ ತು ।**
**ಅಂಧ್ರಾ ಭೋಕ್ಷ್ಯಂತಿ ವಸುಧಾಂ ಶತೇ ದ್ವೇ ಚ ಶತಂ ಚ ವೈ ॥೧೭೩॥**

---

೧೬೯. ವಿಜಯಪುತ್ರನಾದ ದಂಡಶ್ರೀ ಶಾಂತಕರ್ಣೀ ಎಂಬುವನು ಮೂರು ವರ್ಷಗಳ ವರೆಗೆ ಧೊರೆಯಾಗುವನು. ತರುವಾಯ ಇವರ ಕಡೆಯಲ್ಲಿ ಪುಲೋಮಾರಿ ಎಂಬುವನು ಏಳು ವರ್ಷಗಳ ವರೆಗೆ ರಾಜನಾಗಿರುವನು.

೧೭೦. ಈ ರೀತಿಯಾಗಿ ಮೂವತ್ತಮೂರು ಮಂದಿ ಅಂಧ್ರಜಾತಿಯ ರಾಜರು ಒಟ್ಟಾಗಿ ನಾಲ್ಕುನೂರು ಐವತ್ತಾರು ವರ್ಷಗಳ ವರೆಗೆ ಭೂಭಾರವನ್ನು ನಿರ್ವಹಿಸುವರು.

೧೭೧. ಇವರಲ್ಲಿ ಅಂಧ್ರಜಾತಿಯ ರಾಜರು ಐದು ಮಂದಿ ಇರುವರು. ಅವರ ಅನಂತರದಲ್ಲಿ ಅವರ ವಂಶೀಕರು ಏಳು ಮಂದಿಯೂ ತರುವಾಯ ಆಭೀರಕುಲದವರು ಹತ್ತು ಮಂದಿಯೂ ರಾಜರಾಗುವರು.

೧೭೨. ಹಾಗೆ ಗಾರ್ದಭಿ ಜನಾಂಗದವರು ಏಳು ಮಂದಿಯೂ, ಶಕ ಜನಾಂಗದವರು ಹತ್ತು ಮಂದಿಯೂ, ಯವನರು ಎಂಟು ಮಂದಿಯೂ ಮತ್ತು ತುಷಾರ ಎಂಬುವರು ಹದಿನಾಲ್ಕು ಮಂದಿಯೂ ರಾಜರಾಗಿರುವರು.

೧೭೩. ಅದರಂತೆ ಹದಿಮೂರು ಜನ ಗುರುಂಡರೂ ಮತ್ತು ಹನ್ನೊಂದು ಜನ ಮೌನರೂ ರಾಜರಾಗಿರುವರು. ಅಂಧ್ರರಾಜರು ಮೂರುನೂರು ವರ್ಷಗಳ ಪರ್ಯಂತವಾಗಿ ಭೂಮಿಯನ್ನು ಆಳುವರು.

ಸಪ್ತಷಷ್ಟಿಂ ಚ ವರ್ಷಾಣಿ ದಶಾಭೀರಾಸ್ತತೋ ನೃಪಾಃ ।
ಸಪ್ತ ಗರ್ದಭಿನಶ್ಚೈವ ಭೋಕ್ಷ್ಯಂತೀಮಾಂ ದ್ವಿಸಪ್ತತಿಮ್ ॥ ೧೭೪ ॥

ಶತಾನಿ ತ್ರೀಣ್ಯಶೀತಿಂ ಚ ಭೋಕ್ಷ್ಯಂತಿ ವಸುಧಾಂ ಶಕಾಃ ।
ಅಶೀತೀ ದ್ವೇ ಚ ವರ್ಷಾಣಿ ಭೋಕ್ತಾರೋ ಯವನಾ ಮಹೀಮ್ ೧೭೫ ॥

ಪಂಚ ವರ್ಷಶತಾನೀಹ ತುಷಾರಾಣಾಂ ಮಹೀ ಸ್ಮೃತಾ ।
ಶತಾನ್ಯರ್ಧಂ ಚತುರ್ಥಾನಿ ಭವಿತಾರಸ್ತ್ರಯೋದಶ ॥ ೧೭೬ ॥

ಗುರುಂಡಾ ವೃಷಲೈಃ ಸಾರ್ಧಂ ಭೋಕ್ಷ್ಯಂತೇ ಮ್ಲೇಚ್ಛಜಾತಯಃ ।
ಶತಾನಿ ತ್ರೀಣಿ ಭೋಕ್ಷ್ಯಂತೇ ಮೌನಾ ಏಕಾದಶೈವ ತು ॥ ೧೭೭ ॥

ತೇಷು ಚ್ಛಿನ್ನೇಷು ಕಾಲೇನ ತತಃ ಕಿಲಕಿಲೋ ನೃಪಃ ।
ತತಃ ಕಿಲಕಿಲೇಭ್ಯಶ್ಚ ವಿಂಧ್ಯಶಕ್ತಿರ್ಭವಿಷ್ಯತಿ ॥ ೧೭೮ ॥

---

೧೭೪. ತರುವಾಯ ಹತ್ತು ಮಂದಿ ಆಭೀರರಾಜರು ಎಪ್ಪತ್ತಾರು ಸಂವತ್ಸರ ಪರ್ಯಂತವಾಗಿ ಆಳುವರು. ಆ ಮೇಲೆ ಏಳು ಮಂದಿ ಗಾರ್ದಭಿ ಎಂಬುವರು ಎಪ್ಪತ್ತೆರಡು ವರ್ಷಗಳ ವರೆಗೆ ಭೂಮಿಯನ್ನು ರಕ್ಷಿಸುವರು.

೧೭೫. ಶಕ ಎಂಬ ರಾಜರು ಮೂರುನೂರು ಮತ್ತು ಎಂಭತ್ತು ವರ್ಷಗಳು ಪೂರ್ತಿಯಾಗಿ ಭೂಮಿಯನ್ನು ಪಾಲಿಸುವರು. ಹಾಗೆಯೆ ಯವನರೆಂಬುವರು ಒಂದು ನೂರ ಅರವತ್ತು ವರ್ಷಗಳ ವರೆಗೆ ಭೂಮಿಯ ಪ್ರಭುತ್ವವನ್ನು ಅನುಭವಿಸುವರು.

೧೭೬. ಮತ್ತು ಐದುನೂರು ಸಂವತ್ಸರಗಳ ವರೆಗೆ ಭೂಮಿಯು ತುಷಾರ ಎಂಬ ರಾಜರಿಗೆ ಅಧೀನವಾಗುವುದೆಂದು ಸ್ಮರಿಸಲ್ಪಟ್ಟಿರುವುದು. ಹಿಂದೆ ಹೇಳಿರುವ ಹದಿಮೂರು ಮಂದಿ ಗುರುಂಡ ಎಂಬುವರು ನಾಲ್ಕುನೂರ ಐವತ್ತು ವರ್ಷಗಳ ಕಾಲದಲ್ಲಿ ರಾಜರಾಗುವರು.

೧೭೭. ಮ್ಲೇಚ್ಛರ ಜಾತಿಗೆ ಸೇರಿರುವ ಆ ಗುರುಂಡರು ವೃಷಲರೊಂದಿಗೆ ಭೂಮಿಯನ್ನು ಭುಂಜಿಸುವರು. ಮತ್ತು ಹನ್ನೊಂದು ಮಂದಿ ಮೌನ ಎಂಬುವರು ಮೂರುನೂರು ವರ್ಷಗಳ ವರೆಗೆ ಭೂಮಿಯನ್ನು ಆಳುವರು.

೧೭೮. ತರುವಾಯ ಕೆಲವು ಕಾಲವು ಕಳೆದು ಮೌನರಾಜರು ನಾಶಹೊಂದಲು ಕಿಲಕಿಲ ಎಂಬ ರಾಜನು ಸಂಭವಿಸುವನು. ಅನಂತರದಲ್ಲಿ ಆ ಕಿಲಕಿಲರಾಜ ಸಂತಾನ ದಿಂದ ವಿಂಧ್ಯಶಕ್ತಿ ಎಂಬ ರಾಜನು ಹುಟ್ಟುವನು.

ಸಮಾಃ ಷಣ್ಣವತಿಂ ಚೈವ ಪೃಥಿವೀಂ ತು ಸಮೇಷ್ಯತಿ ।
ನೃಪಾನ್ ವೈದಿಶಿಕಾಂಶ್ಚಾಥ ಭವಿಷ್ಯಾಂಸ್ತು ನಿಬೋಧತ || ೧೭೯ ||

ಶೇಷಸ್ಯ ನಾಗರಾಜಸ್ಯ ಪುತ್ರಃ ಸುರಪುರಂಜಯಃ ।
ಭೋಗೀ ಭವಿಷ್ಯತೇ ರಾಜಾ ನೃಪೋ ನಾಗಕುಲೋದ್ವಹಃ || ೧೮೦ ||

ಸದಾಚಂದ್ರಸ್ತು ಚಂದ್ರಾಂಶುರ್ದ್ವಿತೀಯೋ ನಖವಾಂಸ್ತಥಾ ।
ಘನಧರ್ಮಾ ತತಶ್ಚಾಪಿ ಚತುರ್ಥೋ ವಂಶಜಃ ಸ್ಮೃತಃ || ೧೮೧ ||

ಭೂತಿನಂದಸ್ತತಶ್ಚಾಪಿ ವೈದಿಶೇ ತು ಭವಿಷ್ಯತಿ ।
ತಸ್ಯ ಭ್ರಾತಾ ಯವೀಯಾಂಸ್ತು ನಾಮ್ನಾ ನಂದಿಯಶಾಃ ಕಿಲ || ೧೮೨ ||

ತಸ್ಯಾನ್ವಯೇ ಭವಿಷ್ಯಂತಿ ರಾಜಾನಸ್ತೇ ತ್ರಯಸ್ತು ವೈ ।
ದೌಹಿತ್ರಃ ಶಿಶಿಕೋ ನಾಮ ಪೂರಿಕಾಯಾಂ ನೃಪೋಽಭವತ್|| ೧೮೩ ||

---

೧೭೯. ವಿಂಧ್ಯಶಕ್ತಿಯು ತೊಂಭತ್ತಾರು ವರ್ಷಗಳ ವರೆಗೆ ಭೂಮಿಯ ಪ್ರಭುತ್ವವನ್ನು ಹೊಂದುವನು. ಇನ್ನು ಮುಂದೆ ಬರುವ ವೈದಿಶಿಕರೆಂಬ ರಾಜರ ಶಾಸನ ಸಮಯವನ್ನು ಶ್ರವಣಮಾಡಿರಿ.

೧೮೦. ನಾಗರಾಜನಾದ ಆದಿಶೇಷನ ಪುತ್ರನೂ ಸರ್ಪವಂಶ ಪ್ರತಿಷ್ಠಾಪಕನೂ ಮತ್ತು ಸುರಪುರಗಳನ್ನು ಜಯಿಸುವವನೆಂಬ ಅನ್ವರ್ಥನಾಮಾಂಕಿತನೂ ಆದ ನಾಗ ರಾಜನು ಭೂಮಿಗೆ ರಾಜನಾಗುವನು.

೧೮೧. ಮುಂದೆ ಅವನ ಪುತ್ರ ಪರಂಪರೆಯಲ್ಲಿ ಸದಾಚಂದ್ರ, ಚಂದ್ರಾಂಶು, ನಖವಾನ್ ಮತ್ತು ಧನಧರ್ಮಾ ಎಂಬುವರು ಜನಿಸಿ ಕ್ರಮವಾಗಿ ರಾಜರಾಗುವರೆಂದು ಸ್ಮರಿಸಲ್ಪಟ್ಟಿರುವರು.

೧೮೨. ಆ ಮೇಲೆ ವೈದಿಶರಾಜರ ವಂಶಾವಳಿಯಲ್ಲಿ ಭೂತಿನಂದ ಎಂಬುವ ಒಬ್ಬ ರಾಜನು ಜನಿಸುವನು. ಅವನಿಗೆ ನಂದಿಯಶ ಎಂಬ ನಾಮಾಂಕಿತನಾದ ಕನಿಷ್ಠ ಭ್ರಾತೃವು ಒಬ್ಬನಿರುವನು.

೧೮೩. ಆ ನಂದಿಯಶನ ವಂಶದಲ್ಲಿ ಮೂರು ಮಂದಿ ರಾಜರು ಹುಟ್ಟುವರು. ತರುವಾಯ ಅವನ ಮಗಳ ಮಗನಾದ ಶಿಶಿಕ ಎಂಬುವನು ಪೂರಿಕಾ ಎಂಬ ನಗರ ದಲ್ಲಿ ರಾಜನಾಗಿರುವನು.

ವಿಂಧ್ಯಶಕ್ತಿಸುತಶ್ಚಾಪಿ ಪ್ರವೀರೋ ನಾಮ ವೀರ್ಯವಾನ್ ।
ಭೋಕ್ಷ್ಯತೇ ಚ ಸಮಾಃ ಷಷ್ಟಿಂ ಪುರೀಂ ಕಾಂಚನಕಾಂ ಚ ವೈ ॥೧೮೪॥

ಯಕ್ಷ್ಯತೇ ವಾಜಪೇಯೈಶ್ಚ ಸಮಾಪ್ತವರದಕ್ಷಿಣೈಃ ।
ತಸ್ಯ ಪುತ್ರಾಸ್ತು ಚತ್ವಾರೋ ಭವಿಷ್ಯಂತಿ ನರಾಧಿಪಾಃ ॥ ೧೮೫ ॥

ವಿಂಧ್ಯಕಾನಾಂ ಕುಲಾನಾಂ ತೇ ನೃಪಾ ವೈವಾಹಿಕಾಸ್ತ್ರಯಃ ।
ಸುಪ್ರತೀಕೋ ಗಭೀರಶ್ಚ ಸಮಾ ಭೋಕ್ಷ್ಯತಿ ತ್ರಿಂಶತಿಮ್ ॥ ೧೮೬ ॥

ಶಂಕಮಾನೋಽಭವದ್ರಾಜಾ ಮಹಿಷೀಣಾಂ ಮಹೀಪತಿಃ ।
ಪುಷ್ಪಮಿತ್ರಾ ಭವಿಷ್ಯಂತಿ ಷಟ್ ಸ್ತ್ರೀಮಿತ್ರಾಸ್ತ್ರಯೋದಶ ॥ ೧೮೭ ॥

ಮೇಕಲಾಯಾಂ ನೃಪಾಃ ಸಪ್ತ ಭವಿಷ್ಯಂತಿ ಚ ಸಪ್ತತಿಃ ।
ಕೋಮಲಾಯಾಂ ತು ರಾಜಾನೋ ಭವಿಷ್ಯಂತಿ ಮಹಾಬಲಾಃ ॥ ೧೮೮ ॥

---

೧೮೪. ವಿಂಧ್ಯಶಕ್ತಿಯ ಪುತ್ರನೂ, ಅತ್ಯಂತ ಪರಾಕ್ರಮಿಯೂ ಆದ ಪ್ರವೀರ ಎಂಬುವನು ಕಾಂಚನಕಾ ನಗರಿಯಲ್ಲಿ ಅರವತ್ತು ಸಂವತ್ಸರಗಳ ವರೆಗೆ ರಾಜ್ಯವನ್ನು ಅನುಭವಿಸುವನು.

೧೮೫. ಮತ್ತು ಅವನು ಅನೇಕ ಉತ್ತಮ ದಕ್ಷಿಣಾದಾನದಿಂದ ಕೂಡಿರುವ ಅನೇಕ ವಾಜಪೇಯ ಯಾಗಗಳನ್ನು ಆಚರಿಸುವನು. ಮುಂದೆ ಅವನ ನಾಲ್ಕು ಮಂದಿ ಪುತ್ರರು ರಾಜರಾಗಿ ಆಳುವರು.

೧೮೬. ಅವರಲ್ಲಿ ಮೂರು ಮಂದಿಯು ವಿಂಧ್ಯಕ ಎಂಬ ರಾಜವಂಶಗಳನ್ನು ಬೆಳಗಿ ಪೋಷಿಸುವರು. ಅವರು ಸುಂದರವಾದ ಅವಯವವುಳ್ಳವರೂ ಮತು ಗಂಭೀರಾಶಯವುಳ್ಳವರೂ ಆಗಿ ಮೂವತ್ತು ಸಂವತ್ಸರಗಳ ವರೆಗೆ ಆಳುವರು.

೧೮೭. ತರುವಾಯ ಶಂಕಮಾನನೆಂಬುವನು ಮಹಿಷೀನಗರವನ್ನು ಆಳುವ ರಾಜನು ಆಗುವನು. ಆ ಮೇಲೆ ಪುಷ್ಪಮಿತ್ರ ಎಂಬ ಪರ್ಯಾಯನಾಮಾಂಕಿತ ರಾಜರು ಆರು ಮಂದಿಯೂ ಸ್ತ್ರೀಮಿತ್ರ ನಾಮಾಂಕಿತರು ಹದಿಮೂರು ಮಂದಿಯೂ ಜನಿಸುವರು.

೧೮೮. ಮೇಕಲಾ ಎಂಬ ನಗರಿಯಲ್ಲಿ ಏಳು ಮಂದಿ ರಾಜರು ಇರುವರು ಮತ್ತು ಕೋಮಲಾ ಎಂಬ ನಗರಿಯಲ್ಲಿ ಮಹಾಬಲಿಷ್ಠರಾದ ಎಪ್ಪತ್ತು ಮಂದಿ ರಾಜರು ಶಾಸಕರಾಗಿರುವರು.

ಮೇಘಾ ಇತಿ ಸಮಾಖ್ಯಾತಾ ಬುದ್ಧಿಮಂತೋ ನವೈವ ತು ।
ನೈಷಧಾಃ ಪಾರ್ಥಿವಾಃ ಸರ್ವೇ ಭವಿಷ್ಯಂತ್ಯಾಮನುಕ್ಷಯಾತ್ ॥ ೧೮೯ ॥

ನಲವಂಶಪ್ರಸೂತಾಸ್ತೇ ವೀರ್ಯವಂತೋ ಮಹಾಬಲಾಃ ।
ಮಗಧಾನಾಂ ಮಹಾವೀರ್ಯೋ ವಿಶ್ವಸ್ಫಾಣಿರ್ಭವಿಷ್ಯತಿ ॥ ೧೯೦ ॥

ಉತ್ಸಾದ್ಯ ಪಾರ್ಥಿವಾನ್ ಸರ್ವಾನ್ ಸೋಽನ್ಯಾನ್ ವರ್ಣಾನ್ ಕರಿಷ್ಯತಿ ।
ಕೈವರ್ತಾನ್ ಮದ್ರಕಾಂಶ್ಚೈವ ಪುಲಿಂದಾನ್ ಬ್ರಾಹ್ಮಣಾಂಸ್ತಥಾ ॥ ೧೯೧ ॥

ಸ್ಥಾಪಯಿಷ್ಯಂತಿ ರಾಜಾನೋ ನಾನಾದೇಶೇಷು ತೇ ಜನಾನ್ ।
ವಿಶ್ವಸ್ಫಾಣಿರ್ಮಹಾಸತ್ತ್ವೋ ಯುದ್ಧೇ ವಿಷ್ಣುಸಮಪ್ರಭಃ ॥ ೧೯೨ ॥

ವಿಶ್ವಸ್ಫಾಣಿರ್ನರಪತಿಃ ಕ್ಲೀಬಾಕೃತಿರಿವೋಚ್ಯತೇ ।
ಉತ್ಸಾದಯಿತ್ವಾ ಕ್ಷತ್ರಂ ತು ಕ್ಷತ್ರಮನ್ಯತ್ಕರಿಷ್ಯತಿ ॥ ೧೯೩ ॥

---

೧೮೯. ತರುವಾಯ ಮೇಘ ಎಂಬ ಪರ್ಯಾಯನಾಮಾಂಕನದಿಂದ ಪ್ರಸಿದ್ಧರಾದ ಒಂಭತ್ತು ಮಂದಿ ಬುದ್ಧಿಶಾಲಿಗಳಾದ ರಾಜರು ರಾಜ್ಯಭಾರಮಾಡುವರು. ಮತ್ತು ನೈಷಧ ರಾಜರೆಲ್ಲರೂ ಮನ್ವಂತರವು ಸಮಾಪ್ತಿಯಾಗುವ ವರೆಗೆ ಆಳುವರು.

೧೯೦. ನೈಷಧ ರಾಜರು ನಲಮಹಾರಾಜನ ವಂಶದಲ್ಲಿ ಹುಟ್ಟಿದವರೂ ವೀರ್ಯಶಾಲಿಗಳೂ ಮತ್ತು ಬಲಿಷ್ಠರೂ ಆಗಿರುವರು. ಅನಂತರದಲ್ಲಿ ಮಗಧ ದೇಶಗಳಲ್ಲಿ ಮಹಾವೀರ್ಯವಂತನಾದ ವಿಶ್ವಸ್ಫಾಣಿ ಎಂಬ ರಾಜನು ಆಳುವನು.

೧೯೧. ವಿಶ್ವಸ್ಫಾಣಿಯು ಸಮಸ್ತ ಕ್ಷತ್ರಿಯರಾಜರನ್ನು ಸಂಹರಿಸಿ ಅನ್ಯವರ್ಣಗಳಾದ ಕೈವರ್ತ, ಮದ್ರಕ, ಪುಲಿಂದ ಮತ್ತು ಬ್ರಾಹ್ಮಣರನ್ನು ರಾಜರನ್ನಾಗಿ ಕಲ್ಪಿಸುವನು.

೧೯೨. ಆ ರಾಜರು ಅನೇಕ ದೇಶಗಳಲ್ಲಿ ನಾನಾವರ್ಣ ಜನರನ್ನು ಸ್ಥಾಪಿಸುವರು. ಮಹಾ ಪರಾಕ್ರಮಿಯಾದ ವಿಶ್ವಸ್ಫಾಣಿ ಎಂಬುವನು ಯುದ್ಧರಂಗದಲ್ಲಿ ವಿಷ್ಣುವಿಗೆ ಸಮಾನವಾದ ಪ್ರಭಾವವುಳ್ಳ ಧೀರನಾಗಿರುವನು.

೧೯೩. ಮತ್ತು ಆ ವಿಶ್ವಸ್ಫಾಣಿ ರಾಜನು ಷಂಢನ ಆಕಾರವುಳ್ಳವನಂತೆ ಹೇಳಲ್ಪಡುವನು. ಅವನು ಕ್ಷತ್ರ ಜಾತಿಯನ್ನು ನಿರ್ಮೂಲಮಾಡಿ ಮತ್ತೊಂದು ಕ್ಷತ್ರ ಜಾತಿಯನ್ನು ನಿರ್ಮಿಸುವನು.

**ನವ ನಾಗಾಸ್ತು ಭೋಕ್ಷ್ಯಂತಿ ಪುರೀಂ ಚಂಪಾವತೀಂ ನೃಪಾಃ ।**
**ಮಥುರಾಂ ಚ ಪುರೀಂ ರಮ್ಯಾಂ ನಾಗಾ ಭೋಕ್ಷ್ಯಂತಿ ಸಪ್ತ ವೈ ॥ ೧೯೪ ॥**

**ಅನುಗಂಗಾಪ್ರಯಾಗಂ ಚ ಸಾಕೇತಂ ಮಗಧಾಂಸ್ತಥಾ ।**
**ಏತಾನ್ ಜನಪದಾನ್ ಸರ್ವಾನ್ ಭೋಕ್ಷ್ಯಂತೇ ಸರ್ಪವಂಶಜಾಃ ॥ ೧೯೫ ॥**

**ನೈಷಧಾನ್ ಯದುಕಾಂಶ್ಚೈವ ಶೈಶೀತಾನ್ ಕಾಲತೋಯಕಾನ್ ।**
**ಏತಾನ್ ಜನಪದಾನ್ ಸರ್ವಾನ್ ಭೋಕ್ಷ್ಯಂತೇ ಮಣಿಧಾನ್ಯಜಾನ್ ॥ ೧೯೬ ॥**

**ಕೋಶಲಾಶ್ಚಾಂಧ್ರಪೌಂಡ್ರಾಂಶ್ಚ ತಾಮ್ರಲಿಪ್ತಾನ್ ಸಸಾಗರಾನ್ ।**
**ಚಂಪಾಂ ಚೈವ ಪುರೀಂ ರಮ್ಯಾಂ ಭೋಕ್ಷ್ಯಂತೇ ದೇವರಕ್ಷಿತಾಃ॥ ೧೯೭ ॥**

**ಕಲಿಂಗಾ ಮಹಿಷಾಶ್ಚೈವ ಮಹೇಂದ್ರನಿಲಯಾಶ್ಚ ಯೇ ।**
**ಏತಾನ್ ಜನಪದಾನ್ ಸರ್ವಾನ್ ಪಾಲಯಿಷ್ಯತಿ ವೈ ಗುಹಃ ॥ ೧೯೮ ॥**

---

೧೯೪. ತರುವಾಯ ಚಂಪಾವತೀ ಎಂಬ ನಗರಿಯನ್ನು ಒಂಭತ್ತು ಮಂದಿ ನಾಗರಾಜರು ಪಾಲಿಸುವರು. ಮತ್ತು ರಮಣೀಯವಾದ ಮಥುರಾ ನಗರಿಯನ್ನು ಏಳು ಮಂದಿ ನಾಗರಾಜರು ಆಳುವರು.

೧೯೫. ಆ ಏಳು ಮಂದಿ ನಾಗರಾಜ ವಂಶಪ್ರಸೂತರು ಗಂಗಾ ನದಿಯನ್ನು ಅನುಸರಿಸಿರುವ ಪ್ರಯಾಗ, ಸಾಕೇತ ಮತ್ತು ಮಾಗಧ ಎಂಬ ಸಮಸ್ತ ದೇಶಾಧಿಪತ್ಯ ವನ್ನು ಅನುಭವಿಸುವರು.

೧೯೬. ಹಾಗೆ ಮಣಿಧಾನ್ಯ ವಂಶದ ರಾಜರು ನೈಷಧ, ಯದುಕ, ಶೈಶೀತ ಮತ್ತು ಕಾಲತೋಯಕ ಎಂಬ ನಾಮಾಂಕಿತಳಾದ ಎಲ್ಲ ವಿವಿಧ ರಾಜ್ಯಗಳನ್ನು ಪಾಲಿಸುವರು.

೧೯೭. ಅದರಂತೆ ಕೋಶಲ, ಆಂಧ್ರ, ಪೌಂಡ್ರ, ತಾಮ್ರಲಿಪ್ತ, ಸಾಗರ ಮತ್ತು ರಮ್ಯವಾದ ಚಂಪಾನಗರ, ಈ ಸ್ಥಳಗಳನ್ನು ದೇವರಕ್ಷಿತ ಎಂಬ ನಾಮಾಂಕಿತ ರಾಜರು ರಕ್ಷಿಸುವರು.

೧೯೮. ಕಲಿಂಗ, ಮಹಿಷ ಮತ್ತು ಮಹೇಂದ್ರಾಚಲದ ಆಶ್ರಯದಲ್ಲಿ ಇರುವ ಸಮಸ್ತದೇಶ ಇವುಗಳನ್ನೆಲ್ಲ ಗುಹ ಎಂಬ ನಾಮಾಂಕಿತನಾದ ರಾಜನು ಪಾಲಿಸುವನು

ಸ್ತ್ರೀ ರಾಷ್ಟ್ರಭೋಜಕಾಂಶ್ಚೈವ ಭೋಕ್ಷ್ಯತೇ ಕನಕಾಹ್ವಯಃ ।
ತುಲ್ಯಕಾಲಂ ಭವಿಷ್ಯಂತಿ ಸರ್ವೇ ಹ್ಯೇತೇ ಮಹೀಕ್ಷಿತಃ ॥ ೧೯೯ ॥

ಅಲ್ಪಪ್ರಸಾದಾ ಹ್ಯನೃತಾ ಮಹಾಕ್ರೋಧಾ ಹ್ಯಧಾರ್ಮಿಕಾಃ ।
ಭವಿಷ್ಯಂತೀಹ ಯವನಾ ಧರ್ಮತಃ ಕಾಮತೋಽರ್ಥತಃ ॥ ೨೦೦ ॥

ನೈವ ಮೂರ್ಧಾಭಿಷಿಕ್ತಾಸ್ತೇ ಭವಿಷ್ಯಂತಿ ನರಾಧಿಪಾಃ ।
ಯುಗದೋಷದುರಾಚಾರಾ ಭವಿಷ್ಯಂತಿ ನೃಪಾಸ್ತು ತೇ ॥ ೨೦೧ ॥

ಭವಿಷ್ಯಂತೀಹ ಪರ್ಯಾಯೇ ಕಾಲೇನ ಪೃಥಿವೀಕ್ಷಿತಃ ।
ವಿಹೀನಾಸ್ತು ಭವಿಷ್ಯಂತಿ ಧರ್ಮತಃ ಕಾಮತೋಽರ್ಥತಃ ॥ ೨೦೨ ॥

ತೈರ್ವಿಮಿಶ್ರಾ ಜನಪದಾ ಮ್ಲೇಚ್ಛಾಚಾರಾಶ್ಚ ಸರ್ವಶಃ ।
ವಿಪರ್ಯಯೇಣ ವರ್ತಂತೇ ನಾಶಯಿಷ್ಯಂತಿ ವೈ ಪ್ರಜಾಃ ॥ ೨೦೩ ॥

---

೧೯೯. ಕನಕಾಹ್ವಯನೆಂಬುವನು ಸ್ತ್ರೀ ರಾಷ್ಟ್ರ, ಭೋಜಕ ಎಂಬ ದೇಶಗಳನ್ನು ಪರಿಪಾಲನಮಾಡುವನು. ಹಿಂದೆ ಹೇಳಿರುವ ಸಮಸ್ತ ರಾಜರು ಸಮಾನ ಕಾಲದಲ್ಲಿ ಆಳುವ ಪ್ರಭುಗಳಾಗಿರುವರು.

೨೦೦. ಮುಂದೆ ಬರುವ ಯವನ ರಾಜರು ಧರ್ಮ-ಕಾಮ-ಪುರುಷಾರ್ಥಗಳ ವಿಷಯದಲ್ಲಿ ಅಲ್ಪವಾದ ಅನುಗ್ರಹ ಬುದ್ಧಿಳ್ಳವರೂ, ಅನೃತಶೀಲರೂ, ಅತ್ಯಂತ ಕೋಪಪೂರ್ಣರೂ ಮತ್ತು ಅಧಾರ್ಮಿಕರೂ ಆಗಿರುವರು.

೨೦೧. ಆಗ ಆ ರಾಜರು ಪಟ್ಟಾಭಿಷೇಕ ಸಂಸ್ಕಾರದಿಂದ ಸಂಸ್ಕೃತರಾಗಿರುವುದಿಲ್ಲ. ಮತ್ತು ಆ ರಾಜರು ಯುಗದ ದೋಷಗಳನ್ನು ಅನುಸರಿಸಿ ನೀಚವಾದ ಆಚಾರವುಳ್ಳವರಾಗುವರು.

೨೦೨. ಈ ಯುಗದ ಪರ್ಯಾಯದಲ್ಲಿ ಕಾಲಗತಿಗೆ ಅಧೀನರಾಗಿರುವ ರಾಜರು ಧರ್ಮ, ಅರ್ಥ ಮತ್ತು ಕಾಮ ಎಂಬ ಸಕಲ ಪುರುಷಾರ್ಥಗಳಿಂದ ಹೀನರಾಗುವರು.

೨೦೩. ಅಂತಹ ಹೀನ ಪ್ರಜೆಗಳಿಂದ ಸಂಕರಹೊಂದಿದ ದೇಶೀಯ ಪ್ರಜೆಗಳು ಎಲ್ಲ ರೀತಿಯಿಂದಲೂ ಮ್ಲೇಚ್ಛಾಚಾರದಲ್ಲಿ ತತ್ಪರರಾಗಿ ಪಾಪಮಾರ್ಗದಲ್ಲಿರುತ್ತ ಸಮಸ್ತ ಪ್ರಜೆಗಳನ್ನು ನಾಶಮಾಡುತ್ತಾರೆ.

ಲುಬ್ಧಾ ಅನೃತವಾಚಶ್ಚ ಭವಿತಾರಸ್ತದಾ ನೃಪಾಃ ।
ತೇಷಾಂ ವರ್ತತಿ ಪರ್ಯಾಯೇ ಬಹುಸ್ತ್ರೀಕೇ ಯುಗೇ ತದಾ॥ ೨೦೪ ॥

ಲವಾಲ್ಲವಂ ಭ್ರಶ್ಯಮಾನಾ ಆಯೂರೂಪಬಲಶ್ರುತೈಃ ।
ತಥಾ ಗತಾಸು ವೈ ಕಷ್ಟಂ ಪ್ರಜಾಸು ಜಗತೀಶ್ವರಾಃ ॥ ೨೦೫ ॥

ರಾಜಾನಃ ಸಂಪ್ರಣಶ್ಯಂತಿ ಕಾಲೇನೋಪಹತಾಸ್ತದಾ ।
ಕಲ್ಕಿನಾ ವ್ಯಾಹತಾಃ ಸರ್ವೇ ಮ್ಲೇಚ್ಛಾ ಯಾಸ್ಯಂತಿ ಸಂಕ್ಷಯಮ್
॥ ೨೦೬ ॥

ಅಧಾರ್ಮಿಕಾಶ್ಚ ಯೇಽತ್ಯರ್ಥಂ ಪಾಖಂಡಾಶ್ಚೈವ ಸರ್ವಶಃ ।
ಪ್ರನಷ್ಟೇ ನೃಪಶಬ್ದೇ ಚ ಸಂಧ್ಯಾಶಿಷ್ಟೇ ಕಲೌ ಯುಗೇ ॥ ೨೦೭ ॥

ಕಿಂಚಿಚ್ಛಿಷ್ಟಾಃ ಪ್ರಜಾಸ್ತಾ ವೈ ಧರ್ಮೇ ನಷ್ಟೇಽಪರಿಗ್ರಹಾಃ ।
ಅಸಾಧನಾ ಹತಸ್ವಾಶ್ಚ ವ್ಯಾಧಿಶೋಕನಿಪೀಡಿತಾಃ ॥ ೨೦೮ ॥

---

೨೦೪. ಆ ಸಮಯದಲ್ಲಿ ರಾಜರು ಬಹು ಲೋಭಿಗಳೂ ಅನೃತ ವಚನಗಳನ್ನು ನುಡಿಯುವವರೂ ಆಗಿರುವರು. ನಾರಿಯರ ಪ್ರಚುರತೆ-ಸ್ವಾತಂತ್ರ್ಯಗಳಿಂದ ಕೂಡಿದ ಆ ರಾಜರ ಪರ್ಯಾಯವು ಆ ರೀತಿಯಲ್ಲಿ ನಡೆಯುತ್ತಿರುವುದು.

೨೦೫. ಆಗ ರಾಜ-ಪ್ರಜೆಗಳು ಆಯುಷ್ಯ-ರೂಪ-ಬಲ ಮತ್ತು ವಿದ್ಯಾಭ್ಯಾಸಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಭ್ರಂಶಹೊಂದುವರು. ಹಾಗೆ ಅಂತಹ ರಾಜರ ಆಳ್ವಿಕೆಗೆ ಒಳಪಟ್ಟ ಪ್ರಜೆಗಳು ಅತಿಶಯವಾದ ಕಷ್ಟವನ್ನು ಹೊಂದುವರು.

೨೦೬. ಆಗ ಜಗತೀಶ್ವರರಾದ ರಾಜರು ಕಾಲಗತಿಯಿಂದ ಪೀಡಿತರಾಗಿ ನಾಶವನ್ನು ಹೊಂದುವರು. ಮತ್ತು ಕಲ್ಕಿಮೂರ್ತಿಯಿಂದ ಸಮಸ್ತ ಮ್ಲೇಚ್ಛರೂ ಸಂಹರಿಸಲ್ಪಟ್ಟವರಾಗಿ ನಾಶಹೊಂದುವರು.

೨೦೭. ಅತಿಶಯವಾಗಿ ಅಧರ್ಮತತ್ಪರರೂ ಮತ್ತು ಪಾಷಂಡಿ ಮತಾನುವರ್ತಿಗಳೂ ಕೂಡ ಸರ್ವಪ್ರದೇಶಗಳಲ್ಲಿಯೂ ನಶಿಸಿಹೋಗುವರು. ಹೀಗೆ ಕಲಿಯುಗವು ಸಂಧ್ಯಾಂಶದಿಂದ ಮಾತ್ರ ಶಿಷ್ಟವಾಗಿರುವ ಸಮಯದಲ್ಲಿ ರಾಜ ಎಂಬ ಶಬ್ದವೇ ಖಿಲವಾಗಿ ಹೋಗುವುದು.

೨೦೮. ಆಗ ಸ್ವಲ್ಪಮಾತ್ರ ಉಳಿದಿರುವ ಪ್ರಜೆಗಳು ತಮ್ಮ ಸ್ವಧರ್ಮವು ನಷ್ಟವಾಗುವುದರಿಂದ ತಮ್ಮ ಸಮಸ್ತ ಪರಿಗ್ರಹಗಳಿಂದ ಶೂನ್ಯರೂ, ಸಾಧನರಹಿತರೂ, ಸರ್ವಸ್ವವನ್ನು ಕಳೆದುಕೊಂಡವರೂ ಮತ್ತು ವ್ಯಾಧಿಶೋಕಗಳಿಂದ ಪೀಡಿತರೂ ಆಗುವರು.

ಅನಾವೃಷ್ಟಿಹತಾಶ್ಚೈವ ಪರಸ್ಪರವಧೇನ ಚ || ೨೦೯ ||

ಅನಾಧಾರಾಃ ಪರಿತ್ರಸ್ತಾ ವಾರ್ತಾಮುತ್ಸೃಜ್ಯ ದುಃಖಿತಾಃ |
ತ್ಯಕ್ತ್ವಾ ಪುರಾಣಿ ಗ್ರಾಮಾಂಶ್ಚ ಭವಿಷ್ಯಂತಿ ವನೌಕಸಃ || ೨೧೦ ||

ಏವಂರೂಪೇಷು ನಷ್ಟೇಷು ಪ್ರಜಾಸ್ತ್ಯಕ್ತ್ವಾ ಗೃಹಾಣಿ ತು |
ನಷ್ಟೇ ಸ್ನೇಹೇ ದುರಾಪನ್ನಾ ಭ್ರಷ್ಟಸ್ನೇಹಾಃ ಸುಹೃಜ್ಜನಾಃ || ೨೧೧ ||

ವರ್ಣಾಶ್ರಮಪರಿಭ್ರಷ್ಟಾಃ ಸಂಕರಂ ಘೋರಮಾಸ್ಥಿತಾಃ |
ಸರಿತ್ಪರ್ವತಸೇವಿನ್ಯೋ ಭವಿಷ್ಯಂತಿ ಪ್ರಜಾಸ್ತದಾ || ೨೧೨ ||

ಸರಿತಃ ಸಾಗರಾನೂಪಾನ್ ಸೇವಂತೇ ಪರ್ವತಾನಥ |
ಅಂಗಾನ್ ಕಲಿಂಗಾನ್ ವಂಗಾಂಶ್ಚ ಕಾಶ್ಮೀರಾನ್ ಕಾಶಿಕೋಶಲಾನ್ || ೨೧೩ ||

---

೨೦೯. ಅಧರ್ಮದ ಪ್ರಾಬಲ್ಯವುಳ್ಳ ಆ ಕಾಲದಲ್ಲಿ ಅನಾವೃಷ್ಟಿಯ ನಿಮಿತ್ತದಿಂದ ಒದಗಿದ ಕ್ಷಾಮ-ಡಾಮರಾದಿ ಪೀಡೆಗಳಿಗೆ ಪಾತ್ರರಾಗಿ ಪರಸ್ಪರ ಹಿಂಸಾಕೃತ್ಯಗಳಿಂದ ಪ್ರಜೆಗಳು ಕ್ಷಯಿಸುವರು.

೨೧೦. ಮತ್ತು ತಮ್ಮ ಅವಲಂಬನವಾದ ಆಧಾರರಹಿತರೂ, ಭಯದಿಂದ ಕೂಡಿದವರೂ, ಜೀವನ ವಾರ್ತೆಯನ್ನು ಬಿಟ್ಟಿದ್ದರಿಂದ ದುಃಖಭಾಗಿಗಳೂ ಆಗಿ ತಮ್ಮ ವಾಸಭೂಮಿಯಾದ ಪುರ-ಗ್ರಾಮಗಳನ್ನು ಬಿಟ್ಟು ಅರಣ್ಯ ವಾಸಿಗಳಾಗಿರುವರು.

೨೧೧. ಈ ವಿಧವಾದ ಸರ್ವನಾಶ ಪ್ರಸಂಗದಲ್ಲಿ ಪ್ರಜೆಗಳು ತಮ್ಮ ತಮ್ಮ ವಾಸ ಗೃಹಗಳನ್ನು ಬಿಡುವರು. ಮತ್ತು ಮೈತ್ರಿಯಿಂದ ಇರುವ ಸಾಧುಜನರು ಸ್ನೇಹದ ಭಂಗವನ್ನು ಹೊಂದಿ ಆ ಸ್ನೇಹಭ್ರಂಶದಿಂದ ಕಷ್ಟವಾದ ಆಪತ್ತಿಗೆ ಗುರಿಯಾಗುವರು.

೨೧೨. ಹಾಗು ತಮ್ಮ ತಮ್ಮ ವರ್ಣ-ಆಶ್ರಮ ಧರ್ಮಗಳಿಂದ ಭ್ರಷ್ಟರಾಗಿ ಅತ್ಯುಗ್ರವಾದ ಧರ್ಮಸಂಕರವನ್ನು ಹೊಂದಿರುವ ಸಮಸ್ತ ಪ್ರಜೆಗಳು ಆಗ ಬೆಟ್ಟ ಮತ್ತು ನದಿಗಳನ್ನು ಆಶ್ರಯಿಸುವರು.

೨೧೩. ಮತ್ತು ಆ ಪ್ರಜೆಗಳು ನದೀ, ಸಾಗರ, ಇತರ ಜಲಾಶಯಗಳ ಪ್ರದೇಶ ಗಳನ್ನೂ ಅಥವಾ ಪರ್ವತಗಳನ್ನೂ ಅಂಗ-ಕಲಿಂಗ-ವಂಗ, ಕಾಶ್ಮೀರ-ಕಾಶಿ-ಕೋಶಲ ವೆಂಬ ಧರ್ಮಸಂಕರವುಳ್ಳ ಪ್ರದೇಶಗಳನ್ನೂ ಸೇವಿಸುತ್ತಾರೆ.

ಋಷ್ಯಕಾಂತಾ ಗಿರಿದ್ರೋಣೀಃ ಸಂಶ್ರಯಿಷ್ಯಂತಿ ಮಾನವಾಃ ।
ಕೃತ್ಸ್ನಂ ಹಿಮವತಃ ಪೃಷ್ಠಂ ಕೂಲಂ ಚ ಲವಣಾಂಭಸಃ ॥ ೨೧೪ ॥

ಅರಣ್ಯಮಭಿಪತ್ಸ್ಯಂತೇ ಆರ್ಯಾ ಮ್ಲೇಚ್ಛಜನೈಃ ಸಹ ।
ಮೃಗೈರ್ಮೀನೈರ್ವಿಹಂಗೈಶ್ಚ ಶ್ವಾಪದೈಶ್ಚೇಕ್ಷುಭಿಸ್ತಥಾ ॥ ೨೧೫ ॥

ಮಧುಶಾಕಫಲೈರ್ಮೂಲೈರ್ವರ್ತಯಿಷ್ಯಂತಿ ಮಾನವಾಃ ।
ಚೀರಂ ಪರ್ಣಂ ಚ ವಿವಿಧಂ ವಲ್ಕಲಾನ್ಯಜಿನಾನಿ ಚ ॥ ೨೧೬ ॥

ಸ್ವಯಂ ಕೃತ್ವಾ ಪಿಧಾಸ್ಯಂತಿ ಯಥಾ ಮುನಿಜನಸ್ತಥಾ ।
ಬೀಜಾನ್ನಾನಿ ತಥಾ ನಿಮ್ನೇಷ್ವೀಹಂತಃ ಕಾಷ್ಠಶಂಕುಭಿಃ ॥ ೨೧೭ ॥

ಅಜೈಡಕಂ ಖರೋಷ್ಟ್ರಂ ಚ ಪಾಲಯಿಷ್ಯಂತಿ ಯತ್ನತಃ ।
ನದೀರ್ವತ್ಸ್ಯಂತಿ ತೋಯಾರ್ಥೇ ನೂನಮಾಶ್ರಿತ್ಯ ಮಾನವಾಃ ॥ ೨೧೮ ॥

---

೨೧೪. ಮತ್ತು ಮಾನವರು ಋಷ್ಯಕಗಿರಿಯ ವರೆಗಿನ ಪರ್ವತಶ್ರೇಣಿಗಳ ತಪ್ಪಲು-ಕಣಿವೆಗಳನ್ನು ಹಿಮಾಲಯ ಪರ್ವತದ ಮೇಲುಗಡೆಯ ಸಂಪೂರ್ಣ ಭಾಗವನ್ನೂ ಲವಣ ಸಮುದ್ರದ ತೀರಭೂಮಿಯನ್ನೂ ಆಶ್ರಯಿಸುವರು.

೨೧೫. ಆಗ ಆರ್ಯಜನರು ದುರ್ಭಾಗ್ಯದಿಂದ ಮ್ಲೇಚ್ಛಜನರ ಸಂಗಡ ಅರಣ್ಯವನ್ನು ಸೇರುತ್ತಾರೆ. ಮತ್ತು ಮ್ಲೇಚ್ಛರಂತೆ ಮೃಗ-ಪಕ್ಷಿ-ಶ್ವಾಪದ ಜಂತುಗಳ ಮಾಂಸ, ಮತ್ಸ್ಯ, ಇಕ್ಷು ಮುಂತಾದ ಆಹಾರವನ್ನು ಭುಂಜಿಸುತ್ತಾರೆ.

೨೧೬. ಹಾಗು ಮಧು, ಶಾಕಾಹಾರ, ಫಲಾಹಾರಗಳ ಸೇವನೆಯಿಂದ ಜೀವಿಕೆಯನ್ನು ನೆರವೇರಿಸುವರು, ಮತ್ತು ವಸ್ತ್ರಧಾರಣಕ್ಕೆ ಚೀರ ವಸ್ತ್ರಗಳನ್ನೂ, ವಿಧವಿಧವಾದ ಪರ್ಣ, ವಲ್ಕಲ, ಅಜಿನಗಳನ್ನೂ ಉಪಯೋಗಿಸುತ್ತಾರೆ.

೨೧೭. ಅಂತಹ ಅಜಿನ ಮೊದಲಾದುವುಗಳನ್ನು ತಾವು ಏರ್ಪಡಿಸಿಕೊಂಡು ಮುನಿಜನರಂತೆ ವಸ್ತ್ರರೂಪವಾಗಿ ಧರಿಸುವರು. ಮತ್ತು ಅನ್ನೋಪಯೋಗಿಯಾದ ಧಾನ್ಯಬೀಜಗಳನ್ನು ನಿಮ್ನ ಪ್ರದೇಶಗಳಲ್ಲಿ ಕಾಷ್ಠಮಯವಾದ ಮುಸಲಗಳಿಂದ ಕುಟ್ಟಿಕೊಳ್ಳುವರು.

೨೧೮. ಮತ್ತು ದುರವಸ್ಥೆಯಲ್ಲಿ ಎಲ್ಲ ಮಾನವರು ಆಡು ಕುರಿಗಳನ್ನೂ ಕತ್ತೆ ಒಂಟೆಗಳನ್ನೂ ಪ್ರಯತ್ನದಿಂದ ಸಾಕಿಕೊಳ್ಳುವರು. ಹಾಗು ನೀರಿಗೋಸ್ಕರ ನದಿಗಳನ್ನು ಆಶ್ರಯಿಸಿ ಸ್ನಾನ-ಪಾನಗಳನ್ನು ಮಾಡುವರು.

ಪಾರ್ಥಿವಾ ವ್ಯವಹಾರೇಣ ವಿಬಾಧಂತೇ ಪರಸ್ಪರಮ್ ।
ಬಹುಮನ್ಯಾಃ ಪ್ರಜಾಹೀನಾಃ ಶೌಚಾಚಾರವಿವರ್ಜಿತಾಃ ॥ ೨೧೯ ॥

ಏವಂ ಭವಿಷ್ಯಂತಿ ನರಾಸ್ತದಾಧರ್ಮವ್ಯವಸ್ಥಿತಾಃ ।
ಹೀನಾನ್ ದೀನಾಂಸ್ತಥಾಧರ್ಮಾನ್ ಪ್ರಜಾ ಸಮನುವರ್ತ್ಸ್ಯತಿ॥ ೨೨೦ ॥

ಆಯುಸ್ತದಾ ತ್ರಯೋವಿಂಶನ್ನ ಕಶ್ಚಿದತಿವರ್ತತೇ ।
ದುರ್ಬಲಾ ವಿಷಯಗ್ಲಾನಾ ಜರಯಾ ಸಂಪರಿಪ್ಲುತಾಃ ॥ ೨೨೧ ॥

ಪತ್ರಮೂಲಫಲಾಹಾರಾಶ್ಚೀರಕೃಷ್ಣಾಜಿನಾಂಬರಾಃ ।
ವೃತ್ತ್ಯರ್ಥಮಭಿಲಿಪ್ಸ್ಯಂತಶ್ಚರಿಷ್ಯಂತಿ ವಸುಂಧರಾಮ್ ॥ ೨೨೨ ॥

ಏತತ್ಕಾಲಮನುಪ್ರಾಪ್ತಾ ಪ್ರಜಾಃ ಕಲಿಯುಗಾಂತಕೇ ।
ಕ್ಷೀಣೇ ಕಲಿಯುಗೇ ತಸ್ಮಿನ್ ದಿವ್ಯೇ ವರ್ಷಸಹಸ್ರಕೇ ॥ ೨೨೩ ॥

---

೨೧೯. ಆಗ ರಾಜರು ಶೌಚ-ಆಚಾರಗಳಿಂದ ವರ್ಜಿತರಾಗಿ ಪ್ರಜೆಗಳಿಂದ ಹೀನರಾಗಿ ತಾವೇ ಮಹಾತ್ಮರೆಂಬ ಅಹಂಕಾರದಿಂದ. ನಿರ್ನಿಮಿತ್ತವಾದ ವ್ಯವಹಾರದಿಂದ ಅನ್ಯೋನ್ಯವಾಗಿ ಬಾಧಿಸಿಕೊಳ್ಳುವರು.

೨೨೦. ಅಧರ್ಮಮಾರ್ಗದಲ್ಲಿ ಸ್ಥಿರವಾದ ವ್ಯವಸ್ಥೆಯನ್ನು ಹೊಂದಿದ ಮಾನವರು ಹೀಗೆ ನಿಕೃಷ್ಟ ಸ್ಥಿತಿಯಲ್ಲಿರುವರು. ಆಗ ಪ್ರಜೆಗಳು ಹೀನತೆ ದೈನ್ಯ ಮತ್ತು ಅಧರ್ಮಗಳನ್ನು ಅವಲಂಬಿಸುತ್ತಾರೆ.

೨೨೧. ಆಗ ಯಾರೊಬ್ಬನೂ ಇಪ್ಪತ್ತಮೂರ ಸಂಖ್ಯೆಯ ಆಯುಷ್ಯ ಪರಿಮಾಣವನ್ನು ಮೀರಿ ಬದುಕಿರಲಾರನು. ಎಲ್ಲ ಪ್ರಜೆಗಳೂ ದುರ್ಬಲರೂ ವಿಷಯ ಭೋಗದಿಂದ ಜೀರ್ಣರೂ ವಾರ್ಧಕ್ಯದಿಂದ ಪರಿಪೂರ್ಣರೂ ಆಗಿರುವರು.

೨೨೨. ಮತ್ತು ಪ್ರತಿಯೊಂದು ಪ್ರಜೆಯೂ ಪತ್ರ-ಮೂಲ-ಫಲಾದಿ ಆಹಾರವನ್ನು ಭುಂಜಿಸುತ್ತ ಚೀರ-ಪರ್ಣ, ಅಜಿನ ಮುಂತಾದ ವಸ್ತ್ರವನ್ನು ಧರಿಸಿಕೊಂಡು ವೃತ್ತಿ ಸಾಧನವನ್ನು ಹುಡುಕುತ್ತ ಎಲ್ಲ ಭೂಮಿಯನ್ನು ಸಂಚರಿಸುವನು.

೨೨೩. ಈ ಕಾಲವನ್ನು ಹೊಂದಿರುವ ಸಮಸ್ತ ಪ್ರಜೆಗಳು ಕಲಿಯುಗದ ಅವಸಾನ ಸಮಯದ ವರೆಗೆ ಇರಲಾಗಿ ದಿವ್ಯಮಾನದ ಸಹಸ್ರ ವರ್ಷ ಪರಿಮಾಣದ ವರೆಗಿನ ಕಲಿಯುಗವು ಕ್ಷೀಣವಾಗುವುದು.

ನಿಶ್ಶೇಷಾಸ್ತು ಭವಿಷ್ಯಂತಿ ಸಾರ್ಧಂ ಕಲಿಯುಗೇನ ತು ।
ಸಸಂಧ್ಯಾಂಶೇ ತು ನಿಶ್ಶೇಷೇ ಕೃತಂ ವೈ ಪ್ರತಿಪತ್ಸ್ಯತೇ ॥ ೨೨೪ ॥

ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯಬೃಹಸ್ಪತೀ ।
ಏಕರಾಶೌ ಭವಿಷ್ಯಂತಿ ತದಾ ಕೃತಯುಗಂ ಭವೇತ್ ॥ ೨೨೫ ॥

ಏಷ ವಂಶಕ್ರಮಃ ಕೃತ್ಸ್ನಃ ಕೀರ್ತಿತೋ ವೋ ಯಥಾಕ್ರಮಮ್ ।
ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ॥ ೨೨೬ ॥

ಮಹಾನಂದಾಭಿಷೇಕಾಂತಂ ಜನ್ಮ ಯಾವತ್ಪರೀಕ್ಷಿತಃ ।
ಏತದ್ವರ್ಷಸಹಸ್ರಂ ತು ಜ್ಞೇಯಂ ಪಂಚಾಶದುತ್ತರಮ್ ॥ ೨೨೭ ॥

ಪ್ರಮಾಣಂ ವೈ ತಥಾ ವಕ್ತುಂ ಮಹಾಪದ್ಮೋತ್ತರಂ ಚ ಯತ್ ।
ಅಂತರಂ ಚ ಶತಾನ್ಯಷ್ಟೌ ಷಟ್ತ್ರಿಂಶಚ್ಚ ಸಮಾಃ ಸ್ಮೃತಾಃ ॥ ೨೨೮ ॥

---

೨೨೪. ಆಗ ಕಲಿಯುಗದ ಜೊತೆಯಲ್ಲಿ ಪ್ರಜೆಗಳು ನಿಶ್ಶೇಷವಾಗಿ ಲಯ ಹೊಂದುವರು. ಹಾಗೆ ಕಲಿಯುಗದ ಸಂಧ್ಯಾಂಶವು ಪೂರ್ಣವಾಗಿ ಕಳೆದುಹೋಗಲಾಗಿ ಮತ್ತೆ ಕೃತಯುಗವು ಪ್ರಾರಂಭವಾಗುವುದು.

೨೨೫. ಯಾವಾಗ ಚಂದ್ರ ಸೂರ್ಯ, ಮತ್ತು ಪುಷ್ಯ ನಕ್ಷತ್ರದ ಬೃಹಸ್ಪತಿ ಎಂಬ ಗ್ರಹಗಳು ಒಂದು ರಾಶಿಯಲ್ಲಿ ಸೇರಿರುವರೊ ಆ ಸಮಯದಲ್ಲಿ ಕೃತಯುಗವು ಪ್ರಾರಂಭವಾಗುವುದು.

೨೨೬. ಈ ರೀತಿಯಾಗಿ ಹಿಂದೆ ಕಳೆದ ಈಗ ಇರುವ ಮತ್ತು ಮುಂದೆ ಬರುವ ಮಹಾವ್ಯಕ್ತಿಗಳ ವಂಶಕ್ರಮವು ಸಂಪೂರ್ಣವಾಗಿಯೂ ಕ್ರಮ ಬದ್ಧವಾಗಿಯೂ ನಿಮಗೆ ಹೇಳಲ್ಪಟ್ಟಿರುವುದು.

೨೨೭. ಪರೀಕ್ಷಿತ್ ಎಂಬ ರಾಜನ ಜನ್ಮ ಕಾಲದ ಪ್ರಾರಂಭದಿಂದ ಮಹಾನಂದರ ಪಟ್ಟಾಭಿಷೇಕ ಕಾಲದ ಪರ್ಯಂತವಾಗಿ ಇರುವ ಸಮಷ್ಟಿ ಕಾಲವು ಒಂದು ಸಾವಿರದ ಐವತ್ತು ವರ್ಷ ಪರಿಮಿತವಾದುದೆಂದು ತಿಳಿಯಬೇಕು.

೨೨೮. ಅಲ್ಲಿಂದ ಮುಂದಿನ ಮನ್ವಂತರಾವಧಿಯ ಪ್ರಮಾಣವು ಮಹಾಪದ್ಮದ ಎಂಟುನೂರು ಮೂವತ್ತಾರು ವರ್ಷಗಳೆಂದು ಸ್ಮರಿಸಲ್ಪಟ್ಟಿದೆ.

ಏತತ್ಕಾಲಾಂತರಂ ಭಾವ್ಯಂ ಅಂಧ್ರಾಂತಾದ್ಯಾಃ ಪ್ರಕೀರ್ತಿತಾಃ ।
ಭವಿಷ್ಯೈಸ್ತತ್ರ ಸಂಖ್ಯಾತಾಃ ಪುರಾಣಜ್ಞೈಃ ಶ್ರುತರ್ಷಿಭಿಃ ॥ ೨೨೯ ॥

ಸಪ್ತರ್ಷಯಸ್ತದಾ ಪ್ರಾಪ್ತಾಃ ಪಿತ್ರ್ಯೇ ಪಾರೀಕ್ಷಿತೇ ಶತಮ್ ।
ಸಪ್ತವಿಂಶೈಃ ಶತೈರ್ಭಾವ್ಯಾ ಅಂಧ್ರಾಣಾಂ ತೇಽನ್ವಯಾಃ ಪುನಃ॥ ೨೩೦ ॥

ಸಪ್ತವಿಂಶತಿಪರ್ಯಂತೇ ಕೃತ್ಸ್ನೇ ನಕ್ಷತ್ರಮಂಡಲೇ ।
ಸಪ್ತರ್ಷಯಸ್ತು ತಿಷ್ಠಂತಿ ಪರ್ಯಾಯೇಣ ಶತಂ ಶತಮ್ ॥ ೨೩೧ ॥

ಸಪ್ತರ್ಷೀಣಾಂ ಯುಗಂ ಹ್ಯೇತದ್ದಿವ್ಯಯಾ ಸಂಖ್ಯಯಾ ಸ್ಮೃತಮ್ ।
ಮಾಸಾ ದಿವ್ಯಾಃ ಸ್ಮೃತಾಃ ಷಟ್ಚ ದಿವ್ಯಾಬ್ದಾಶ್ಚೈವ ಸಪ್ತ ಹಿ ॥ ೨೩೨ ॥

ತೇಭ್ಯಃ ಪ್ರವರ್ತತೇ ಕಾಲೋ ದಿವ್ಯಃ ಸಪ್ತರ್ಷಿಭಿಸ್ತು ತೈಃ ।
ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಉತ್ತರಾದಿಶಿ ॥ ೨೩೩ ॥

---

೨೨೯. ಈ ಕಾಲಾವಧಿಯಲ್ಲಿ ಅಂಧ್ರಾಂತ ರಾಜರು ಆಳುವರೆಂದು ಕೀರ್ತಿಸಲ್ಪಟ್ಟಿರುವರು. ವೇದ ವೇದಾಂಗಾದಿಗಳನ್ನು ಅರಿತ ಮತ್ತು ಪುರಾಣಜ್ಞರಾದ ಮಹಾತ್ಮರು ಭವಿಷ್ಯ ಜ್ಞಾನದಿಂದ ಇದನ್ನು ಗಣನೆ ಮಾಡಿರುವರು.

೨೩೦. ಪರೀಕ್ಷಿತನ ಜನ್ಮಾವಧಿಯ ಸಮಯದಲ್ಲಿ ಪಿತೃಮಾರ್ಗದಲ್ಲಿ ಶತ ಸಂಖ್ಯೆಯಿಂದ ಕೂಡಿದ ಸಪ್ತರ್ಷಿಗಳು ವಾಸಿಸುವರು. ಅಂತಹ ಇಪ್ಪತ್ತೇಳು ಶತ ಸಪ್ತರ್ಷಿಗಳಿಂದ ಅಂಧ್ರ ರಾಜರ ವಂಶಗಳು ನಡೆಯುವುವು

೨೩೧. ಇಪ್ಪತ್ತೇಳು ಸಂಖ್ಯೆಯ ಅಂತದಿಂದ ಕೂಡಿದ ಸಂಪೂರ್ಣ ನಕ್ಷತ್ರ ಮಂಡಲದಲ್ಲಿ ಸಪ್ತರ್ಷಿಗಳು ಪರ್ಯಾಯವಾಗಿ ನೂರುನೂರು ಮುಂದಿಯಾಗಿ ಇರುವರು.

೨೩೨. ಇದು ದಿವ್ಯ ಸಂಖ್ಯಾ ಪರಿಮಾಣದಿಂದ ಸಪ್ತರ್ಷಿಗಳ ಯುಗವೆಂದು ಸ್ಮರಿಸಲ್ಪಟ್ಟಿರುವುದು, ಅದರ ಪರಿಮಾಣವು ದಿವ್ಯವಾದ ಏಳು ಸಂವತ್ಸರಗಳು ಮತ್ತು ದಿವ್ಯವಾದ ಆರು ಮಾಸಗಳು ಎಂದು ಸ್ಮರಿಸಲ್ಪಟ್ಟಿರುವುದು.

೨೩೩. ಹಾಗೆ ಆ ಸಪ್ತರ್ಷಿಗಳಿಂದ ಹಿಂದೆ ಹೇಳಿದ ಸಂವತ್ಸರ-ಮಾಸಗಳ ಕ್ರಮದಿಂದ ದಿವ್ಯಕಾಲವು ನಡೆಯುವುದು. ಉತ್ತರ ದಿಕ್ಕಿನಲ್ಲಿ ಆ ಸಪ್ತರ್ಷಿ ಮಂಡಲದ ಪೂರ್ವಭಾಗದಲ್ಲಿ ಎರಡು ನಕ್ಷತ್ರಗಳು ಕಾಣಿಸುತ್ತಿವೆ.

**ತಯೋರ್ಮಧ್ಯೇ ಚ ನಕ್ಷತ್ರಂ ದೃಶ್ಯತೇ ಯತ್ಸಮಂ ದಿವಿ ।**
**ತೇನ ಸಪ್ತರ್ಷಯೋ ಯುಕ್ತಾ ಜ್ಞೇಯಾ ವ್ಯೋಮ್ನಿ ಶತಂ ಸಮಾಃ ॥ ೨೩೪ ॥**

**ನಕ್ಷತ್ರಾಣಾಮೃಷೀಣಾಂ ಚ ಭೋಗಸ್ಯೈತನ್ನಿದರ್ಶನಮ್ ।**
**ಸಪ್ತರ್ಷಯೋ ಹ್ಯಥಾಯುಕ್ತಾಃ ಕಾಲೇ ಪಾರೀಕ್ಷಿತೇ ಶತಮ್ ॥ ೨೩೫ ॥**

**ಅಂಧ್ರಾಂಶೇ ಸಚತುರ್ವಿಂಶೇ ಭವಿಷ್ಯಂತಿ ಶತಂ ಸಮಾಃ ।**
**ಇಮಾಸ್ತದಾ ತು ಪ್ರಕೃತೀರ್ವ್ಯಾಪತ್ಸ್ಯಂತೇ ಪ್ರಜಾ ಭೃಶಮ್ ॥ ೨೩೬ ॥**

**ಅನೃತೋಪಹತಾಃ ಸರ್ವಾ ಧರ್ಮತಃ ಕಾಮತೋಽರ್ಥತಃ ।**
**ಶ್ರೌತಸ್ಮಾರ್ತೇ ಪ್ರಶಿಥಿಲೇ ಧರ್ಮೇ ವರ್ಣಾಶ್ರಮೇ ತಥಾ ॥ ೨೩೭ ॥**

**ಸಂಕರಂ ದುರ್ಬಲಾತ್ಮಾನಃ ಪ್ರತಿಯಾಸ್ಯಂತಿ ಮೋಹಿತಾಃ ।**
**ಸಂಸಕ್ತಾಶ್ಚ ಭವಿಷ್ಯಂತಿ ಶೂದ್ರಾಃ ಸಾರ್ಧಂ ದ್ವಿಜಾತಿಭಿಃ ॥ ೨೩೮ ॥**

---

೨೩೪. ಆಕಾಶದಲ್ಲಿ ಆ ಎರಡು ನಕ್ಷತ್ರಗಳ ಮಧ್ಯದಲ್ಲಿ ಸಮವಾಗಿ ಯಾವ ನಕ್ಷತ್ರವು ಪ್ರತ್ಯಕ್ಷವಾಗಿರುವುದೊ ಆ ನಕ್ಷತ್ರದಿಂದ ಕೂಡಿ ಆಕಾಶದಲ್ಲಿ ಸಪ್ತರ್ಷಿಗಳು ಒಂದುನೂರು ವರ್ಷಗಳ ಕಾಲ ಇರುವರೆಂದು ತಿಳಿಯಬೇಕು.

೨೩೫. ನಕ್ಷತ್ರ ಮತ್ತು ಋಷಿಗಳ ಭೋಗಕ್ಕೆ ಇದೊಂದು ನಿಯತವಾದ ನಿದರ್ಶನವು. ಸಪ್ತರ್ಷಿಗಳು ಮುಂದಿನ ಪಾರಿಕ್ಷಿತ ಸಮಯದಲ್ಲಿ ಒಂದುನೂರು ಸಂವತ್ಸರ ಪರ್ಯಾಯದಲ್ಲಿ ನಿಯಾಮಕರಾಗಿರುವರು.

೨೩೬. ಹಾಗೆ ಇಪ್ಪತ್ತನಾಲ್ಕು ಕಾಲಭಾಗಾಂಶದಿಂದ ಕೂಡಿದ ಅಂಧ್ರ ಸಮಯದಲ್ಲಿ ಒಂದುನೂರು ಸಂವತ್ಸರಗಳು ನಡೆಯುವುವು. ಆಗಿನ ಪ್ರಜೆಗಳು ಇಂತಹ ದುಸ್ಸಹವಾದ ಪ್ರಕೃತಿಯನ್ನು ಹೊಂದಿ ಅತಿಶಯವಾಗಿ ಆಪತ್ತಿಗೆ ಗುರಿಯಾಗುವರು.

೨೩೭. ಆಗ ಪ್ರಜೆಗಳು ಅನೃತ ವಚನದಿಂದ ಪೀಡಿತರೂ, ಧರ್ಮ-ಅರ್ಥ-ಕಾಮಗಳೆಂಬ ಪುರುಷಾರ್ಥಗಳಿಂದ ಭ್ರಷ್ಟರೂ ಆಗುವರು. ಶ್ರೌತ-ಸ್ಮಾರ್ತ ಧರ್ಮಗಳು ಮತ್ತು ವರ್ಣಾಶ್ರಮಧರ್ಮಗಳು ಲೋಪವಾಗಿ ಶಿಥಿಲವಾಗುವುವು.

೨೩೮. ದುರ್ಬಲವಾದ ಹೃದಯವುಳ್ಳ ಪ್ರಜೆಗಳು ಮೋಹವುಳ್ಳವರಾಗಿ ಸಂಕರವನ್ನು ಹೊಂದುವರು. ಮತ್ತು ಶೂದ್ರ ಜನರು ದ್ವಿಜರೊಂದಿಗೆ ಸಂಗ ಬೆಳೆಸಿದವರಾಗಿ ಇರುವರು.

ಬ್ರಾಹ್ಮಣಾಃ ಶೂದ್ರಯಷ್ಟಾರಃ ಶೂದ್ರಾ ವೈ ಮಂತ್ರಯೋನಯಃ ।
ಉಪಸ್ಥಾಸ್ಯಂತಿ ತಾನ್ ವಿಪ್ರಾಂಸ್ತದಾ ದೌರ್ವೃತ್ತ್ಯಲಿಪ್ಸವಃ ॥ ೨೩೯ ॥

ಲವಾಲ್ಲವಂ ಭ್ರಶ್ಯಮಾನಾಃ ಪ್ರಜಾಃ ಸರ್ವಾಃ ಕ್ರಮೇಣ ತು ।
ಕ್ಷಯಮೇವ ಗಮಿಷ್ಯಂತಿ ಕ್ಷೀಣಶೇಷಾ ಯುಗಕ್ಷಯೇ ॥ ೨೪೦ ॥

ಯಸ್ಮಿನ್ ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾ ದಿನೇ ।
ಪ್ರತಿಪನ್ನಃ ಕಲಿಯುಗಸ್ತಸ್ಯ ಸಂಖ್ಯಾಂ ನಿಬೋಧತ ॥ ೨೪೧ ।

ಸಹಸ್ರಾಣಾಂ ಶತಾನೀಹ ತ್ರೀಣಿ ಮಾನುಷಸಂಖ್ಯಯಾ ।
ಷಷ್ಟಿಶ್ಚೈವ ಸಹಸ್ರಾಣಿ ವರ್ಷಾಣಾಂ ತೂಚ್ಯತೇ ಕಲಿಃ ॥ ೨೪೨

ದಿವ್ಯಂ ವರ್ಷಸಹಸ್ರಂ ತು ತತ್ಸಂಧ್ಯಾಂಶೇ ಹಿ ಕೀರ್ತ್ಯತೇ ।
ನಿಶ್ಶೇಷೇ ಚ ತದಾ ತಸ್ಮಿನ್ ಕೃತಂ ವೈ ಪ್ರತಿಪತ್ಸ್ಯತೇ ॥ ೨೪೩

---

೨೩೯. ಬ್ರಾಹ್ಮಣರು ಶೂದ್ರರಿಂದ ಯಾಗ ಮಾಡಿಸುವವರೂ, ಶೂದ್ರರು ಮಂತ್ರಾವಿರ್ಭಾವಕ್ಕೆ ಕಾರಣರಾದವರೂ ಆಗಿ ದುರ್ವೃತ್ತಿಯನ್ನು ಹೊಂದಲು ಇಷ್ಟವುಳ್ಳವರಾಗಿ ಆ ದ್ವಿಜರನ್ನು ಸೇವಿಸುತ್ತಾರೆ.

೨೪೦. ಸಮಸ್ತ ಪ್ರಜೆಗಳು ಪ್ರತಿ ದಿನದಲ್ಲಿಯೂ ಅಲ್ಪಾಲ್ಪವಾಗಿ ಭ್ರಂಶಹೊಂದುತ್ತ ಕ್ರಮವಾಗಿ ನಾಶವನ್ನು ಹೊಂದುತ್ತಾರೆ. ಅಂತಹ ಯುಗವು ಕ್ಷಯಿಸಿ ಹೋಗಲಾಗಿ ಕೆಲವರು ಕ್ಷೀಣ ಶೇಷರಾಗಿ ಇರುವರು.

೨೪೧. ಯಾವ ದಿನದಲ್ಲಿ ಶ್ರೀ ಕೃಷ್ಣಪರಮಾತ್ಮನು ಸ್ವರ್ಗಕ್ಕೆ ತೆರಳಿರುವನೊ ಆ ದಿನದಲ್ಲಿಯೇ ಕಲಿಯುಗವು ಬಂದಿರುವುದು. ಆ ಕಲಿಯುಗದ ಪರಿಮಿತಿಯನ್ನು ಶ್ರವಣಮಾಡಿರಿ.

೨೪೨. ಕಲಿಯುಗದ ಮಿತಿಯಲ್ಲಿ ಮೂರುನೂರುಸಹಸ್ರ ಸಂವತ್ಸರಗಳೂ ಮತ್ತು ಅರವತ್ತು ಸಂವತ್ಸರಗಳೂ ಸೇರಿ ಮನುಷ್ಯಪರಿಮಾಣದಿಂದ ಮೂರು ಲಕ್ಷದ ಅರವತ್ತುಸಹಸ್ರ ವರ್ಷಗಳು ಕಲಿಯುಗವೆಂದು ಹೇಳಲ್ಪಡುತ್ತದೆ.

೨೪೩. ಅದೆಲ್ಲವೂ ದಿವ್ಯವಾದ ಸಹಸ್ರ ವರ್ಷಗಳಾಗುವುದು, ಹಿಂದೆ ಹೇಳಿರುವ ಕಲಿಯುಗದ ಸಂಧ್ಯಾಂಶವು ಕಳೆದು ನಿಶ್ಶೇಷವಾಗಿ ಮತ್ತೆ ಕೃತಯುಗವು ಪ್ರಾರಂಭವಾಗುವುದು.

ಐಲಶ್ಚೇಕ್ಷ್ವಾಕುವಂಶಶ್ಚ ಸಹ ಭೇದೈಃ ಪ್ರಕೀರ್ತಿತೌ ।
ಇಕ್ಷ್ವಾಕೋಸ್ತು ಸ್ಮೃತಂ ಕ್ಷತ್ರಂ ಸುಮಿತ್ರಾಂತಂ ವಿವಸ್ವತಃ ॥ ೨೪೪ ॥

ಐಲಂ ಕ್ಷತ್ರಂ ಕ್ಷೇಮಕಾಂತಂ ಸೋಮವಂಶವಿದೋ ವಿದುಃ ।
ಏತೇ ವಿವಸ್ವತಃ ಪುತ್ರಾಃ ಕೀರ್ತಿತಾಃ ಕೀರ್ತಿವರ್ಧನಾಃ ॥ ೨೪೫

ಅತೀತಾ ವರ್ತಮಾನಾಶ್ಚ ತಥೈವಾನಾಗತಾಶ್ಚ ಯೇ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವಾತ್ರ ಯೇ ಸ್ಮೃತಾಃ ॥ ೨೪೬ ॥

ಯುಗೇ ಯುಗೇ ಮಹಾತ್ಮಾನಃ ಸಮತೀತಾಃ ಸಹಸ್ರಶಃ ।
ಬಹುತ್ವಾನ್ನಾಮಧೇಯಾನಾಂ ಪರಿಸಂಖ್ಯಾ ಕುಲೇ ಕುಲೇ ॥ ೨೪೭ ॥

ಪುನರುಕ್ತಿಬಹುತ್ವಾಚ್ಚ ನ ಮಯಾ ಪರಿಕೀರ್ತಿತಾಃ ।
ವೈವಸ್ವತೇಽಂತರೇ ಹ್ಯಸ್ಮಿನ್ ನಿಮಿವಂಶಃ ಸಮಾಪ್ಯತೇ ॥ ೨೪೮ ॥

---

೨೪೪. ಹಿಂದೆ ಐಲ ಮತ್ತು ಇಕ್ಷ್ವಾಕು ಎಂಬ ರಾಜರ್ಷಿಗಳ ವಂಶಗಳು ಅನೇಕ ಒಳಭಾಗಗಳೊಡನೆ ಹೇಳಲ್ಪಟ್ಟಿವೆ. ಸೂರ್ಯನೇ ಮೂಲಪುರುಷನಾದ ಇಕ್ಷ್ವಾಕು ರಾಜನ ವಂಶದಲ್ಲಿ ಜನಿಸಿದ ಕ್ಷತ್ರಿಯ ವ್ಯಕ್ತಿಗಳು ಸುಮಿತ್ರನ ಪರ್ಯಂತವಾಗಿ ನಡೆಯುವುದು.

೨೪೫. ಐಲವಂಶದ ಕ್ಷತ್ರಿಯ ಸಂತಾನವು ಕ್ಷೇಮಕ ರಾಜನಲ್ಲಿ ಕೊನೆಗಾಣುವುದೆಂದು ಚಂದ್ರ ವಂಶಾವಳಿಯನ್ನು ತಿಳಿದವರು ಹೇಳುವರು. ಹೀಗೆ ಕೀರ್ತಿಯನ್ನು ಬೆಳಗುವ ಸೂರ್ಯನ ಕುಮಾರರು ಕೀರ್ತಿಸಲ್ಪಟ್ಟಿರುವರು.

೨೪೬. ಈ ಸಮಯದಲ್ಲಿ ಬ್ರಾಹ್ಮಣ-ಕ್ಷತ್ರಿಯ- ವೈಶ್ಯ ಮತ್ತು ಶೂದ್ರರೆಂಬ ವರ್ಣಗಳಲ್ಲಿ ಅನೇಕರು ಹಿಂದೆ ಗತಿಸಿದವರೂ ಕೆಲವರು ವರ್ತಮಾನರೂ ಮತ್ತೆ ಕೆಲವರು ಮುಂದೆ ಬರುವವರೂ ಆಗಿ ಸ್ಮರಿಸಲ್ಪಟ್ಟಿರುವರು.

೨೪೭. ಪ್ರತಿಯೊಂದು ಯುಗದಲ್ಲಿಯೂ ಸಹಸ್ರಾರು ಮಂದಿ ಮಹಾತ್ಮರು ಇದ್ದು ಅತೀತರಾಗಿರುವರು. ಅನೇಕ ಮಹಾ ಕುಲಗಳಲ್ಲಿ ಜನಿಸಿದ ಮಹಾತ್ಮರ ನಾಮಧೇಯ ಸಂಖ್ಯೆಯು ಗಣನಾತೀತವಾಗಿರುವುದು.

೨೪೮. ಇದು ಪುನರುಕ್ತಿಯಿಂದ ತುಂಬಿರುವುದರಿಂದ ಆ ಸಂಖ್ಯೆಯು ನನ್ನಿಂದ ನಿಮಗೆ ಹೇಳಲ್ಪಟ್ಟಿರುವುದಿಲ್ಲ. ಈ ವೈವಸ್ವತ ಮನ್ವಂತರದಲ್ಲಿ ನಿಮಿರಾಜನ ವಂಶವು ಸಮಾಪ್ತಿಯನ್ನು ಹೊಂದುವುದು.

ಏತಸ್ಯಾಂ ತು ಯುಗಾಖ್ಯಾಯಾಂ ಯತಃ ಕ್ಷತ್ರಂ ಪ್ರಪತ್ಸ್ಯತೇ ।
ತಥಾ ಹಿ ಕಥಯಿಷ್ಯಾಮಿ ಗದತೋ ಮೇ ನಿಬೋಧತ　　॥ ೨೪೯ ॥

ದೇವಾಪಿಃ ಪೌರವೋ ರಾಜಾ ಐಕ್ಷ್ವಾಕುಶ್ಚೈವ ಯೋ ಮರುಃ ।
ಮಹಾಯೋಗಬಲೋಪೇತೌ ಕಲಾಪಗ್ರಾಮಮಾಸ್ಥಿತೌ　　॥ ೨೫೦ ॥

ಏತೌ ಕ್ಷತ್ರಪಣೇತಾರೌ ಚತುರ್ವಿಂಶೇ ಚತುರ್ಯುಗೇ ।
ಸುವರ್ಚಾ ನಾಮ ಪುತ್ರಸ್ತು ಇಕ್ಷ್ವಾಕೋಸ್ತು ಭವಿಷ್ಯತಿ　　॥ ೨೫೧ ॥

ನವವಿಂಶೇ ಯುಗೇ ಸೋಽಥ ವಂಶಸ್ಯಾದಿರ್ಭವಿಷ್ಯತಿ ।
ದೇವಾಪೇಶ್ಚ ಸುಪೌಲಸ್ತು ಐಲಾದಿರ್ಭವಿತಾ ನೃಪಃ　　॥ ೨೫೨ ॥

ಕ್ಷತ್ರಪ್ರವರ್ತಕೌ ಹ್ಯೇತೌ ಭವಿಷ್ಯೇತೇ ಚತುರ್ಯುಗೇ ।
ಏವಂ ಸರ್ವತ್ರ ವಿಜ್ಞೇಯಂ ಸಂತಾನಾರ್ಥೇ ತು ಲಕ್ಷಣಮ್ ॥ ೨೫೩ ॥

---

೨೪೯. ಈ ಯುಗದ ಪರಿವೃತ್ತಿಯಲ್ಲಿ ಯಾವ ವ್ಯಕ್ತಿಯಿಂದ ಕ್ಷತ್ರಿಯ ವಂಶಾವಳಿಯು ನಡೆಯುವುದೊ ಅದನ್ನು ನಾನು ಹೇಳುತ್ತೇನೆ. ನನ್ನ ವಚನವನ್ನು ಶ್ರವಣ ಮಾಡಿರಿ.

೨೫೦. ಪುರುವಂಶದಲ್ಲಿ ಜನಿಸಿದ ದೇವಾಪಿ ಎಂಬ ರಾಜನು ಮತ್ತು ಇಕ್ಷ್ವಾಕು ವಂಶದಲ್ಲಿ ಜನಿಸಿದ ಮರು ಎಂಬ ರಾಜನು ಮಹತ್ತರವಾದ ಯೋಗಾಭ್ಯಾಸಬಲದಿಂದ ಕೂಡಿದವರಾಗಿ ಕಲಾಪ ಗ್ರಾಮದಲ್ಲಿ ನೆಲೆಸಿದರು.

೨೫೧. ಇಪ್ಪತ್ತನಾಲ್ಕನೆಯ ಪರ್ಯಾಯದ ಚತುರ್ಯುಗಗಳಲ್ಲಿ ಈ ಇಬ್ಬರು ರಾಜರು ಕ್ಷತ್ರಿಯ ಸಂತತಿಗೆ ಕಾರಣರಾಗಿದ್ದರು. ಇಕ್ಷ್ವಾಕು ರಾಜನಿಗೆ ಸುವರ್ಚಾ ಎಂಬ ನಾಮಾಂಕಿತನಾದ ಪುತ್ರನು ಹುಟ್ಟುವನು.

೨೫೨. ಆ ಸುವರ್ಚರಾಜನು ಇಪ್ಪತ್ತೊಂಭತ್ತನೆಯ ಯುಗಪರಿವೃತ್ತಿಯಲ್ಲಿ ಕ್ಷತ್ರಿಯ ವಂಶಾದಿಯಾಗುವನು, ಹಾಗೆ ಐಲ ವಂಶದ ದೇವಾಪಿ ಎಂಬುವನಿಗೆ ಸುಪೌಲ ಎಂಬ ರಾಜನು ಪುತ್ರನಾಗಿ ಜನಿಸುವನು.

೨೫೩. ಆ ಇಬ್ಬರು ರಾಜರು ಚತುರ್ಯುಗಗಳಲ್ಲಿ ಕ್ಷತ್ರಿಯ ಸಂತಾನ ಪ್ರವರ್ತಕರು ಆಗುವರು. ಈ ರೀತಿಯಾಗಿ ಎಲ್ಲ ಯುಗಗಳಲ್ಲಿಯೂ ಸಂತಾನಾವಿರ್ಭಾವದ ಲಕ್ಷಣವನ್ನು ತಿಳಿಯಬೇಕು.

ಕ್ಷೀಣೇ ಕಲಿಯುಗೇ ತಸ್ಮಿನ್ ಭವಿಷ್ಯೇ ತು ಕೃತೇ ಯುಗೇ ।
ಸಪ್ತರ್ಷಿಭಿಸ್ತು ತೈಃ ಸಾರ್ಧಮಾದ್ಯೇ ತ್ರೇತಾಯುಗೇ ಪುನಃ ॥ ೨೫೪ ॥

ಗೋತ್ರಾಣಾಂ ಕ್ಷತ್ರಿಯಾಣಾಂ ಚ ಭವಿಷ್ಯೇತೇ ಪ್ರವರ್ತಕೌ ।
ದ್ವಾಪರಾಂಶೇನ ತಿಷ್ಠಂತಿ ಕ್ಷತ್ರಿಯಾ ಋಷಿಭಿಃ ಸಹ ॥ ೨೫೫ ॥

ಭವಿಷ್ಯೇ ತು ತತಃ ಸರ್ಗೇ ಕಾಲೇ ಕೃತಯುಗೇ ಪುನಃ ।
ಬೀಜಾರ್ಥಂ ತೇ ಭವಿಷ್ಯಂತಿ ಬ್ರಹ್ಮಕ್ಷತ್ರಸ್ಯ ವೈ ಪುನಃ ॥ ೨೫೬ ॥

ಏವ ಮೇವ ತು ಸರ್ವೇಷು ತಿಷ್ಠಂತೀಹಾಸುರೇಷು ವೈ ।
ಸಪ್ತರ್ಷಯೋ ನೃಪೈಃ ಸಾರ್ಧಂ ಸಂತಾನಾರ್ಥಂ ಯುಗೇ ಯುಗೇ ॥ ೨೫೭ ॥

ಕ್ಷತ್ರಸ್ಯೈವ ಸಮುಚ್ಛೇದಸಂಬಂಧೋ ವೈ ದ್ವಿಜೈಃ ಸ್ಮೃತಃ ।
ಮನ್ವಂತರಾಣಾಂ ಸಪ್ತಾನಾಂ ಸಂತಾನಶ್ಚ ಶ್ರುತಶ್ಚ ತೇ ॥ ೨೫೮ ॥

---

೨೫೪. ಕಲಿಯುಗವು ಕ್ಷಯಿಸಿ ಮತ್ತೆ ಆ ಕೃತಯುಗವು ಸಂಭವಿಸುವುದು, ಹಾಗೆ ಮುಂದೆ ಬರುವ ಮೊದಲನೆಯ ತ್ರೇತಾಯುಗದಲ್ಲಿ ಸಪ್ತರ್ಷಿಗಳೊಡನೆ ಗೋತ್ರಪ್ರವರ್ತಕರು ಕೆಲವರು ಇರುವರು.

೨೫೫. ಆಗ ಕ್ಷತ್ರಿಯರ ಗೋತ್ರಕ್ಕೆ ಪ್ರವರ್ತಕರು ಇಬ್ಬರು ಮಹಾತ್ಮರು ಸಂಭವಿಸುವರು. ಕ್ಷತ್ರಿಯರು ಮುನಿಜನರೊಡನೆ ದ್ವಾಪರ ಯುಗದ ಅಂಶದವರೆಗೆ ಇರುತ್ತಾರೆ.

೨೫೬. ಮುಂದಿನ ಕೃತಯುಗ ಸಮಯದಲ್ಲಿ ಆಗುವ ಸೃಷ್ಟಿಯಲ್ಲಿ ಅವರು ಬ್ರಾಹ್ಮಣ-ಕ್ಷತ್ರಿಯ ಪ್ರಜೆಗಳ ಉತ್ಪತ್ತಿಗೆ ಕಾರಣರಾಗಿ ಮತ್ತೆ ಜನಿಸುವರು.

೨೫೭. ಈ ರೀತಿಯಾಗಿಯೆ ಸಮಸ್ತ ಮನ್ವಂತರಗಳಲ್ಲಿ ಮತ್ತು ಪ್ರತಿಯೊಂದು ಯುಗದಲ್ಲಿ ಸಪ್ತರ್ಷಿಗಳು ಉತ್ತಮ ರಾಜರೊಡನೆ ಸಂತಾನದ ವೃದ್ಧಿಗೋಸ್ಕರ ಇರುತ್ತಾರೆ.

೨೫೮. ಮತ್ತು ದ್ವಿಜರಿಂದ ಕ್ಷತ್ರಿಯ ಜಾತಿಯ ಅವಸಾನವು ನಡೆಯುವುದಾಗಿ ಸ್ಮರಿಸಲ್ಪಟ್ಟಿದೆ. ಹೀಗೆ ಏಳು ಮನ್ವಂತರಗಳ ಸಂತಾನವು ನಿನ್ನಿಂದ ಕೇಳಲ್ಪಟ್ಟು ಇರುವುದು.

ಪರಸ್ಪರಾದ್ಯುಗಾನಾಂ ಚ ಬ್ರಹ್ಮಕ್ಷತ್ರಸ್ಯ ಚೋದ್ಭವಃ ।
ಯಥಾ ಪ್ರವೃತ್ತಿಸ್ತೇಷಾಂ ವೈ ಪ್ರವೃತ್ತಾನಾಂ ತಥಾ ಕ್ಷಯಃ ॥ ೨೫೯ ॥

ಸಪ್ತರ್ಷಯೋ ವಿದುಸ್ತೇಷಾಂ ದೀರ್ಘಾಯುಷ್ಟ್ವಾದ್ಭವಾಭವೌ ।
ಏತೇನ ಕ್ರಮಯೋಗೇನ ಐಲೇಕ್ಷ್ವಾಕ್ವನ್ವಯಾ ದ್ವಿಜಾಃ ॥ ೨೬೦ ॥

ಉತ್ಪಾದ್ಯಮಾನಾಸ್ತ್ರೇತಾಯಾಂ ಕ್ಷೀಯಮಾಣಾಃ ಕಲೌ ಪುನಃ ।
ಅನುಯಾಂತಿ ಯುಗಾಖ್ಯಾಂ ತು ಯಾವನ್ಮನ್ವಂತರಕ್ಷಯಃ ॥ ೨೬೧ ॥

ಜಾಮದಗ್ನ್ಯೇನ ರಾಮೇಣ ಕ್ಷತ್ರೇ ನಿರವಶೇಷಿತೇ ।
ಕೃತೇಯಂ ಸಂಕುಲಾ ಸರ್ವಾ ಕ್ಷತ್ರಿಯೈರ್ವಸುಧಾಧಿಪೈಃ ॥ ೨೬೨ ॥

ದ್ವಿವಂಶಕಾರಣಂ ಚೈವ ಕೀರ್ತಯಿಷ್ಯೇ ನಿಬೋಧತ ।
ಐಲಸ್ಯೇಕ್ಷ್ವಾಕುನಂದಸ್ಯ ಪ್ರಕೃತಿಃ ಪರಿವರ್ತತೇ ॥ ೨೬೩ ॥

---

೨೫೯. ಯುಗ ಕ್ರಮದಲ್ಲಿ ಪರಸ್ಪರ ನಿಮಿತ್ತದಿಂದ ಬ್ರಾಹ್ಮಣ- ಕ್ಷತ್ರಿಯಾದಿ ಜಾತಿಯು ಜನಿಸುವುದು. ಆಯಾಯ ಪ್ರಜೆಗಳಿಗೆ ಪ್ರವೃತ್ತಿಯು ಹೇಗೆ ಉಂಟಾಗುವುದೊ ಅದರಂತೆ ಲಯವೂ ಸಂಭವಿಸುವುದು.

೨೬೦. ಅವರ ಉತ್ಪತ್ತಿ-ನಾಶಗಳನ್ನು ದೀರ್ಘಾಯುಷ್ಯದಿಂದ ಇರುವ ಸಪ್ತರ್ಷಿಗಳು ತಿಳಿದಿರುವರು, ಐಲ-ಇಕ್ಷ್ವಾಕು ವಂಶದಲ್ಲಿ ಜನಿಸಿದ ದ್ವಿಜರಾದ ಕ್ಷತ್ರಿಯರು ಈ ಕ್ರಮದಿಂದ ಸರ್ವನಿಯಾಮಕರಾಗಿರುವರು.

೨೬೧. ಅವರು ತ್ರೇತಾಯುಗದಲ್ಲಿ ಜನಿಸುವವರೂ ಕಲಿಯುಗದಲ್ಲಿ ನಾಶ ಹೊಂದುವವರೂ ಆಗಿ ಮನ್ವಂತರವು ಸಂಪೂರ್ಣವಾಗಿ ಕ್ಷಯಿಸುವವರೆಗೆ ಯುಗ ಕಾಲವನ್ನು ಅನುವರ್ತಿಸಿಕೊಂಡಿರುವರು.

೨೬೨. ಒಂದು ಸಲ ಜಮದಗ್ನಿ ಪುತ್ರನಾದ ಪರಶುರಾಮನಿಂದ ಕ್ಷತ್ರಿಯ ಜಾತಿಯು ನಿಶ್ಶೇಷವಾಗಿ ಮಾಡಲ್ಪಡಲಾಗಿ ಮತ್ತೆ ಈ ಸಮಸ್ತ ಪೃಥಿವಿಯು ಅನೇಕ ಕ್ಷತ್ರಿಯ ರಾಜರಿಂದ ಪರಿಪೂರ್ಣವಾಗಿ ಮಾಡಲ್ಪಟ್ಟಿತು.

೨೬೩. ಮುಂದೆ ಎರಡು ಮಹಾ ವಂಶಗಳ ವಿಸ್ತಾರ ಕಾರಣವನ್ನು ವರ್ಣಿಸುತ್ತೇನೆ. ಶ್ರವಣ ಮಾಡಿರಿ. ಐಲ ಮತ್ತು ಇಕ್ಷ್ವಾಕು ಪುತ್ರನಾದ ರಾಜನ ಸಂತತಿಯು ವಿಸ್ತೀರ್ಣವಾಗುತ್ತದೆ.

ರಾಜಾನಃ ಶ್ರೇಣಿಬದ್ಧಾಸ್ತು ತಥಾನ್ಯೇ ಕ್ಷತ್ರಿಯಾ ನೃಪಾಃ ।
ಐಲವಂಶಸ್ಯ ಯೇ ಖ್ಯಾತಾಸ್ತಥೈವೇಕ್ಷ್ವಾಕವೋ ನೃಪಾಃ ॥ ೨೬೪ ॥

ತೇಷಾಮೇಕಶತಂ ಪೂರ್ಣಂ ಕುಲಾನಾಮಭಿಷೇಕಿತಮ್ ।
ತಾವದೇವ ತು ಭೋಜಾನಾಂ ವಿಸ್ತರೋ ದ್ವಿಗುಣಃ ಸ್ಮೃತಃ ॥ ೨೬೫ ॥

ಭಜತೇ ತ್ರ್ಯಂಶಕಂ ಕ್ಷತ್ರಂ ಚತುರ್ಥಾತ್ತ್ವದ್ಯಥಾದಿಶಮ್ ।
ತೇಷ್ವತೀತಾಃ ಸಮಾನಾ ಯೇ ಬ್ರುವತಸ್ತಾನ್ನಿಬೋಧತ ॥ ೨೬೬ ॥

ಶತಂ ವೈ ಪ್ರತಿವಿಂಧ್ಯಾನಾಂ ಶತಂ ನಾಗಾಃ ಸಹೈಹಯಾಃ ।
ಧೃತರಾಷ್ಟ್ರಾಶ್ಚೈಕಶತಂ ಅಶೀತಿರ್ಜನಮೇಜಯಾಃ ॥ ೨೬೭ ॥

ಶತಂ ಚ ಬ್ರಹ್ಮದತ್ತಾನಾಂ ಶಾರೀಣಾಂ ವೀರಿಣಾಂ ಶತಮ್ ।
ತತಃ ಶತಂ ತು ಪೌಲಾನಾಂ ಶ್ವೇತಕಾಶ್ಯಕುಶಾದಯಃ ॥ ೨೬೮ ॥

---

೨೬೪. ಐಲ ವಂಶದಲ್ಲಿ ಖ್ಯಾತಿಯನ್ನು ಪಡೆದ ರಾಜರು ಹಾಗೆ ಇಕ್ಷ್ವಾಕು ವಂಶದ ಗಣ್ಯರಾಜರು ಮತ್ತು ಅನೇಕ ಇತರ ಕ್ಷತ್ರಿಯ ರಾಜರು ಶ್ರೇಣಿರೂಪರಾಗಿ ಸಂತತಿಯನ್ನು ನಡೆಯಿಸುವರು.

೨೬೫. ಆ ರಾಜರ ವಂಶಾವಳಿಯಲ್ಲಿ ಒಂದು ನೂರು ವಂಶಗಳು ಪೂರ್ಣವಾಗಿ ಪಟ್ಟಾಭಿಷೇಕ ಪೂರ್ವಕ ರಾಜ್ಯಭಾರಾಧಿಕಾರವನ್ನು ಹೊಂದಿರುವುವು. ಭೋಜ ರಾಜರ ವಂಶವಿಸ್ತಾರವು ಇದಕ್ಕೆ ದ್ವಿಗುಣವಾಗಿ ಸ್ಮರಿಸಲ್ಪಟ್ಟಿರುವುದು.

೨೬೬. ಹಾಗೆ ವೃದ್ಧಿಹೊಂದುತ್ತಿರುವ ಕ್ಷತ್ರಿಯ ಸಂತತಿಯು ನಾಲ್ಕು ದಿಕ್ಕುಗಳಲ್ಲಿಯೂ ತ್ರಿಗುಣವಾಗಿ ಬೆಳೆಯುವುದು. ಅವರಲ್ಲಿ ಗುಣಗಳಲ್ಲಿ ಸಮಾನರೆಂದೆನಿಸಿರುವವರನ್ನು ವರ್ಣಿಸುವ ನನ್ನ ವಚನವನ್ನು ಕೇಳಿರಿ.

೨೬೭. ಪ್ರತಿವಿಂಧ್ಯ, ನಾಗ, ಹೈಹಯ ಎಂಬ ವಂಶಗಳಲ್ಲಿ ಪ್ರತ್ಯೇಕವಾಗಿ ಒಂದು ನೂರು ಮಂದಿಯೂ ಧೃತರಾಷ್ಟ್ರನ ವಂಶದಲ್ಲಿ ಒಂದು ನೂರು ಮಂದಿಯೂ ಮತ್ತು ಜನಮೇಜಯನ ಕುಲದಲ್ಲಿ ಎಂಭತ್ತು ಮಂದಿಯೂ ಇದ್ದರು.

೨೬೮. ಬ್ರಹ್ಮದತ್ತ ವಂಶದಲ್ಲಿ ಒಂದು ನೂರು ವ್ಯಕ್ತಿ, ಶಾರಿ ಮತ್ತು ವೀರಿ ಎಂಬುವರ ವಂಶದಲ್ಲಿ ಒಂದು ನೂರು ವ್ಯಕ್ತಿ ಹಾಗು ಪೌಲವಂಶೀಕರಲ್ಲಿ ಶ್ವೇತ, ಕಾಶ್ಯ, ಕುಶ ಮುಂತಾದ ಒಂದು ನೂರು ವ್ಯಕ್ತಿ—ಹೀಗೆ ಅನೇಕರು ಜನಿಸುವರು.

ತತೋಽಪರೇ ಸಹಸ್ರಂ ವೈ ಯೇಽತೀತಾಃ ಶಶಬಿಂದವಃ ।
ಈಜಿರೇ ಚಾಶ್ವಮೇಧೈಸ್ತೇ ಸರ್ವೇ ನಿಯುತದಕ್ಷಿಣೈಃ ॥ ೨೬೯ ॥

ಏವಂ ರಾಜರ್ಷಯೋಽತೀತಾಃ ಶತಶೋಽಥ ಸಹಸ್ರಶಃ ।
ಮನೋರ್ವೈವಸ್ವತಸ್ಯಾಸ್ಮಿನ್ ವರ್ತಮಾನೇಽಂತರೇ ತು ಯೇ॥ ೨೭೦ ॥

ತೇಷಾಂ ನಿಬೋಧತೋತ್ಪನ್ನಾ ಲೋಕೇ ಸಂತತಯಃ ಸ್ಮೃತಾಃ ।
ನ ಶಕ್ಯೋ ವಿಸ್ತರಸ್ತಾಸಾಂ ಸಂತತೀನಾಂ ಪರಸ್ಪರಮ್ ॥ ೨೭೧ ॥

ತತ್ಪೂರ್ವಾಪರಯೋಗೇನ ವಕ್ತುಂ ವರ್ಷಶತೈರಪಿ ।
ಅಷ್ಟಾವಿಂಶದ್ಯುಗಾಖ್ಯಾಸ್ತು ಗತಾ ವೈವಸ್ವತೇಽಂತರೇ ॥ ೨೭೨ ॥

ಏತೈ ರಾಜರ್ಷಿಭಿಃ ಸಾರ್ಧಂ ಶಿಷ್ಟಾ ಯಾಸ್ತಾ ನಿಬೋಧತ ।
ಚತ್ವಾರಿಂಶತ್ತ್ರಯಶ್ಚೈವ ಭವಿಷ್ಯಾಃ ಸಹ ರಾಜಭಿಃ ॥ ೨೭೩ ॥

---

೨೬೯. ಮತ್ತೆ ಕೆಲವರು ಶಶಬಿಂದು ವಂಶಸಂಭೂತರಾದ ಸಹಸ್ರಾರು ಮಂದಿ ರಾಜರು ಅತೀತರಾಗಿರುವರು. ಅವರು ಎಲ್ಲರೂ ನಿಯುತ ಸಂಖ್ಯೆಯಷ್ಟು ಅಧಿಕ ದಕ್ಷಿಣಾ ದಾನದಿಂದ ಕೂಡಿದ ಅಶ್ವಮೇಧ ಮಹಾ ಯಾಗಗಳನ್ನು ಆಚರಿಸಿದ್ದರು.

೨೭೦. ಈ ರೀತಿಯಾಗಿ ಅನೇಕ ರಾಜರ್ಷಿಗಳು ಶತ-ಸಹಸ್ರ ಆದಿಯಾಗಿ ಬಹು ಸಂಖ್ಯೆಯಿಂದ ನೆಲೆಸಿದ್ದು ಅತೀತರಾಗಿರುವರು, ವರ್ತಮಾನವಾದ ಈ ವೈವಸ್ವತ ಮನ್ವಂತರದಲ್ಲಿ ಅಂತಹವರು ಅನೇಕರಿರುವರು.

೨೭೧. ಅವರಿಂದ ಈ ಲೋಕದಲ್ಲಿ ಅನೇಕ ಸಂತತಿಗಳು ಉತ್ಪನ್ನವಾಗಿವೆ, ಎಂದು ಸ್ಮರಿಸಲ್ಪಟ್ಟಿರುವುದನ್ನು ತಿಳಿಯಿರಿ. ಆ ಸಂತತಿಗಳಲ್ಲಿ ಪರಸ್ಪರ ಹುಟ್ಟಿರುವ ವಿಸ್ತಾರದ ವರ್ಣನೆಯು ಶಕ್ಯವಾದುದಲ್ಲ.

೨೭೨. ಆ ಸಂತತಿಗಳಲ್ಲಿ ಪೂರ್ವ-ಅಪರಭಾವವನ್ನು ಇಟ್ಟುಕೊಂಡು ವಿಸ್ತಾರವಾಗಿ ವರ್ಣಿಸುವುದು ನೂರಾರು ವರ್ಷಗಳಿಂದಲೂ ಶಕ್ಯವಲ್ಲ. ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೆಂಟು ಯುಗ ಪರಿವೃತ್ತಿಗಳು ಕಳೆದಿವೆ.

೨೭೩. ಈ ರಾಜರ್ಷಿಗಳ ಸಂಗಡ ಮಿಕ್ಕಿರುವ ಯುಗಪರಿವೃತ್ತಿ ಸಂಖ್ಯೆಯನ್ನು ಶ್ರವಣ ಮಾಡಿರಿ. ಮುಂದೆ ನಲವತ್ತಮೂರು ಯುಗಪರ್ಯಾಯಗಳು ಯುಗ ನಿಯಾಮಕ ರಾಜರೊಂದಿಗೆ ನಡೆಯುವುವು.

ಯುಗಾಖ್ಯಾನಾವಶಿಷ್ಟಾಸ್ತು ತತೋ ವೈವಸ್ವತಕ್ಷಯಃ ॥
ಏತದ್ವಃ ಕಥಿತಂ ಸರ್ವಂ ಸಮಾಸವ್ಯಾಸಯೋಗತಃ ॥ ೧೭೪ ॥

ಪುನರುಕ್ತಿಬಹುತ್ವಾಚ್ಚ ನ ಶಕ್ಯಂ ತು ಯುಗೈಃ ಸಹ ।
ಏತೇ ಯಯಾತಿಪುತ್ರಾಣಾಂ ಪಂಚ ವಂಶಾ ವಿಶಾಂ ಹಿತಾಃ ॥ ೧೭೫ ॥

ಕೀರ್ತಿತಾಶ್ಚ ವ್ಯತೀತಾ ಯೇ ಯೇ ಲೋಕಾನ್ ಧಾರಯಂತ್ಯುತ ।
ಲಭತೇ ಚ ವರಾನ್ ಪಂಚ ದುರ್ಲಭಾನಿಹ ಲೌಕಿಕಾನ್ ॥ ೧೭೬ ॥

ಆಯುಃ ಕೀರ್ತಿಂ ಧನಂ ಪುತ್ರಾನ್ ಸ್ವರ್ಗಂ ಚಾನಂತ್ಯಮಶ್ನುತೇ ।
ಧಾರಣಾಚ್ಛ್ರವಣಾಚ್ಚೈವ ಪಂಚ ವಂಶಸ್ಯ ಧೀಮತಃ ॥ ೧೭೭ ॥

---

೧೭೪. ಈ ಮಿಕ್ಕಿರುವ ಯುಗಾಖ್ಯಾನಗಳು ಪೂರ್ತಿಯಾಗಿ ಕಳೆಯಲು ವೈವಸ್ವತ ಮನ್ವಂತರವು ಪೂರ್ಣವಾಗಿ ಮುಗಿಯುವುದು. ಹೀಗೆ ಈ ಚರಿತ್ರೆಯು ನನ್ನಿಂದ ನಿಮಗೆ ಸಂಕ್ಷೇಪ-ವಿಸ್ತಾರಗಳಿಂದ ಪೂರ್ಣವಾಗಿ ಹೇಳಲ್ಪಟ್ಟಿದೆ.

೧೭೫. ಪ್ರತಿಯೊಂದು ಯುಗ ಪ್ರವರ್ತನ ಕ್ರಮವು ಅನೇಕ ಪುನರುಕ್ತಿಗಳಿಂದ ಕೂಡಿರುವುದರಿಂದ ವರ್ಣಿಸುವುದು ಶಕ್ಯವಾಗಿಲ್ಲ. ಯಯಾತಿ ರಾಜನ ಪುತ್ರರಿಂದ ಬಂದ ಐದು ಮಹಾವಂಶಗಳು ಪ್ರಜೆಗಳಿಗೆ ಹಿತಕಾರಿಗಳಾಗಿರುವುವು.

೧೭೬. ಯಾವ ಮಹಾತ್ಮರು ಲೋಕಗಳನ್ನು ಧರಿಸಿ ಇದ್ದು ಅತೀತರಾದರೊ ಅವರ ಚರಿತ್ರೆಯನ್ನು ಕೀರ್ತಿಸುವುದರಿಂದ ಲೋಕದಲ್ಲಿ ಭುಂಜಿಸುವ ದುರ್ಲಭವಾದ ಐದು ಇಷ್ಟಾರ್ಥಗಳನ್ನು ಹೊಂದುವನು.

೧೭೭. ಜ್ಞಾನಿಪುರುಷರಿಂದ ಕೂಡಿದ ಈ ಐದು ವಂಶಗಳನ್ನು ಶ್ರವಣ ಮತ್ತು ಪುನಃ ಪುನಃ ದೃಢವಾದ ಸ್ಮರಣಮಾಡುವುದರಿಂದ ಆಯುಷ್ಯ, ಕೀರ್ತಿ, ಧನ, ಪುತ್ರ ಮತ್ತು ಸ್ವರ್ಗ ಎಂಬ ಕಾಮಗಳನ್ನು ಅನಂತವಾಗಿ ಹೊಂದುತ್ತಾನೆ.

ಇತ್ಯೇಷ ವೋ ಮಯಾ ಪಾದಸ್ತೃತೀಯಃ ಕಥಿತೋ ದ್ವಿಜಾಃ ।
ವಿಸ್ತರೇಣಾನುಪೂರ್ವ್ಯಾ ಚ ಕಿಂ ಭೂಯೋ ವರ್ಣಯಾಮ್ಯಹಮ್
॥ ೨೭೮ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ ಚತುಸ್ಸಪ್ತತಿ
ತಮೋಽಧ್ಯಾಯಃ.

---

೨೭೮. ದ್ವಿಜರೆ! ಈ ರೀತಿಯಾಗಿ ನನ್ನಿಂದ ಈ ಪುರಾಣದ ಮೂರನೆಯ ಪಾದವು ವಿಸ್ತಾರ ಮತ್ತು ಅನುಪೂರ್ವಿಯಿಂದ ಕೂಡಿ ಕ್ರಮವಾಗಿ ಹೇಳಲ್ಪಟ್ಟಿದೆ. ಮುಂದೆ ಇನ್ನಾವ ವಿಷಯವನ್ನು ಹೇಳಲಿ.

ಬ್ರಹ್ಮಾಂಡ ಪುರಾಣದಲ್ಲಿ ಉತ್ತರಾರ್ಧದಲ್ಲಿ ಎಪ್ಪತ್ತನಾಲ್ಕನೆಯ ಅಧ್ಯಾಯವು
ಸಮಾಪ್ತವು.

---

# ಪಂಚಸಪ್ತತಿತಮೋಽಧ್ಯಾಯಃ

ಶ್ರುತ್ವಾ ಪಾದಂ ತೃತೀಯಂ ತು ಕ್ರಾಂತಂ ಸೂತೇನ ಧೀಮತಾ ।
ತತಶ್ಚತುರ್ಥಂ ಪಪ್ರಚ್ಛುಃ ಪಾದಂ ವೈ ಋಷಿಸತ್ತಮಾಃ ॥ ೧ ॥

ಋಷಯ ಊಚುಃ :—

ಪಾದಃ ಕ್ರಾಂತಸ್ತೃತೀಯೋಽಯಮನುಷಂಗೇಣ ನಸ್ತ್ವಯಾ ।
ಚತುರ್ಥಂ ವಿಸ್ತರಾತ್ಪಾದಂ ಸಂಹಾರಂ ಪರಿಕೀರ್ತಯ ॥ ೨ ॥

ಮನ್ವಂತರಾಣಿ ಸರ್ವಾಣಿ ಪೂರ್ವಾಣ್ಯೇವಾಪರೈಃ ಸಹ ।
ಸಪ್ತರ್ಷೀಣಾಮಥೈತೇಷಾಂ ಸಾಂಪ್ರತಸ್ಯಾನ್ತರೇ ಮನೋಃ ॥ ೩ ॥

ವಿಸ್ತಾರಾವಯವಂ ಚೈವ ನಿಸರ್ಗಸ್ಯ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ಸರ್ವಮೇವ ಬ್ರವೀಹಿ ನಃ ॥ ೪ ॥

---

೧. ಪುಣ್ಯಚರಿತ್ರೆಯನ್ನು ಶ್ರವಣಮಾಡುತ್ತಲಿದ್ದ ಮುನಿಪುಂಗವರು ಜ್ಞಾನಿಯಾದ ಸೂತ ಮುನಿಯಿಂದ ಹೇಳಲ್ಪಟ್ಟಿರುವ ಈ ಪುರಾಣದ ಮೂರನೆಯ ಪಾದವನ್ನು ಕೇಳಿ ಮುಂದೆ ನಾಲ್ಕನೆಯ ಪಾದವನ್ನು ಹೇಳುವಂತೆ ಪ್ರಶ್ನಿಸಿದರು.

೨. ಋಷಿಗಳು ಇಂತೆಂದರು :—ಸೂತ ಮುನಿಯೆ! ಅನುಷಂಗಪಾದವೆಂಬ ಮೂರನೆಯ ಪಾದವು ನಿನ್ನಿಂದ ನಮಗೆ ಉಪದೇಶಿಸಲ್ಪಟ್ಟಿತು. ಈಗ ಸಂಹಾರ ಪಾದವೆಂಬ ನಾಲ್ಕನೆಯ ಪಾದವನ್ನು ವಿಸ್ತಾರವಾಗಿ ಕೀರ್ತನಮಾಡು.

೩. ಕಳೆದಿರುವ ಸಕಲ ಮನ್ವಂತರಗಳನ್ನು ಮುಂದಿನ ಎಲ್ಲ ಮನ್ವಂತರಗಳ ಸಂಗಡ ಹೇಳು. ಮತ್ತು ಈಗ ನಡೆಯುತ್ತಿರುವ ಮನ್ವಂತರದಲ್ಲಿ ವಾಸಿಸುವ ಸಪ್ತರ್ಷಿಗಳಲ್ಲಿ ವಿಭಾಗಾದಿ ದಿವ್ಯಚರಿತ್ರೆಯನ್ನು ಹೇಳು.

೪. ಮತ್ತು ಮಹಾತ್ಮನಾದ ವೈವಸ್ವತ ಮನುವಿನ ವಂಶಸೃಷ್ಟಿಯ ವಿಸ್ತಾರವಾದ ಶಾಖೆಯನ್ನು ಕ್ರಮ, ಮತ್ತು ವಿಸ್ತಾರಗಳನ್ನು ಅನುಸರಿಸಿ ಎಲ್ಲವನ್ನೂ ನಮಗೆ ಶ್ರವಣ ಮಾಡಿಸು.

**ಸೂತ ಉವಾಚ :—**

ಭವತಾಂ ಕಥಯಿಷ್ಯಾಮಿ ಸರ್ವಮೇತದ್ಯಥಾತಥಮ್ ।
ಪಾದಂ ತ್ವಿಮಂ ಸಸಂಹಾರಂ ಚತುರ್ಥಂ ಮುನಿಸತ್ತಮಾಃ ॥ ೫ ॥

ಮನೋರ್ವೈವಸ್ವತಸ್ಯೇಮಂ ಸಾಂಪ್ರತಸ್ಯ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ನಿಸರ್ಗಂ ಶೃಣುತ ದ್ವಿಜಾಃ ॥ ೬ ॥

ಮನ್ವಂತರಾಣಾಂ ಸಂಕ್ಷೇಪಂ ಭವಿಷ್ಯೈಃ ಸಹ ಸಪ್ತಭಿಃ ।
ಪ್ರಲಯಂ ಚೈವ ಲೋಕಾನಾಂ ಬ್ರುವತೋ ಮೇ ನಿಬೋಧತ ॥ ೭ ॥

ಏತಾನ್ಯುಕ್ತಾನಿ ವೈ ಸಮ್ಯಕ್ ಸಪ್ತ ಸಪ್ತಸು ವೈ ಪ್ರಜಾಃ ।
ಮನ್ವಂತರಾಣಿ ಸಂಕ್ಷೇಪಾಚ್ಛೃಣುತಾನಾಗತಾನಿ ಮೇ ॥ ೮ ॥

ಸಾವರ್ಣಸ್ಯ ಪ್ರವಕ್ಷ್ಯಾಮಿ ಮನೋರ್ವೈವಸ್ವತಸ್ಯ ಹ ।
ಭವಿಷ್ಯಸ್ಯ ಭವಿಷ್ಯಂ ತು ಸಮಾಸಾತ್ತನ್ನಿಬೋಧತ ॥ ೯ ॥

---

೫. ಸೂತ ಮುನಿಯು ಇಂತೆಂದನು :—ಮುನಿವರ್ಯರೇ! ನೀವು ಕೇಳುವ ಎಲ್ಲ ವಿಷಯಗಳಿಂದ ಕೂಡಿದ ನಾಲ್ಕನೆಯದಾದ ಈ ಸಂಹಾರ ಪಾದವನ್ನು ನಿಮಗೆ ತಾತ್ತ್ವಿಕವಾಗಿ ಉಪದೇಶಿಸುತ್ತೇನೆ.

೬. ದ್ವಿಜರೆ! ಮಹಾತ್ಮನೂ ಈ ವರ್ತಮಾನ ಕಾಲದ ಪ್ರಭುವೂ ಆದ ವೈವಸ್ವತ ಮನುವಿನ ಈ ವಂಶವಿಸ್ತಾರ ಕ್ರಮವನ್ನು ಕ್ರಮಬದ್ಧವಾಗಿಯೂ ವಿಸ್ತಾರವಾಗಿಯೂ ನಾನು ಹೇಳುವುದನ್ನು ಶ್ರವಣ ಮಾಡಿರಿ.

೭. ಹಾಗು ಮುಂದಿನ ಏಳು ಮನ್ವಂತರಗಳೊಂದಿಗೆ ಹಿಂದಿನ ಸಕಲ ಮನ್ವಂತರಗಳ ಸ್ಥಿತಿಯನ್ನೂ ಆಗಿನ ಲೋಕ ಸಂಹಾರಕ್ರಮವನ್ನೂ ವರ್ಣಿಸುವ ನನ್ನ ವಚನವನ್ನು ಲಾಲಿಸಿರಿ.

೮. ಹಿಂದೆ ಏಳು ಮನ್ವಂತರಗಳು ಚನ್ನಾಗಿ ನನ್ನಿಂದ ವರ್ಣಿಸಲ್ಪಟ್ಟಿವೆ. ಹಾಗು ಏಳು ಮನ್ವಂತರಗಳಲ್ಲಿರುವ ಪ್ರಜೆಗಳು ವರ್ಣಿಸಲ್ಪಟ್ಟಿರುವರು. ಮುಂದೆ ಭವಿಷ್ಯವಾದ ಏಳು ಮನ್ವಂತರಗಳನ್ನು ಸಂಕ್ಷೇಪವಾಗಿ ಶ್ರವಣ ಮಾಡಿರಿ.

೯ ಸೂರ್ಯನ ಪುತ್ರನಾದ ಮತ್ತು ಸಾವರ್ಣ ಎಂಬ ನಾಮಾಂಕಿತನಾದ ಭವಿಷ್ಯ ಮನುವಿನ ಭವಿಷ್ಯ ಚರಿತ್ರೆಯನ್ನು ಸಂಗ್ರಹವಾಗಿ ಬೋಧಿಸುತ್ತೇನೆ. ಅದನ್ನು ಸಾವಧಾನವಾಗಿ ಶ್ರವಣ ಮಾಡಿರಿ.

ಅನಾಗತಾಶ್ಚ ಸಪ್ತೈವ ಸ್ಮೃತಾಸ್ತ್ವಿಹ ಮಹರ್ಷಯಃ ।
ಕೌಶಿಕೋ ಗಾಲವಶ್ಚೈವ ಜಾಮದಗ್ನ್ಯಶ್ಚ ಭಾರ್ಗವಃ ॥ ೧೦ ॥

ದ್ವೈಪಾಯನೋ ವಶಿಷ್ಠಶ್ಚ ಕೃಪಃ ಶಾರದ್ವತಸ್ತಥಾ ।
ಆತ್ರೇಯೋ ದೀಪ್ತಿಮಾಂಶ್ಚೈವ ಋಷ್ಯಶೃಂಗಸ್ತು ಕಾಶ್ಯಪಃ ॥ ೧೧ ॥

ಭಾರದ್ವಾಜಸ್ತಥಾ ದ್ರೌಣಿರಶ್ವತ್ಥಾಮಾ ಮಹಾಯಶಾಃ ।
ಏತೇ ಸಪ್ತ ಮಹಾತ್ಮಾನೋ ಭವಿಷ್ಯಾಃ ಪರಮರ್ಷಯಃ ॥ ೧೨ ॥

ಸುತಪಾಶ್ಚಾಮಿತಾಭಾಶ್ಚ ಸುಖಾಶ್ಚೈವ ಗಣಾಸ್ತ್ರಯಃ ।
ತೇಷಾಂ ಗಣಸ್ತು ದೇವಾನಾಮೇಕೈಕೋ ವಿಂಶಕಃ ಸ್ಮೃತಃ ॥ ೧೩ ॥

ನಾಮತಸ್ತು ಪ್ರವಕ್ಷ್ಯಾಮಿ ನಿಬೋಧಧ್ವಂ ಸಮಾಹಿತಾಃ ।
ಋತುಸ್ತಪಶ್ಚ ಶುಕ್ರಶ್ಚ ಕೃತಿರ್ನೇಮಿಃ ಪ್ರಭಾಕರಃ ॥ ೧೪ ॥

---

೧೦. ಈ ಮನ್ವಂತರಗಳಲ್ಲಿ ಏಳು ಮಂದಿ ಮಾತ್ರ ಮಹರ್ಷಿಗಳು ಭವಿಷ್ಯರಾಗಿ ಸ್ಮರಿಸಲ್ಪಟ್ಟಿರುವರು. ಅವರ ಸಂಜ್ಞೆಗಳನ್ನು ಈ ರೀತಿಯಾಗಿ ತಿಳಿಯಬೇಕು :— ಕುಶಿಕಮುನಿಗೋತ್ರದಲ್ಲಿ ಜನಿಸಿದ ಗಾಲವ ಮುನಿ, ಜಮದಗ್ನಿ ಪುತ್ರನಾದ ಭಾರ್ಗವ ಮುನಿ --ಇವರು ಆ ಸಪ್ತರ್ಷಿ ಗಣದಲ್ಲಿ ಸೇರಿರುವರು.

೧೧. ಮತ್ತು ದ್ವೀಪಾಯನಮುನಿಕುಲದಲ್ಲಿ ಹುಟ್ಟಿದ ವಸಿಷ್ಠ ಮುನಿ, ಶರದ್ವಂತ ಮುನಿಕುಮಾರನಾದ ಕೃಪಮುನಿ, ಅತ್ರಿಪುತ್ರನೂ ತೇಜಸ್ವಿಯೂ ಆದ ಋಷ್ಯ ಶೃಂಗ ಮುನಿ ಮತ್ತು ಕಶ್ಯಪಮುನಿ ಪುತ್ರನಾದ ಭರದ್ವಾಜ–ಎಂಬ ಮತ್ತೆ ನಾಲ್ಕು ಮಹರ್ಷಿ ಗಳಿಂದ ಆಗಣವು ಪರಿಪೂರ್ಣವಾಗಿದೆ.

೧೨. ಮಹಾ ಯಶಸ್ವಿಯೂ ದ್ರೋಣ ಮುನಿಪುತ್ರನೂ ಆದ ಅಶ್ವತ್ಥಾಮ ಮುನಿಯು ಏಳನೆಯ ಮುನಿಯಾಗಿ ಆ ಗಣಕ್ಕೆ ಸೇರಿರುವನು, ಹೀಗೆ ಮಹಾತ್ಮರಾದ ಈ ಏಳು ಮಂದಿ ಮಹರ್ಷಿಗಳು ಭವಿಷ್ಯರಾಗುವರು.

೧೩. ಹಾಗೆ ದೇವತೆಗಳಲ್ಲಿ ಸುತಪ, ಅಮಿತಾಭ, ಮತ್ತು ಸುಖ ಎಂಬ ನಾಮಾಂಕಿತಗಳಾದ ಮೂರು ಗಣಗಳು ಇರುವುವು. ದೇವತೆಗಳ ಆ ಮೂರು ಗಣ ಗಳಲ್ಲಿ ಒಂದೊಂದು ಇಪ್ಪತ್ತು ದೇವತಾ ವ್ಯಕ್ತಿಗಳಿಂದ ಕೂಡಿರುವುದೆಂದು ಸ್ಮರಿಸ ಲ್ಪಟ್ಟಿರುವುದು.

೧೪. ಆ ದೇವತಾ ವ್ಯಕ್ತಿಗಳ ಹೆಸರನ್ನು ಹೇಳುತ್ತೇನೆ, ಸಾವಧಾನತೆಯಿಂದ ಅದನ್ನು ಶ್ರವಣ ಮಾಡಿರಿ. ಋತು, ತಪ, ಶುಕ್ರ, ಕೃತಿ, ನೇಮಿ, ಪ್ರಭಾಕರ ಎಂಬು ವರು ಕೆಲವರು ದೇವತೆಗಳ ಮೊದಲನೆಯ ಗಣಕ್ಕೆ ಸೇರಿದವರಾಗಿರುವರು.

ಪ್ರಭಾಸೋ ಭಾಸಕೃದ್ಧರ್ಮಸ್ತೇಜೋ ರಶ್ಮಿಃ ಕ್ರತುರ್ವಿರಾಟ್ ।
ಅರ್ಚಿಷ್ಮಾನ್ ದ್ಯೋತನೋ ಭಾನುರ್ಯಶಃ ಕೀರ್ತಿರ್ಬುಧೋ ಧೃತಿಃ ॥ ೧೫ ॥

ವಿಂಶತಿಃ ಸುತಪಾ ಹ್ಯೇತೇ ನಾಮಭಿಃ ಪರಿಕೀರ್ತಿತಾಃ ।
ಪ್ರಭುರ್ವಿಭುರ್ವಿಭಾಸಶ್ಚ ಜೇತಾ ಹಂತಾರಿಹಾ ಋತುಃ ॥ ೧೬ ॥

ಸುಮತಿಃ ಪ್ರಮತಿರ್ದೀಪ್ತಿಃ ಸಮಾಖ್ಯಾತೋ ಮಹೋ ಮಹಾನ್ ।
ದೇಹೀ ಮುನಿರಿನಃ ಪ್ರೋಷ್ಟಾ ಸಮಃ ಸತ್ಯಶ್ಚ ವಿಶ್ರುತಃ ॥ ೧೭ ॥

ಇತ್ಯೇತೇ ಹ್ಯಮಿತಾಭಾಸ್ತು ವಿಂಶತಿಃ ಪರಿಕೀರ್ತಿತಾಃ ।
ದಮೋ ದಾನೀ ಋತಃ ಸೋಮೋ ವಿತ್ತಂ ವೈದ್ಯೋ ಯಮೋ ನಿಧಿಃ ॥ ೧೮ ॥

ಹೋಮೋ ಹವ್ಯಂ ಹುತಂ ದಾನಂ ದೇಯಂ ದಾತಾ ತಪಃ ಶಮಃ ।
ಧ್ರುವಂ ಸ್ಥಾನಂ ವಿಧಾನಂ ಚ ನಿಯಮಶ್ಚೇತಿ ವಿಂಶತಿಃ ॥ ೧೯ ॥

---

೧೫. ಮತ್ತು ಪ್ರಭಾಸ, ಭಾಸಕೃತ್, ಧರ್ಮ, ತೇಜ, ರಶ್ಮಿ, ಕ್ರತು, ವಿರಾಟ್, ಅರ್ಚಿಷ್ಮಾನ್, ದ್ಯೋತನ, ಭಾನು, ಯಶ, ಕೀರ್ತಿ, ಬುಧ ಮತ್ತು ಧೃತಿ ಎಂಬುವರು ಕೂಡ ಪ್ರಥಮಗಣಕ್ಕೆ ಸೇರಿದ್ದಾರೆ.

೧೬. ಈ ರೀತಿಯಾಗಿ ಸುತಪ ಎಂಬ ಪ್ರಥಮವರ್ಗಕ್ಕೆ ಸೇರಿದ ಇಪ್ಪತ್ತು ಮಂದಿಯ ಹೆಸರುಗಳು ಕೀರ್ತಿಸಲ್ಪಟ್ಟಿವೆ. ಮುಂದಿನ ಗಣದಲ್ಲಿ ಪ್ರಭು, ವಿಭು, ವಿಭಾಸ, ಜೇತಾ, ಹಂತಾ, ಋತು, ಎಂಬ ಕೆಲವು ದೇವತಾ ವ್ಯಕ್ತಿಗಳು ಅಂತರ್ಗತ ರಾಗಿರುವರು.

೧೭. ಮತ್ತು ಸುಮತಿ, ಪ್ರಮತಿ, ದೀಪ್ತಿ, ಸಮಾಖ್ಯಾತ, ಮಹ, ಮಹಾನ್, ದೇಹಿ, ಮುನಿ, ಇನ, ಪ್ರೋಷ್ಟಾ, ಸಮ, ವಿಶ್ರುತ ಎಂಬುವರು ದೇವತೆಗಳ ಎರಡನೆಯ ವರ್ಗಕ್ಕೆ ಸೇರಿದ ವ್ಯಕ್ತಿಗಳು.

೧೮. ಈ ರೀತಿಯಾಗಿ ಅಮಿತಾಭ ಎಂಬ ಗಣದ ಇಪ್ಪತ್ತು ದೇವತಾ ವ್ಯಕ್ತಿಗಳು ಕೀರ್ತಿಸಲ್ಪಟ್ಟಿರುವರು. ಮುಂದೆ ದಮ, ದಾನಿ, ಋತ, ಸೋಮ, ವಿತ್ತ, ವೈದ್ಯ, ಯಮ ಮತ್ತು ನಿಧಿ ಎಂಬುವು ಮೂರನೆಯ ದೇವ ಗಣದಲ್ಲಿರುವ ಕೆಲವು ವ್ಯಕ್ತಿಗಳ ಹೆಸರುಗಳಾಗಿವೆ.

೧೯. ಮತ್ತು ಹೋಮ, ಹವ್ಯ, ಹುತ, ದಾನ, ದೇಯ, ದಾತ, ತಪ, ಶಮ, ಧ್ರುವ, ಸ್ಥಾನ, ವಿಧಾನ, ಮತ್ತು ನಿಯಮ ಎಂಬುವರು ಸೇರಿ ಇಪ್ಪತ್ತು ಮಂದಿಯು ಮೂರನೆಯ ಗಣದ ದೇವವ್ಯಕ್ತಿಗಳಿರುವರು.

ಸುಖಾ ಹ್ಯೇತೇ ಸಮಾಖ್ಯಾತಾಃ ಸಾವರ್ಣ್ಯೇ ಪ್ರಥಮೇಂತರೇ ।
ಮಾರೀಚಸ್ಯೈವ ತೇ ಪುತ್ರಾಃ ಕಶ್ಯಪಸ್ಯ ಮಹಾತ್ಮನಃ ॥ ೨೦ ॥

ಸಾಂಪ್ರತಸ್ಯ ಭವಿಷ್ಯಂತಿ ಷಷ್ಟಿರ್ದೇವಾಸ್ತದಂತರೇ ।
ಸಾವರ್ಣಸ್ಯ ಮನೋಃ ಪುತ್ರಾ ಭವಿಷ್ಯಂತಿ ನವೈವ ತು ॥ ೨೧ ॥

ವಿರಜಾಶ್ಚೋರ್ವರೀವಾಂಶ್ಚ ನಿರ್ಮೋಕಾದ್ಯಾಸ್ತಥಾಪರೇ ।
ನವ ಚಾನ್ಯೇಷು ವಕ್ಷ್ಯಾಮಿ ಸಾವರ್ಣೇಷ್ವಂತರೇಷು ವೈ ॥ ೨೨ ॥

ಸಾವರ್ಣಮನವಶ್ಚಾನ್ಯೇ ಭವಿಷ್ಯಾ ಬ್ರಹ್ಮಣಃ ಸುತಾಃ ।
ಮೇರುಸಾವರ್ಣಿತಸ್ತೇ ವೈ ಚತ್ವಾರೋ ದಿವ್ಯದೃಷ್ಟಯಃ ॥ ೨೩ ॥

ದಕ್ಷಸ್ಯ ತೇ ಹಿ ದೌಹಿತ್ರಾಃ ಕ್ರಿಯಾಯಾ ದುಹಿತುಃ ಸುತಾಃ ।
ಮಹತಾ ತಪಸಾ ಯುಕ್ತಾ ಮೇರುಪೃಷ್ಠೇ ಮಹೌಜಸಃ ॥ ೨೪ ॥

---

೨೦. ಸಾವರ್ಣಿ ಮನುವಿನ ಪ್ರಥಮ ಮನ್ವಂತರದಲ್ಲಿ ಈ ಇಪ್ಪತ್ತು ಮಂದಿಯು ಸುಖ ಎಂಬ ದೇವಗಣವೆಂದು ಹೇಳಲ್ಪಟ್ಟಿರುವರು. ಇವರು ಮರೀಚಿ ಪುತ್ರನೂ ಮಹಾತ್ಮನೂ ಆದ ಕಶ್ಯಪ ಮುನಿಯ ಪುತ್ರರಾಗಿರುವರು.

೨೧. ವರ್ತಮಾನನಾದ ಸಾವರ್ಣಮನುವಿನ ಮನ್ವಂತರದಲ್ಲಿ ಈ ರೀತಿಯಾಗಿ ಅರವತ್ತು ದೇವತಾ ವ್ಯಕ್ತಿಗಳು ಸಂಭವಿಸುವರು. ಸಾವರ್ಣಮನುವಿಗೆ ಒಂಭತ್ತು ಮಂದಿ ಮಾತ್ರ ಪುತ್ರರು ಜನಿಸುವರು.

೨೨. ಅವರು ವಿರಜಾ, ಉರ್ವರೀವಾನ್ ಮತ್ತು ನಿರ್ಮೋಕ ಮುಂತಾದ ನಾಮಾಂಕಿತರಾಗಿರುವರು. ಇದರಂತೆ ಮಿಕ್ಕ ಸಾವರ್ಣಿ ಮನ್ವಂತರಗಳಲ್ಲಿ ಮನು ಪುತ್ರರಾಗಿ ಜನಿಸುವ ಒಂಭತ್ತು ಮಂದಿಯನ್ನು ಪ್ರತಿಪಾದಿಸುತ್ತೇನೆ.

೨೩. ಬ್ರಹ್ಮನ ಪುತ್ರರಾದ ಮತ್ತೆ ಕೆಲವರು ಸಾವರ್ಣಿಮನುಗಳು ಮುಂದೆ ಸಂಭವಿಸುವರು, ಮೇರುಸಾವರ್ಣಿ ಎಂಬುವನನ್ನು ಸೇರಿಸಿ ನಾಲ್ಕು ಮಂದಿಯು ದಿವ್ಯವಾದ ಜ್ಞಾನದೃಷ್ಟಿಯುಳ್ಳವರಾಗಿರುವರು.

೨೪. ಅವರು ದಕ್ಷಪ್ರಜಾಪತಿಯ ಕ್ರಿಯಾ ಎಂಬ ನಾಮಾಂಕಿತಳಾದ ಪುತ್ರಿಯಲ್ಲಿ ಜನಿಸಿದ ಪುತ್ರರಾಗಿರುವರು. ಅವರು ಮಹತ್ತಾದ ತಪಸ್ಸಿನಿಂದಲೂ ಮಹತ್ತಾದ ತೇಜಃ ಪ್ರಭಾವದಿಂದಲೂ ಕೂಡಿ ಮೇರುಪರ್ವತದ ಮೇಲುಭಾಗದಲ್ಲಿ ವಾಸಿಸುವರು.

ಬ್ರಹ್ಮಾದಿಭಿಸ್ತೇ ಜನಿತಾ ದಕ್ಷೇಣೈವ ಚ ಧೀಮತಾ ।
ಮಹರ್ಲೋಕಂ ಗತಾ ವೃತ್ತಾ ಭವಿಷ್ಯಾ ಮೇರುಮಾಶ್ರಿತಾಃ ॥ ೨೫ ॥

ಮಹಾನುಭಾವಾಸ್ತೇ ಪೂರ್ವಂ ಜಜ್ಞಿರೇ ಚಾಕ್ಷುಷೇಽಂತರೇ ।
ಜಜ್ಞಿರೇ ಮನವಸ್ತೇ ಹಿ ಭವಿಷ್ಯಾನಾಗತಾಂತರೇ ॥ ೨೬ ॥

ಪ್ರಾಚೇತಸಸ್ಯ ದಕ್ಷಸ್ಯ ದೌಹಿತ್ರಾ ಮನವಸ್ತು ಯೇ ।
ಸಾವರ್ಣಾ ನಾಮತಃ ಪಂಚ ಚತ್ವಾರಃ ಪರಮರ್ಷಿಜಾಃ ॥ ೨೭ ॥

ಸಂಜ್ಞಾಪುತ್ರಸ್ತು ಸಾವರ್ಣಿರೇಕೋ ವೈವಸ್ವತಸ್ತಥಾ ।
ಜ್ಯೇಷ್ಠಃ ಸಂಜ್ಞಾಸುತೋ ನಾಮ ಮನುರ್ವೈವಸ್ವತಃ ಪ್ರಭುಃ ॥ ೨೮ ॥

ವೈವಸ್ವತೇಽಂತರೇ ಪ್ರಾಪ್ತೇ ಸಮುತ್ಪತ್ತಿಸ್ತಯೋಃ ಶುಭಾ
ಚತುರ್ದಶೈತೇ ಮನವಃ ಕೀರ್ತಿತಾಃ ಕೀರ್ತಿವರ್ಧನಾಃ ॥ ೨೯ ॥

---

೨೫. ಅವರು ಬ್ರಹ್ಮದೇವ ಮುಂತಾದವರಿಂದಲೂ ಜ್ಞಾನಿಯಾದ ದಕ್ಷ ಪ್ರಜಾಪತಿಯಿಂದಲೂ ಜನಿಸಿದವರಾಗಿ ಮಹರ್ಲೋಕಕ್ಕೆ ಹೋಗಿ ಅಲ್ಲಿಂದ ಹಿಂತಿರುಗಿ ಬಂದು ಮೇರುಪರ್ವತವನ್ನು ಆಶ್ರಯಿಸುವವರಾಗುವರು.

೨೬. ಮಹಾ ಮಹಿಮೆಯಿಂದ ಕೂಡಿದ ಆ ತಪಸ್ವಿಗಳು ಪೂರ್ವದಲ್ಲಿ ಚಾಕ್ಷುಷ ಮನ್ವಂತರದಲ್ಲಿ ಜನಿಸಿದರು. ಅವರು ಮುಂದೆ ಬರುವ ಮನ್ವಂತರದಲ್ಲಿ ಅಧಿಕಾರವನ್ನು ನಡೆಯಿಸುವ ಮನುಗಳಾಗುವರು.

೨೭. ಪ್ರಚೇತಸನ ಮಗನಾಗಿರುವ ದಕ್ಷಪ್ರಜಾಪತಿಯಲ್ಲಿ ಹುಟ್ಟಿರುವ ಐದು ಮಂದಿ ಮನುಗಳು ಸಾವರ್ಣಿ ಎಂಬ ನಾಮಾಂಕಿತರಾಗಿರುವರು. ಮತ್ತೆ ನಾಲ್ಕು ಮಂದಿಯು ಪರಮ ಮಹರ್ಷಿಗಳಿಂದ ಉತ್ಪತ್ತಿಯನ್ನು ಹೊಂದಿರುವರು.

೨೮. ಸಂಜ್ಞಾದೇವಿಯಲ್ಲಿ ಸೂರ್ಯನಿಂದ ಹುಟ್ಟಿದ ಸಾವರ್ಣಿ ಎಂಬ ಒಬ್ಬ ಮನುವು ಇರುವನು. ಸಂಜ್ಞಾಸುತನೆಂಬ ನಾಮಾಂಕಿತನೂ ಪ್ರಭುವೂ ಆದ ಮನುವು ಸಂಜ್ಞಾಪುತ್ರರಲ್ಲಿ ಜ್ಯೇಷ್ಠನಾಗಿರುವನು.

೨೯. ವೈವಸ್ವತ ಮನ್ವಂತರವು ನಡೆಯುತ್ತಿರಲು ಸಂಜ್ಞಾಪುತ್ರರಾದ ಇಬ್ಬರು ಮನುಗಳ ಮಂಗಳಕರವಾದ ಜನ್ಮವು ಉಂಟಾಗುವುದು. ಈ ರೀತಿಯಾಗಿ ಕೀರ್ತಿಯನ್ನು ಬೆಳಗುವ ಹದಿನಾಲ್ಕು ಮಂದಿ ಮನುಗಳು ಕೀರ್ತಿಸಲ್ಪಟ್ಟಿರುವರು.

ವೇದೇ ಸ್ಮೃತೌ ಪುರಾಣೇ ಚ ಸರ್ವೇ ತೇ ಪ್ರಭವಿಷ್ಣವಃ ।
ಪ್ರಜಾನಾಂ ಪತಯಃ ಸರ್ವೇ ಭೂತಾನಾಂ ಪತಯಃ ಸ್ಥಿತಾಃ ॥ ೩೦ ॥

ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ।
ಪೂರ್ಣಂ ಯುಗಸಹಸ್ರಂ ವೈ ಪರಿಪಾಲ್ಯಾ ನರೇಶ್ವರೈಃ ॥ ೩೧ ॥

ಪ್ರಜಾಭಿಸ್ತಪಸಾ ಚೈವ ವಿಸ್ತರಸ್ತೇಷು ವಕ್ಷ್ಯತೇ ।
ಚತುರ್ದಶೈತೇ ವಿಜ್ಞೇಯಾಃ ಸರ್ಗಾಃ ಸ್ವಾಯಂಭುವಾದಯಃ ॥ ೩೨ ॥

ಮನ್ವಂತರಾಧಿಕಾರೇಷು ವರ್ತಂತೇಽತ್ರ ಸಕೃತ್ ಸಕೃತ್ ।
ವಿನಿವೃತ್ತಾಧಿಕಾರಾಸ್ತೇ ಮಹರ್ಲೋಕಂ ಸಮಾಶ್ರಿತಾಃ ॥ ೩೩ ॥

ಸಮತೀತಾಸ್ತು ಯೇ ತೇಷಾಮಷ್ಟೌ ಷಟ್ಚ ತಥಾ ಪರೇ ।
ಪೂರ್ವೇಷು ಸಾಂಪ್ರತಶ್ಚಾಯಂ ಶಾಸ್ತಿ ವೈವಸ್ವತಃ ಪ್ರಭುಃ ॥ ೩೪ ॥

---

೩೦. ಆ ಎಲ್ಲ ಮನುಗಳು ಪ್ರಜೆಗಳಿಗೆ ಅಧಿಪತಿಗಳೂ ಸರ್ವಭೂತಪರಿಪಾಲಕರೂ ಮತ್ತು ವೇದ, ಸ್ಮೃತಿ, ಪುರಾಣ ಮುಂತಾದು ವೆಲ್ಲದಕ್ಕೂ ನಿಯಾಮಕರೂ ಆಗಿ ಇರುವರು.

೩೧. ಪ್ರಜೆಗಳಿಗೆ ಈಶ್ವರರಾದ ಆ ರಾಜರಿಂದ ಏಳು ದ್ವೀಪಗಳಿಂದಲೂ ಅನೇಕ ನಗರಗಳಿಂದಲೂ ಕೂಡಿದ ಸಮಸ್ತ ಪೃಥಿವಿಯು ಒಂದು ಸಹಸ್ರ ಯುಗ ಸಮಯವು ಪೂರ್ತಿಯಾಗುವವರೆಗೆ ರಕ್ಷಿಸಲ್ಪಡುವುದು

೩೨. ಆ ಮನ್ವಂತರಗಳಲ್ಲಿ ಪ್ರಜೆ ಮತ್ತು ತಪಸ್ಸಿನಲ್ಲಿರುವ ವಿಶೇಷವು ವಿಸ್ತಾರವಾಗಿ ಹೇಳಲ್ಪಡುವುದು. ಈ ರೀತಿಯಾಗಿ ಸ್ವಾಯಂಭುವ ಮೊದಲಾಗಿ ಹದಿನಾಲ್ಕು ಮನುಗಳ ಸರ್ಗಗಳನ್ನು ಅರಿಯಬೇಕು.

೩೩. ಆ ಮನುಗಳು ಮನ್ವಂತರದ ಅಧಿಕಾರದಲ್ಲಿ ಮತ್ತೆ ಮತ್ತೆ ಇರುವರು. ಅವರ ಅಧಿಕಾರಾವಧಿಯು ನಿವೃತ್ತವಾದ ತರುವಾಯ ಮಹರ್ಲೋಕವನ್ನು ಆಶ್ರಯಿಸುವರು.

೩೪. ಅವರಲ್ಲಿ ಹಿಂದೆ ಕಳೆದ ಎಂಟು ಮಂದಿ ಮನುವ್ಯಕ್ತಿಗಳು ಇರುವರು. ಮತ್ತೆ ಆರು ಮಂದಿ ಬೇರೆಯಾಗಿರುವರು. ಈರ್ವ ಮನುವ್ಯಕ್ತಿಗಳಲ್ಲಿ ಸೂರ್ಯನ ಪುತ್ರನೂ ಪ್ರಭುವೂ ಆದ ಮನುವು ಈ ಮನ್ವಂತರವನ್ನು ನಡೆಸುವನು.

ಯೇ ಶಿಷ್ಟಾಸ್ತಾನ್ ಪ್ರವಕ್ಷ್ಯಾಮಿ ಸಹ ದೇವರ್ಷಿದಾನವೈಃ ।
ಸಹ ಪ್ರಜಾ ನಿಸರ್ಗೇಣ ಸರ್ವಾಂಸ್ತೇಽನಾಗತಾನ್ ದ್ವಿಜಃ ॥ ೩೫ ॥

ವೈವಸ್ವತನಿಸರ್ಗೇಣ ತೇಷಾಂ ಜ್ಞೇಯಸ್ತು ವಿಸ್ತರಃ ।
ಅನ್ಯೂನಾನತಿರಿಕ್ತಾಸ್ತೇ ಯಸ್ಮಾತ್ ಸರ್ವೇ ವಿವಸ್ವತಃ ॥ ೩೬ ॥

ಪುನರುಕ್ತಿಬಹುತ್ವಾತ್ತು ನ ವಕ್ಷ್ಯೇ ತೇಷು ವಿಸ್ತರಮ್ ।
ಮನ್ವಂತರೇಷು ಭಾವ್ಯೇಷು ಭೂತೇಷ್ವಪಿ ತಥೈವ ಚ ॥ ೩೭ ॥

ಕುಲೇ ಕುಲೇ ನಿಸರ್ಗಾಸ್ತು ತಸ್ಮಾಜ್ಜ್ಞೇಯಾ ವಿಭಾಗಶಃ ।
ತೇಷಾಮೇವ ಹಿ ಸಿದ್ಧ್ಯರ್ಥಂ ವಿಸ್ತರೇಣ ಕ್ರಮೇಣ ಚ ॥ ೩೮ ॥

ದಕ್ಷಸ್ಯ ಕನ್ಯಾ ಧರ್ಮಿಷ್ಠಾ ಸುವ್ರತಾ ನಾಮ ವಿಶ್ರುತಾ ।
ಸರ್ವಕನ್ಯಾವರಿಷ್ಠಾ ತು ಜ್ಯೇಷ್ಠಾ ಯಾ ವೀರಿಣೀಸುತಾ ॥ ೩೯ ॥

---

೩೫. ಮುಂದೆ ಮಿಕ್ಕಿರುವ ಮನುಗಳನ್ನು ಅವರ ಸಮಯದ ದೇವ-ಋಷಿ-ದಾನವರೊಡನೆ ಹೇಳುವೆನು. ದ್ವಿಜರೆ! ಆಗಾಮಿಗಳಾದ ಎಲ್ಲ ಮನುಗಳನ್ನು ಅವರ ವಂಶಸೃಷ್ಟಿಕ್ರಮದಿಂದ ಸಹಿತವಾಗಿ ಶ್ರವಣ ಮಾಡಿರಿ.

೩೬. ಇತರ ಮನ್ವಂತರಗಳ ನಿಸರ್ಗವು ವೈವಸ್ವತ ಮನುವಿನ ನಿಸರ್ಗದಂತೆ ವಿಸ್ತಾರವಾಗಿರುವುದೆಂದು ತಿಳಿಯಬೇಕು. ವೈವಸ್ವತಮನು ನಿಸರ್ಗಕ್ಕಿಂತ ಇತರ ಮನ್ವಂತರ ನಿಸರ್ಗಗಳು ಅಧಿಕವೂ ನ್ಯೂನವೂ ಆಗಿಲ್ಲ.

೩೭. ಮುಂದೆ ಬರುವ ಅಥವಾ ಹಿಂದೆ ಕಳೆದ ಎಲ್ಲ ಮನ್ವಂತರಗಳಲ್ಲಿರುವ ನಿಸರ್ಗ ವಿಸ್ತಾರದಲ್ಲಿ ಹೆಚ್ಚಾದ ಪುನರುಕ್ತಿಯು ಸಂಭವಿಸುವುದರಿಂದ ಅದನ್ನು ಈಗ ಹೇಳುವುದಿಲ್ಲ.

೩೮. ಎಲ್ಲ ನಿಸರ್ಗಗಳು ವಿಸ್ತಾರವಾಗಿಯೂ ಕ್ರಮವಾಗಿಯೂ ತಿಳಿಯಬೇಕಾದರೆ ಪ್ರತಿಯೊಂದು ವಂಶದಲ್ಲಿರುವ ನಿಸರ್ಗಗಳನ್ನು ವಿಭಾಗವಾಗಿ ತಿಳಿಯಬೇಕು.

೩೯. ದಕ್ಷಪ್ರಜಾಪತಿಗೆ ಸುವ್ರತಾ ಎಂಬ ನಾಮಾಂಕನದಿಂದ ಪ್ರಸಿದ್ಧಳಾದ ಧರ್ಮಿಷ್ಠೆಯಾದ ಒಬ್ಬಳು ಕನ್ಯೆಯಿರುವಳು. ಅವಳು ವೀರಿಣಿ ಎಂಬ ಜನನಿಯಲ್ಲಿ ಹುಟ್ಟಿ ಎಲ್ಲ ಕನ್ಯೆಯರಿಗೆ ಜ್ಯೇಷ್ಠಳಾಗಿರುವಳು.

ಗೃಹೀತ್ವಾ ತಾಂ ಪಿತಾ ಕನ್ಯಾಂ ಜಗಾಮ ಬ್ರಹ್ಮಣೋಽಂತಿಕೇ ।
ವೈರಾಜಸ್ಥಮುಪಾಸೀನಂ ಧರ್ಮೇಣ ಚ ಭವೇನ ಚ ॥ ೪೦ ॥

ಭವಧರ್ಮಸಮೀಪಸ್ಥಂ ದಕ್ಷಂ ಬ್ರಹ್ಮಾಭ್ಯಭಾಷತ ।
ದಕ್ಷ ಕನ್ಯಾ ತವೇಯಂ ವೈ ಜನಯಿಷ್ಯತಿ ಸುವ್ರತಾ ॥ ೪೧ ॥

ಚತುರೋ ವೈ ಮನೂನ್ ಪುತ್ರಾಂಶ್ಚಾತುರ್ವರ್ಣ್ಯಕರಾಞ್ಛುಭಾನ್ ।
ಬ್ರಹ್ಮಣೋ ವಚನಂ ಶ್ರುತ್ವಾ ದಕ್ಷೋ ಧರ್ಮೋ ಭವಸ್ತದಾ ॥ ೪೨ ॥

ತಾಂ ಕನ್ಯಾಂ ಮನಸಾ ಜಗ್ಮುಸ್ತ್ರಯಸ್ತೇ ಬ್ರಹ್ಮಣಾ ಸಹ ।
ಸತ್ಯಾಭಿಧ್ಯಾಯಿನಾಂ ತೇಷಾಂ ಸದ್ಯಃ ಕನ್ಯಾ ವ್ಯಜಾಯತ ॥ ೪೩ ॥

ಸದೃಶಾನ್ ರೂಪತಸ್ತೇಷಾಂ ಚತುರೋ ವೈ ಕುಮಾರಕಾನ್ ।
ಸಂಸಿದ್ಧಾಃ ಕಾರ್ಯಕರಣೇ ಸಂಭೂತಾಸ್ತೇ ಶ್ರಿಯಾನ್ವಿತಾಃ ॥ ೪೪ ॥

---

೪೦. ತಂದೆಯಾದ ದಕ್ಷಬ್ರಹ್ಮನು ಆ ಕನ್ಯೆಯನ್ನು ಕರೆದುಕೊಂಡು ಧರ್ಮ ಮತ್ತು ಭವ ಎಂಬ ಪ್ರಜಾಪತಿಯು ಸಂಗಡ ವೈರಾಜಪದವಿಯಲ್ಲಿದ್ದ ಬ್ರಹ್ಮದೇವನ ಸಮೀಪಕ್ಕೆ ಹೋದನು.

೪೧. ಆಗ ಬ್ರಹ್ಮದೇವನು ಭವ-ಧರ್ಮ ಪ್ರಜಾಪತಿಗಳ ಸಮೀಪದಲ್ಲಿದ್ದ ದಕ್ಷನನ್ನು ಕುರಿತು ಈ ರೀತಿಯಾಗಿ ಹೇಳಿದನು. ದಕ್ಷಬ್ರಹ್ಮನೆ! ಸುವ್ರತಾ ಎಂಬ ನಿನ್ನ ಈ ಕನ್ಯೆಯು ಪ್ರಜೆಯನ್ನು ಪ್ರಸವಿಸುವಳು.

೪೨. ಚಾತುರ್ವರ್ಣ್ಯವನ್ನು ಉಜ್ವಲವಾಗಿ ಪ್ರತಿಷ್ಠೆ ಮಾಡುವ ಮಂಗಳಕರರಾದ ನಾಲ್ಕು ಮಂದಿ ಮನುಗಳನ್ನು ಪುತ್ರರನ್ನಾಗಿ ಹೊಂದುವಳು. ಆಗ ದಕ್ಷ, ಧರ್ಮ ಮತ್ತು ಭವ ಎಂಬುವರು ಬ್ರಹ್ಮದೇವನ ಈ ವಚನವನ್ನು ಕೇಳಿದರು.

೪೩. ಮತ್ತು ಬ್ರಹ್ಮನ ಸಂಗಡ ಆ ಮೂರು ಮಂದಿಯು ಸುವ್ರತಾ ಎಂಬ ಆ ದಕ್ಷಕನ್ಯೆಯನ್ನು ಮನಸ್ಸಿನಿಂದ ಸಂಗಮಾಡಿದರು. ಸತ್ಯವನ್ನು ಧ್ಯಾನಿಸುವ ಅವರ ಮಾನಸ ಸಂಗದಿಂದ ಆ ಕನ್ಯೆಯು ಕೂಡಲೆ ಪ್ರಸವಿಸಿದಳು.

೪೪. ನಾಲ್ಕು ಮಂದಿಯ ಆ ಕುಮಾರರು ಒಂದೇ ವಿಧವಾದ ರೂಪದಿಂದ ಕೂಡಿಕೊಂಡಿದ್ದರು. ಆ ಪುತ್ರರು ಕಾರ್ಯ-ಕರಣಗಳ ಸಿದ್ಧಿಯನ್ನು ಹೊಂದಿದವರೂ ಕಾಂತಿಯಿಂದ ಶೋಭಿಸುವವರೂ ಆದರು.

ಉಪಭೋಗಾಸಮರ್ಥೈಶ್ಚ ಸದ್ಯೋಜಾತೈಃ ಶರೀರಕೈಃ ।
ತೇ ದೃಷ್ಟ್ವಾ ತಾನ್ ಸ್ವಯಂಭೂತಾನ್ ಬ್ರಹ್ಮವ್ಯಾಹಾರಿಣಸ್ತದಾ ॥೪೫॥

ಸಂರಬ್ಧಾ ವೈ ವ್ಯಕರ್ಷಂತ ಮಮ ಪುತ್ರೋ ಮಮೇತ್ಯುತ ।
ಅಭಿಧ್ಯಾಯಾತ್ಮನೋತ್ಪನ್ನಾನೂಚುರ್ನ್ಯೇ ತೇ ಪರಸ್ಪರಮ್ ॥ ೪೬ ॥

ಯೋ ಯಸ್ಯ ವಪುಷಾ ತುಲ್ಯೋ ಭಜತಾಂ ಸ ತು ತಂ ಸುತಮ್ ।
ಯಸ್ಯ ಯಃ ಸದೃಶಶ್ಚಾಪಿ ರೂಪೇ ವೀರ್ಯೇ ಚ ನಾಮತಃ ॥ ೪೭ ॥

ತಂ ಗೃಹ್ಣಾತು ಸ ಭದ್ರಂ ವೋ ವರ್ಣತೋ ಯಸ್ಯ ಯಃ ಸಮಃ ।
ಧ್ರುವಂ ರೂಪಂ ಪಿತುಃ ಪುತ್ರಃ ಸೋಽನುರುಧ್ಯತಿ ಸರ್ವದಾ ॥ ೪೮ ॥

ತಸ್ಮಾದಾತ್ಮಸಮಃ ಪುತ್ರಃ ಪಿತುರ್ಮಾತುಶ್ಚ ವೀರ್ಯತಃ ।
ಏವಂ ತೇ ಸಮಯಂ ಕೃತ್ವಾ ಸರ್ವೇಷಾಂ ಜಗೃಹುಃ ಸುತಾನ್ ॥ ೪೯ ॥

---

೪೫. ಅವರು ಆಗತಾನೆ ಹುಟ್ಟಿದ ಶರೀರಗಳಿಂದ ಉಪಭೋಗಕ್ಕೆ ಸಮರ್ಥರಾಗಲಿಲ್ಲ. ತಾವಾಗಿಯೇ ಜನಿಸಿ ಬ್ರಹ್ಮನಾಮವನ್ನು ಉಚ್ಚರಿಸುತ್ತಿದ್ದ ಆ ಕುಮಾರರನ್ನು ದಕ್ಷ ಮುಂತಾದವರು ನೋಡಿದರು.

೪೬. ಮತ್ತು ಅತಿಶಯವಾದ ತ್ವರೆಯಿಂದ ನನ್ನ ಪುತ್ರನು ಎಂದು ಹೇಳುತ್ತ ಪುತ್ರರನ್ನು ಸೆಳೆದರು, ತಮ್ಮಿಂದ ಈ ಪುತ್ರರು ಜನಿಸಿರುವರೆಂದು ಸಂಕಲ್ಪಿಸಿ ಅವರು ಪರಸ್ಪರವಾಗಿ ಮಾತನಾಡಿಕೊಂಡರು.

೪೭. ಯಾವ ಕುಮಾರನು ಯಾರ ದೇಹದಿಂದ ಸದೃಶನಾಗಿರುವನೊ ಅವನು ಆ ಕುಮಾರರನ್ನು ಸ್ವೀಕರಿಸಬಹುದು. ರೂಪ, ವೀರ್ಯ, ನಾಮಗಳಲ್ಲಿ ಯಾರಿಗೆ ಯಾವ ಕುಮಾರನು ಸದೃಶನಾಗಿರುವನೆಂದು ನೋಡಬೇಕು.

೪೮. ಮತ್ತು ನಿಮ್ಮಲ್ಲಿ ಯಾವ ಕುಮಾರನು ಯಾರ ವರ್ಣಕ್ಕೆ ಸಮಾನನಾಗಿ ಇರುವನೊ ಆ ಕುಮಾರನನ್ನು ನೀವು ಸ್ವೀಕರಿಸಬಹುದು, ಯಾವಾಗಲೂ ಪುತ್ರನು ಜನಕನ ರೂಪವನ್ನು ಅನುಸರಿಸಿ ಜನ್ಮವನ್ನು ಹೊಂದುವನು.

೪೯. ಆದ್ದರಿಂದ ಮಾತಾ-ಪಿತೃಗಳ ವೀರ್ಯೋತ್ಪನ್ನನಾದ ಪುತ್ರನು ಜನಕರ ರೂಪವನ್ನು ಹೋಲುವನು. ಹೀಗೆಂದು ಅವರೆಲ್ಲರು ಒಂದು ಸಮಯವನ್ನು ಮಾಡಿಕೊಂಡು ತಮ್ಮ ತಮ್ಮ ಪುತ್ರರನ್ನು ಸ್ವೀಕರಿಸಿದರು.

ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತಸ್ಯ ಹ
ರುಚೇಃ ಪ್ರಜಾಪತೇಃ ಪುತ್ರೋ ರೌಚ್ಯೋ ನಾಮಾಭವತ್ಸುತಃ ॥ ೫೦ ॥

ಭೂತ್ಯಾಮುತ್ಪಾದಿತೋ ಯಸ್ತು ಭೌತ್ಯೋ ನಾಮ ಕವೇಃ ಸುತಃ ।
ವೈವಸ್ವತೇಽಂತರೇ ಜಾತೌ ದ್ವೌ ಮನೂ ತು ವಿವಸ್ವತಃ ॥ ೫೧ ॥

ವೈವಸ್ವತೋ ಮನುರ್ಯಶ್ಚ ಸಾವರ್ಣೋ ಯಶ್ಚ ವೈ ಶ್ರುತಃ ।
ಜ್ಞೇಯಃ ಸಂಜ್ಞಾಸುತೋ ವಿದ್ವಾನ್ ಮನುರ್ವೈವಸ್ವತಃ ಪ್ರಭುಃ
॥ ೫೨ ॥

ಸವರ್ಣಾಯಾಃ ಸುತಶ್ಚಾನ್ಯಃ ಸ್ಮೃತೋ ವೈವಸ್ವತೋ ಮನುಃ ।
ಸಾವರ್ಣಮನವೋ ಯೇ ಚ ಚತ್ವಾರಸ್ತು ಮಹರ್ಷಿಜಾಃ ॥ ೫೩ ॥

ತಪಸಾ ಸಂಭೃತಾತ್ಮಾನಃ ಸ್ವೇಷು ಮನ್ವಂತರೇಷು ವೈ ।
ಭವಿಷ್ಯೇಷು ಭವಿಷ್ಯಂತಿ ಸರ್ವಕಾರ್ಯಾರ್ಥಸಾಧಕಾಃ ॥ ೫೪ ॥

---

೫೦. ಚಾಕ್ಷುಷ ಮನ್ವಂತರವು ಸಂಪೂರ್ಣವಾಗಿ ಕಳೆದು ವೈವಸ್ವತ ಮನುವಿನ ಮನ್ವಂತರವು ಪ್ರಾಪ್ತವಾಗಲು ರುಚಿ ಪ್ರಜಾಪತಿಯ ಪುತ್ರನಾದ ರೌಚ್ಯ ಎಂಬ ಕುಮಾರನು ಜನಿಸಿದನು.

೫೧. ಭೂತಿದೇವಿಯಲ್ಲಿ ಪ್ರಜಾಪತಿಯು ಪುತ್ರನಾಗಿ ಜನಿಸಿದ ಮನುರಾಜನು ಭೌತ್ಯ ಎಂಬ ಅನ್ವರ್ಥನಾಮದಿಂದ ಪ್ರಸಿದ್ಧನಾಗಿರುವನು, ವೈವಸ್ವತ ಮನ್ವಂತರದಲ್ಲಿ ಸೂರ್ಯದೇವನಿಂದ ಇಬ್ಬರು ಮನುಗಳು ಜನಿಸಿರುವರು.

೫೨. ಅವರಲ್ಲಿ ಒಬ್ಬನು ವೈವಸ್ವತಮನು ಎಂಬುದಾಗಿಯೂ ಮತ್ತೊಬ್ಬನು ಸಾವರ್ಣಮನು ಎಂಬುದಾಗಿಯೂ ಪ್ರಸಿದ್ಧರಾಗಿರುವರು. ಪ್ರಭುವೂ, ಜ್ಞಾನಿಯೂ ಆದ ವೈವಸ್ವತ ಎಂಬ ಮನುರಾಜನು ಸಂಜ್ಞಾದೇವಿಯಲ್ಲಿ ಜನಿಸಿರುವನು.

೫೩. ಸೂರ್ಯಪುತ್ರನಾಗಿ ಜನಿಸಿದ ಮತ್ತೊಬ್ಬ ಮನುವು ಸವರ್ಣಾ ಎಂಬಾಕೆಯು ಪುತ್ರನೆಂದು ಸ್ಮರಿಸಲ್ಪಟ್ಟಿರುವನು, ಮಹರ್ಷಿಗಳಿಂದ ಜನಿಸಿದ ನಾಲ್ಕು ಮಂದಿ ಸಾವರ್ಣ ಎಂಬ ಮನುಗಳು ಬೇರೆಯಾಗಿ ಹೇಳಲ್ಪಟ್ಟಿರುವರು.

೫೪. ತಪೋವೀರ್ಯದಿಂದ ತುಂಬಿದ ಮಾನಸವುಳ್ಳ ಆ ನಾಲ್ಕು ಮಂದಿಯು ಮುಂದೆ ಬರುವ ತಮ್ಮ ತಮ್ಮ ಮನ್ವಂತರಗಳಲ್ಲಿ ಎಲ್ಲ ಕರ್ತವ್ಯಾರ್ಥಗಳನ್ನು ಸಾಧಿಸುವಂತಹ ಪ್ರಭುಗಳಾಗುವರು.

ಪ್ರಥಮೇ ಮೇರುಸಾವರ್ಣೇರ್ದಕ್ಷಪುತ್ರಸ್ಯ ವೈ ಮನೋಃ ।
ಪಾರಾ ಮರೀಚಿಗರ್ಭಾಶ್ಚ ಸುಧರ್ಮಾಣಶ್ಚ ತೇ ತ್ರಯಃ
ಸಂಭೂತಾಶ್ಚ ಮಹಾತ್ಮಾನಃ ಸರ್ವೇ ವೈವಸ್ವತೇಽಂತರೇ ॥ ೫೫ ॥

ದಕ್ಷಪುತ್ರಸ್ಯ ಪುತ್ರಾಸ್ತೇ ರೋಹಿತಸ್ಯ ಪ್ರಜಾಪತೇಃ ।
ಭವಿಷ್ಯಂತಿ ಭವಿಷ್ಯಾಸ್ತು ಏಕೈಕೋ ದ್ವಾದಶೋ ಗಣಃ ॥ ೫೬ ॥

ಐಶ್ವರಶ್ಚ ಗ್ರಹೋ ರಾಹುರ್ವಾಕುರ್ವಂಶಸ್ತಥೈವ ಚ ।
ಪಾರಾ ದ್ವಾದಶ ವಿಜ್ಞೇಯಾ ಉತ್ತರಾಂಸ್ತು ನಿಬೋಧತ ॥ ೫೭ ॥

ವಾಜಿಪೋ ವಾಜಿಜಿಚ್ಚೈವ ಪ್ರಭೂತಿಶ್ಚ ಕಕುದ್ಯಥ ।
ದಧಿಕ್ರಾವಾ ವಿಪಕ್ವಶ್ಚ ಪ್ರಣೀತೋ ವಿಜಯೋ ಮಘಃ ॥ ೫೮ ॥

ಉತಥ್ಯೋತ್ತಮಕೌ ದ್ವೌ ತು ದ್ವಾದಶೈತೇ ಮರೀಚಯಃ ।
ಸುಧರ್ಮಾಣಸ್ತು ವಕ್ಷ್ಯಾಮಿ ನಾಮತಸ್ತಾನ್ನಿಬೋಧತ ॥ ೫೯ ॥

---

೫೫. ದಕ್ಷಪ್ರಜಾಪತಿಯ ಪುತ್ರನಾದ ಮೇರುಸಾವರ್ಣಿ ಎಂಬ ಮನುರಾಜನಿಂದ ಮೊದಲನೆಯ ವೈವಸ್ವತಮನ್ವಂತರದಲ್ಲಿ ಅವರು ಜನಿಸುವರು. ಮತ್ತೆ ಆ ಮನು ಗಣದಲ್ಲಿ ಪಾರ, ಮರೀಚಿಗರ್ಭ, ಮತ್ತು ಸುಧರ್ಮ ಎಂಬುವರು ಎಲ್ಲರೂ ಮಹಾತ್ಮರಾಗಿ ವೈವಸ್ವತಮನ್ವಂತರದಲ್ಲಿ ಜನಿಸುವರು.

೫೬. ಅವರು ದಕ್ಷನ ಪುತ್ರನಾದ ರೋಹಿತ ಪ್ರಜಾಪತಿಯ ಪುತ್ರರಾಗಿ ಜನಿಸಿ ಅವರಲ್ಲಿ ಪ್ರತಿಯೊಬ್ಬನೂ ಹನ್ನೆರಡು ವ್ಯಕ್ತಿಗಳಿಂದ ಕೂಡಿದ ವರ್ಗರೂಪವಾಗಿ ಆಗುವನು.

೫೭. ಇವರಲ್ಲಿ ಐಶ್ವರ, ಗ್ರಹ, ರಾಹು, ವಾಕು, ಮತ್ತು ವಂಶ ಮುಂತಾದ ನಾಮಧೇಯಾಲಂಕೃತರಾದ ಹನ್ನೆರಡು ಮಂದಿಯು ಪಾರ ಎಂಬ ಗಣವಾಗಿ ತಿಳಿಯಬೇಕು. ಮುಂದಿನ ಗಣದ ವ್ಯಕ್ತಿಗಳನ್ನು ತಿಳಿಯಿರಿ.

೫೮. ಮರೀಚಿ ಸಂಜ್ಞೆಯುಳ್ಳ ದ್ವಿತೀಯ ಗಣದಲ್ಲಿ ವಾಜಿಪ, ವಾಜಿಜಿತ್, ಪ್ರಭೂತಿ, ಕಕುದಿ, ದಧಿ, ಕ್ರಾವ, ವಿಪಕ್ವ, ಪ್ರಣೀತ, ವಿಜಯ, ಮತ್ತು ಮಘು ಎಂಬುವರು ಹತ್ತು ಮಂದಿಯು ಸೇರಿರುವರು.

೫೯. ಹಾಗು ಉತಥ್ಯ, ಉತ್ತಮಕ ಎಂಬ ಇಬ್ಬರು ಸೇರಿ ಹನ್ನೆರಡು ಮಂದಿಯು ಮರೀಚಿ ಎಂಬ ನಾಮಾಂಕಿತರಾಗಿರುವರು. ಇನ್ನು ಮುಂದೆ ಸುಧರ್ಮ ಎಂಬುವರ ಹೆಸರುಗಳನ್ನು ಹೇಳುತ್ತೇನೆ, ಶ್ರವಣ ಮಾಡಿರಿ.

ವರ್ಣಸ್ತಥಾಥಗರ್ವಿಶ್ಚ ಭುರಣ್ಯೋ ವೃಜನೋಽಮಿತಃ ।
ಅಮಿತೋ ದ್ರವಕೇತುಶ್ಚ ಜಂಭೋಽಥಾಜಸ್ತು ಶಕ್ರಕಃ ॥ ೬೦ ॥

ಸುನೇಮಿರ್ದ್ಯುತಯಶ್ಚೈವ ಸುಧರ್ಮಾಣಃ ಪ್ರಕೀರ್ತಿತಾಃ ।
ತೇಷಾಮಿಂದ್ರಸ್ತದಾ ಭಾವ್ಯೋ ಹ್ಯದ್ಭುತೋ ನಾಮ ನಾಮತಃ ॥ ೬೧ ॥

ಸ್ಕಂದೋಽಸೌ ಪಾರ್ವತೀಯೋ ವೈ ಕಾರ್ತಿಕೇಯಸ್ತು ಪಾವಕಿಃ ।
ಮೇಧಾತಿಥಿಶ್ಚ ಪೌಲಸ್ತ್ಯೋ ವಸುಃ ಕಾಶ್ಯಪ ಏವ ಚ ॥ ೬೨ ॥

ಜ್ಯೋತಿಷ್ಮಾನ್ ಭಾರ್ಗವಶ್ಚೈವ ದ್ಯುತಿಮಾನಂಗಿರಾಸ್ತಥಾ ।
ವಸಿನಶ್ಚೈವ ವಾಸಿಷ್ಠ ಆತ್ರೇಯೋ ಹವ್ಯವಾಹನಃ ॥ ೬೩ ॥

ಸುತಪಾಃ ಪೌಲಹಶ್ಚೈವ ಸಪ್ತೈತೇ ರೋಹಿತೇತರೇ ।
ಧೃತಿಕೇತುರ್ದೀಪ್ತಿಕೇತುಃ ಶಾಪಹಸ್ತನಿರಾಮಯಾಃ ॥ ೬೪ ॥

---

೬೦. ವರ್ಣ, ಅಥಗರ್ವಿ, ಭುರಣ್ಯ, ವೃಜನ, ಮಿತ, ಅಮಿತ, ದ್ರವಕೇತು, ಜಂಭ, ಅಜ ಮತ್ತು ಶಕ್ರಕ ಎಂಬ ನಾಮಾಂಕಿತರು ಹತ್ತು ಮಂದಿ ಸುಧರ್ಮ ಎಂಬ ಗಣದಲ್ಲಿ ಸೇರಿದವರಾಗಿರುವರು.

೬೧. ಮತ್ತೆ ಸುನೇಮಿ, ದ್ಯುತಯ ಎಂಬುವರಿಬ್ಬರಿಂದ ಸೇರಿದ ಹನ್ನೆರಡು ಮಂದಿಯು ಸುಧರ್ಮ ಎಂದು ಕೀರ್ತಿಸಲ್ಪಟ್ಟಿರುವರು. ಆಗ ಅದ್ಭುತ ಎಂಬ ನಾಮದಿಂದ ಪ್ರಸಿದ್ಧಿಯನ್ನು ಹೊಂದಿದವನು ಅವರಿಗೆ ಇಂದ್ರನಾಗುವನು.

೬೨. ಪಾರ್ವತಿದೇವಿಯ, ಕೃತ್ತಿಕಾಸ್ತ್ರೀಯರ, ಮತ್ತು ಅಗ್ನಿದೇವನ ಪುತ್ರನಾದ ಕುಮಾರಸ್ವಾಮಿಯು ಅದ್ಭುತನಾಮ ಪ್ರಸಿದ್ಧಿಯಿಂದ ದೇವಗಣಕ್ಕೆ ಇಂದ್ರನಾಗುವನು. ಮುಂದೆ ಸಪ್ತರ್ಷಿಗಳನ್ನು ಕೇಳಿರಿ. ಪುಲಸ್ತ್ಯ ಪುತ್ರನಾದ ಮೇಧಾತಿಥಿ, ಕಶ್ಯಪ ಪುತ್ರನಾದ ವಸು ಎಂಬುವರು ಸಪ್ತರ್ಷಿಗಳಲ್ಲಿ ಸೇರಿದ್ದಾರೆ.

೬೩. ಹಾಗು ಭೃಗುಮುನಿ ಪುತ್ರನಾದ ಜ್ಯೋತಿಷ್ಮಂತನೂ, ಅಂಗಿರೋ ಮುನಿಯ ಪುತ್ರನಾದ ದ್ಯುತಿಮಂತನೂ ವಸಿಷ್ಠ ಕುಲದಲ್ಲಿ ಜನಿಸಿದ ವಸಿನನೂ ಮತ್ತು ಅತ್ರಿ ಮುನಿಯಿಂದ ಜನ್ಮವೆತ್ತಿದ ಹವ್ಯವಾಹನನೂ ಋಷಿಗಣದಲ್ಲಿ ಪ್ರಸಿದ್ಧರಾಗಿರುವರು.

೬೪. ಮತ್ತು ಪುಲಹ ಪುತ್ರನಾದ ಸುತಪನು ಸೇರಿ ಸಪ್ತ ಋಷಿಗಳಾಗಿರುವರು. ಮತ್ತು ರೋಹಿತ, ಧೃತಿಕೇತು, ದೀಪ್ತಿಕೇತು, ಶಾಪಹಸ್ತ, ನಿರಾಮಯ ಎಂಬುವರು ಸಾವರ್ಣಿಯ ಪುತ್ರವೃಂದದಲ್ಲಿ ಸೇರಿದ ವ್ಯಕ್ತಿಗಳಾಗಿರುವರು.

**ಪೃಥುಶ್ರವಾಸ್ತಥಾನೀಕೋ ಭೂರಿದ್ಯುಮ್ನೋ ಬೃಹದ್ಯಶಃ ।**
**ಪ್ರಥಮಸ್ಯ ತು ಸಾವರ್ಣೇರ್ನವ ಪುತ್ರಾಃ ಪ್ರಕೀರ್ತಿತಾಃ ॥ ೬೫ ॥**

**ದಶಮೇ ತ್ವಥ ಪರ್ಯಾಯೇ ಧರ್ಮಪುತ್ರಸ್ಯ ವೈ ಮನೋಃ ।**
**ದ್ವಿತೀಯಸ್ಯ ತು ಸಾವರ್ಣೇರ್ಭಾವ್ಯಸ್ಯೈವಾಂತರೇ ಮನೋಃ ॥ ೬೬ ॥**

**ಸುಧಾಮಾನೋ ವಿರುದ್ಧಾಶ್ಚ ದ್ವಾವೇವ ತು ಗಣೌ ಸ್ಮೃತೌ ।**
**ದೀಪ್ತಿಮಂತಶ್ಚ ತೇ ಸರ್ವೇ ಶತಸಂಖ್ಯಾಶ್ಚ ತೇ ಸಮಾಃ ॥ ೬೭ ॥**

**ಪ್ರಾಣಾನಾಂ ಯಚ್ಛತಂ ಪ್ರೋಕ್ತಮೃಷಿಭಿಃ ಪುರುಷೇತಿ ವೈ ।**
**ದೇವಾಸ್ತೇ ವೈ ಭವಿಷ್ಯಂತಿ ಧರ್ಮಪುತ್ರಸ್ಯ ವೈ ಮನೋಃ ॥ ೬೮ ॥**

**ತೇಷಾಮಿಂದ್ರಸ್ತಥಾ ವಿದ್ವಾನ್ ಭವಿಷ್ಯಃ ಶಾಂತಿರುಚ್ಯತೇ ।**
**ಹವಿಷ್ಮಾನ್ ಪೌಲಹಃ ಶ್ರೀಮಾನ್ ಸುಕೀರ್ತಿಶ್ಚಾಥ ಭಾರ್ಗವಃ ॥ ೬೯ ॥**

---

೬೫. ಹಾಗು ಪೃಥುಶ್ರವ, ಅನೀಕ, ಭೂರಿದ್ಯುಮ್ನ, ಬೃಹದ್ಯಶ ಎಂಬುವರು ಸೇರಿ ಒಂಭತ್ತು ಮಂದಿಯು ಮೊದಲನೆಯ ಸಾವರ್ಣಿ ಎಂಬ ಮನುರಾಜನ ಪುತ್ರರೆಂದು ಕೀರ್ತಿಸಲ್ಪಟ್ಟಿರುವರು.

೬೬. ಧರ್ಮ ಎಂಬ ಪ್ರಜಾಪತಿಯ ಪುತ್ರನಾದ ಮನುವಿನ ಹತ್ತನೆಯ ಯುಗಪರ್ಯಾಯದಲ್ಲಿಯೂ ಎರಡನೆಯದಾಗಿ ಮುಂದೆ ಬರುವ ಸಾವರ್ಣಿ ಎಂಬ ಮನುವಿನ ಮನ್ವಂತರದಲ್ಲಿಯೂ ಮುಂದೆ ಹೇಳುವಂತೆ ದೇವಗಣವು ಇರುವುದು.

೬೭. ಆಗಿನ ದೇವವೃಂದವು ಸುಧಾಮ, ವಿರುದ್ಧ ಎಂದು ಎರಡು ಗಣಗಳಾಗಿ ವಿಭಾಗದಿಂದ ಸ್ಮರಿಸಲ್ಪಟ್ಟಿದೆ. ಆ ಗಣದಲ್ಲಿ ಸೇರಿದ ವ್ಯಕ್ತಿಗಳು ಎಲ್ಲರೂ ಕಾಂತಿಯಿಂದ ರಾಜಿಸುವವರೂ ನೂರಾರು ವರ್ಷಗಳ ಕಾಲದವರೆಗೆ ಇರುವವರೂ ಆಗುವರು.

೭೮. ಪುರುಷ ಎಂಬ ಪವಿತ್ರನಾಮದಿಂದ ಋಷಿಗಳಿಂದ ಕರೆಯಲ್ಪಟ್ಟ ಒಂದು ನೂರು ಪ್ರಾಣಗಳು ಧರ್ಮಪುತ್ರನಾದ ಮನುವಿನ ಮನ್ವಂತರದಲ್ಲಿ ದೇವತೆಗಳಾಗಿ ಇರುವರು.

೬೯. ಆಗ ಜ್ಞಾನಿಯಾದ ಶಾಂತಿ ಎಂಬುವನು ಅವರಿಗೆ ಇಂದ್ರನಾಗಿರುವನೆಂದು ಹೇಳಲ್ಪಡುತ್ತಾನೆ. ಮತ್ತು ಮುಂದೆ ಹೇಳುವ ಮುನಿಗಳು ಸಪ್ತರ್ಷಿ ಪದವಿಯಲ್ಲಿ ಇರುವರು. ಪುಲಹ ಪುತ್ರನಾದ ಹವಿಷ್ಮಾನ್, ಪೂಜ್ಯನಾದ ಭೃಗುಮುನಿಯ ಪುತ್ರನಾದ ಸುಕೀರ್ತಿ ಎಂಬುವರು ಸಪ್ತರ್ಷಿ ಗಣದಲ್ಲಿರುವವರು.

ಆಪೋಮೂರ್ತಿಸ್ತಥಾತ್ರೇಯೋ ವಸಿಷ್ಠಾಚಾಪವಃ ಸ್ಮೃತಃ ।
ಪೌಲಸ್ತ್ಯೋsಪ್ರತಿಮಶ್ಚಾಪಿ ನಾಭಾಗಶ್ಚೈವ ಕಾಶ್ಯಪಃ ॥ ೭೦ ॥

ಅಭಿಮನ್ಯುಶ್ಚಾಂಗಿರಸಃ ಸಪ್ತೈತೇ ಪರಮರ್ಷಯಃ
ಸುಕ್ಷೇತ್ರಶ್ಚೋತ್ತಮೌಜಾಶ್ಚ ಭೂರಿಸೇನಶ್ಚ ವೀರ್ಯವಾನ್ ॥ ೭೧ ॥

ಶತಾನೀಕೋ ನಿರಾಮಿತ್ರೋ ವೃಷಸೇನೋ ಜಯದ್ರಥಃ ।
ಭೂರಿದ್ಯುಮ್ನಃ ಸುವರ್ಚಾಶ್ಚ ದಶೈತೇ ಮಾನವಾಃ ಸ್ಮೃತಾಃ ॥ ೭೨ ॥

ಏಕಾದಶೇ ತು ಪರ್ಯಾಯೇ ಸಾವರ್ಣೇ ವೈ ತೃತೀಯಕೇ ।
ನಿರ್ವಾಣರತಯೋ ದೇವಾಃ ಕಾಮಗಾ ವೈ ಮನೋಜವಾಃ ॥ ೭೩ ॥

ಗಣಾಸ್ತ್ವೇತೇ ತ್ರಯಃ ಖ್ಯಾತಾ ದೇವತಾನಾಂ ಮಹಾತ್ಮನಾಮ್ ।
ಏಕೈಕಸ್ತ್ರಿಂಶತಸ್ತೇಷಾಂ ಗಣಸ್ತು ತ್ರಿದಿವೌಕಸಾಮ್ ॥ ೭೪ ॥

---

೭೦. ಮತ್ತು ಅತ್ರಿಮುನಿಯಿಂದ ಜನಿಸಿದ ಆಪೋಮೂರ್ತಿ, ಆಪಮುನಿ ಪುತ್ರನಾದ ವಸಿಷ್ಠ ಪುಲಸ್ತ್ಯಪುತ್ರನಾದ ಅಪ್ರತಿಮ, ಮತ್ತು ಕಶ್ಯಪಮುನಿ ಸಂಭೂತನಾದ ನಾಭಾಗ ಎಂಬುವರು ಸಪ್ತರ್ಷಿಗಣದಲ್ಲಿ ಸ್ಮರಿಸಲ್ಪಟ್ಟಿರುವರು.

೭೧. ಕಡೆಯಲ್ಲಿ ಅಂಗಿರೋಮುನಿಯ ಕುಮಾರನಾದ ಅಭಿಮನ್ಯುವು ಸೇರಿ ಏಳು ಮಂದಿಯು ಸಪ್ತಮಹರ್ಷಿಗಳಾಗಿರುವರು. ಮತ್ತು ಸುಕ್ಷೇತ್ರ, ಉತ್ತಮೌಜ, ಭೂರಿಸೇನ, ಮತ್ತು ವೀರ್ಯವಾನ್ ಎಂಬುವರು ಮನುಪುತ್ರರಾಗಿ ಜನಿಸುವರು.

೭೨. ಹಾಗು ಶತಾನೀಕ, ನಿರಾಮಿತ್ರ, ವೃಷಸೇನ, ಜಯದ್ರಥ, ಭೂರಿದ್ಯುಮ್ನ ಮತ್ತು ಸುವರ್ಚ ಎಂಬುವರಿಂದ ಸೇರಿ ಹತ್ತು ಮಂದಿಯು ಮನುರಾಜನ ಪುತ್ರರೆಂದು ಸ್ಮರಿಸಲ್ಪಟ್ಟಿರುವರು.

೭೩. ಮೂರನೆಯ ಸಾವರ್ಣಿಮನುವಿನ ಹನ್ನೊಂದನೆಯ ಪರ್ಯಾಯದ ಮನ್ವಂತರದಲ್ಲಿರುವ ದೇವವ್ಯಕ್ತಿಗಳು ನಿರ್ವಾಣರತಿ, ಕಾಮಗ ಮತ್ತು ಮನೋಜವ ಎಂಬ ಪವಿತ್ರನಾಮಾಂಕಿತಗಳಾದ ಗಣರೂಪರಾಗಿರುವರು.

೭೪. ಮಹಾತ್ಮರಾದ ಆ ಎಲ್ಲ ದೇವತೆಗಳು ಮೂರು ಗಣವಾಗಿ ಪ್ರಸಿದ್ಧಿ ಹೊಂದಿರುವರು. ಮತ್ತು ಆ ದೇವತೆಗಳ ಗಣಗಳಲ್ಲಿ ಒಂದೊಂದು ಗಣವು ಮೂವತ್ತು ವ್ಯಕ್ತಿಗಳಿಂದ ಕೂಡಿರುವುದಾಗಿದೆ.

ಮಾಸಸ್ಯಾಹಾನಿ ತ್ರಿಂಶತ್ತು ಯಾನಿ ವೈ ಕವಯೋ ವಿದುಃ ।
ನಿರ್ವಾಣರತಯೋ ದೇವಾ ರಾತ್ರಯಸ್ತು ವಿಹಂಗಮಾಃ　॥ ೭೫ ॥

ಗಣಸ್ತೃತೀಯೋ ಯಃ ಪ್ರೋಕ್ತೋ ದೇವತಾನಾಂ ಭವಿಷ್ಯತಿ ।
ಮನೋಜವಾ ಮುಹೂರ್ತಾಸ್ತು ಇತಿ ದೇವಾಃ ಪ್ರಕೀರ್ತಿತಾಃ ॥ ೭೬ ॥

ಏತೇ ಹಿ ಬ್ರಹ್ಮಣಃ ಪುತ್ರಾ ಭವಿಷ್ಯಾ ಮಾನವಾಃ ಸ್ಮೃತಾಃ ।
ತೇಷಾಮಿಂದ್ರೋ ವೃಷಾ ನಾಮ ಭವಿಷ್ಯಃ ಸುರರಾಟ್ತತಃ　॥ ೭೭ ॥

ತೇಷಾಂ ಸಪ್ತಋಷೀಂಶ್ಚಾಪಿ ಕೀರ್ತ್ಯಮಾನಾನ್ನಿಬೋಧತ ।
ಹವಿಷ್ಮಾನ್ ಕಾಶ್ಯಪಶ್ಚಾಪಿ ವಪುಷ್ಮಾಂಶ್ಚೈವ ಭಾರ್ಗವಃ　॥ ೭೮ ॥

ಆರುಣಿಶ್ಚ ತಥಾತ್ರೇಯೋ ವಸಿಷ್ಠೋ ನಗ ಏವ ಚ ।
ಪುಷ್ಟಿರಾಂಗಿರಸೋ ಜ್ಞೇಯಃ ಪೌಲಸ್ತ್ಯೋ ನಿಶ್ಚರಸ್ತಥಾ　॥ ೭೯ ॥

---

೭೫. ಒಂದು ಮಾಸದಲ್ಲಿ ಯಾವ ಮೂವತ್ತು ದಿನಗಳಿವೆಯೆಂದು ಪ್ರಾಜ್ಞರು ತಿಳಿದು ಇರುವರೊ ಆ ಮೂವತ್ತು ದಿನಗಳು ನಿರ್ವಾಣರತಿ ಎಂಬ ದೇವತೆಗಳೆಂದೂ ರಾತ್ರಿಗಳನ್ನು ಕಾಮಗ ಅಥವಾ ವಿಹಂಗಮ ಎಂಬ ದೇವತೆಗಳೆಂದೂ ತಿಳಿಯಬೇಕು.

೭೬. ದಿನದಲ್ಲಿರುವ ಮೂವತ್ತು ಮುಹೂರ್ತಗಳು ಹಿಂದೆ ಮೂರನೆಯ ಗಣವಾಗಿ ವರ್ಣಿಸಲ್ಪಟ್ಟ ಮನೋಜವ ಎಂಬ ನಾಮಾಂಕಿತರಾದ ದೇವತೆಗಳಾಗಿರುವರು. ಹೀಗೆ ವಿಭಾಗದಿಂದ ದೇವತೆಗಳು ಕೀರ್ತಿಸಲ್ಪಟ್ಟಿರುವರು.

೭೭. ಇವರು ಬ್ರಹ್ಮನ ಪುತ್ರರಾಗಿ ಜನಿಸಿ ಮಾನವರಾಗಿರುವರೆಂದು ಸ್ಮರಿಸಲ್ಪಟ್ಟಿರುವರು. ಅವರಿಗೆ ವೃಷ ಎಂಬ ನಾಮಾಂಕಿತನು ದೇವರಾಜನಾದ ಇಂದ್ರನಾಗಿ ಇರುವನು.

೭೮. ಮುಂದೆ ಹೇಳುವ ಅವರ ಸಂಗಡವಿರುವ ಸಪ್ತರ್ಷಿಗಳ ಹೆಸರುಗಳನ್ನು ಕೇಳಿರಿ. ಕಶ್ಯಪಮುನಿಯ ಪುತ್ರನಾದ ಹವಿಷ್ಮಾನ್, ಮತ್ತು ಭೃಗುಮುನಿಯ ಕುಮಾರನಾದ ವಪುಷ್ಮಾನ್ ಎಂಬುವರು ಸಪ್ತರ್ಷಿಗಳಲ್ಲಿ ಇಬ್ಬರು ವ್ಯಕ್ತಿಗಳಾಗಿ ಇರುವರು.

೭೯ ಅತ್ರಿಮುನಿಯಿಂದ ಜನಿಸಿದ ಆರುಣಿ, ವಸಿಷ್ಠ ಪುತ್ರನಾದ ನಗ, ಅಂಗಿರೋಮುನಿಯಿಂದ ಜನ್ಮವೆತ್ತಿರುವ ಪುಷ್ಟಿ, ಮತ್ತು ಪುಲಸ್ತ್ಯಮುನಿಯ ಪುತ್ರನಾದ ನಿಶ್ಚರ ಎಂಬ ಮುನಿಗಳು ಸಪ್ತರ್ಷಿ ಗಣದಲ್ಲಿ ಸೇರಿದವರಾಗಿರುವರು.

ಪೌಲಹೋ ಹ್ಯತಿತೇಜಾಶ್ಚ ದೇವಾ ಹ್ಯೇಕಾದಶೇಽಂತರೇ ।
ಸರ್ವವೇಗಃ ಸುಧರ್ಮಾ ಚ ದೇವಾನೀಕಃ ಪುರೋವಹಃ ॥ ೮೦ ॥

ಕ್ಷೇಮಧರ್ಮಾ ಗ್ರಹೇಷುಶ್ಚ ಆದರ್ಶಃ ಪೌಂಡ್ರಕೋ ಮರುಃ ।
ಸಾವರ್ಣಸ್ಯ ತು ತೇ ಪುತ್ರಾ ಪ್ರಾಜಾಪತ್ಯಸ್ಯ ವೈ ನವ ॥ ೮೧ ॥

ದ್ವಾದಶೇ ತ್ವಥ ಪರ್ಯಾಯೇ ರುದ್ರಪುತ್ರಸ್ಯ ವೈ ಮನೋಃ ।
ಚತುರ್ಥೋ ರುದ್ರಸಾವರ್ಣೋ ದೇವಾಂಸ್ತಸ್ಯಾಂತರೇ ಶೃಣು ॥ ೮೨ ॥

ಪಂಚೈವ ತು ಗಣಾಃ ಪ್ರೋಕ್ತಾ ದೇವತಾನಾಮನಾಗತಾಃ ।
ಹರಿತಾ ರೋಹಿತಾಶ್ಚೈವ ದೇವಾಃ ಸುಮನಸಸ್ತಥಾ ॥ ೮೩ ॥

ಸುಕರ್ಮಾಣಃ ಸುತಾರಾಶ್ಚ ವಿದ್ವಾಂಶ್ಚೈವ ಸಹಸ್ರದಃ ।
ಪರ್ವತೋಽನುಚರಶ್ಚೈವ ಅಪಾಂಶುಶ್ಚ ಮನೋಜವಃ ॥ ೮೪ ॥

---

೮೦. ಮತ್ತು ಪುಲಹಮುನಿ ಕುಮಾರನಾದ ಅತಿತೇಜಾ ಎಂಬುವರು ಸೇರಿ ಸಪ್ತರ್ಷಿ ಪದವನ್ನು ಅಲಂಕರಿಸುವರು. ಹಾಗೆಯೇ ಹನ್ನೊಂದನೆಯ ಮನ್ವಂತರ ಪರ್ಯಾಯದಲ್ಲಿ ಮುಂದೆ ಹೇಳುವವರು ದೇವತೆಗಳಾಗಿರುವರು. ಸರ್ವವೇಗ, ಸುಧರ್ಮ, ದೇವಾನೀಕ, ಮತ್ತು ಪುರೋವಹ ಎಂಬುವರು ಆ ದೇವ ಗಣದ ವ್ಯಕ್ತಿಗಳಾಗಿರುವರು.

೮೧. ಮತ್ತು ಕ್ಷೇತ್ರಧರ್ಮ, ಗ್ರಹೇಷು, ಆದರ್ಶ, ಪೌಂಡ್ರಕ, ಮರು ಎಂಬುವರು ಸೇರಿ ಒಂಭತ್ತು ಮಂದಿಯು ಪ್ರಜಾಪತಿಯ ಪುತ್ರನಾದ ಸಾವರ್ಣ ಮನುವಿಗೆ ಪುತ್ರರಾಗಿ ಜನಿಸುವರು.

೮೨. ರುದ್ರಪುತ್ರನಾದ ನಾಲ್ಕನೆಯ ಸಾವರ್ಣಿ ಎಂದು ಪ್ರಸಿದ್ಧನಾದ ರುದ್ರಸಾವರ್ಣಿಯ ಮನ್ವಂತರವು ಹನ್ನೆರಡನೆಯ ಪರ್ಯಾಯದಲ್ಲಿ ನಡೆಯುವುದು. ಆ ಮನ್ವಂತರದಲ್ಲಿರುವ ದೇವತೆಗಳನ್ನು ಶ್ರವಣ ಮಾಡಿರಿ.

೮೩. ಆ ಮನ್ವಂತರದಲ್ಲಿ ಭವಿಷ್ಯರಾದ ದೇವತೆಗಳು ಐದು ಗಣಗಳಾಗಿ ಕೀರ್ತಿಸಲ್ಪಟ್ಟಿರುವರು. ಆ ಐದು ಗಣಗಳಲ್ಲಿ ಹರಿತ, ರೋಹಿತ ಮತ್ತು ಸುಮನ ಎಂಬುವು ಮೊದಲನೆಯ ಮೂರು ಗಣಗಳೆಂದು ತಿಳಿಯಬೇಕು.

೮೪. ಮತ್ತೆರಡು ಗಣಗಳು ಸುಕರ್ಮ, ಸುತಾರ ಎಂದು ಸ್ಮರಿಸಲ್ಪಟ್ಟಿವೆ. ಇವುಗಳಲ್ಲಿ ಮೊದಲನೆಯ ಹರಿತ ಎಂಬ ಗಣವಲ್ಲಿ ವಿದ್ವಾನ್, ಸಹಸ್ರದ, ಪರ್ವತ ಅನುಚರ, ಅಪಾಂಶು ಮತ್ತು ಮನೋಜವ ಎಂಬ ಆರು ಮಂದಿಯು ಸೇರಿರುತ್ತಾರೆ.

ಊರ್ಜಾ ಸ್ವಾಹಾ ಸ್ವಧಾ ತಾರಾ ದಶೈತೇ ಹರಿತಾಃ ಸ್ಮೃತಾಃ ।
ತಪೋ ಜ್ಞಾನೀ ಮೃತಿಶ್ಚೈವ ವರ್ಚಾ ಬಂಧುಶ್ಚ ಯಃ ಸ್ಮೃತಃ ॥ ೬೫ ॥

ರಜಶ್ಚೈವ ತು ರಾಜಶ್ಚ ಸ್ವರ್ಣಪಾದಸ್ತಥೈವ ಚ ।
ಪುಷ್ಟಿರ್ವಿಧಿಶ್ಚ ವೈ ದೇವಾ ದಶೈತೇ ರೋಹಿತಾಃ ಸ್ಮೃತಾಃ ॥ ೬೬ ॥

ತುಷಿತಾದ್ಯಾಸ್ತು ಯೇ ದೇವಾಸ್ತ್ರಯಸ್ತ್ರಿಂಶತ್ಪ್ರಕೀರ್ತಿತಾಃ ।
ತೇ ವೈ ಸುಮನಸೋ ಜ್ಞೇಯಾನ್ನಿಬೋಧತ ಸುಕರ್ಮಣಃ ॥ ೬೭ ॥

ಸುಪರ್ವಾ ವೃಷಭಃ ಪೃಷ್ಟಾ ಕಪಿರ್ದ್ಯುಮ್ನವಿಪಶ್ಚಿತಃ ।
ವಿಕ್ರಮಶ್ಚ ಕ್ರಮಶ್ಚೈವ ವಿಭೃತಃ ಕಾಂತ ಏವ ಚ ॥ ೬೮ ॥

ಏತೇ ದೇವಾಃ ಸುಕರ್ಮಾಣಃ ಸುತಾರಾಂಶ್ಚ ನಿಬೋಧತ ।
ವರ್ಷೋ ದಿವ್ಯಸ್ತಥಾಂಜಿಷ್ಠೋ ವರ್ಚಸ್ವೀ ದ್ಯುತಿಮಾನ್ ಕವಿಃ॥ ೬೯ ॥

---

೬೫. ಹಾಗು ಊರ್ಜಾ, ಸ್ವಾಹಾ, ಸ್ವಧಾ ಮತ್ತು ತಾರಾ ಎಂಬ ನಾಲ್ಕು ಮಂದಿಯು ಸೇರಿ ಒಟ್ಟು ಹತ್ತು ಮಂದಿಯು ಹರಿತಗಣವೆಂದು ಸ್ಮರಿಸಲ್ಪಟ್ಟಿರುವರು. ಮುಂದೆ ರೋಹಿತದೇವಗಣವನ್ನು ಕೇಳಿರಿ. ತಪ, ಜ್ಞಾನಿ, ಮೃತಿ, ವರ್ಚ, ಬಂಧು ಎಂಬುವರು ರೋಹಿತಗಣದ ಕೆಲವು ದೇವ ವ್ಯಕ್ತಿಗಳಾಗಿ ಸ್ಮರಿಸಲ್ಪಟ್ಟಿರುವರು.

೬೬. ಮತ್ತೆ ರಜ, ರಾಜ, ಸ್ವರ್ಣಪಾದ, ಪುಷ್ಟಿ ಮತ್ತು ವಿಧಿ ಎಂಬುವರು ಸೇರಿ ಹತ್ತು ಮಂದಿಯು ರೋಹಿತಗಣದ ದೇವತೆಗಳೆಂದು ಸ್ಮರಿಸಲ್ಪಟ್ಟಿರುವರು.

೬೭. ತುಷಿತ ಮೊದಲಾಗಿ ಕೀರ್ತಿಸಲ್ಪಟ್ಟಿರುವ ಮೂವತ್ತುಮೂರು ದೇವತೆಗಳನ್ನು ಸುಮನಸ್ಎಂಬ ನಾಮಾಂಕಿತಗಣಕ್ಕೆ ಸೇರಿದವರೆಂದು ತಿಳಿಯಬೇಕು. ಮುಂದೆ ಸುಕರ್ಮ ಸಂಜ್ಞಾಂಕಿತರಾದ ದೇವತೆಗಳ ಹೆಸರನ್ನು ಕೇಳಿರಿ.

೬೮. ಸುಪರ್ವ, ವೃಷಭ, ಪೃಷ್ಟ, ಕಪಿ, ದ್ಯುಮ್ನ, ವಿಪಶ್ಚಿತ್, ವಿಕ್ರಮ, ಕ್ರಮ, ವಿಭೃತ ಮತ್ತು ಕಾಂತ ಎಂಬುವರು ಹತ್ತು ಮಂದಿ ಸುಕರ್ಮ ಎಂಬ ಗಣದ ದೇವತೆಗಳೆಂದು ಭಾವಿಸಬೇಕು.

೬೯. ಹೀಗೆ ಸುಕರ್ಮಗಣದ ದೇವತೆಗಳು ಹೇಳಲ್ಪಟ್ಟಿರುವರು, ಮುಂದೆ ಸುತಾರ ಗಣದ ದೇವತೆಗಳನ್ನು ಕೇಳಿ ತಿಳಿಯಿರಿ. ವರ್ಷ, ದಿವ್ಯ, ಅಂಜಿಷ್ಠ, ವರ್ಚಸ್ವೀ, ದ್ಯುತಿಮಾನ್ ಮತ್ತು ಕವಿ ಎಂಬುವರು ಈ ಗಣದಲ್ಲಿ ಸೇರಿದ್ದಾರೆ.

ಶುಭೋ ಹವಿಃ ಕೃತಪ್ರಾಪ್ತಿರ್ವ್ಯಾಪೃತೋ ದಶಮಸ್ತಥಾ ॥ ೯೦ ॥
ಸುತಾರಾ ನಾಮತಸ್ತ್ವೇತೇ ದೇವಾ ವೈ ಸಂಪ್ರಕೀರ್ತಿತಾಃ

ತೇಷಾಮಿಂದ್ರಸ್ತು ವಿಜ್ಞೇಯೋ ಋತಧಾಮಾ ಮಹಾಯಶಾಃ ।
ದ್ಯುತಿರ್ವಸಿಷ್ಠಪುತ್ರಸ್ತು ಆತ್ರೇಯಃ ಸುತಪಾಸ್ತಥಾ ॥ ೯೧ ॥

ತಪೋಮೂರ್ತಿಸ್ತ್ವಾಂಗಿರಸಸ್ತಪಸ್ವೀ ಕಾಶ್ಯಪಸ್ತಥಾ ।
ತಪೋಧನಶ್ಚ ಪೌಲಸ್ತ್ಯಃ ಪೌಲಹಶ್ಚ ತಪೋರತಿಃ ॥ ೯೨ ॥

ಭಾರ್ಗವಿಸ್ಸಪ್ತಮಸ್ತೇಷಾಂ ವಿಜ್ಞೇಯಸ್ತು ತಪೋಧೃತಿಃ ।
ಏತೇ ಸಪ್ತರ್ಷಯಃ ಸಿದ್ಧಾ ಅಂತ್ಯೇ ಸಾವರ್ಣಿಕೇಽಂತರೇ ॥ ೯೩ ॥

ದೇವವಾನುಪದೇವಶ್ಚ ದೇವಶ್ರೇಷ್ಠೋ ವಿದೂರಥಃ ।
ಮಿತ್ರವಾನ್ ಮಿತ್ರಸೇನೋಥ ಚಿತ್ರಸೇನೋ ಹ್ಯಮಿತ್ರಹಾ ॥ ೯೪ ॥

---

೯೦. ಹಾಗು ಶುಭ, ಹವಿ, ಕೃತಪ್ರಾಪ್ತಿ, ಮತ್ತು ಹತ್ತನೆಯವನಾಗಿ ವ್ಯಾಪೃತ ಎಂಬುವರು ಆ ಗಣದಲ್ಲಿ ಸೇರಿದ ವ್ಯಕ್ತಿಗಳು. ಇವರು ಸುತಾರ ಎಂಬ ಗಣದ ದೇವತೆಗಳೆಂದು ಕೀರ್ತಿಸಲ್ಪಟ್ಟಿರುವರು.

೯೧. ಮಹಾ ಕೀರ್ತಿಸಂಪನ್ನನಾದ ಋತಧಾಮ ಎಂಬುವನು ಆ ದೇವಗಣಕ್ಕೆ ರಾಜನಾಗುವ ಇಂದ್ರನೆಂದು ತಿಳಿಯಬೇಕು. ಮತ್ತು ವಸಿಷ್ಠ ಮುನಿಕುಮಾರನಾದ ದ್ಯುತಿ, ಅತ್ರಿ ಪುತ್ರನಾದ ಸುತಪ ಎಂಬ ಮುನಿಗಳು ಸಪ್ತರ್ಷಿಗಳಲ್ಲಿ ಸೇರಿದ್ದಾರೆ.

೯೨. ಅಂಗಿರೋ ಮುನಿಯ ಕುಮಾರನಾದ ತಪೋಮೂರ್ತಿ, ಕಶ್ಯಪ ಮುನಿ ಸಂಭೂತನಾದ ತಪಸ್ವಿ, ಪುಲಸ್ತ್ಯ ಕುಮಾರನಾದ ತಪೋಧನ, ಮತ್ತು ಪುಲಹ ಮುನಿಪುತ್ರನಾದ ತಪೋರತಿ ಎಂಬುವರು ಸಪ್ತರ್ಷಿಗಣದಲ್ಲಿ ಪ್ರಕಾಶಿಸುವರು.

೯೩. ಈ ಸಪ್ತರ್ಷಿಗಳಲ್ಲಿ ಭೃಗುಮುನಿಯ ಪುತ್ರನಾದ ತಪೋಧೃತಿ ಎಂಬುವನು ಏಳನೆಯ ಮುನಿ ಎಂದು ತಿಳಿಯಬೇಕು. ಕಡೆಯ ಸಾವರ್ಣಿ ಮನ್ವಂತರಾವಧಿಯಲ್ಲಿ ಇವರು ಸಪ್ತರ್ಷಿಗಳ ಪದವಿಯ ಸಿದ್ಧಿಯುಳ್ಳವರಾಗಿರುವರು.

೯೪. ಹನ್ನೆರಡನೆಯ ಮನುರಾಜನ ಪುತ್ರರಾಗಿ ಜನಿಸುವವರಲ್ಲಿ ದೇವವಾನ್, ಉಪದೇವ, ದೇವಶ್ರೇಷ್ಠ, ವಿದೂರಥ, ಮಿತ್ರವಾನ್, ಮಿತ್ರಸೇನ, ಚಿತ್ರಸೇನ ಮತ್ತು ಅಮಿತ್ರಹ-ಎಂಬುವರು ಕೆಲವರಾಗಿರುವರು.

ಮಿತ್ರಬಾಹುಃ ಸುವರ್ಚಾಶ್ಚ ದ್ವಾದಶಸ್ಯ ಮನೋಃ ಸುತಾಃ ।
ತ್ರಯೋದಶೇ ತು ಪರ್ಯಾಯೇ ಭಾವ್ಯೇ ರೌಚ್ಯೇಽಂತರೇ ಪುನಃ॥ ೯೫ ॥

ತ್ರಯ ಏವ ಗಣಾಃ ಪ್ರೋಕ್ತಾ ದೇವಾನಾಂ ತು ಸ್ವಯಂಭುವಾ ।
ಬ್ರಹ್ಮಣೋ ಮಾನಸಾಃ ಪುತ್ರಾಸ್ತೇ ಹಿ ಸರ್ವೇ ಮಹಾತ್ಮನಃ ॥ ೯೬ ॥

ಸುತ್ರಾಮಾಣಃ ಸುಧರ್ಮಾಣಃ ಸುಕರ್ಮಾಣಶ್ಚ ತೇ ತ್ರಯಃ ।
ತ್ರಿದಶಾನಾಂ ಗಣಾಃ ಪ್ರೋಕ್ತಾ ಭವಿಷ್ಯಾಃ ಸೋಮಪಾಯಿನಾಮ್
॥ ೯೭ ॥

ತ್ರಯಸ್ತ್ರಿಂಶದ್ದೇವತಾಯಾಃ ಪೃಥಗಿಜ್ಯಾಸ್ತು ಯಾಜ್ಞಿಕೈಃ ।
ಆಜ್ಯೇನ ಪೃಷದಾಜ್ಯೇನ ಗ್ರಹಶ್ರೇಷ್ಠೇನ ಚೈವ ಹ ॥ ೯೮ ॥

ಯೇ ವೈ ದೇವಾಸ್ತ್ರಯಸ್ತ್ರಿಂಶತ್ ಪೃಥಕ್ತ್ವೇನ ನಿಬೋಧತ ।
ಸುತ್ರಾಮಾಣಃ ಪ್ರಯಾಜ್ಯಾಸ್ತು ಆಜ್ಯಾಶಾ ಯೇ ತು ಸಾಂಪ್ರತಮ್
॥ ೯೯ ॥

---

೯೫. ಹಾಗು ಮಿತ್ರಬಾಹು, ಸುವರ್ಚ ಎಂಬುವರು ಸೇರಿ ಹತ್ತು ಮಂದಿಯು ಹನ್ನೆರಡನೆಯ ಮನುರಾಜನ ಪುತ್ರರಾಗಿ ಜನಿಸುವರು, ಮುಂದೆ ಹದಿಮೂರನೆಯ ಪರ್ಯಾಯದಲ್ಲಿ ಮತ್ತೆ ರೌಚ್ಯಮನ್ವಂತರವು ನಡೆಯುವುದು.

೯೬. ಆಗ ದೇವತೆಗಳ ಗಣಗಳು ಮೂರು ಇರುವುವೆಂದು ಬ್ರಹ್ಮದೇವನಿಂದ ಹೇಳಲ್ಪಟ್ಟಿವೆ. ಅವರೆಲ್ಲರೂ ಮಹಾತ್ಮನಾದ ಬ್ರಹ್ಮದೇವನಿಂದ ಮಾನಸಪುತ್ರರಾಗಿ ಜನಿಸುವರು.

೯೭. ಸೋಮಯಾಗದಲ್ಲಿ ಸೋಮರಸಹವಿಸ್ಸನ್ನು ಪಾನಮಾಡುವ ಆ ದೇವತೆಗಳು ಸುತ್ರಾಮ, ಸುಧರ್ಮ, ಮತ್ತು ಸುಕರ್ಮ ಎಂದು ಮೂರು ಗಣಗಳ ರೂಪದಿಂದ ಇರುವರೆಂದು ಕೀರ್ತಿಸಲ್ಪಟ್ಟಿರುವರು.

೯೮. ಯಜ್ಞಕರ್ಮತತ್ಪರರಿಂದ ಆಜ್ಯ, ದಧಿಮಿಶ್ರ ಆಜ್ಯ ಮತ್ತು ಶ್ರೇಷ್ಠವಾದ ಗ್ರಹಪಾತ್ರದಲ್ಲಿ ಧರಿಸಿದ ಸೋಮರಸ ಇವುಗಳಿಂದ ಪ್ರತ್ಯೇಕವಾಗಿ ಯಜ್ಞರೂಪದಿಂದ ಪೂಜಿಸಲ್ಪಡುವ ಮೂವತ್ತಮೂರು ದೇವತೆಗಳು ಇರುವರು.

೯೯. ಆ ಮೂವತ್ತಮೂರು ದೇವತೆಗಳು ಬೇರೆ ಬೇರೆಯಾದ ನಾಮ–ಹವಿರ್ಭಾಗಗಳಿಂದ ಕೂಡಿರುವುದನ್ನು ಕೇಳಿರಿ. ಇವರಲ್ಲಿ ಆಜ್ಯ ಹವಿಸ್ಸನ್ನು ಭುಂಜಿಸುವ ಮತ್ತು ಪ್ರಯಾಜ ಎಂಬ ಯಜ್ಞಕರ್ಮದಲ್ಲಿ ಆರಾಧಿಸಲ್ಪಡುವ ದೇವತೆಗಳು ಸುತ್ರಾಮ ಎಂಬ ಸಂಜ್ಞಾಂಕಿತರಾಗಿರುವರು.

ಸುಕರ್ಮಾಣೋऽನುಯಾಜ್ಯಾಖ್ಯಾಃ ಪೃಷದಾಜ್ಯಾಶಿನಸ್ತು ಯೇ ।
ಉಪಯಾಜ್ಯಾಃ ಸುಧರ್ಮಾಣ ಇತಿ ದೇವಾಃ ಪ್ರಕೀರ್ತಿತಾಃ ॥ ೧೦೦ ॥

ದಿವಸ್ಪತಿರ್ಮಹಾಸತ್ತ್ವಸ್ತೇಷಾಮಿಂದ್ರೋ ಭವಿಷ್ಯತಿ ।
ಪುಲಹಾತ್ಮಜಪುತ್ರಾಸ್ತೇ ವಿಜ್ಞೇಯಾಸ್ತು ರುಚೇಃ ಸುತಾಃ ॥ ೧೦೧ ॥

ಅಂಗಿರಾಶ್ಚೈವ ಧೃತಿಮಾನ್ ಪೌಲಸ್ತ್ಯೋऽವ್ಯಯಸ್ತು ಸಃ
ಪೌಲಹಸ್ತತ್ತ್ವದರ್ಶೀ ಭಾರ್ಗವಶ್ಚ ನಿರುತ್ಸುಕಃ ॥ ೧೦೨ ॥

ನಿಷ್ಪ್ರಕಂಪ್ಯಸ್ತಥಾತ್ರೇಯೋ ನಿರ್ಮೋಹಃ ಕಾಶ್ಯಪಸ್ತಥಾ ।
ಸುತಪಾಶ್ಚೈವ ವಾಸಿಷ್ಠ ಸಪ್ತ ತೇ ತು ತ್ರಯೋದಶ ॥ ೧೦೩ ॥

ಚಿತ್ರಸೇನೋ ವಿಚಿತ್ರಶ್ಚ ನಯೋ ಧರ್ಮೋ ಧೃತೋ ಭವಃ ।
ಅನೇಕಃ ಕ್ಷತ್ರವೃದ್ಧಶ್ಚ ಸುರಸೋ ನಿರ್ಭಯೋ ದಶ ॥ ೧೦೪ ॥

---

೧೦೦. ದಧಿಮಿಶ್ರವಾದ ಆಜ್ಯ ಅಥವಾ ಪೃಷದಾಜ್ಯವನ್ನು ಭುಂಜಿಸುವ ದೇವತೆಗಳು ಅನುಯಾಜ ದೇವತೆಗಳಾದ್ದರಿಂದ ಅನುಯಾಜ್ಯ ಎಂಬ ನಾಮಾಂಕಿತರೂ ಸುಕರ್ಮಗಣಾಂತರ್ಗತರೂ ಆಗಿದ್ದಾರೆ. ಮೂರನೆಯ ಗಣದೇತೆಗಳು ಉಪಯಾಜ್ಯ ಮತ್ತು ಸುಧರ್ಮ ಎಂಬ ನಾಮಾಂಕಿತರಾಗಿರುವರು.

೧೦೧. ಮಹಾಶಕ್ತಿಸಂಪನ್ನನಾದ ದಿವಸ್ಪತಿಯು ಆ ದೇವಗಣಕ್ಕೆ ಇಂದ್ರನಾಗುವನು. ಪುಲಹಪುತ್ರನಾದ ರುಚಿಪ್ರಜಾಪತಿಯ ಪುತ್ರರಾಗಿ ಆ ದೇವವ್ಯಕ್ತಿಗಳು ಜನಿಸಿರುವರೆಂದು ತಿಳಿಯಬೇಕು.

೧೦೨. ಹದಿಮೂರನೆಯ ಮನ್ವಂತರದ ಪರ್ಯಾಯದಲ್ಲಿ ಅಂಗಿರೋಮುನಿಯ ಕುಮಾರನಾದ ಧೃತಿಮಾನ್, ಪುಲಸ್ತ್ಯ ಪುತ್ರನಾದ ಅವ್ಯಯ, ಪುಲಹಕುಮಾರನಾದ ತತ್ತ್ವದರ್ಶಿ ಮತ್ತು ಭೃಗುಮುನಿಯ ಸುತನಾದ ನಿರುತ್ಸುಕ—ಎಂಬುವರು ಸಪ್ತರ್ಷಿಗಳಲ್ಲಿ ಕೆಲವರಾಗಿರುವರು.

೧೦೩. ಹಾಗು ಅತ್ರಿಮುನಿ ಕುಮಾರನಾದ ನಿಷ್ಪ್ರಕಂಪ್ಯ, ಕಶ್ಯಪ ಮುನಿಸಂಭೂತನಾದ ನಿರ್ಮೋಹ ಮತ್ತು ವಸಿಷ್ಠ ಮುನಿ ಸುತನಾದ ಸುತಪ ಎಂಬ ಏಳು ಮಂದಿಯು ಹದಿಮೂರನೆಯ ಮನ್ವಂತರ ಪರ್ಯಾಯದಲ್ಲಿರುವ ಸಪ್ತರ್ಷಿಗಳು.

೧೦೪. ಚಿತ್ರಸೇನ, ವಿಚಿತ್ರ, ನಯ, ಧರ್ಮ, ಧೃತ, ಭವ, ಅನೇಕ, ಕ್ಷತ್ರವೃದ್ಧ, ಸುರಸ ಮತ್ತು ನಿರ್ಭಯ ಎಂಬುವರು ಹತ್ತು ಮಂದಿಯು ರೌಚ್ಯ ಎಂಬ ಮನು ರಾಜನ ಪುತ್ರರಾಗಿರುವರು.

ರೌಚ್ಯಸ್ಯೈತೇ ಮನೋಃ ಪುತ್ರಾ ಹ್ಯಂತರೇ ತು ತ್ರಯೋದಶೇ ।
ಚತುರ್ದಶೇ ತು ಪರ್ಯಾಯೇ ಭೌತ್ಯಸ್ಯಾಪ್ಯಂತರೇ ಮನೋಃ॥ ೧೦೫ ॥

ದೇವತಾನಾಂ ಗಣಾಃ ಪಂಚ ಪ್ರೋಕ್ತಾ ಯೇ ತು ಭವಿಷ್ಯತಿ ।
ಚಾಕ್ಷುಷಾಶ್ಚ ಪವಿತ್ರಾಶ್ಚ ಕನಿಷ್ಠಾ ಭ್ರಾಜಿತಾಸ್ತಥಾ ॥ ೧೦೬ ॥

ವಾಚಾವೃದ್ಧಾಶ್ಚ ಇತ್ಯೇತೇ ಪಂಚ ದೇವಗಣಾಃ ಸ್ಮೃತಾಃ ।
ನಿಷಾದಾದ್ಯಾಃ ಸ್ವರಾಃ ಸಪ್ತ ಸಪ್ತ ತಾನ್ ವಿದ್ಧಿ ಚಾಕ್ಷುಷಾನ್॥ ೧೦೭ ॥

ಬೃಹದಾದ್ಯಾನಿ ಸಾಮಾನಿ ಕನಿಷ್ಠಾನ್ ಸಪ್ತ ತಾನ್ ವಿದುಃ ।
ಸಪ್ತ ಲೋಕಾಃ ಪವಿತ್ರಾಸ್ತೇ ಭ್ರಾಜಿತಾಃ ಸಪ್ತಸಿಂಧವಃ ॥ ೧೦೮ ॥

ವಾಚಾವೃದ್ಧಾನೃಷೀನ್ ವಿದ್ಧಿ ಮನೋಃ ಸ್ವಾಯಂಭುವಸ್ಯ ಯೇ ।
ಸರ್ವೇ ಮನ್ವಂತರೇಂದ್ರಾಶ್ಚ ವಿಜ್ಞೇಯಾಸ್ತುಲ್ಯಲಕ್ಷಣಾಃ ॥ ೧೦೯ ॥

---

೧೦೫. ಹದಿಮೂರನೆಯ ಪರ್ಯಾಯದ ಮನ್ವಂತರದಲ್ಲಿ ರೌಚ್ಯಮನುವಿನ ಪುತ್ರರಾಗಿ ಹಿಂದೆ ಹೇಳಿರುವ ಹತ್ತು ಮಂದಿ ಜನಿಸುವರು. ಭೌತ್ಯ ಎಂಬ ಮನುವಿವಿನಿಂದ ಹದಿನಾಲ್ಕನೆಯ ಪರ್ಯಾಯದ ಮನ್ವಂತರವು ನಡೆಯುವುದು.

೧೦೬. ಆ ಮನ್ವಂತರದಲ್ಲಿ ಐದು ದೇವತಾಗಣಗಳು ಸಂಭವಿಸುವುವೆಂದು ಹೇಳಲ್ಪಟ್ಟಿದೆ. ಅವುಗಳಲ್ಲಿ ಮೊದಲನೆಯ ನಾಲ್ಕು ಗಣಗಳು ಚಾಕ್ಷುಷ, ಪವಿತ್ರ, ಕನಿಷ್ಠ ಮತ್ತು ಭ್ರಾಜಿತ ಎಂಬ ನಾಮ ಪ್ರಸಿದ್ಧಿಯನ್ನು ಹೊಂದಿರುವುವು.

೧೦೭. ಮತ್ತು ವಾಚಾವೃದ್ಧ ಎಂಬ ನಾಮಾಂಕಿತವಾದ ಗಣವು ಸೇರಿ ಇವು ಐದು ದೇವಗಣಗಳು ಸ್ಮರಿಸಲ್ಪಟ್ಟಿವೆ. ನಿಷಾದ ಮುಂತಾದ ಸಪ್ತಸ್ವರಗಳನ್ನು ಮೊದಲನೆಯ ಚಾಕ್ಷುಷಗಣದ ಸಪ್ತದೇವತೆಗಳನ್ನಾಗಿ ತಿಳಿಯಿರಿ.

೧೦೮. ಹಾಗು ಬೃಹತ್ಸಾಮ ಮುಂತಾದ ಸಪ್ತಸಾಮಗಳನ್ನು ಕನಿಷ್ಠ ಎಂಬ ನಾಮಾಂಕಿತರಾದ ಸಪ್ತದೇವತೆಗಳನ್ನಾಗಿ ತಿಳಿದಿರುವರು. ಮತ್ತು ಸಪ್ತಲೋಕಗಳು ಪವಿತ್ರನಾಮಾಂಕಿತರಾದ ಸಪ್ತದೇವತೆಗಳೂ ಸಪ್ತಸಮುದ್ರಗಳು ಭ್ರಾಜಿತ ಸಂಜ್ಞೆಯಿಂದ ಕೂಡಿದ ಸಪ್ತ ದೇವತೆಗಳೂ ಆಗಿರುವರು.

೧೦೯. ಸ್ವಾಯಂಭುವ ಮನುಪುತ್ರರಾಗಿರುವ ಋಷಿಗಳನ್ನು ವಾಚಾವೃದ್ಧ ಎಂದು ಪ್ರಸಿದ್ಧರಾದ ದೇವತೆಗಳೆಂದು ತಿಳಿಯಿರಿ. ಹೀಗೆ ಎಲ್ಲ ಮನ್ವಂತರಾಧಿಪತಿಗಳು ಸಮಾನವಾದ ಲಕ್ಷಣವುಳ್ಳವರೆಂದು ತಿಳಿಯಬೇಕು.

ತೇಜಸಾ ತಪಸಾ ಬುದ್ಧ್ಯಾ ಬಲಶ್ರುತಪರಾಕ್ರಮೈಃ ।
ತ್ರೈಲೋಕ್ಯೇ ಯಾನಿ ಸತ್ತ್ವಾನಿ ಗತಿಮಂತಿ ಧ್ರುವಾಣಿ ಚ ॥ ೧೧೦ ॥

ಸರ್ವಶಃ ಸ್ವೈರ್ಗುಣೈಸ್ತಾನಿ ಇಂದ್ರಾಸ್ತೇಽಭಿಭವಂತಿ ವೈ ।
ಭೂತಾಪವಾದಿನೋ ಹೃಷ್ಟಾ ಮಧ್ಯಸ್ಥಾ ಭೂತವಾದಿನಃ ॥ ೧೧೧ ॥

ಭೂತಾಪವಾದಿನಃ ಶಕ್ತಾಸ್ತ್ರಯೋ ವೇದಾಃ ಪ್ರವಾದಿನಾಮ್
ಆಗ್ನೀಧ್ರಃ ಕಾಶ್ಯಪಶ್ಚೈವ ಪೌಲಸ್ತ್ಯೋ ಮಾಗಧಶ್ಚ ಯಃ ॥ ೧೧೨ ॥

ಭಾರ್ಗವೋ ಹ್ಯಗ್ನಿಬಾಹುಶ್ಚ ಶುಚಿರಾಂಗಿರಸಸ್ತಥಾ ।
ಶುಕ್ರಶ್ಚೈವ ತು ವಾಸಿಷ್ಠಃ ಪೌಲಹೋ ಮುಕ್ತ ಏವ ಚ ॥ ೧೧೩ ॥

ಆತ್ರೇಯಃ ಶ್ವಾಜಿತಃ ಪ್ರೋಕ್ತೋ ಮನುಪುತ್ರಾನತಃ ಶೃಣು ।
ಉರುರ್ಗುರುಶ್ಚ ಗಂಭೀರೋ ಬದ್ಧಃ ಶುದ್ಧಃ ಶುಚಿಃ ಕೃತೀ ॥ ೧೧೪ ॥

---

೧೧೦. ಎಲ್ಲ ಮನ್ವಂತರಾಧಿಪರು ತೇಜಸ್ಸು, ಬುದ್ಧಿ, ಬಲ, ವೇದಾರ್ಥಪರಿಜ್ಞಾನ ಮತ್ತು ಪರಾಕ್ರಮ-ಮುಂತಾದ ಗುಣಗಳಲ್ಲಿ ತುಲ್ಯರಾಗಿರುವರು. ಈ ತ್ರಿಲೋಕಗಳಲ್ಲಿ ಕೆಲವು ಪ್ರಾಣಿಗಳು ಜಂಗಮವಾಗಿಯೂ ಮತ್ತೆ ಕೆಲವು ಸ್ಥಾವರವಾಗಿಯೂ ಇರುತ್ತವೆ.

೧೧೧. ಆದರೆ ಆಯಾಯ ಮನ್ವಂತರೇಂದ್ರರು ತಮ್ಮ ಗುಣವಿಶೇಷಗಳಿಂದ ಅವೆಲ್ಲವನ್ನೂ ತಿರಸ್ಕರಿಸಿರುವರು, ಮತ್ತು ಭೂತಾಪವಾದಿ, ಹೃಷ್ಟ, ಮಧ್ಯಸ್ಥ, ಭೂತವಾದಿ ಎಂಬುದಾಗಿ ದೇವಗಣಗಳು ಪ್ರಸಿದ್ಧಿ ಹೊಂದಿರುವುವು.

೧೧೨. ವೇದಾಧ್ಯಯನಗಳಲ್ಲಿ ಪ್ರಸಿದ್ಧವಾದ ಮೂರು ವೇದಗಳು ಭೂತಾಪವಾದಿ ಎಂಬ ದೇವಗಣವೆಂದು ಹೇಳಲು ಶಕ್ತವಾಗಿವೆ. ಮುಂದೆ ಸಪ್ತರ್ಷಿಗಳನ್ನು ಈ ರೀತಿಯಾಗಿ ಅರಿಯಬೇಕು :—ಕಶ್ಯಪ ಮುನಿಯ ಪುತ್ರನಾದ ಆಗ್ನೀಧ್ರ, ಪುಲಸ್ತ್ಯ ಮುನಿ ಕುಮಾರನಾದ ಮಾಗಧ ಎಂಬುವರು ಸಪ್ತರ್ಷಿಗಳಲ್ಲಿ ಸೇರಿದ ಇಬ್ಬರು ಮುನಿಗಳಾಗಿರುವರು.

೧೧೩. ಮತ್ತು ಭೃಗುಮುನಿಯ ಪುತ್ರನಾದ ಅಗ್ನಿಬಾಹು, ಅಂಗಿರೋ ಮುನಿಯ ಕುಮಾರನಾದ ಶುಚಿ, ವಸಿಷ್ಠ ಪುತ್ರನಾದ ಶುಕ್ರ, ಮತ್ತು ಪುಲಹ ಮುನಿಕುಮಾರನಾದ ಮುಕ್ತ ಎಂಬುವರು ಮತ್ತೆ ನಾಲ್ಕು ಮಂದಿ ಸಪ್ತರ್ಷಿವೃಂದದ ಮುನಿಗಳಾಗಿ ಇರುವರು.

೧೧೪. ಹಾಗೆ ಅತ್ರಿಮುನಿಕುಮಾರನಾದ ಶ್ವಾಜಿತ ಎಂಬ ಮುನಿಯು ಸಪ್ತಮ ಋಷಿ ಎಂದು ಹೇಳಲ್ಪಟ್ಟಿರುವನು. ಮುಂದೆ ಮನುರಾಜನ ಪುತ್ರರನ್ನು ಶ್ರವಣ

ಊರ್ಜಸ್ವೀ ಸುಬಲಶ್ಚೈವ ಭೌತ್ಯಸ್ಯೈತೇ ಮನೋಃ ಸುತಾಃ ।
ಸಾವರ್ಣಾ ಮನವ್ರೋ ಹ್ಯೇತೇ ಚತ್ವಾರೋ ಬ್ರಹ್ಮಣಃ ಸುತಾಃ॥ ೧೧೫ ॥

ಏಕೋ ವೈವಸ್ವತಶ್ಚೈವ ಸಾವರ್ಣೋ ಮನುರುಚ್ಯತೇ ।
ರೌಚ್ಯೋ ಭೌತ್ಯಶ್ಚ ಯೌ ತೌ ತು ಸುತೌ ಪೌಲಹಭಾರ್ಗವೌ॥ ೧೧೬ ॥

ಭೌತ್ಯಸ್ಯೈವಾಧಿಪತ್ಯೇ ತು ತೂರ್ಣಂ ಕಲ್ಪಸ್ತು ಪೂರ್ಯತೇ ।
ಸೂತ ಉವಾಚ :—
ನಿಶ್ಶೇಷೇಷು ತು ಸರ್ವೇಷು ತದಾ ಮನ್ವಂತರೇಷ್ವಿಹ ॥ ೧೧೭ ॥

ಅಂತೇಽನೇಕಯುಗೇ ತಸ್ಮಿನ್ ಕ್ಷೀಣೇ ಸಂಹಾರ ಉಚ್ಯತೇ ।
ಸಪ್ತೈತೇ ಭಾರ್ಗವಾ ದೇವಾ ಅಂತೇ ಮನ್ವಂತರೇ ತದಾ ॥ ೧೧೮ ॥

ಭುಕ್ತ್ವಾ ತ್ರೈಲೋಕ್ಯಮಧ್ಯಸ್ಥಾ ಯುಗಾಖ್ಯಾ ಹ್ಯೇಕಸಪ್ತತೀಃ ।
ಪಿತೃಭಿರ್ಮನುಭಿಃ ಸಾರ್ಧಂ ಕ್ಷೀಣೇ ಮನ್ವಂತರೇ ತದಾ ॥ ೧೧೯ ॥

---

ಮಾಡಿರಿ, ಉರು, ಗುರು, ಗಂಭೀರ, ಬುದ್ಧಃ, ಶುದ್ಧ, ಶುಚಿ, ಕೃತಿ-ಎಂಬುವರು ಏಳು ಮಂದಿಯು ಮನುಪುತ್ರರಲ್ಲಿ ಸೇರಿರುವರು.

೧೧೫. ಮತ್ತು ಊರ್ಜಸ್ವಿ, ಸುಬಲ ಎಂಬುವರು ಸೇರಿ ಒಂಭತ್ತು ಮಂದಿಯು ಭೌತ್ಯಮನುವಿನ ಪುತ್ರರಾಗಿರುವರುವರು. ಸಾವರ್ಣ ಎಂಬ ನಾಲ್ಕು ಮಂದಿ ಮನುಗಳು ಬ್ರಹ್ಮನ ಪುತ್ರರಾಗಿರುವರು.

೧೧೬. ಒಬ್ಬ ಸಾವರ್ಣ ಮನುವು ಸೂರ್ಯನ ಪುತ್ರನಾಗಿರುವನೆಂದು ಹೇಳಲ್ಪಡುತ್ತಾನೆ. ರೌಚ್ಯ ಮತ್ತು ಭೌತ್ಯ ಎಂಬ ಇಬ್ಬರು ಮನುಗಳು ಪುಲಹ ಮತ್ತು ಭೃಗುಮುನಿಗಳ ಪುತ್ರರಾಗಿರುರುವರು.

೧೧೭. ಇವರಲ್ಲಿ ಭೌತ್ಯಮುನಿಯ ಅಧಿಕಾರಾವಧಿಯಲ್ಲಿ ಒಂದು ಕಲ್ಪವು ಪೂರ್ತಿಯಾಗುವುದು. ಸೂತಮುನಿಯು ಮುಂದೆ ಈ ರೀತಿಯಾಗಿ ಹೇಳಿದನು. ಆಗ ಎಲ್ಲ ಮನ್ವಂತರಗಳು ನಿಶ್ಶೇಷವಾಗಿ ಸಮಾಪ್ತಿ ಹೊಂದುವುವು.

೧೧೮. ಅನೇಕ ಯುಗ ಪರ್ಯಾಯಗಳು ಕ್ಷಯಿಸಿ ಅವಸಾನ ಹೊಂದಲು ಕಲ್ಪದ ಸಂಹಾರವೆಂದು ಕರೆಯಲ್ಪಡುವುದು, ಆಗ ಹಿಂದೆ ಹೇಳಿದ ಭೃಗು ಕುಲದಲ್ಲಿ ಜನಿಸಿದ ಏಳು ಮಂದಿ ದೇವತೆಗಳು ಮನ್ವಂತರದ ಅಂತರದವರೆಗೆ ಇರುವರು.

೧೧೯. ಅವರು ತ್ರಿಲೋಕ ಮಧ್ಯದಲ್ಲಿ ಇದ್ದು ಎಪ್ಪತ್ತೊಂದು ದಿವ್ಯ ಯುಗ ಪರಿವೃತ್ತಿಯ ಕಾಲದ ಮನ್ವಂತರವು ಕ್ಷಯಿಸುವವರೆಗೆ ಪಿತೃದೇವತೆ ಮತ್ತು ಮನುಗಳೊಡನೆ ಸುಖವನ್ನು ಅನುಭವಿಸುವರು.

ಅನಾಧಾರಮಿದಂ ಸರ್ವಂ ತ್ರೈಲೋಕ್ಯಂ ವೈ ಭವಿಷ್ಯತಿ ।
ತತಃ ಸ್ಥಾನಾನಿ ಶುಭ್ರಾಣಿ ಸ್ಥಾನಿನಾಂ ತಾನಿ ವೈ ತದಾ ॥ ೧೨೦ ॥

ಪ್ರಭ್ರಶ್ಯಂತೇ ವಿಮುಕ್ತಾನಿ ತಾರಾ ಋಕ್ಷಗ್ರಹೈಸ್ತಥಾ ।
ತತಸ್ತೇಷು ವ್ಯತೀತೇಷು ತ್ರೈಲೋಕ್ಯಸ್ಯೇಶ್ವರೇಷ್ವಿಹ ॥ ೧೨೧ ॥

ಸಂಪ್ರಾಪ್ತೇಷು ಮಹರ್ಲೋಕಂ ಯಸ್ಮಿಂಸ್ತೇ ಕಲ್ಪವಾಸಿನಃ ।
ಅಜಿತಾದ್ಯಾ ಗಣಾ ಯತ್ರ ಆಯುಷ್ಮಂತಶ್ಚತುರ್ದಶ ॥ ೧೨೨ ॥

ಮನ್ವಂತರೇಷು ಸರ್ವೇಷು ದೇವಾಸ್ತೆ ವೈ ಚತುರ್ದಶ ।
ಸಶರೀರಾಶ್ಚ ಶ್ರೂಯಂತೇ ಜನಲೋಕೇ ಸಹಾನುಗಾಃ ॥ ೧೨೩ ॥

ಏವಂ ದೇವೇಷ್ವತೀತೇಷು ಮಹರ್ಲೋಕಾಜ್ಜನಂ ಪ್ರತಿ ।
ಭೂತಾದಿಷ್ವವಶಿಷ್ಟೇಷು ಸ್ಥಾವರಾಂತೇಷು ತೇಷು ವೈ ॥ ೧೨೪ ॥

---

೧೨೦. ಆ ಅವಸಾನದಲ್ಲಿ ಎಲ್ಲ ಮೂರು ಲೋಕಗಳು ನಿರಾಧಾರ ಸ್ಥಿತಿಯನ್ನು ಹೊಂದುವುವು. ಆಗ ಸ್ಥಾನಾಭಿಮಾನಿಗಳಿಗೆ ಸ್ಥಾನವಾಗಿ ಕಲ್ಪಿಸಲ್ಪಟ್ಟಿರುವ ಶುದ್ಧವಾದ ತೇಜೋರೂಪಸ್ಥಾನಗಳು ಚ್ಯುತಿಯನ್ನು ಹೊಂದುವುವು.

೧೨೧. ಆಗ ಅಶ್ವಿನೀ ಮುಂತಾದ ನಕ್ಷತ್ರಗಳು, ಗ್ರಹಗಳು ಮತ್ತು ಇತರ ತಾರಕೆಗಳ ಸ್ಥಾನಗಳು ಭ್ರಂಶ ಹೊಂದುತ್ತವೆ. ಹಾಗೆ ತ್ರಿಲೋಕದ ಈಶ್ವರರೆನಿಸಿ ಇರುವವರು ಅತೀತರಾಗುವರು.

೧೨೨. ಆಗ ಅವರು ಮಹರ್ಲೋಕವನ್ನು ಹೊಂದುವರು. ಆ ಮಹರ್ಲೋಕದಲ್ಲಿ ಅಜಿತ ಮುಂತಾದ ಆಯುಷ್ಮಂತರಾದ ಹದಿನಾಲ್ಕು ಮಂದಿ ದೇವಗಣಗಳು ಆ ಕಲ್ಪ ಸಮಯದಲ್ಲಿ ವಾಸಮಾಡುತ್ತಲಿರುವರು.

೧೨೩. ಎಲ್ಲ ಮನ್ವಂತರಗಳಲ್ಲಿಯು ಹದಿನಾಲ್ಕು ದೇವಗಣವು ತಮ್ಮ ಅನುಚರರೊಡನೆ ಶರೀರಸಹಿತರಾಗಿ ಜನಲೋಕದಲ್ಲಿ ವಾಸಮಾಡುತ್ತಲಿರುವರೆಂದು ಪ್ರಾಜ್ಞರ ವಚನವು ಕೇಳಲ್ಪಡುತ್ತಿದೆ.

೧೨೪. ಈ ರೀತಿಯಾಗಿ ದೇವತೆಗಳು ಮಹರ್ಲೋಕದಿಂದ ಜನೋಲೋಕಕ್ಕೆ ತೆರಳಲಾಗಿ ಸ್ಥಾವರಾಂಶವಾದ ಭೂತಾದಿಗಳು ಮಾತ್ರ ಅವಶಿಷ್ಟಗಳಾಗಿರುವುವು.

ಶೂನ್ಯೇಷು ಲೋಕಸ್ಥಾನೇಷು ಮಹಾಂತೇಷು ಭುವಾದಿಷು ।
ದೇವೇಷು ಚ ಗತೇಷೂರ್ಧ್ವಂ ಸಾಯುಜ್ಯಂ ಕಲ್ಪವಾಸಿನಾಮ್
|| ೧೨೫ ||

ಸಂಹೃತ್ಯ ತಾಂಸ್ತತೋ ಬ್ರಹ್ಮಾ ದೇವರ್ಷಿಪಿತೃದಾನವಾನ್ ।
ಸಂಸ್ಥಾಪಯತಿ ವೈ ಸರ್ಗಮಹರ್ದೃಷ್ಟ್ವಾ ಯುಗಕ್ಷಯೇ || ೧೨೬ ||

ಚತುರ್ಯುಗಸಹಸ್ರಾಂತಮಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ || ೧೨೭ ||

ನೈಮಿತ್ತಿಕಃ ಪ್ರಾಕೃತಿಕೋ ಯಶ್ಚೈವಾತ್ಯಂತಿಕೋಽರ್ಥತಃ ।
ತ್ರಿವಿಧಃ ಸರ್ವಭೂತಾನಾಮಿತ್ಯೇಷ ಪ್ರತಿಸಂಚರಃ || ೧೨೮ ||

ಬ್ರಾಹ್ಮೋ ನೈಮಿತ್ತಿಕಸ್ತಸ್ಯ ಕಲ್ಪದಾಹಃ ಪ್ರಸಂಯಮಃ ।
ಪ್ರತಿಸರ್ಗೇ ತು ಭೂತಾನಾಂ ಪ್ರಾಕೃತಃ ಕರಣಕ್ಷಯಃ || ೧೨೯ ||

---

೧೨೫. ಆಗ ಭೂಲೋಕದ ಮೊದಲಾಗಿ ಮಹಲೋಕ ಪರ್ಯಂತವಾದ ಸರ್ವ ಲೋಕ ಸ್ಥಾನಗಳು ಶೂನ್ಯವಾಗಿ ದೇವತೆಗಳು ಕಲ್ಪವಾಸಿ ದೇವತೆಗಳ ಸಾಯುಜ್ಯ ಪ್ರಾಪ್ತಿಗೆ ಊರ್ಧ್ವಲೋಕಕ್ಕೆ ತೆರಳುವರು.

೧೨೬. ತರುವಾಯ ಬ್ರಹ್ಮದೇವನು ತನ್ನ ದಿನ ರೂಪವಾದ ಯುಗವು ಕ್ಷಯಿಸಿ ಹೋದುದನ್ನು ನೋಡಿ ಋಷಿ-ಪಿತೃ-ದಾನವರನ್ನು ಸಂಹರಿಸಿ ಆಸರ್ಗದ ಕ್ರಮವನ್ನು ಪೂರ್ತಿಗೊಳಿಸುವನು.

೧೨೭. ಬ್ರಹ್ಮನ ಅಹೋರಾತ್ರ ಪರಿಮಾಣವನ್ನು ಅರಿತ ಜನಗಳು ಒಂದು ಸಹಸ್ರ ಚತುರ್ಯುಗಗಳ ಪರ್ಯಾಯವನ್ನು ಬ್ರಹ್ಮನ ಅಹಃಪರಿಮಾಣವೆಂದೂ ಅದರಂತೆ ಚತುರ್ಯುಗ ಸಹಸ್ರಗಳ ಪರ್ಯಾಯವನ್ನು ಬ್ರಹ್ಮನ ರಾತ್ರಿ ಪರಿ ಮಾಣಮವೆಂದೂ ಹೇಳುವರು.

೧೨೮. ನೈಮಿತ್ತಿಕ, ಪ್ರಾಕೃತಿಕ, ಮತ್ತು ಆತ್ಯಂತಿಕ-ಎಂದು ಸಮಸ್ತ ಭೂತ ಗಳಿಗೆ ಆಯಾಯ ನಿಮಿತ್ತ-ಪ್ರಯೋಜನಾನುಸಾರಿಯಾಗಿ ಸಂಭವಿಸುವ ಲಯಗಳು ಮೂರು ವಿಧಗಳನ್ನು ಹೊಂದಿರುವುವು.

೧೨೯. ಬ್ರಹ್ಮನ ದಿನಾವಸಾನದಲ್ಲಿ ತನ್ನ ಸಂಯಮದಿಂದ ಆಗುವ ಕಲ್ಪಾವ ಸಾನವು ನೈಮಿತ್ತಿಕ ಪ್ರಲಯವು, ಕಾರ್ಯಭೂತಗಳಿಗೆ ಕಾರಣದಲ್ಲಿ ಸಂಭವಿಸುವ ಪ್ರಲಯವು ಪ್ರಾಕೃತ ಪ್ರಲಯವು.

ಜ್ಞಾನಾದಾತ್ಯಂತಿಕಃ ಪ್ರೋಕ್ತಃ ಕಾರಣಾನಾಮಸಂಭವಃ ।
ತತಃ ಸಂಹೃತ್ಯ ತಾನ್ ಬ್ರಹ್ಮಾ ದೇವಾಂಸ್ತ್ರೈಲೋಕ್ಯವಾಸಿನಃ ॥ ೧೩೦ ॥

ಪ್ರಹರಾಂತೇ ಪ್ರಕುರುತೇ ಸರ್ಗಸ್ಯ ಪ್ರಲಯಂ ಪುನಃ ।
ಸುಷುಪ್ಸುರ್ಭಗವಾನ್ ಬ್ರಹ್ಮಾ ಪ್ರಜಾಃ ಸಂಹರತೇ ತದಾ ॥ ೧೩೧ ॥

ತತೋ ಯುಗಸಹಸ್ರಾಂತೇ ಸಂಪ್ರಾಪ್ತೇ ಚ ಯುಗಕ್ಷಯೇ ।
ಸನ್ಯಾತ್ಮಸ್ಥಾಃ ಪ್ರಜಾಃ ಕರ್ತುಂ ಪ್ರಪೇದೇ ಸ ಪ್ರಜಾಪತಿಃ ॥ ೧೩೨ ॥

ತದಾ ಭವತ್ಯನಾವೃಷ್ಟಿಃ ಸಂತತಾ ಶತವಾರ್ಷಿಕೀ ।
ತಯಾ ಯಾನ್ಯಲ್ಪಸಾರಾಣಿ ಸತ್ತ್ವಾನಿ ಪೃಥಿವೀತಲೇ ॥ ೧೩೩ ॥

ತಾನ್ಯೇವಾತ್ರ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ ।
ಸಪ್ತರಶ್ಮಿರಥೋ ಭೂತ್ವಾ ಉದತಿಷ್ಠದ್ವಿಭಾವಸುಃ ॥ ೧೩೪ ॥

---

೧೩೦. ತತ್ತ್ವಜ್ಞಾನದಿಂದ ಸಂಭವಿಸುವ ಪುನರುತ್ಪತ್ತಿಗೆ ಕಾರಣವೇ ಇಲ್ಲದಂತೆ ಆಗುವ ನಿರ್ಬೀಜಲಯವು ಆತ್ಯಂತಿಕ ಪ್ರಲಯವು. ತರುವಾಯ ಬ್ರಹ್ಮದೇವನು ಕಲ್ಪಾವಸಾನದಲ್ಲಿ ತ್ರಿಲೋಕದಲ್ಲಿ ವಾಸಮಾಡುವ ದೇವತೆಗಳನ್ನು ಉಪಸಂಹಾರ ಮಾಡುವನು.

೧೧೩. ಪೂಜ್ಯನಾದ ಬ್ರಹ್ಮದೇವನು ಸುಷುಪ್ತಿಯನ್ನು ಅನುಭವಿಸಲು ಇಷ್ಟವುಳ್ಳವನಾಗಲು ಪ್ರಹರದ ಅವಸಾನ ಸಮಯದಲ್ಲಿ ಮತ್ತೆ ಸರ್ಗದ ಲಯವನ್ನು ಮಾಡಲು ಉಪಕ್ರಮಿಸಿ ಪ್ರಜೆಗಳನ್ನು ಸಂಹರಿಸುತ್ತಾನೆ.

೧೩೨. ಮತ್ತು ಆ ಪ್ರಜಾಪತಿಯು ಯುಗ ಸಹಸ್ರ ಆವೃತ್ತಿಯ ಕಡೆಯಲ್ಲಿ ಕಲ್ಪದ ಅವಸಾನವು ಪ್ರಾಪ್ತವಾಗಲು ಪ್ರಜೆಗಳನ್ನು ತನ್ನ ಸ್ವರೂಪದಲ್ಲಿ ಇರಿಸಿಕೊಳಬೇಕೆಂದು ಧ್ಯಾನಿಸಿದನು.

೧೩೩. ಆ ಸಮಯದಲ್ಲಿ ಒಂದುನೂರು ವರ್ಷಗಳವರೆಗೆ ಸಂತತವಾಗಿ ಅನಾವೃಷ್ಟಿಯು ಪ್ರಾಪ್ತವಾಗುವುದು. ಆ ಅನಾವೃಷ್ಟಿಯಿಂದ ಭೂಮಿಯಲ್ಲಿರುವ ಸಮಸ್ತ ಸತ್ತ್ವಗಳು ಅತ್ಯಲ್ಪವಾದ ಸಾರವುಳ್ಳವುಗಳಾಗುವುವು.

೧೩೪. ಆ ಸತ್ತ್ವಗಳು ಇಲ್ಲಿಯೇ ನಾಶವನ್ನು ಹೊಂದಿ ಭೂಮಿಯಲ್ಲಿ ಐಕ್ಯವನ್ನು ಹೊಂದುತ್ತವೆ. ಆಗ ಸೂರ್ಯನು ಏಳು ರಶ್ಮಿಗಳೆಂಬ ರಥಗಳಿಂದ ಕೂಡಿದವನಾಗಿ ಮೇಲಕ್ಕೆ ಉದಯಿಸುವನು.

ಅಸಹ್ಯರಶ್ಮಿರ್ಭಗವಾನ್ ಪಿಬತ್ಯಂಭೋ ಗಭಸ್ತಿಭಿಃ ।
ಹರಿತಾ ರಶ್ಮಯಸ್ತಸ್ಯ ದೀಪ್ಯಮಾನಾಸ್ತು ಸಪ್ತತಿಃ ॥ ೧೩೫ ॥

ಭೂಯ ಏವ ವಿವರ್ತಂತೇ ವ್ಯಾಪ್ನುವಂತೋಽಂಬರಂ ಶನೈಃ ।
ಭೌಮಂ ಕಾಷ್ಠೇಂಧನಂ ತೇಜೋ ಭೃಶಮದ್ಭಿಸ್ತು ದೀಪ್ಯತೇ ॥ ೧೩೬ ॥

ತಸ್ಮಾದುದಕಭೃತ್ ಸೂರ್ಯಸ್ತಪತೀತಿ ಹಿ ಕಥ್ಯತೇ ।
ನಾವೃಷ್ಟ್ಯಾ ತಪತೇ ಸೂರ್ಯೋ ನಾವೃಷ್ಟ್ಯಾ ಪರಿಷಿಚ್ಯತೇ ॥ ೧೩೭ ॥

ನಾವೃಷ್ಟ್ಯಾ ಪರಿವಿಶ್ಯೇತ ವಾರಿಣಾ ದೀಪ್ಯತೇ ರವಿಃ ।
ತಸ್ಮಾದಪಃ ಪಿಬನ್ ಯೋ ವೈ ದೀಪ್ಯತೇ ರವಿರಂಬರೇ ॥ ೧೩೮ ॥

ತಸ್ಯ ತೇ ರಶ್ಮಯಃ ಸಪ್ತ ಪ್ಲಿಬಂತ್ಯಂಭೋ ಮಹಾರ್ಣವಾತ್ ।
ತೇನಾರೋಹೇಣ ಸಂದೀಪ್ತಾಃ ಸೂರ್ಯಾಃ ಸಪ್ತ ಭವಂತ್ಯುತ ॥ ೧೩೯ ॥

---

೧೩೫. ಭಗವಂತನಾದ ಸೂರ್ಯನು ಸಹಿಸಲಾರದಷ್ಟು ಉಲ್ಬಣವಾದ ರಶ್ಮಿಗಳಿಂದ ಕೂಡಿದವನಾಗಿ ಕಿರಣಗಳಿಂದ ನೀರನ್ನು ಕುಡಿಯುವನು. ಆ ಸೂರ್ಯನ ಎಪ್ಪತ್ತು ರಶ್ಮಿಗಳು ಹರಿತವರ್ಣದಿಂದ ದೀಪ್ಯಮಾನವಾಗಿರುವುವು.

೧೩೬. ಆ ಕಿರಣಗಳು ಮತ್ತೆ ಮತ್ತೆ ಮೆಲ್ಲಗೆ ಆಕಾಶವನ್ನು ವ್ಯಾಪಿಸುವಂತೆ ಸುತ್ತುತ್ತವೆ. ಆಗ ಭೂಮಿಯಲ್ಲಿರುವ ಕಾಷ್ಠ-ಇಂಧನಗಳಿಂದ ಜ್ವಲಿಸುವ ತೇಜಸ್ಸು ಅತಿಶಯವಾಗಿ ನೀರಿನಿಂದ ಜ್ವಲಿಸುತ್ತದೆ.

೧೩೭. ಆದುದರಿಂದ ಉದಕವನ್ನು ಪಾನಮಾಡುವ ಪೂರ್ಣನಾದ ಸೂರ್ಯನು ತಪಿಸುವನೆಂದು ಹೇಳಲ್ಪಡುತ್ತಾನೆ. ಸೂರ್ಯನು ಅನಾವೃಷ್ಟಿಯಿಂದ ತಪಿಸುವುದಿಲ್ಲ ; ಮತ್ತು ವೃಷ್ಟಿಯಿಂದ ನೆನೆದು ಶೀತನಾಗುವುದೂ ಇಲ್ಲ.

೧೩೮. ಹಾಗು ಅವೃಷ್ಟಿಯಿಂದ ಪರಿವೇಷವೆಂಬ ಛತ್ರಿಯ ಆಕಾರದ ಮಂಡಲವನ್ನು ಹೊಂದುವುದಿಲ್ಲ. ನೀರಿನಿಂದ ಸೂರ್ಯನು ಜ್ವಲಿಸುವನು. ಆದ್ದರಿಂದ ಜಲವನ್ನು ಪಾನಮಾಡುತ್ತಲಿರುವ ಸೂರ್ಯನು ಆಕಾಶದಲ್ಲಿ ಜ್ವಲಿಸುವನು.

೧೩೯. ಆ ಸೂರ್ಯದೇವನ ಏಳು ರಶ್ಮಿಗಳು ಮಹಾ ಸಮುದ್ರದಿಂದ ನೀರನ್ನು ಕುಡಿಯುತ್ತವೆ. ಆ ಆಹಾರದಿಂದ ಪ್ರತ್ಯೇಕವಾಗಿ ಜ್ವಲಿಸುವ ರಶ್ಮಿಗಳು ಸಪ್ತ ಸೂರ್ಯರಂತೆ ಆಗುವುವು.

ತತಸ್ತೇ ರಶ್ಮಯಃ ಸಪ್ತ ಸೂರ್ಯಭೂತಾಶ್ಚತುರ್ದಿಶಮ್ ।
ಚತುರ್ಲೋಕಮಿಮಂ ಸರ್ವಂ ದಹಂತಿ ಶಿಖಿನಸ್ತದಾ ॥ ೧೪೦ ॥

ಪ್ರಾಪ್ನುವಂತಿ ಚ ತಾಭಿಸ್ತು ಹ್ಯೂರ್ಧ್ವಂ ಚಾಧಶ್ಚ ರಶ್ಮಿಭಿಃ ।
ದೀಪ್ಯಂತೇ ಭಾಸ್ಕರಾಃ ಸಪ್ತ ಯುಗಾಂತಾಗ್ನಿಪ್ರತಾಪಿನಃ ॥ ೧೪೧ ॥

ತೇ ವಾರಿಣಾ ಪ್ರದೀಪ್ತಾಶ್ಚ ಬಹುಸಾಹಸ್ರರಶ್ಮಯಃ ।
ಸ್ವಂ ಸಮಾವೃತ್ಯ ತಿಷ್ಠಂತಿ ನಿರ್ದಹಂತೋ ವಸುಂಧರಾಮ್ ॥ ೧೪೨ ॥

ತತಸ್ತೇಷಾಂ ಪ್ರತಾಪೇನ ದಹ್ಯಮಾನಾ ವಸುಂಧರಾ ।
ಸಾದ್ರಿನದ್ಯರ್ಣವಾ ಪೃಥ್ವೀ ನಿಸ್ನೇಹಾ ಸಮುಪದ್ಯತ ॥ ೧೪೩ ॥

ದೀಪ್ತಾಭಿಃ ಸಂತತಾಭಿಶ್ಚ ಚಿತ್ರಾಭಿಶ್ಚ ಸಮಂತತಃ ।
ಅಧಶ್ಚೋರ್ಧ್ವಂ ಚ ತಿರ್ಯಕ್ ಚ ಸಂರುದ್ಧಾ ಸೂರ್ಯರಶ್ಮಿಭಿಃ
॥ ೧೪೪ ॥

---

೧೪೦. ತರುವಾಯ ಆ ಸಪ್ತರಶ್ಮಿಗಳು ಸೂರ್ಯನ ರೂಪಗಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ಜ್ವಾಲಾಮಾಲೆಯಿಂದ ಕೂಡಿದ ಅಗ್ನಿರೂಪದಿಂದ ಈ ಎಲ್ಲ ನಾಲ್ಕು ಲೋಕಗಳನ್ನು ದಹಿಸುತ್ತವೆ.

೧೪೧. ಕಲ್ಪಾಂತ ಕಾಲದ ಅಗ್ನಿಗಳಂತೆ ತಪಿಸುವ ಏಳು ಸೂರ್ಯ ಮಂಡಲಗಳು ಆ ರಶ್ಮಿಗಳಿಂದ ಜಗತ್ತಿನ ಊರ್ಧ್ವ-ಅಧೋಭಾಗಗಳನ್ನು ವ್ಯಾಪಿಸುತ್ತ ದೀಪ್ತವಾಗುವುವು.

೧೪೨. ಆ ಸೂರ್ಯರು ಅನೇಕ ಸಹಸ್ರ ಸಂಖ್ಯೆಯ ರಶ್ಮಿಗಳಿಂದ ಕೂಡಿ ಜ್ವಲಿಸುತ್ತ ರಶ್ಮಿಜ್ವಾಲೆಗಳಿಂದ ಭೂಮಿಯನ್ನು ಸುಡುತ್ತ ತಮ್ಮ ಸ್ವರೂಪವನ್ನು ಆವರಿಸಿಕೊಂಡು ಇರುವರು.

೧೪೩. ತರುವಾಯ ಆ ಸೂರ್ಯರ ಅಧಿಕವಾದ ಪ್ರತಾಪದಿಂದ ಸುಡಲ್ಪಡುತ್ತ ಇರುವ ಬೆಟ್ಟ, ನದಿ, ಮತ್ತು ಸಮುದ್ರಗಳಿಂದ ಕೂಡಿದ ಭೂಮಿಯು ಸ್ವಲ್ಪವೂ ಸ್ನೇಹ ಗುಣವಿಲ್ಲದಂತೆ ಶುಷ್ಕವಾಗುವುದು.

೧೪೪. ಮತ್ತು ದೀಪಿಸುವುದೂ, ಅಂತರವಿಲ್ಲದಂತೆ ನಿಬಿಡವೂ, ಮತ್ತು ಚಿತ್ರವರ್ಣ ರಂಜಿತವೂ ಆದ ಸೂರ್ಯರಶ್ಮಿಗಳಿಂದ ಭೂಮಿಯು ಸುತ್ತಲು ಅಧೋಭಾಗ-ಊರ್ಧ್ವಭಾಗ ಮತ್ತು ತೀರ್ಯಕ್ ಭಾಗಗಳಲ್ಲಿ ಮುಚ್ಚಿ ಹೋಗುವುದು.

ಸೂರ್ಯಾಗ್ನೀನಾಂ ಪ್ರವೃದ್ಧಾನಾಂ ಸಂಸೃಷ್ಟಾನಾಂ ಪರಸ್ಪರಮ್ ।
ಏಕತ್ವಮುಪಯಾತಾನಾಮೇಕಜ್ವಾಲಾ ಭವತ್ಯುತ　　|| ೧೪೫ ||

ಸರ್ವಲೋಕಪ್ರಣಾಶಶ್ಚ ಸೋಽಗ್ನಿರ್ಭೂತ್ವಾನುಮಂಡಲೀ ।
ಚತುರ್ಲೋಕಮಿದಂ ಸರ್ವಂ ನಿರ್ದಹತ್ಯಾಶು ತೇಜಸಾ　　|| ೧೪೬ ||

ತತಃ ಪ್ರಲೀನೇ ಸರ್ವಸ್ಮಿಞ್ಜಂಗಮೇ ಸ್ಥಾವರೇ ತಥಾ ।
ನಿರ್ವೃಕ್ಷಾ ನಿಸ್ತೃಣಾ ಭೂಮಿಃ ಕೂರ್ಮಪೃಷ್ಠಸಮಾ ಭವೇತ್|| ೧೪೭ ||

ಅಂಬರೀಷಮಿವಾಭಾತಿ ಸರ್ವಮಸ್ಯಾಖಿಲಂ ಜಗತ್ ।
ಸರ್ವಮೇವ ತದರ್ಚಿರ್ಭಿಃ ಪೂರ್ಣಂ ಜಾಜ್ವಲ್ಯತೇ ಘನಃ　　|| ೧೪೮ ||

ಭೂತಲೇ ಯಾನಿ ಸತ್ತ್ವಾನಿ ಮಹೋದಧಿಗತಾನಿ ಚ ।
ತತಸ್ತಾನಿ ಪ್ರಲೀಯಂತೇ ಭೂಮಿತ್ವಮುಪಯಾಂತಿ ಚ　　|| ೧೪೯ ||

---

೧೪೫. ಆಗ ಸೂರ್ಯ-ಅಗ್ನಿಗಳು ಪರಸ್ಪರವಾಗಿ ಸೇರಿಕೊಂಡು ಅತ್ಯಂತವಾದ ವೃದ್ಧಿಯನ್ನು ಹೊಂದಿ ಅದರಿಂದ ಏಕ ರೂಪವನ್ನು ಹೊಂದಿ ಅವುಗಳು ಒಂದೆ ಜ್ವಾಲೆಯ ಆಕಾರದಲ್ಲಿ ಪರಿಣಮಿಸುವುವು.

೧೪೬. ಸಕಲ ಲೋಕಗಳ ನಾಶಕ್ಕೆ ಕಾರಣವಾದ ಅಗ್ನಿಯು ಮಂಡಲಾಕಾರವಾದ ದೀಪ್ತಿ-ಜ್ವಾಲೆಗಳಿಂದ ಕೂಡಿ ತನ್ನ ತೇಜೋವಿಶೇಷದಿಂದ ಸಮಸ್ತವಾದ ನಾಲ್ಕು ಲೋಕಗಳನ್ನು ಬೇಗ ದಹಿಸುವುದು.

೧೪೭. ಕಡೆಯಲ್ಲಿ ಸಮಸ್ತ ಸ್ಥಾವರ-ಜಂಗಮ ಪ್ರಾಣಿವರ್ಗವು ನಾಶವಾಗಲು ಭೂಮಿಯು ಸುಟ್ಟುಹೋಗಿ ಹುಲ್ಲು-ಮರ ಮುಂತಾದುವುಗಳಿಂದ ಶೂನ್ಯವಾಗಿ ಆಮೆಯ ಪೃಷ್ಠಭಾಗದಂತೆ ವಿಷಮವಾದ ಆಕಾರವನ್ನು ಹೊಂದುವುದು.

೧೪೮. ಆಗ ಸಮಸ್ತ ಜಗದ್ವರ್ಗವು ಹುರಿಯುವ ಹೆಂಚಿನಂತೆ ಪ್ರಕಾಶಿಸುವುದು. ಜಗತ್ತಿನ ಎಲ್ಲ ಭಾಗಗಳು ಅಗ್ನಿಜ್ವಾಲೆಗಳಿಂದ ತುಂಬಿ ಘನವಾಗಿ ಜ್ವಲಿಸುತ್ತ ಇರುವುವು.

೪೯. ಭೂಮಿಯಲ್ಲಿಯೂ ಹಾಗು ಮಹೋದಧಿಯಲ್ಲಿಯೂ ಆಶ್ರಯಿಸಿಕೊಂಡಿದ್ದ ಪ್ರಾಣಿಗಳು ಆ ಅಗ್ನಿಜ್ವಾಲೆಯಿಂದ ಲಯಹೊಂದಿ ನಿಸ್ಸಾರವಾಗಿ ಭೂಮಿಯ ರೂಪವನ್ನು ಹೊಂದುವುವು.

ದ್ವೀಪಾಶ್ಚ ಪರ್ವತಾಶ್ಚೈವ ವರ್ಷಾಣ್ಯಥ ಮಹೋದಧಿಃ ।
ಸರ್ವಂ ತದ್ಭಸ್ಮಸಾಚ್ಚಕ್ರೇ ಸರ್ವಾತ್ಮಾ ಪಾವಕಸ್ತು ಸಃ ॥ ೧೫೦ ॥

ಸಮುದ್ರೇಭ್ಯೋ ನದೀಭ್ಯಶ್ಚ ಪಾತಾಲೇಭ್ಯಶ್ಚ ಸರ್ವಶಃ ।
ಪಿಬತ್ಯಪಃ ಸಮಿದ್ಧೋಽಗ್ನಿಃ ಪೃಥಿವೀಮಾಶ್ರಿತೋ ಜ್ವಲನ್ ॥ ೧೫೧ ॥

ತತಃ ಸಂವರ್ಧಿತಃ ಶೈಲಾನತಿಕ್ರಮ್ಯ ಗೃಹಾಂಸ್ತಥಾ ।
ಲೋಕಾನ್ ಸಂಹರತೇ ದೀಪ್ತೋ ಘೋರಃ ಸಂವರ್ತಕೋಽನಲಃ
॥ ೧೫೨ ॥

ತತಃ ಸ ಪೃಥಿವೀಂ ಭಿತ್ತ್ವಾ ರಸಾತಲಮಶೋಷಯತ್ ।
ನಿರ್ದಹ್ಯಾಂತೇ ತು ಪಾತಾಲಂ ವಾಯುಲೋಕಮಥಾದಹತ್ ॥ ೧೫೩ ॥

ಅಧಸ್ತಾತ್ಪೃಥಿವೀಂ ದಗ್ಧ್ವಾ ತೂರ್ಧ್ವಂ ಸ ದಹತೋ ದಿವಮ್ ।
ಯೋಜನಾನಾಂ ಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ॥ ೧೫೪ ॥

---

೧೫೦. ಆಗ ಭೂಮಂಡಲದಲ್ಲಿ ಅಡಗಿರುವ ದ್ವೀಪ, ಪರ್ವತ, ವರ್ಷಖಂಡ, ಮತ್ತು ಮಹೋದಧಿ—ಇವೆಲ್ಲವನ್ನು ಜ್ವಲಿಸುವುದರಿಂದ ಸರ್ವಾತ್ಮಕವಾದ ಅಗ್ನಿಯು ಸರ್ವವನ್ನು ಭಸ್ಮಮಾಡುವುದು.

೧೫೧. ಅತಿಶಯವಾಗಿ ಉರಿಯುವ ಅಗ್ನಿಯು ಭೂಮಂಡಲವನ್ನು ಆಶ್ರಯಿಸಿ ಜ್ವಲಿಸುತ್ತ ಸಮುದ್ರ, ನದಿ ಮತ್ತು ಪಾತಾಲಲೋಕಗಳಿಂದ ಎಲ್ಲ ಭಾಗಗಳಿಂದಲೂ ನೀರನ್ನು ಪಾನಮಾಡುವುದು.

೧೫ . ತರುವಾಯ ವೃದ್ಧಿಹೊಂದಿದ ಪ್ರಲಯ ಕಾಲಾಗ್ನಿಯು ದೀಪ್ತಾಕಾರದಿಂದ ಅತ್ಯುಗ್ರವಾಗಿ ಅನೇಕ ಗಿರಿಗಳನ್ನೂ ಗ್ರಹಗಣವನ್ನೂ ಅತಿಕ್ರಮಿಸಿ ಸಮಸ್ತ ಲೋಕಗಳನ್ನು ಸಂಹರಿಸುತ್ತದೆ.

೧೫೩. ಅನಂತರದಲ್ಲಿ ಆ ಅಗ್ನಿಯು ಪೃಥಿವಿಯನ್ನು ಭೇದಿಸಿ ಪಾತಾಲವನ್ನು ವ್ಯಾಪಿಸಿ ಅದನ್ನು ಒಣಗಿಸುವುದು. ಪಾತಾಲವನ್ನು ಭಸ್ಮಮಾಡಿದ ತರುವಾಯ ಕಡೆಯಲ್ಲಿ ವಾಯುಲೋಕವನ್ನು ದಹಿಸಿತು.

೧೫೪. ಆ ಅಗ್ನಿಯು ಕೆಳಭಾಗದಲ್ಲಿದ್ದ ಭೂಮಿಯನ್ನು ದಹಿಸಿ ಊರ್ಧ್ವಭಾಗದಲ್ಲಿರುವ ದ್ಯುಲೋಕವನ್ನು ದಹಿಸುತ್ತಿರಲು ಅದರ ಜ್ವಾಲೆಗಳು ಸಹಸ್ರ, ಪ್ರಯುತ, ಅರ್ಬುದ ಮುಂತಾದ ಅಧಿಕ ಸಂಖ್ಯೆಯ ಯೋಜನಗಳಷ್ಟು ದೂರವಾಗಿ ವ್ಯಾಪಿಸುವುವು.

**ಉದತಿಷ್ಠನ್ ಶಿಖಾಸ್ತಸ್ಯ ಬಹ್ವ್ಯಃ ಸಂವರ್ತಕಸ್ಯ ತು |**
**ಗಂಧರ್ವಾಂಶ್ಚ ಪಿಶಾಚಾಂಶ್ಚ ಸಮಹೋರಗರಾಕ್ಷಸಾನ್ || ೧೫೫ ||**

**ತದಾ ದಹತಿ ಸಂದೀಪ್ತೋ ಗೋಲಕಂ ಚೈವ ಸರ್ವಶಃ |**
**ಭೂರ್ಲೋಕಂ ಚ ಭುವರ್ಲೋಕಂ ಸ್ವರ್ಲೋಕಂ ಚ ಮಹಸ್ತಥಾ || ೧೫೬ ||**

**ಘೋರೋ ದಹತಿ ಕಾಲಾಗ್ನಿರೇವಂ ಲೋಕಚತುಷ್ಟಯಮ್ |**
**ವ್ಯಾಪ್ತೇಷು ತೇಷು ಲೋಕೇಷು ತಿರ್ಯಗೂರ್ಧ್ವಮಥಾಗ್ನಿನಾ||೧೫೭||**

**ತತ್ತೇಜಃ ಸಮನುಪ್ರಾಪ್ಯ ಕೃತ್ಸ್ನಂ ಜಗದಿದಂ ಶನೈಃ |**
**ಅಯೋಗುಡನಿಭಂ ಸರ್ವಂ ತದಾ ಹ್ಯೇವಂ ಪ್ರಕಾಶತೇ || ೧೫೮ ||**

**ತತೋ ಗಜಕುಲಾಕಾರಾಸ್ತಡಿದ್ಭಿಃ ಸಮಲಂಕೃತಾಃ |**
**ಉತ್ತಿಷ್ಠಂತಿ ತದಾ ಘೋರಾ ವ್ಯೋಮ್ನಿ ಸಂವರ್ತಕಾ ಘನಾಃ || ೧೫೯ ||**

---

೧೫೫. ಆ ಪ್ರಲಯ ಕಾಲಾಗ್ನಿಯ ಅನೇಕ ಶಾಖೆಗಳು ಸುತ್ತಲೂ ಮೇಲಕ್ಕೆದ್ದು ಜ್ವಲಿಸುವುವು. ಅವುಗಳಿಂದ ಗಂಧರ್ವ, ಪಿಶಾಚ, ಮಹಾಸರ್ಪ ಮತ್ತು ರಾಕ್ಷಸರು ದಗ್ಧರಾಗುವರು.

೧೫೬. ಆಗ ಅತಿಯಾಗಿ ಜ್ವಲಿಸುವ ಪ್ರಲಯಾಗ್ನಿಯು ಭೂಲೋಕ, ಭುವರ್ಲೋಕ, ಸ್ವರ್ಗಲೋಕ ಮತ್ತು ಮಹರ್ಲೋಕವೆಂಬ ನಾಲ್ಕು ಲೋಕಗಳ ಸಮಷ್ಟಿ ರೂಪವಾಗಿ ಲೋಕವನ್ನು ಸಂಪೂರ್ಣವಾಗಿ ದಹಿಸುತ್ತದೆ.

೧೫೭. ಈ ರೀತಿಯಾಗಿ ಘೋರವಾದ ಕಲ್ಪಾಂತಾಗ್ನಿಯು ನಾಲ್ಕು ಲೋಕಗಳನ್ನು ಭಸ್ಮಮಾಡುವುದು. ಆಗ ಆ ನಾಲ್ಕು ಲೋಕಗಳು ತಿರ್ಯಕ್-ಊರ್ಧ್ವ ಮುಂತಾದ ಎಲ್ಲ ಎಡೆಗಳಲ್ಲಿಯೂ ಅಗ್ನಿಯಿಂದ ವ್ಯಾಪಿಸಲ್ಪಡುವುವು.

೧೫೮. ಹೀಗೆ ಸಂಪೂರ್ಣವಾಗಿ ಈ ಪ್ರಪಂಚವು ಮೆಲ್ಲಗೆ ಆ ಅಗ್ನಿಯ ತೇಜಃಪುಂಜದ ಐಕ್ಯವನ್ನು ಹೊಂದಿ ಅಗ್ನಿಯಿಂದ ಕಾಯಿಸಿದ ಲೋಹಪಿಂಡದಂತೆ ಪ್ರಕಾಶಿಸುತ್ತಿರುವುದು.

೧೫೯. ಆಗ ಸಂವರ್ತಕವೆಂಬ ಪ್ರಲಯ ಕಾಲಾಂತ್ಯದ ಮೇಘಗಳು ಆನೆಗಳ ಹಿಂಡಿನಂತೆ ಆಕಾರವುಳ್ಳವುಗಳೂ ಮಿಂಚುಗಳಿಂದ ಭೂಷಿಸಲ್ಪಟ್ಟವುಗಳೂ ಆಗಿ ಘೋರ ರೂಪದಿಂದ ಆಕಾಶದಲ್ಲಿ ಉದಯಿಸುತ್ತವೆ.

ಕೇಚಿನ್ನೀಲೋತ್ಪಲಶ್ಯಾಮಾಃ ಕೇಚಿತ್ಕುಮುದಸನ್ನಿಭಾಃ ।
ಕೇಚಿದ್ವೈಡೂರ್ಯಸಂಕಾಶಾ ಇಂದ್ರನೀಲನಿಭಾಃ ಪರೇ ॥ ೧೬೦ ॥

ಶಂಖಕುಂದನಿಭಾಶ್ಚಾನ್ಯೇ ಜಾತ್ಯಂಜನನಿಭಾಸ್ತಥಾ ।
ಧೂಮ್ರವರ್ಣಾ ಘನಾಃ ಕೇಚಿತ್ ಕೇಚಿತ್ಪೀತಾಃ ಪಯೋಧರಾಃ ॥೧೬೧॥

ಕೇಚಿದ್ರಾಸಭವರ್ಣಾಭಾ ಲಾಕ್ಷಾರಸನಿಭಾಸ್ತಥಾ ।
ಮನಃಶಿಲಾಭಾಸ್ತ್ವಪರೇ ಕಪೋತಾಭಾಸ್ತಥಾಂಬುದಾಃ ॥ ೧೬೨ ॥

ಇಂದ್ರಗೋಪನಿಭಾಃ ಕೇಚಿದ್ಧರಿತಾಲನಿಭಾಸ್ತಥಾ ।
ಚಾಷಪತ್ರನಿಭಾಃ ಕೇಚಿದುತ್ತಿಷ್ಠಂತಿ ಘನಾ ದಿವಿ ॥ ೧೬೩ ॥

ಕೇಚಿತ್ಪುರವರಾಕಾರಾಃ ಕೇಚಿದ್ಗಜಕುಲೋಪಮಾಃ ।
ಕೇಚಿತ್ಪರ್ವತಸಂಕಾಶಾಃ ಕೇಚಿತ್ ಸ್ಥಲನಿಭಾ ಘನಾಃ ॥ ೧೬೪ ॥

---

೧೬೦. ಈ ಮೇಘಗಳಲ್ಲಿ ಕೆಲವು ಕನ್ನೈದಿಲೆಯಂತೆ ನೀಲವರ್ಣಗಳಿಂದ ಕೂಡಿರುವುಗಳೂ ಮತ್ತೆ ಕೆಲವು ನೈದಿಲೆಯಂತೆ ಸ್ವಚ್ಛವಾಗಿ ಪ್ರಕಾಶಿಸುವುವೂ, ಇನ್ನು ಕೆಲವು ವೈಡೂರ್ಯ ರತ್ನದಂತೆ ಸ್ಫುರಿಸುವುವೂ ಮತ್ತು ಮತ್ತೆ ಕೆಲವು ಇಂದ್ರ ನೀಲಮಣಿಯಂತೆ ರಾಜಿಸುವುವೂ ಆಗಿರುವುವು.

೧೬೧. ಕೆಲವು ಮೇಘಗಳು ಶಂಖ, ಮಾಘಮಲ್ಲಿಗೆಹೂ—ಇವುಗಳಂತೆ ಇರುವುವು. ಮತ್ತೆ ಕೆಲವು ಒಳ್ಳೆ ಜಾತಿಯ ಕಾಡಿಗೆಗೆ ಸಮಾನವಾಗಿರುವುವು. ಇನ್ನು ಕೆಲವು ಧೂಮ್ರವರ್ಣದಿಂದ ಹೊಳೆಯುವುವು. ಮತ್ತು ಇನ್ನು ಕೆಲವು ಪೀತವರ್ಣದಿಂದ ರಂಜಿತವಾಗಿರುವುವು.

೧೬೨. ಕೆಲವು ಮೇಘಗಳು ಗರ್ದಭವರ್ಣದಿಂದಲೂ ಇನ್ನು ಕೆಲವು ಅರಗಿನ ದ್ರವದ ವರ್ಣದಿಂದಲೂ ಮತ್ತೆ ಕೆಲವು ಮಣಿಶಿಲೆಯ ವರ್ಣಕಾಂತಿಯಿಂದಲೂ ಹಾಗು ಇನ್ನು ಕೆಲವು ಪಾರಿವಾಳದ ವರ್ಣದಿಂದಲೂ ಪ್ರಕಾಶಿಸುವುವು.

೧೬೩. ಮತ್ತು ಕೆಲವು ಇಂದ್ರಗೋಪ ಎಂಬ ಕ್ರಿಮಿಗೆ ಸಮಾನಗಳಾಗಿ ಇನ್ನು ಕೆಲವು ಹರಿತಾಳಧಾತುವಿಗೆ ಸದೃಶವಾಗಿ ಮತ್ತೆ ಕೆಲವು ಚಾಷಪಕ್ಷಿಯ ರೆಕ್ಕೆಗೆ ತುಲ್ಯವಾಗಿ ಇರುವ ಮೋಡಗಳು ಆಕಾಶದಲ್ಲಿ ಕಾಣಿಸುವುವು.

೧೬೪. ಕೆಲವು ಮೋಡಗಳು ಶ್ರೇಷ್ಠವಾದ ನಗರಗಳ ಆಕೃತಿಯನ್ನು ಹೊಂದುತ್ತವೆ. ಕೆಲವು ಕಡೆ ಆನೆಗಳ ಹಿಂಡಿನಂತೆ ಆಕಾರವಿರುವುದು. ಇನ್ನೊಂದು ಕಡೆ

ಕ್ರೀಡಾಗಾರನಿಭಾಃ ಕೇಚಿತ್ಕೇಚಿನ್ಮೀನಕುಲೋಪಮಾಃ ।
ಬಹುರೂಪಾ ಘೋರರೂಪಾ ಘೋರಸ್ವರನಿನಾದಿನಃ ॥ ೧೬೫ ॥

ತದಾ ಜಲಧರಾಃ ಸರ್ವೇ ಪೂರಯಂತಿ ನಭಸ್ತಲಮ್ ।
ತತಸ್ತೇ ಜಲದಾ ಘೋರರಾವಿಣೋ ಭಾಸ್ಕರಾತ್ಮಕಾಃ ॥ ೧೬೬ ॥

ಸಪ್ತಧಾ ಸಂವೃತಾತ್ಮಾನಸ್ತಮಗ್ನಿಂ ಶಮಯಂತ್ಯುತ ।
ತತಸ್ತೇ ಜಲದಾ ವರ್ಷಂ ಮುಂಚಂತಿ ಚ ಮಹೌಘವತ್ ॥ ೧೬೭ ॥

ಸುಘೋರಮಶಿವಂ ಸರ್ವಂ ನಾಶಯಂತಿ ಚ ಪಾವಕಮ್ ।
ಪ್ರವೃಷ್ಟೈಶ್ಚ ತಥಾತ್ಯರ್ಥಂ ವಾರಿಣಾ ಪೂರ್ಯತೇ ಜಗತ್ ॥ ೧೬೮ ॥

ಅದ್ಭಿಸ್ತೇಜೋಽಭಿಭೂತಂ ಚ ತದಾಗ್ನಿಃ ಪ್ರವಿಶತ್ಯಪಃ ।
ನಷ್ಟೇ ಚಾಗ್ನೌ ವರ್ಷಗತೇ ಪಯೋದಾಃ ಪಾವಕೋದ್ಭವಾಃ ॥ ೧೬೯ ॥

---

ಪರ್ವತದಂತೆ ಬೃಹದಾಕಾರವು ಕಾಣಿಸುವುದು. ಬೇರೊಂದು ಕಡೆ ಇರುವ ಮೇಘಗಳು ಸ್ಥಲದಂತೆ ತೋರಿಬರುವುವು.

೧೬೫. ಕ್ರೀಡಾಗೃಹಗಳಂತೆ ಆಕಾರವು ಕೆಲವು ಮೇಘಗಳಲ್ಲಿಯೂ, ಮೀನುಗಳ ಗುಂಪಿನಂತೆ ಆಕೃತಿಯು ಮತ್ತೆ ಕೆಲವು ಮೇಘಗಳಲ್ಲಿಯೂ ಕಾಣಿಸುವುದು. ಇಂತಹ ವಿಚಿತ್ರ ಅನೇಕ ರೂಪಗಳಿಂದ ಕೂಡಿದ ಮೇಘಗಳು ಘೋರ ರೂಪದಿಂದ ಕೂಡಿ ಕಠೋರ ಸ್ವರದಿಂದ ಗರ್ಜಿಸುವುವು.

೧೬೬. ಆಗ ಎಲ್ಲ ಮೋಡಗಳು ಸಂಘವಾಗಿ ಉದಯಿಸಿ ಆಕಾಶವನ್ನು ಪೂರ್ಣವಾಗಿ ಆವರಿಸುತ್ತವೆ. ತರುವಾಯ ಸೂರ್ಯನಂತೆ ಉಗ್ರವಾದ ಆ ಮೇಘಗಳು ಕಠೋರವಾಗಿ ಗರ್ಜಿಸುತ್ತವೆ.

೧೬೭. ಆ ಮೇಘಗಳು ಏಳು ಆಕಾರಗಳಿಂದ ಕೂಡಿದ ಸ್ವರೂಪವುಳ್ಳವುಗಳಾಗಿ ಆ ಪ್ರಲಯಾಗ್ನಿಯನ್ನು ಶಾಂತಿಗೊಳಿಸುತ್ತವೆ, ತರುವಾಯ ಆ ಮೇಘಗಳು ಮಹಾ ಪ್ರವಾಹದ ಆಕಾರವಾಗಿ ವೃಷ್ಟಿಯನ್ನು ಸುರಿಸುತ್ತವೆ.

೧೬೮. ಮತ್ತು ಅತ್ಯುಗ್ರವೂ ಅಮಂಗಲ ರೂಪವೂ ಆದ ಪ್ರಲಯಾಗ್ನಿಯನ್ನು ಶಾಂತಿಗೊಳಿಸುತ್ತವೆ. ಹಾಗು ತಾನು ಸುರಿಸಿದ ಜಲಪ್ರವಾಹದಿಂದ ಜಗತ್ತು ಎಲ್ಲ ಪೂರ್ಣವಾಗಿ ತುಂಬುವುದು.

೧೬೯. ಆ ಜಲಪ್ರವಾಹದಿಂದ ನಾಶಹೊಂದಿದ ತೇಜೋರೂಪವಾದ ಅಗ್ನಿಯು ಆಗ ಜಲರೂಪವನ್ನು ಪ್ರವೇಶ ಮಾಡುವುದು, ಹಾಗೆ ಅಗ್ನಿಯು ನಷ್ಟವಾಗಿ ವೃಷ್ಟಿ ಜಲವನ್ನು ಪ್ರವೇಶ ಮಾಡಲು ಮೇಘಗಳು ಅಗ್ನಿಯಿಂದ ಉದಯಿಸುವುವು.

ಪ್ಲಾವಯಂತೋ ಜಗತ್ಸರ್ವಂ ಬೃಹಜ್ಜಲಪರಿಸ್ರವೈಃ ।
ಧಾರಾಭಿಃ ಪೂರಯಂತೀಮಂ ಚೋದ್ಯಮಾನಾಃ ಸ್ವಯಂಭುವಾ ॥ ೧೭೦ ॥

ಅನ್ಯೇ ತು ಸಲಿಲೌಘೈಸ್ತು ವೇಲಾಮಭಿಭವಂತ್ಯಪಿ ।
ಸಾದ್ರಿದ್ವೀಪಾಂತರಂ ಪೀತಂ ಜಲಮನ್ನೇಷು ತಿಷ್ಠತಿ ॥ ೧೭೧ ॥

ಪುನಃ ಪತತಿ ಭೂಮೌ ತತ್ಪಯೋಽಧಸ್ತಾನ್ನಭಸ್ತಲೇ ।
ಸಂವೇಷ್ಟಯತಿ ಘೋರಾತ್ಮಾ ದಿವಿ ವಾಯುಃ ಸಮಂತತಃ ॥ ೧೭೨ ॥

ತಸ್ಮಿನ್ನೇಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ಪೂರ್ಣೇ ಯುಗಸಹಸ್ರೇ ವೈ ನಿಃಶೇಷಃ ಕಲ್ಪ ಉಚ್ಯತೇ ॥ ೧೭೩ ॥

ಅಥಾಂಭಸಾ ವೃತೇ ಲೋಕೇ ಪ್ರಾಹುರೇಕಾರ್ಣವಂ ಬುಧಾಃ ।
ಅಥ ಭೂಮಿರ್ಜಲಂ ಖಂ ಚ ವಾಯುಶ್ಚೈಕಾರ್ಣವೇ ತದಾ ॥ ೧೭೪ ॥

---

೧೭೦. ಆಗ ಆ ಮೇಘಗಳು ಬ್ರಹ್ಮದೇವನಿಂದ ಪ್ರೇರೇಪಿಸಲ್ಪಟ್ಟವುಗಳಾಗಿ ಸಮಸ್ತ ಲೋಕಗಳನ್ನು ಪ್ರವಾಹದಿಂದ ತೇಲಾಡಿಸುವಂತೆ ಮಹತ್ತರವಾದ ಜಲಧಾರೆಗಳ ವರ್ಷಣದಿಂದ ಈ ಲೋಕಗಳನ್ನು ತುಂಬಿಸುತ್ತವೆ.

೧೭೧. ಮತ್ತೆ ಕೆಲವು ಮೇಘಗಳು ಜಲಪ್ರವಾಹ ವೃಷ್ಟಿಯಿಂದ ಸಮುದ್ರಗಳ ಮೇರೆಯನ್ನು ಮೀರುವಂತೆ ಮಾಡುತ್ತವೆ. ಅದ್ರಿ, ದ್ವೀಪಗಳಿಂದ ಕೂಡಿದ ಜಲಭಾಗವು ಪಾನಮಾಡಲ್ಪಟ್ಟು ಮೇಘಗಳಲ್ಲಿ ಅನ್ನ ರೂಪವಾಗಿ ಇರುವುದು.

೧೭೨. ಅಂತರಿಕ್ಷದಲ್ಲಿರುವ ಆ ಜಲವು ಕೆಳಭಾಗದಲ್ಲಿರುವ ಭೂಮಿಯಲ್ಲಿ ಮತ್ತೆ ಬೀಳುವುದು. ಆಗ ಘೋರ ಸ್ವರೂಪಿಯಾದ ವಾಯುವು ಸುತ್ತಲು ಬೀಸುತ್ತ ಆ ಜಲವನ್ನು ವೇಷ್ಟನ ಮಾಡುವುದು.

೧೭೩. ಆಗ ಘೋರವಾದ ಏಕಾರ್ಣವ ಪ್ರಾಯವಾಗಿ ಸಮಸ್ತ ಭುವನವು ಅಡಗಿ ಸ್ಥಾವರ-ಜಂಗಮ ಪ್ರಾಣಿಗಳು ನಾಶ ಹೊಂದಲು ಸಹಸ್ರ ಯುಗಪರಿಮಾಣ ಕಾಲವು ಪೂರ್ಣವಾಗಿ ಕಲ್ಪವು ನಿಶ್ಶೇಷವಾಗುವುದು.

೧೭೪. ಅನಂತರದಲ್ಲಿ ಲೋಕ ಸಂಘವು ನೀರಿನಿಂದ ಆವರಿಸಲ್ಪಡಲಾಗಿ ಪ್ರಾಜ್ಞರು ಆ ಪ್ರಕೃತಿಯನ್ನು ಏಕಾರ್ಣವವೆಂದು ಹೇಳುವರು. ಆ ಏಕಾರ್ಣವ ಪ್ರಾಯವಾದ ಅವಸ್ಥೆಯಲ್ಲಿ ಭೂಮಿ, ಜಲ, ಆಕಾಶ ಮತ್ತು ವಾಯು ತತ್ತ್ವಗಳು ಏಕರೂಪವನ್ನು ಹೊಂದಿರುವುವು.

ನಷ್ಟೇಽನಲೇಂಧಭೂತೇ ತು ಪ್ರಾಜ್ಞಾಯತ ನ ಕಿಂಚನ ।
ಪಾರ್ಥಿವಾಸ್ತ್ವಥ ಸಾಮುದ್ರಾ ಆಪೋ ದೈವ್ಯಾಶ್ಚ ಸರ್ವಶಃ ॥ ೧೭೫ ॥

ಅಸರಂತ್ಯೋ ವ್ರಜಂತ್ಯೈಕ್ಯಂ ಸಲಿಲಾಖ್ಯಾಂ ಭಜಂತ್ಯುತ ।
ಆಗತಾಗತಿಕೇ ಚೈವ ತದಾ ತತ್ಸಲಿಲಂ ಸ್ಮೃತಮ್ ॥ ೧೭೬ ॥

ಪ್ರಚ್ಛಾದ್ಯತಿ ಮಹೀಮೇತಾಮರ್ಣವಾಖ್ಯಂ ತು ತಜ್ಜಲಮ್ ।
ಆಭಾತಿ ಯಸ್ಮಾತ್ತದ್ಭಾಭಿರ್ಭಾಶಬ್ದೋ ವ್ಯಾಪ್ತಿದೀಪ್ತಿಷು ॥ ೧೭೭ ॥

ಭಸ್ಮ ಸರ್ವಮನುಪ್ರಾಪ್ಯ ತಸ್ಮಾದಂಭೋ ನಿರುಚ್ಯತೇ ।
ನಾನಾತ್ವೇ ಚೈವ ಶೀಘ್ರೇ ಚ ಧಾತುರ್ವೈ ಅರ ಉಚ್ಯತೇ ॥ ೧೭೮ ॥

ಏಕಾರ್ಣವೇ ತದಾ ಹ್ಯೋ ವೈ ನ ಶೀಘ್ರಸ್ತೇನ ತಾ ನರಾಃ ।
ತಸ್ಮಿನ್ ಯುಗಸಹಸ್ರಾಂತೇ ದಿವಸೇ ಬ್ರಹ್ಮಣೋ ಗತೇ ॥ ೧೭೯ ॥

---

೧೭೫. ಅಗ್ನಿಯು ಶಾಂತವಾಗಿ ಎಲ್ಲೆಡೆಗಳಲ್ಲಿಯೂ ಅಂಧತಮಸ್ಸು ವ್ಯಾಪಿಸಿಕೊಂಡಿರಲು ಯಾವ ವಸ್ತುವು ಕೂಡ ಅರಿಯಲ್ಪಡಲಿಲ್ಲ. ಪೃಥಿವೀ, ಸಾಗರಗಳಲ್ಲಿ ಇರುವ ಮತ್ತು ದೇವ ಸಂಬಂಧಿಯಾದ ಜಲರಾಶಿಗಳು ಸರ್ವ ಪ್ರಕಾರಗಳಿಂದ ಚಲನ ರಹಿತವಾಗಿದ್ದುವು.

೧೭೬. ಆ ಜಲಗಳು ಸ್ವಲ್ಪಮಾತ್ರವೂ ಚಲನವಿಲ್ಲದಂತೆ ಐಕ್ಯವನ್ನು ಹೊಂದಿ ಸಲಿಲ ಎಂಬ ಸಂಜ್ಞೆಯನ್ನು ಹೊಂದುತ್ತವೆ, ಆಗ ಆ ಜಲವು ಗತ-ಆಗತಗಳಿಂದ ಶೂನ್ಯವಾಗಿ ಕೇವಲ ಜಲ ರೂಪದಿಂದ ಮಾತ್ರ ಇತ್ತೆಂದು ಸ್ಮರಿಸಲ್ಪಟ್ಟಿದೆ.

೧೭೭. ಆಗ ಅರ್ಣವ ಎಂಬ ಸಂಜ್ಞಾಂಕಿತವಾದ ಆ ಜಲರಾಶಿಯು ಈ ಭೂಮಿಯನ್ನು ಆಚ್ಛಾದಿಸಿ ತನ್ನ ಕಾಂತಿಯಿಂದ ತಾನು ಪ್ರಕಾಶಿಸುವುದು, ವ್ಯಾಪ್ತಿ ಮತ್ತು ದೀಪ್ತಿ ಎಂಬ ಅರ್ಥವನ್ನು ಸೂಚಿಸುವ "ಭಾ" ಎಂಬ ಶಬ್ದವು ನಾಮಾಂಕನದಲ್ಲಿ ಘಟಕವಾಗಿರುವುದು.

೧೭೮. ಭಸ್ಮಪ್ರಾಯವಾದ ಸರ್ವ ಜಗತ್ತನ್ನು ವ್ಯಾಪಿಸಿ ಜಲವು ಪ್ರಕಾಶಿಸುವುದರಿಂದ ಅಂಭ ಎಂಬ ಅನ್ವರ್ಥನಾಮವು ನಿರ್ವಚನ ಮಾಡಲ್ಪಟ್ಟಿದೆ, ನಾನಾತ್ವಸ್ಥಿತಿ, ಮತ್ತು ಶೀಘ್ರತ್ವ ಎಂಬ ಅರ್ಥಗಳಲ್ಲಿ "ಅರ" ಎಂಬ ಧಾತುವು ಪಠಿಸಲ್ಪಟ್ಟಿದೆ.

೧೭೯. ಏಕಾರ್ಣವ ಪ್ರಾಯದಶೆಯಲ್ಲಿ ಜಲವು ಶೀಘ್ರದ ವೇಗ ಮತ್ತು ನಾನಾ ರೂಪ ಪ್ರಾಪ್ತಿಯನ್ನು ತ್ಯಜಿಸಿರುವುದರಿಂದ ಜಲವು "ನಾರ" ಎಂಬ ನಾಮವನ್ನು

ತಾವಂತಂ ಕಾಲಮೇವಂ ತು ಭವತ್ಯೇಕಾರ್ಣವಂ ಜಗತ್ ।
ತದಾ ತು ಸರ್ವೇ ವ್ಯಾಪಾರಾ ನಿವರ್ತಂತೇ ಪ್ರಜಾಪತೇಃ ॥ ೧೮೦ ॥

ಏವಮೇಕಾರ್ಣವೇ ತಸ್ಮಿನ್ನಷ್ಟೇ ಸ್ಥಾವರಜಂಗಮೇ ।
ತದಾ ಸ ಭವತಿ ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೧೮೧ ॥

ಸಹಸ್ರಶೀರ್ಷಾ ಸುಮನಾಃ ಸಹಸ್ರಪಾತ್
ಸಹಸ್ರಚಕ್ಷುರ್ವದನಃ ಸಹಸ್ರವಾಕ್ ।
ಸಹಸ್ರಬಾಹುಃ ಪ್ರಥಮಃ ಪ್ರಜಾಪತಿ
ಸ್ತ್ರಯೀಮಯೋ ಯಃ ಪುರುಷೋ ನಿರುಚ್ಯತೇ ॥ ೧೮೨ ॥

ಆದಿತ್ಯವರ್ಣೋ ಭುವನಸ್ಯ ಗೋಪ್ತಾ
ಅಪೂರ್ವ ಏಕಃ ಪ್ರಥಮಸ್ತುರಾಷಾಟ್ ।
ಹಿರಣ್ಯಗರ್ಭಃ ಪುರುಷೋ ಮಹಾನ್ ವೈ
ಸಂಪಠ್ಯತೇ ವೈ ರಜಸಃ ಪರಸ್ತಾತ್ ॥ ೧೮೩ ॥

---

ಹೊಂದಿತು. ಆಗ ಯುಗಸಹಸ್ರ ಪರಿಮಾಣಾವಧಿಯುಳ್ಳ ಬ್ರಹ್ಮನ ದಿನಮಾನವು ಕಳೆಯುವುದು.

೧೮೦. ಮತ್ತೆ ಅಷ್ಟು ಪರಿಮಾಣದ ಕಾಲವು ಕಳೆಯುವವರೆಗೆ ಜಗತ್ತು ಏಕಾರ್ಣವದ ರೂಪವಾಗಿಯೆ ಇರುವುದು. ಆಗ ಪ್ರಜಾಪತಿಯ ಸಮಸ್ತ ವ್ಯಾಪಾರೋದ್ಯಮಗಳು ನಿಂತಿರುವುವು.

೧೮೧. ಈ ರೀತಿಯಾಗಿ ಸ್ಥಾವರ-ಜಂಗಮ ಪ್ರಾಣಿವರ್ಗದ ನಾಶದಿಂದ ಜಗತ್ತು ಏಕಾರ್ಣವ ಪ್ರಾಯವಾಗಿರಲು ಆಗ ಆ ಬ್ರಹ್ಮದೇವನು ಸಹಸ್ರ ನಯನ, ಸಹಸ್ರ ಪಾದ ಮುಂತಾದ ವಿರಾಡಾಕಾರವನ್ನು ಧರಿಸುವನು.

೧೮೨. ಮತ್ತು ಆ ಪ್ರಜಾಪತಿ ದೇವನು ಸಹಸ್ರಾರು ಸಂಖ್ಯೆಯ ಶಿರಸ್ಸು, ಪಾದ, ನೇತ್ರ, ಮುಖ, ವಾಗಿಂದ್ರಿಯ, ಬಾಹು ಮುಂತಾದ ಪುರುಷಾವಯವಗಳಿಂದ ಕೂಡಿ ವ್ಯಾಪಿಯಾದ ಆಕಾರವನ್ನು ಹೊಂದಿದವನೂ, ಉದಾತ್ತವಾದ ಮಾನಸವುಳ್ಳವನೂ, ವೇದತ್ರಯಾತ್ಮಕನೂ ಮತ್ತು ಪ್ರಥಮ ಪುರುಷ ಸ್ವರೂಪಿಯೂ ಆಗುವನು.

೧೮೩. ಮತ್ತು ಸೂರ್ಯನಂತೆ ಜ್ವಲಿಸುವ ವರ್ಣವುಳ್ಳವನೂ, ಪ್ರಪಂಚವನ್ನು ರಕ್ಷಿಸುವವನೂ, ಅಪೂರ್ವವಾದ ಅದ್ಭುತ ರೂಪವುಳ್ಳವನೂ, ಅದ್ವಿತೀಯನೂ, ಶತ್ರುಬಲವನ್ನು ಸಹಿಸುವವನೂ, ಹಿರಣ್ಯಗರ್ಭನೂ ಮತ್ತು ರಜೋಗುಣಾತೀತನೂ ಆದ ಮಹಾನಾತ್ಮಾ ಎಂದು ಕರೆಯಲ್ಪಡುವನು.

ಚತುರ್ಯುಗಸಹಸ್ರಾಂತೇ ಸರ್ವತಃ ಸಲಿಲಾಪ್ಲುತೇ ।
ಸುಷುಪ್ಸುರಪ್ರಕಾಶೇಪ್ಸುಃ ಸ ರಾತ್ರಿಂ ಕುರುತೇ ಪ್ರಭುಃ ॥ ೧೮೪ ॥

ಚತುರ್ವಿಧಾ ಯದಾ ಶೇತೇ ಪ್ರಜಾಃ ಸರ್ವಾ ಲಯಂ ಗತಾಃ ।
ಪಶ್ಯಂತಿ ತಂ ಮಹಾತ್ಮಾನಂ ಕಾಲಂ ಸಪ್ತಮಹರ್ಷಯಃ ॥ ೧೮೫ ॥

ಜನಲೋಕಂ ವಿವರ್ತಾಸ್ತೇ ತಪಸಾ ಲಬ್ಧಚಕ್ಷುಷಃ ।
ಭೃಗ್ವಾದಯೋ ಮಹಾತ್ಮಾನಃ ಪೂರ್ವೇ ವ್ಯಾಖ್ಯಾತಲಕ್ಷಣಾಃ ॥ ೧೮೬ ॥

ಸತ್ಯಾದೀನ್ ಸಪ್ತಲೋಕಾನ್ ವೈ ತೇ ಹಿ ಪಶ್ಯಂತಿ ಚಕ್ಷುಷಾ ।
ಬ್ರಹ್ಮಾಣಂ ತೇ ತು ಪಶ್ಯಂತಿ ಸದಾ ಬ್ರಾಹ್ಮೀಷು ರಾತ್ರಿಷು ॥ ೧೮೭ ॥

ಸಪ್ತರ್ಷಯಃ ಪ್ರಪಶ್ಯಂತಿ ಸ್ವಪ್ನಂ ಕಾಲಂ ಸ್ವರಾತ್ರಿಷು ।
ಕಲ್ಪಾನಾಂ ಪರಮೇಷ್ಠಿತ್ವಾತ್ತಸ್ಮಾದಾದ್ಯಃ ಸ ಪಠ್ಯತೇ ॥ ೧೮೮ ॥

---

೧೮೪. ಪ್ರಭುವಾದ ಆ ಬ್ರಹ್ಮದೇವನು ನಾಲ್ಕು ಸಹಸ್ರ ಯುಗಗಳ ಪರ್ಯಾಯದ ಕಡೆಯಲ್ಲಿ ಸರ್ವ ಜಗತ್ತು ನೀರಿನಿಂದ ಮುಚ್ಚಿ ಹೋಗಲು ಪ್ರಕಾಶಶೂನ್ಯವಾಗಿ ಸುಷುಪ್ತಿಯ ಇಚ್ಛೆಯಿಂದ ರಾತ್ರಿಯನ್ನು ನಿರ್ಮಿಸುತ್ತಾನೆ.

೧೮೫. ಆಗ ಬ್ರಹ್ಮನು ಶಯನಮಾಡಿದ ಕೂಡಲೆ ನಾಲ್ಕು ವಿಧರಾಗಿರುವ ಸಮಸ್ತ ಪ್ರಜೆಗಳು ಲಯವನ್ನು ಹೊಂದಿರುವರು. ಆದರೆ ಸಪ್ತಮಹರ್ಷಿಗಳು ಮಾತ್ರ ಮಹಾತ್ಮನೂ ಕಾಲಾತ್ಮಕನೂ ಆದ ಆ ಅನಂತಮೂರ್ತಿಯನ್ನು ಸಾಕ್ಷಾತ್ಕರಿಸುತ್ತಾರೆ.

೧೮೬. ಮಹಾತ್ಮರೆನಿಸಿಕೊಳ್ಳುವ, ಹಿಂದೆ ವಿವರಿಸಿದ ಲಕ್ಷಣಗಳಿಂದ ಕೂಡಿದ, ಮತ್ತು ಪೂರ್ವಿಕರಾದ ಭೃಗು ಮುಂತಾದ ಸಪ್ತಮಹರ್ಷಿಗಳು ತಪೋವೀರ್ಯದಿಂದ ಜ್ಞಾನದೃಷ್ಟಿಯನ್ನು ಹೊಂದಿ ಜನಲೋಕದಲ್ಲಿ ವಾಸಿಸುತ್ತಿರುವರು.

೧೮೭. ಆಗ ಆ ಸಪ್ತಮಹರ್ಷಿಗಳು ಸತ್ಯಲೋಕ ಮುಂತಾದ ಸಪ್ತಲೋಕಗಳನ್ನು ಕಣ್ಣಿನಿಂದ ನೋಡುತ್ತಿರುವರು ಮತ್ತು ಬ್ರಹ್ಮನ ರಾತ್ರಿಕಾಲಗಳಲ್ಲಿ ಯಾವಾಗಲೂ ಅವರು ಬ್ರಹ್ಮದೇವನನ್ನು ನೋಡುವರು.

೧೮೮. ಸಪ್ತಮಹರ್ಷಿಗಳು ತಮ್ಮ ರಾತ್ರಿವೇಳೆಗಳಲ್ಲಿ ಸ್ವಪ್ನಕಾಲವನ್ನು ನೋಡುತ್ತಾರೆ. ಕಲ್ಪಗಳು ಬ್ರಹ್ಮನ ಅಧೀನವಾಗಿ ನಡೆಯುವುದರಿಂದ ಬ್ರಹ್ಮದೇವನು ಆದಿ ಪುರುಷನೆಂದು ಹೇಳಲ್ಪಡುವನು.

ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।
ಏವಮಾವೇಶಯಿತ್ವಾ ತು ಹ್ಯಾತ್ಮನ್ಯೇವ ಪ್ರಜಾಪತಿಃ ॥ ೧೮೯ ॥

ಅಥಾತ್ಮನಿ ಮಹಾತೇಜಾಃ ಸರ್ವಮಾದಾಯ ಸರ್ವಕೃತ್ ।
ತತಃ ಸ ವಸತೇ ರಾತ್ರಿಂ ತಮಸ್ಯೇಕಾರ್ಣವೇ ಜಲೇ ॥ ೧೯೦ ॥

ತತೋ ರಾತ್ರಿಕ್ಷಯೇ ಪ್ರಾಪ್ತೇ ಪ್ರತಿಬುದ್ಧಃ ಪ್ರಜಾಪತಿಃ ।
ಮನಃಸಿಸೃಕ್ಷಯಾ ಯುಕ್ತಃ ಸರ್ಗಾಯ ನಿದಧೇ ಮನಃ ॥ ೧೯೧ ॥

ಏವಂ ಸ ಲೋಕೇ ನಿರ್ವೃತ್ತ ಉಪಶಾಂತೇ ಪ್ರಜಾಪತೌ ।
ಬ್ರಾಹ್ಮೇ ನೈಮಿತ್ತಿಕೇ ತಸ್ಮಿನ್ ಕಲ್ಪಿತೇ ವೈ ಪ್ರಸಂಯಮೇ ॥ ೧೯೨ ॥

ದೇಹೈರ್ವಿಯೋಗಃ ಸತ್ತ್ವಾನಾಂ ತಸ್ಮಿನ್ ವೈ ಕೃತ್ಸ್ನಶಃ ಸ್ಮೃತಃ ।
ತತೋ ದಗ್ಧೇಷು ಭೂತೇಷು ಸರ್ವೇಷ್ವಾದಿತ್ಯರಶ್ಮಿಭಿಃ ॥ ೧೯೩ ॥

---

೧೮೯. ಆ ಬ್ರಹ್ಮದೇವನು ಕಲ್ಪಾದಿಯಲ್ಲಿ ಮತ್ತೆ ಮತ್ತೆ ಸರ್ವ ಪ್ರಾಣಿಗಳನ್ನು ಸೃಷ್ಟಿಸುವನಾಗಿರುವನು. ಹೀಗೆ ಪ್ರಜಾಪತಿಯು ತನ್ನಲ್ಲಿ ಸರ್ವ ಭೂತಗಳನ್ನು ಪ್ರಳಯಕಾಲದಲ್ಲಿ ಇರಿಸಿಕೊಳ್ಳುವನು.

೧೯೦. ಮಹಾ ತೇಜಸ್ವಿಯಾದ, ಮತ್ತು ಸರ್ವ ಜಗನ್ನಿಯಾಮಕನಾದ ಬ್ರಹ್ಮನು ಎಲ್ಲವನ್ನೂ ತನ್ನಲ್ಲಿ ಐಕ್ಯವನ್ನು ಹೊಂದಿಸಿಕೊಂಡು ಜಲದಿಂದ ಏಕಾರ್ಣವ ಪ್ರಾಯವಾಗಿರುವ ಅಂಧಕಾರದಶೆಯಲ್ಲಿ ತನ್ನ ರಾತ್ರಿ ಕಾಲವೆಲ್ಲ ವಾಸಮಾಡುವನು

೧೯೧. ಮತ್ತೆ ರಾತ್ರಿ ಕಾಲದ ಕ್ಷಯವು ಪ್ರಾಪ್ತವಾಗಿರಲು ಪ್ರಜಾಪತಿಯು ಪ್ರಬೋಧವನ್ನು ಹೊಂದುವನು. ಆಗ ಜಗತ್ತಿನ ನೂತನ ಸೃಷ್ಟಿಯನ್ನು ಮಾಡಬೇಕೆಂಬ ಸಂಕಲ್ಪದಿಂದ ಕೂಡಿ ಸೃಷ್ಟಿ ರಚನೆಯಲ್ಲಿ ತನ್ನ ಮನಸ್ಸನ್ನು ಇಡುವನುಗೆ

೧೯೨. ಈ ರೀತಿಯಾಗಿ ಸರ್ವ ಲೋಕಗಳ ನಾಶವು ಸಂಭವಿಸಿ ಪ್ರಜಾಪತಿಯು ತನ್ನ ವ್ಯಾಪಾರಗಳಿಂದ ನಿವೃತ್ತನಾಗಲು ಬ್ರಹ್ಮದೇವನ ಸುಷುಪ್ತಿ ನಿಮಿತ್ತದಿಂದ ಆ ಕಲ್ಪಾವಸಾನದ ಉಪಸಂಹಾರವು ನಡೆಯುವುದು. ಅದು ನೈಮಿತ್ತಿಕ ಪ್ರಲಯವೆಂದು ಕರೆಯಲ್ಪಡುವುದು.

೧೯೩. ಅಂತಹ ನೈಮಿತ್ತಿಕ ಪ್ರಳಯಾವಸ್ಥೆಯಲ್ಲಿ ಸಮಸ್ತ ಪ್ರಾಣಿಗಳಿ ಸಂಪೂರ್ಣವಾಗಿ ದೇಹಗಳಿಂದ ವಿಯೋಗವು ಸಂಭವಿಸುವುದೆಂದು ಸ್ಮರಿಸಲ್ಪಟ್ಟಿರುವುದು. ಆದುದರಿಂದ ಸರ್ವ ಭೂತಗಳು ಸೂರ್ಯನ ರಶ್ಮಿಗಳಿಂದ ದಹಿಸಲ್ಪಡುವುವು.

ದೇವರ್ಷಿಮನುವರ್ಯೇಷು ತಸ್ಮಿನ್ನಂಬುಪ್ಲವೇ ತದಾ ।
ಗಂಧರ್ವಾದೀನಿ ಸತ್ತ್ವಾನಿ ಪಿಶಾಚಾಂತಾನಿ ಸರ್ವಶಃ ॥ ೧೯೪ ॥

ಕಲ್ಪದಾವಪ್ರತಪ್ತಾನಿ ಜನಮೇವಾಶ್ರಯಂತಿ ವೈ ।
ತಿರ್ಯಗ್ಯೋನೀನಿ ನರಕೇ ಯಾನಿ ಯಾನಿ ಗತಾನ್ಯಪಿ ॥ ೧೯೫ ॥

ತದಾ ತಾನ್ಯಪಿ ದಗ್ಧಾನಿ ಧೂತಪಾಪಾನಿ ಸರ್ವಶಃ ।
ಜಲೇ ತಾನ್ಯುಪಪದ್ಯಂತೇ ಯಾವತ್ಸಂಪ್ಲವತೇ ಜಗತ್ ॥ ೧೯೬ ॥

ವ್ಯುಷ್ಟಾಯಾಂ ಚ ರಜನ್ಯಾಂ ತು ಬ್ರಹ್ಮಣೋಽವ್ಯಕ್ತಯೋನಿತಃ ।
ಜಾಯಂತೇ ಹಿ ಪುನಸ್ತಾನಿ ಸರ್ವಭೂತಾನಿ ಕೃತ್ಸ್ನಶಃ ॥ ೧೯೭ ॥

ಋಷಯೋ ಮನವೋ ದೇವಾಃ ಪ್ರಜಾಃ ಸರ್ವಾಶ್ಚತುರ್ವಿಧಾಃ ।
ತೇಷಾಮಪಿ ಚ ಸಿದ್ಧಾನಾಂ ನಿಧನೋತ್ಪತ್ತಿರುಚ್ಯತೇ ॥ ೧೯೮ ॥

---

೧೯೪. ಆಗ ದೇವ, ಋಷಿ, ಮುಂತಾದ ಉತ್ತಮರಾದ ಪ್ರಜೆಗಳೂ ಮತ್ತು ಗಂಧರ್ವ ಮೊದಲಾಗಿ ಪಿಶಾಚಾಂತ ಸಮಸ್ತ ಪ್ರಜಾವರ್ಗವೂ ಆ ಸಮಯದಲ್ಲಿ ಸರ್ವ ಪ್ರಕಾರದಿಂದಲೂ ನಾಲ್ಕು ಲೋಕಗಳನ್ನು ಬಿಡುವರು.

೧೯೫. ಆ ಪ್ರಜೆಗಳು ಕಲ್ಪಾಂತ ಕಾಲದ ಅಗ್ನಿಯಿಂದ ತಪ್ತರಾಗಿ ಜನೋ ಲೋಕವನ್ನು ಆಶ್ರಯಿಸುವರು. ಮತ್ತು ತಿರ್ಯಕ್‌ಪ್ರಾಣಿ ಅಥವಾ ನರಕದಲ್ಲಿ ಯಾತನಾ ದೇಹದಿಂದಿರುವ ಸಮಸ್ತ ಪ್ರಾಣಿಗಳು ಕಲ್ಪಾಂತಾಗ್ನಿ ದಾಹಕ್ಕೆ ಸಿಕ್ಕುವುವು

೧೯೬. ಆಗ ಅವುಗಳು ದಹಿಸಲ್ಪಟ್ಟು ತಮ್ಮ ಸಮಸ್ತ ಪಾಪಗಳಿಂದ ಬಿಡಲ್ಪಡುವುವು. ಮತ್ತು ಎಷ್ಟು ಸಮಯದವರೆಗೆ ಜಗತ್ತು ನೀರಿನಲ್ಲಿ ಮುಳುಗಿರುವುದೊ ಅದುವರೆಗೆ ಜಲದಲ್ಲಿ ಸೇರಿರುವುವು.

೧೯೭. ಬ್ರಹ್ಮನ ರಾತ್ರಿವೇಳೆಯು ಕಳೆದು ಪ್ರಭಾತವಾಗಲಾಗಿ ಅವ್ಯಕ್ತವೆಂಬ ಮೂಲಕಾರಣದಿಂದ ಮತ್ತೆ ಸಮಸ್ತ ಭೂತಗಳು ಸಂಪೂರ್ಣವಾಗಿ ಉತ್ಪತ್ತಿಯನ್ನು ಹೊಂದುವುವು.

೧೯೮. ಋಷಿ, ಮನು, ದೇವತೆ, ನಾಲ್ಕು ವಿಧವಾದ ಪ್ರಜೆ—ಈ ವರ್ಗದಲ್ಲಿ ಸೇರಿದ ಸಿದ್ಧಿಯಿಂದ ಕೂಡಿದ ಮಹಾತ್ಮರಿಗೆ ಕೂಡ ನಿಧನ ಮತ್ತು ಪುನರುತ್ಪತ್ತಿಯು ಹೇಳಲ್ಪಟ್ಟಿದೆ.

ಯಥಾ ಸೂರ್ಯಸ್ಯ ಲೋಕೇಽಸ್ಮಿನ್ನುದಯಾಸ್ತಮನೇ ಸ್ಮೃತೇ ।
ತಥಾ ಜನ್ಮನಿರೋಧಶ್ಚ ಭೂತಾನಾಮಿಹ ದೃಶ್ಯತೇ ॥ ೧೯೯ ॥

ಆಭೂತಸಂಪ್ಲವಾತ್ತಸ್ಮಾದ್ಭವಃ ಸಂಸಾರ ಉಚ್ಯತೇ ।
ಯಥಾ ಸರ್ವಾಣಿ ಭೂತಾನಿ ಜಾಯಂತೇ ವರ್ಷಣೇಽಸ್ಮಿಹ ॥ ೨೦೦ ॥

ಸ್ಥಾವರಾದೀನಿ ನಿಯಮಾತ್ ಕಲ್ಪೇ ಕಲ್ಪೇ ತಥಾ ಪ್ರಜಾಃ ।
ಯಥರ್ತಾವೃತುಲಿಂಗಾನಿ ನಾನಾರೂಪಾಣಿ ಪರ್ಯಯೇ ॥ ೨೦೧ ॥

ದೃಶ್ಯಂತೇ ತಾನಿ ತಾನ್ಯೇವ ತಥಾ ಬ್ರಹ್ಮದ್ಯುರಾತ್ರಿಷು ।
ಪ್ರತ್ಯಾಹಾರೇ ವಿಸರ್ಗೇ ಚ ಗತಿಮಂತಿ ಧ್ರುವಾಣಿ ಚ ॥ ೨೦೨ ॥

ನಿಷ್ಕ್ರಮಂತೇ ವಿಶಂತೇ ಚ ಪ್ರಜಾಃ ಕಾಲೇ ಪ್ರಜಾಪತಿಮ್ ।
ಬ್ರಹ್ಮಾಣಂ ಸರ್ವಭೂತಾನಿ ಮಹಾಯೋಗಂ ಮಹೇಶ್ವರಮ್ ॥ ೨೦೩ ॥

---

೧೯೯. ಈ ಲೋಕದಲ್ಲಿ ಸೂರ್ಯನಿಗೆ ಹೇಗೆ ಉದಯ ಮತ್ತು ಅಸ್ತಮಯಗಳು ಸ್ಮರಿಸಲ್ಪಟ್ಟಿರುವುವೊ ಅದರಂತೆ ಸರ್ವ ಭೂತಗಳಿಗೆ ಉತ್ಪತ್ತಿ ಮತ್ತು ನಾಶಗಳು ಕಾಣುತ್ತಲಿವೆ.

೨೦೦. ಹಾಗೆ ಸಂಭವಿಸುವ ಭೂತಸಂಪ್ಲವವೆಂಬ ಪ್ರಲಯದವರೆಗೆ ಸಂಸಾರ ಪ್ರಪಂಚವು ನಡೆಯುವುದೆಂದು ಹೇಳಲ್ಪಟ್ಟಿದೆ. ವರ್ಷಾ ಕಾಲದಲ್ಲಿ ಬೀಳುವ ಮಳೆಯಿಂದ ಈ ಲೋಕದಲ್ಲಿ ಅನೇಕ ಭೂತಗಳು ಹುಟ್ಟುತ್ತವೆ.

೨೦೧. ಹಾಗೆ ಮಳೆಯಿಂದ ಜನಿಸುವ ಸ್ಥಾವರಾದಿ ಅನೇಕ ಭೂತಗಳು ಹುಟ್ಟುವಂತೆ ಪ್ರತಿಯೊಂದು ಕಲ್ಪಾದಿಯಲ್ಲಿ ಪ್ರಜೆಗಳು ನಿಯಮದಿಂದ ಹುಟ್ಟುತ್ತವೆ. ವಸಂತಾದಿ ಋತುಗಳು ಅನೇಕ ವಿಧವಾದ ಲಿಂಗಗಳಿಂದ ಕೂಡಿ ಇದ್ದು ತಮ್ಮ ಅವಧಿಯು ಕಳೆಯಲಾಗಿ ಒಂದು ಋತುವು ಹೋಗಿ ಮತ್ತೊಂದು ಋತುವು ಪರ್ಯಾಯವಾಗಿ ಬರುವುದು.

೨೦೨. ಆದರೆ ಕಳೆದ ಋತುವು ಪರ್ಯಾಯದಿಂದ ಮತ್ತೆ ಬರಲು ಹಿಂದಿನ ತನ್ನ ಚಿಹ್ನಗಳಿಂದ ಕೂಡಿ ಕಾಣಿಸುವಂತೆ ಬ್ರಹ್ಮನ ಅಹಸ್ಸು ರಾತ್ರಿಗಳಲ್ಲಿ ಆಯಾಯ ಭೂತಗಳು ಕಾಣಿಸುವುವು. ಹೀಗೆ ಸ್ಥಾವರ-ಜಂಗಮ-ಸಮಸ್ತ ಪ್ರಾಣಿಗಳು ಸೃಷ್ಟಿ ಪ್ರಲಯಗಳಿಗೆ ಗೋಚರವಾಗುವುವು.

೨೦೩. ಹೀಗೆ ಸೃಷ್ಟಿ ಮತ್ತು ಸಂಹಾರಗಳನ್ನು ಅನುಸರಿಸಿ ಸಮಸ್ತ ಭೂತಗಳೆಂಬ ಪ್ರಜೆಗಳು ಮಹಾ ಯೋಗಿಯೂ ಮಹೇಶ್ವರನೂ ಮತ್ತು ಪ್ರಜಾಪತಿಯೂ ಆದ ಬ್ರಹ್ಮದೇವನಲ್ಲಿ ಪ್ರವೇಶಮಾಡಿ ಮತ್ತೆ ಅಲ್ಲಿಂದ ಹೊರಟುಬರುವರು

ಸ ಸ್ರಷ್ಟಾ ಸರ್ವಭೂತಾನಾಂ ಕಲ್ಪಾದಿಷು ಪುನಃ ಪುನಃ ।
ವ್ಯಕ್ತೋಽವ್ಯಕ್ತೋ ಮಹಾದೇವಸ್ತಸ್ಯ ಸರ್ವಮಿದಂ ಜಗತ್ ॥ ೨೦೪ ॥

ಯೇನೈವ ಸೃಷ್ಟಾಃ ಪ್ರಥಮಂ ಪ್ರಯಾತಾ
ಆಪೋ ಹಿ ಮಾರ್ಗೇಣ ಮಹೀತಲೇಽಸ್ಮಿನ್ ।
ಪೂರ್ವಂ ಪ್ರಯಾತೇನ ಯಥಾ ತ್ವಥಾಪ
ಸ್ತೇನೈವ ತೇನೈವ ತು ಸ್ವರ್ಪ್ರಜಂತಿ ॥ ೨೦೫ ॥

ಯಥಾ ಶುಭೇನ ತ್ವಶುಭೇನ ಚೈವ
ತತ್ರೈವ ತತ್ರೈವ ವಿವರ್ತಮಾನಾಃ ।
ಮರ್ತ್ಯಾಸ್ತು ದೇಹಾಂತರಭಾವಿತತ್ವಾ-
ದ್ರವೇರ್ವಶಾದೂರ್ಧ್ವಮಧಶ್ಚರಂತಿ ॥ ೨೦೬ ॥

ಯೇ ಚಾಪಿ ದೇವಾ ಮನವಃ ಪ್ರಜೇಶಾ
ಅನ್ಯೇಽಪಿ ಯೇ ಸ್ವರ್ಗಗತಾಶ್ಚ ಸಿದ್ಧಾಃ ।
ತದ್ಭಾವಿತಾಃ ಖ್ಯಾತಿವಶಾಚ್ಚ ಧರ್ಮ್ಯಾಃ
ಪುನರ್ವಿಸರ್ಗೇಣ ಭವಂತಿ ಸತ್ತ್ವಾಃ ॥ ೨೦೭ ॥

---

೨೦೪. ವ್ಯಕ್ತ-ಅವ್ಯಕ್ತ ರೂಪಗಳಿಂದ ಇರುವವನೂ ಮಹಾದೇವನೂ ಆದ ಬ್ರಹ್ಮದೇವನು ಕಲ್ಪದ ಆದಿಯಲ್ಲಿ ಮತ್ತೆ ಸರ್ವ ಭೂತಗಳನ್ನು ನಿರ್ಮಿಸುವನಾದ್ದರಿಂದ ಈ ಎಲ್ಲ ಜಗತ್ತು ಬ್ರಹ್ಮದೇವನಿಗೆ ಅಧೀನವಾದುದು.

೨೦೫. ಮೊದಲು ಸೃಷ್ಟಿಸಲ್ಪಟ್ಟ ಜಲಗಳು ಯಾವ ಮಾರ್ಗದಿಂದ ಈ ಭೂಮಂಡಲವನ್ನು ಹೊಂದಿರುವುವೊ ಹಾಗೆಯೆ ಮೊದಲು ಬಂದಿರುವ ಮಾರ್ಗದಿಂದ ಆ ಜಲಗಳು ಮತ್ತೆ ಮತ್ತೆ ಸ್ವರ್ಲೋಕಕ್ಕೆ ಹೋಗುವುವು.

೨೦೬. ಮಾನವರು ತಾವು ಮಾಡಿದ ಶುಭ ಅಥವಾ ಅಶುಭ ಕರ್ಮನಿಮಿತ್ತದಿಂದ ತದನುಗುಣವಾದ ಆಯಾಯ ಪರಿಣಾಮಗಳನ್ನು ಹೇಗೆ ಹೊಂದುವರೊ ಅದರಂತೆ ದೇಹಾಂತರ ಭಾವನಾವಶದಿಂದ ಸೂರ್ಯನ ಆಧಾರವನ್ನು ಅವಲಂಬಿಸಿ ಊರ್ಧ್ವ-ಅಧೋಭಾಗಗಳಲ್ಲಿ ಸಂಚರಿಸುವರು.

೨೦೭. ದೇವ, ಮನು, ಪ್ರಜಾಪತಿ ಅಥವಾ ಸ್ವರ್ಗಲೋಕವನ್ನು ಹೊಂದಿದ ಸಿದ್ಧರು ಮೊದಲಾದ ಉತ್ತಮ ಪುಣ್ಯಾತ್ಮರು ತಮ್ಮ ಭಾವನಾವಶದಿಂದಲೂ ತತ್ತ್ವಖ್ಯಾತಿಯಿಂದಲೂ ಧರ್ಮ ಅನುವರ್ತಿಗಳಾಗಿ ಪುನಃ ಸೃಷ್ಟಿ ಕ್ರಮದಿಂದ ಸತ್ತ್ವವಂತರಾಗುವರು.

ಅತ ಊರ್ಧ್ವಂ ಪ್ರವಕ್ಷ್ಯಾಮಿ ಕಾಲಮಾಭೂತಸಂಪ್ಲವಮ್ ।
ಮನ್ವಂತರಾಣಿ ಯಾನಿ ಸ್ಯುರ್ವ್ಯಾಖ್ಯಾತಾನಿ ಮಯಾ ದ್ವಿಜಾಃ ॥ ೨೦೮ ॥

ಸಹ ಪ್ರಜಾನಿಸರ್ಗೇಣ ಸಹ ದೇವೈಶ್ಚತುರ್ದಶ ।
ಸಾ ಯುಗಾಖ್ಯಾ ಸಹಸ್ರಂ ತು ಸರ್ವಾಣ್ಯೇವಾಂತರಾಣಿ ವೈ ॥ ೨೦೯ ॥

ಅಸ್ಯಾಃ ಸಹಸ್ರೇ ದ್ವೇ ಪೂರ್ಣೇ ವಿಶೇಷಃ ಕಲ್ಪ ಉಚ್ಯತೇ ।
ಏತದ್ಬ್ರಾಹ್ಮಮಹರ್ಜ್ಞೇಯಂ ತಸ್ಯ ಸಂಖ್ಯಾಂ ನಿಬೋಧತ ॥ ೨೧೦ ॥

ನಿಮೇಷತುಲ್ಯಮಾತ್ರಾ ಹಿ ಕೃತಾ ಲಬ್ಧಕ್ಷಣೇನ ತು ।
ಮಾನುಷಾಕ್ಷಿನಿಮೇಷಾಸ್ತು ಕಾಷ್ಠಾ ಪಂಚದಶ ಸ್ಮೃತಾಃ ॥ ೨೧೧ ॥

ನವ ಕ್ಷಣಾಸ್ತು ಪಂಚೈವ ವಿಂಶತ್ಕಾಷ್ಠಾ ತು ತೇ ತ್ರಯಃ ।
ಪ್ರಸ್ಥಾಃ ಸಪ್ತೋದಕಾಶ್ಚೈವ ಸಾಧಿಕಾಸ್ತು ಲವಃ ಸ್ಮೃತಃ ॥ ೨೧೨ ॥

---

೨೦೮. ದ್ವಿಜರೆ! ನನ್ನಿಂದ ಇದುವರೆಗೆ ಯಾವ ಮನ್ವಂತರಗಳು ವ್ಯಾಖ್ಯಾನ ಮಾಡಲ್ಪಟ್ಟಿವೆಯೋ ಅಂತಹ ಮನ್ವಂತರಗಳಿಂದ ಕೂಡಿದ ಭೂತಸಂಪ್ಲವ ನಿಮಿತ್ತವಾದ ಪ್ರಲಯಕಾಲ ಸ್ವರೂಪವನ್ನು ಇನ್ನು ಮುಂದೆ ಹೇಳುವೆನು.

೨೦೯. ಆಯಾಯ ಪ್ರಜಾಸೃಷ್ಟಿಯಿಂದಲೂ ದೇವತಾ ವಿಶೇಷಗಳಿಂದಲೂ ಸೇರಿ ಹದಿನಾಲ್ಕು ಮನುರಾಜರಿಗೆ ನಿಯಮ್ಯವಾಗಿರುವ ಹದಿನಾಲ್ಕು ಮನ್ವಂತರಗಳೆಂಬ ಕಾಲವನ್ನು ಯುಗಸಹಸ್ರವೆಂಬ ಹೆಸರಿನಿಂದ ಕರೆಯುವರು.

೨೧೦. ಈ ಯುಗಾಖ್ಯೇಯ ಕಾಲಗಳ ಎರಡು ಸಹಸ್ರಗಳು ಪೂರ್ಣವಾದರೆ ಒಂದು ಕಲ್ಪ ವಿಶೇಷವೆಂದು ಹೇಳಲ್ಪಡುವುದು. ಇದೊಂದು ಬ್ರಹ್ಮಮಾನದ ಅಹಸ್ಸು ಎಂದು ತಿಳಿಯಬೇಕು. ಅದರ ಸಂಖ್ಯೆಯನ್ನು ತಿಳಿಯಿರಿ.

೨೧೧. ಕಣ್ಣಿನ ರೆಪ್ಪೆಯನ್ನು ಹೊಡೆಯುವುದಕ್ಕೆ ಸಮಾನವಾದ ಕಾಲವನ್ನು ಕ್ಷಣಕಾಲವೆಂದು ಹೇಳುವರು. ಮಾನವರ ಹದಿನೈದು ಅಕ್ಷಿನಿಮೇಷ ಕಾಲವು ಕಾಷ್ಠಾ ಎಂದು ಸ್ಮರಿಸಲ್ಪಟ್ಟಿದೆ.

೨೧೨. ಅಂತಹ ಕಲೆಗಳು ಇಪ್ಪತ್ತೈದು ಸೇರಿದರೆ ಒಂಭತ್ತು ಕ್ಷಣಗಳೂ ಮೂರು ಕ್ಷಣಗಳು ಸೇರಿ ಒಂದು ಪ್ರಸ್ಥವೆಂಬ ಸೂಕ್ಷ್ಮ ಕಾಲವೂ ಏಳು ಪ್ರಸ್ಥಗಳಿಂದ ಉದಕವೆಂಬ ಕಾಲವೂ, ಅದು ದ್ವಿಗುಣವಾದರೆ ಲವವೆಂಬ ಸೂಕ್ಷ್ಮ ಕಾಲವೂ ಆಗುವುದು.

ಲವಾಸ್ತ್ರಿಂಶಲ್ಲವಾ ಜ್ಞೇಯಾ ಮುಹೂರ್ತಸ್ತ್ರಿಂಶತಃ ಕಲಾಃ ।
ಮುಹೂರ್ತಾಸ್ತು ಪುನಸ್ತ್ರಿಂಶದಹೋರಾತ್ರಮಿತಿ ಸ್ಥಿತಿಃ ॥ ೨೧೩ ॥

ಅಹೋರಾತ್ರಂ ಕಲಾನಾಂ ತು ಅಧಿಕಾನಿ ಶತಾನಿ ಷಟ್ ।
ತಾಶ್ಚೈವ ಸಂಖ್ಯಯಾ ಜ್ಞೇಯಾಶ್ಚಂದ್ರಾದಿತ್ಯಗತಿರ್ಯಥಾ ॥ ೨೧೪ ॥

ನಿಮೇಷಾ ದಶ ಪಂಚೈವಂ ಕಾಷ್ಠಾಸ್ತಾಸ್ತ್ರಿಂಶತಃ ಕಲಾ ।
ತ್ರಿಂಶತ್ಕಲಾ ಮುಹೂರ್ತಂ ತು ದಶಭಾಗಂ ಕಲಾ ಸ್ಮೃತಮ್॥ ೨೧೫ ॥

ಚತ್ವಾರಿಂಶತ್ಕಲಾಃ ಪಂಚ ಮುಹೂರ್ತ ಇತಿ ಸಂಜ್ಞಿತಃ ।
ಮುಹೂರ್ತಾಶ್ಚ ಲವಾಶ್ಚಾಪಿ ಪ್ರಮಾಣಜ್ಞೈಃ ಪ್ರಕಲ್ಪಿತಾಃ ॥ ೨೧೬ ॥

ತಥಾನೇನಾಂಭಸಶ್ಚಾಪಿ ಪಲಾನ್ಯಥ ತ್ರಯೋದಶ ।
ಮಾಗಧೇನೈವ ಮಾನೇನ ಜಲಪ್ರಸ್ಥೋ ವಿಧೀಯತೇ ॥ ೨೧೭ ॥

---

೨೧೩. ಅಂತಹ ಮೂವತ್ತು ಲವಗಳು ಸೇರಿದರೆ ಒಂದು ಕಲೆಯು ಆಗುವುದೆಂದೂ ಮೂವತ್ತು ಕಲೆಗಳು ಸೇರಿದರೆ ಒಂದು ಮುಹೂರ್ತವು ಆಗುವುದೆಂದೂ ತಿಳಿಯಬೇಕು. ಹಾಗೆ ಮೂವತ್ತು ಮುಹೂರ್ತಗಳು ಒಂದು ಅಹೋರಾತ್ರವು ಎಂಬುದು ಸ್ವಾಭಾವಿಕವಾದ ಸ್ಥಿತಿಯು.

೨೧೪. ಮೂವತ್ತು ಮುಹೂರ್ತಾತ್ಮಕವಾದ ಕಾಲದಲ್ಲಿ ಆರುನೂರಕ್ಕಿಂತಲೂ ಅಧಿಕವಾದ ಕಲೆಗಳು ಸೇರಿಕೊಂಡಿವೆ. ಇಂತಹ ಸೂಕ್ಷ್ಮಾಂಶವಾದ ಕಲಾಗಣನೆಯು ಚಂದ್ರ–ಸೂರ್ಯರ ಗತಿಯನ್ನು ಅನುಸರಿಸಿ ಸಂಖ್ಯಾಬದ್ಧವಾಗಿರುವುದು.

೨೧೫. ಕಣ್ಣುರೆಪ್ಪೆ ಹೊಡೆಯುವ ಕಾಲವು ನಿಮೇಷವೆಂದು ಸಂಕೇತಿತವಾಗಿದೆ. ಆ ಹದಿನೈದು ನಿಮೇಷಗಳು ಕಾಷ್ಠಾ ಎಂದೂ, ಮೂವತ್ತು ಕಾಷ್ಠೆಗಳು ಒಂದು ಕಲಾ ಎಂದೂ ಮೂವತ್ತು ಕಲೆಗಳು ಒಂದು ಮುಹೂರ್ತವೆಂದೂ ಮತ್ತೊಂದು ವಿಭಜನೆಯು ಇರುವುದು, ಮುಹೂರ್ತದ ದಶಮಾವಸ್ಥೆಯು ಕಲಾ ಎಂದು ಸ್ಮರಿಸಲ್ಪಟ್ಟಿದೆ.

೨೧೬. ಇನ್ನೊಂದು ರೀತಿಯಲ್ಲಿ ನಲವತ್ತೈದು ಕಲೆಗಳು ಸೇರಿದರೆ ಒಂದು ಮುಹೂರ್ತವಾಗುವುದೆಂದು ಸಂಕೇತವನ್ನು ಹೊಂದಿದೆ. ಹೀಗೆ ಲವ-ಮುಹೂರ್ತ ಮುಂತಾದ ಕಾಲಾಂಶಗಳ ಸಂಜ್ಞಾ-ಪರಿಮಾಣಗಳು ಪ್ರಮಾಣಜ್ಞರಿಂದ ಕಲ್ಪಿಸಲ್ಪಟ್ಟಿವೆ.

೨೧೭ ಮಾಗಧವೆಂಬ ಕಾಲಪರಿಮಾಣವನ್ನು ಅನುಸರಿಸಿ ಕಾಲಾಂಶಗಳ ಜ್ಞಾನಕ್ಕೆ ಜಲಪ್ರಸ್ಥವೆಂಬ ಸಾಧನವು ವಿಧಿಸಲ್ಪಟ್ಟಿದೆ. ಅವರಲ್ಲಿ ಹದಿಮೂರು ಪಲಪ್ರಮಾಣಗಳಷ್ಟು ರಂಧ್ರದಿಂದ ತುಂಬುವ ನೀರನ್ನು ನೋಡಿ ಕಾಲಾಂಶವನ್ನು ತಿಳಿಯಬೇಕು.

ಏತೇ ವಾರಾಪ್ಲುತಪ್ರಸ್ಥಾಶ್ಚತ್ವಾರೋ ನಾಲಿಕೋಚ್ಛ್ರಯಃ |
ಹೇಮಮಾಷೈಃ ಕೃತಚ್ಛಿದ್ರಶ್ಚತುರ್ಭಿಶ್ಚತುರಂಗುಲೈಃ ॥ ೨೧೮ ॥

ಸಮಾಹನಿ ಚ ರಾತ್ರೌ ಚ ಮುಹೂರ್ತಾ ವೈ ದ್ವಿನಾಲಿಕಾಃ |
ರವೇರ್ಗತಿವಿಶೇಷೇಣ ಸರ್ವೇಷ್ವೇತೇಷು ನಿತ್ಯಶಃ ॥ ೨೧೯ ॥

ಅಧಿಕಂ ಷಟ್ಛತಂ ಯಚ್ಚ ಕಲಾನಾಂ ಪ್ರವಿಧೀಯತೇ |
ತದಹರ್ಮಾನುಷಂ ಜ್ಞೇಯಂ ನಾಕ್ಷತ್ರಂ ತು ದಶಾಧಿಕಮ್ ॥ ೨೨೦ ॥

ಸಾವನೇನ ತು ಮಾನೇನ ಅಬ್ದೋಽಯಂ ಮಾನುಷಃ ಸ್ಮೃತಃ |
ಏತದ್ದಿವ್ಯಮಹೋರಾತ್ರಮಿತಿ ಶಾಸ್ತ್ರವಿನಿಶ್ಚಯಃ ॥ ೨೨೧ ॥

ಅಹ್ನಾನೇನ ತು ಯಾ ಸಂಖ್ಯಾ ಮಾಸರ್ತ್ವಯನವಾರ್ಷಿಕೀ |
ತದಾಬದ್ಧಮಿದಂ ಜ್ಞಾನಂ ಸಂಜ್ಞಯಾ ಹ್ಯುಪಲಕ್ಷಿತಮ್ ॥ ೨೨೨ ॥

---

೨೧೮. ಜಲಪೂರ್ಣವಾದ ಹಿಂದೆ ಹೇಳಿದ ನಾಲ್ಕು ಜಲಪ್ರಸ್ಥಗಳು ಒಂದು ನಾಲಿಕೋಚ್ಛ್ರಯ ರೂಪವಾಗುವುವು. ಆ ಜಲಪ್ರಸ್ಥಮಾನಪಾತ್ರವು ನಾಲ್ಕು ಅಂಗುಲ ಮತ್ತು ನಾಲ್ಕು ಹೇಮ ಮಾಷವೆಂಬ ಪರಿಮಾಣವುಳ್ಳದ್ದಾಗಿಯೂ ಮತ್ತು ರಂಧ್ರಸಹಿತವೂ ಆಗಿರಬೇಕು.

೨೧೯. ಒಂದೇ ಪರಿಮಾಣದ ರಾತ್ರಿ-ಹಗಲುಗಳಿಂದ ಕೂಡಿದ ದಿನದಲ್ಲಿ ದ್ವಿನಾಲಿಕಗಳ ರೂಪವಾಗಿ ಮುಹೂರ್ತಗಳು ಇರುವುವು, ಈ ಎಲ್ಲ ಮುಹೂರ್ತಗಳು ಸೂರ್ಯನ ಗತಿವಿಶೇಷವನ್ನು ಅನುಸರಿಸಿ ಸಂಭವಿಸುತ್ತವೆ.

೨೨೦. ಅಧಿಕಭಾಗಸಹಿತವಾದ ಆರುನೂರು ಕಲಾತ್ಮಕವಾದ ಪರಿಮಾಣವು ಹಿಂದೆ ಹೇಳಲ್ಪಟ್ಟಿರುವುದು. ಅದು ಮಾನುಷವಾದ ಅಹಸ್ಸು ಎಂದು ಭಾವಿಸಬೇಕು. ಇದಕ್ಕಿಂತಲೂ ದಶಭಾಗಗಳಿಂದ ಅಧಿಕವಾದುದು ನಾಕ್ಷತ್ರ ಅಹಸ್ಸು ಎಂದು ತಿಳಿಯಬೇಕು.

೨೨೧. ಸಾವನ ಮಾನವನ್ನು ಅನುಸರಿಸಿ ನಡೆಯುವ ಈ ಸಂವತ್ಸರ ಭಾಗವು ಮಾನುಷಸಂವತ್ಸರವೆಂದು ಸ್ಮರಿಸಲ್ಪಟ್ಟಿದೆ. ಇದು ದಿವ್ಯವಾದ ಅಹೋರಾತ್ರ ಸಮಷ್ಟಿಯು, ಎಂಬುದು ಶಾಸ್ತ್ರವಚನದಿಂದ ಸಿದ್ಧವಾಗಿರುವ ನಿರ್ಣಯವಾಗಿದೆ.

೨೨೨. ಹಿಂದೆ ಹೇಳಿದ ಕಾಲಾಂಶಗಣವಾದ ಅಹಸ್ಸುಗಳ ಗಣದಿಂದ ಮಾಸ, ಋತು, ಅಯನ, ವರ್ಷರೂಪವಾದ ಸ್ಥೂಲಕಾಲಗಳು ನಡೆಯುವುವು. ಹೀಗೆ ಸೂಕ್ಷ್ಮ ಸ್ಥೂಲಗಣನೆಯಿಂದ ಕಾಲವು ಬದ್ಧವಾಗಿರುವುದು. ಅದರ ಜ್ಞಾನವು ಸೂಚಿಸಲ್ಪಟ್ಟಿದೆ.

ಕಲಾನಾಂ ತು ಪರೀಮಾಣಂ ಕಲಾ ಇತ್ಯಭಿಧೀಯತೇ ।
ಯದಹೋ ಬ್ರಹ್ಮಣಃ ಪ್ರೋಕ್ತಂ ದಿವ್ಯಾ ಕೋಟೀ ತು ಸಾ ಸ್ಮೃತಾ ॥ ೨೨೩ ॥

ಶತಾನಾಂ ಚ ಸಹಸ್ರಾಣಿ ದಶದ್ವಿಗುಣಿತಾನಿ ಚ ।
ನವತಿಂ ಚ ಸಹಸ್ರಾಣಿ ತಥೈವಾನ್ಯಾನಿ ಯಾನಿ ತು ॥ ೨೨೪ ॥

ಏತಚ್ಛ್ರುತ್ವಾ ತು ಋಷಯೋ ವಿಸ್ಮಯಂ ಪರಮಾದ್ಭುತಮ್ ।
ಸಂಖ್ಯಾಸಂಭಜನಂ ಜ್ಞಾನಮಪೃಚ್ಛನ್ ಸುತರಾಂ ತದಾ ॥ ೨೨೫ ॥

ಋಷಯ ಊಚುಃ :—

ಸಂಪ್ರಕಾಲನಮಾನಂ ತು ಮಾನುಷೇಣೈವ ಸಮ್ಮತಮ್ ।
ಮಾನೇನ ಶ್ರೋತುಮಿಚ್ಛಾಮಃ ಸಂಕ್ಷೇಪಾರ್ಥಪದಾಕ್ಷರಮ್ ॥ ೨೨೬ ॥

ತೇಷಾಂ ಶ್ರುತ್ವಾ ಸ ದೇವಸ್ತು ವಾಯುರ್ಲೋಕಹಿತೇ ರತಃ ।
ಸಂಕ್ಷೇಪಾದ್ದಿವ್ಯಚಕ್ಷುಷ್ಟ್ವಾತ್ ಪ್ರೋವಾಚ ವಚನಂ ಪ್ರಭುಃ ॥ ೨೨೭ ॥

---

೨೨೩. ಕಾಲದ ಸೂಕ್ಷ್ಮಾಂಶಗಳ ಪರಿಮಾಣವು ಕಲಾ ಎಂಬ ಸಂಕೇತದಿಂದ ಕರೆಯಲ್ಪಡುತ್ತವೆ ಬ್ರಹ್ಮದೇವನಿಗೆ ಯಾವ ಅಹಸ್ಸಿನ ಪರಿಮಾಣವು ಹೇಳಲ್ಪಟ್ಟಿರುವುದೊ ಅದು ದಿವ್ಯಕೋಟಿಪರಮಾಣವೆಂದು ಸ್ಮರಿಸಲ್ಪಟ್ಟಿದೆ.

೨೨೪. ಆ ದಿವ್ಯಕೋಟಿ ಸಂಖ್ಯೆಯಲ್ಲಿ ಹತ್ತು ಸಂಖ್ಯೆಯಿಂದ ದ್ವಿಗುಣಿತವಾದ ಶತಸಹಸ್ರಾತ್ಮಕವಾದ ಒಂದು ಲಕ್ಷ ವರ್ಷಗಣನೆಯೂ ಮತ್ತು ಬೇರೆಯಾಗಿ ತೊಂಭತ್ತು ಸಹಸ್ರ ವರ್ಷಗಣನೆಯೂ ಸೇರಿಕೊಂಡಿರುವುದು.

೨೨೫. ಈ ರೀತಿಯಾದ ಕಾಲಸಂವಿಭಾಗಾವಸ್ಥೆಯನ್ನು ಶ್ರವಣ ಮಾಡಿದ ಮಹಾ ಮುನಿಗಳು ಆಗ ಅತ್ಯಂತ ಪರಮಾಶ್ಚರ್ಯಮಗ್ನರಾಗಿ ಕಾಲಸಂಖ್ಯಾ ಸಂಭಜನದಲ್ಲಿ ಹೆಚ್ಚಾದ ಜ್ಞಾನಾರ್ಜನೆಯಲ್ಲಿ ಆದರದಿಂದ ಮತ್ತೆ ಈ ರೀತಿಯಾಗಿ ಪ್ರಶ್ನಿಸಿದರು.

೨೨೬. ಮುನಿಜನರು ಇಂತೆಂದರು :—ಸರ್ಗ-ಪ್ರತಿಸರ್ಗ ಕಾಲಗಳ ಪರಿಮಾಣ ಗಣನೆಯು ಮಾನುಷ ಪರಿಮಾಣದ ರೀತಿಯನ್ನು ಅನುಸರಿಸಿದಂತೆ ಸಮ್ಮತವಾಗಿದೆ. ಆದ್ದರಿಂದ ಅಕ್ಷರ-ಪದ-ಅರ್ಥಗಳ ಸಂಕ್ಷೇಪಗರ್ಭಿತವಾದ ವಚನದಿಂದ ಮಾನುಷ ಪರಿಮಾಣದಿಂದ ಅದನ್ನು ಕೇಳಲು ಇಚ್ಛಿಸುತ್ತೇವೆ.

೨೨೭. ಈ ಮುನಿಜನರ ವಚನವನ್ನು ಕೇಳಿ ಲೋಕಗಳಿಗೆ ಹಿತವನ್ನುಂಟು ಮಾಡುವುದರಲ್ಲಿ ನಿರತನೂ ಪ್ರಭುವೂ ಆದ ವಾಯುದೇವನು ದಿವ್ಯದೃಷ್ಟಿಯಿಂದ ಕೂಡಿರುವನಾದಕಾರಣ ಮುನಿಗಳ ಪ್ರಶ್ನಕ್ಕೆ ಉತ್ತರವನ್ನು ಸಂಕ್ಷೇಪವಾಗಿ ಹೇಳಿದನು.

ಏತೇ ರಾತ್ರ್ಯಹನೀ ಪೂರ್ವಂ ಕೀರ್ತಿತೇ ತ್ವಿಹ ಲೌಕಿಕೇ ।
ತಾಸಾಂ ಸಂಖ್ಯಾಥ ವರ್ಷಾಗ್ರಂ ಬ್ರಾಹ್ಮೇ ವಕ್ಷ್ಯಾಮ್ಯಹಃಕ್ಷಯೇ
॥ ೨೨೮ ॥

ಕೋಟೀಶತಾನಿ ಚತ್ವಾರಿ ವರ್ಷಾಣಿ ಮಾನುಷಾಣಿ ತು ।
ದ್ವಾತ್ರಿಂಶಚ್ಚ ತಥಾ ಕೋಟ್ಯಃ ಸಂಖ್ಯಾತಾಃ ಸಂಖ್ಯಯಾ ದ್ವಿಜೈಃ
॥ ೨೨೯ ॥

ತಥಾ ಶತಸಹಸ್ರಾಣಿ ಏಕೋನನವತಿಃ ಪುನಃ ।
ಅಶೀತಿಶ್ಚ ಸಹಸ್ರಾಣಿ ಏಷ ಕಾಲಃ ಪ್ಲವಸ್ಯ ತು ॥ ೨೩೦ ॥

ಮಾನುಷಾಖ್ಯೇನ ಸಂಖ್ಯಾತಃ ಕಾಲೋ ಹ್ಯಾಭೂತಸಂಪ್ಲವಃ ।
ಸಪ್ತಸೂರ್ಯಪ್ರದಗ್ಧೇಷು ತದಾ ಲೋಕೇಷು ತೇಷು ವೈ ॥ ೨೩೧ ॥

ಮಹಾಭೂತೇಷು ಲೀಯಂತೇ ಪ್ರಜಾಃ ಸರ್ವಾಶ್ಚತುರ್ವಿಧಾಃ ।
ಸಲಿಲೇನಾಪ್ಲುತೇ ಲೋಕೇ ನಷ್ಟೇ ಸ್ಥಾವರಜಂಗಮೇ ॥ ೨೩೨ ॥

---

೨೨೮. ಇಲ್ಲಿ ಪೂರ್ವದಲ್ಲಿ ಲೌಕಿಕ ರೀತಿಯಲ್ಲಿ ರಾತ್ರಿ ಮತ್ತು ಹಗಲು ಎಂಬ ಕಾಲಾಂಶಗಳು ಕೀರ್ತಿಸಲ್ಪಟ್ಟಿರುವುವು. ಪೂರ್ಣ ವರ್ಷಗಣಗರ್ಭಿತವಾದ ಅವುಗಳ ಸಂಖ್ಯೆಯನ್ನು ಬ್ರಹ್ಮದೇವನ ಅಹಃಕಾಲ ಸಮಾಪ್ತಿಯಲ್ಲಿ ಅನ್ವಯಿಸುವಂತೆ ಹೇಳುತ್ತೇನೆ.

೨೨೯. ಆ ಕಾಲ ಸಂಖ್ಯೆಯಲ್ಲಿ ಮಾನುಷಮಾನದಿಂದ ನಾಲ್ಕು ನೂರು ಕೋಟಿ ವರ್ಷಗಳು ಹಾಗು ಮತ್ತೆ ಮೂವತ್ತೆರಡು ಕೋಟಿ ವರ್ಷಗಳು ಇವೆಯೆಂದು ಕಾಲಾಭಿಜ್ಞರಾದ ಮಹಾತ್ಮರಿಂದ ಸಂಖ್ಯೆಯು ಗಣಿಸಲ್ಪಟ್ಟಿದೆ.

೨೩೦. ಹಾಗೆ ಶತಸಹಸ್ರಾತ್ಮಕವಾದ ಲಕ್ಷ ವರ್ಷಗಳು, ಮತ್ತೆ ಎಂಭತ್ತೊಂಭತ್ತು ಸಹಸ್ರ ವರ್ಷಗಳು, ಮತ್ತು ಎಂಭತ್ತು ಸಹಸ್ರ ವರ್ಷಗಳು ಎಂಬ ಸಂಖ್ಯೆಯಿಂದ ಗಣಿತವಾದ ಕಾಲವು ಪ್ರಲಯಾವಸ್ಥೆಗೆ ಸೇರಿರುವುದು.

೨೩೧. ಹೀಗೆ ಆಭೂತ ಸಂಪ್ಲವವೆಂಬ ಸರ್ವ ಸಂಹಾರ ಕಾಲವು ಮಾನುಷ ಮಾನದಿಂದ ಹೇಳಲ್ಪಟ್ಟಿರುವುದು. ಆಗ ಸಕಲ ಲೋಕಗಳು ಪ್ರಲಯದಲ್ಲಿ ಉದಯಿಸುವ ಸಪ್ತ ಸೂರ್ಯರಿಂದ ಸಂಪೂರ್ಣವಾಗಿ ದಹಿಸಲ್ಪಡುವುವು.

೨೩೨. ಜರಾಯುಜ ಮೊದಲಾದ ನಾಲ್ಕು ವಿಧದ ಪ್ರಾಣಿವರ್ಗವೆಲ್ಲವು ಸ್ವಕಾರಣಗಳಾದ ಮಹಾ ಭೂತಗಳಲ್ಲಿ ಲಯವನ್ನು ಹೊಂದುತ್ತದೆ. ಆಗ ಲೋಕ ಪರಂಪರೆಯು ನಷ್ಟವಾಗಿ ಸ್ಥಾವರ-ಜಂಗಮ ಭೂತಸರ್ಗವು ಜಲರಾಶಿಯಿಂದ ತುಂಬಿಹೋಗುವುದು.

ವಿನಿವೃತ್ತೇ ಚ ಸಂಹಾರೇ ಉಪಶಾಂತೇ ಪ್ರಜಾಪತೌ ।
ನಿರಾಲೋಕೇ ಪ್ರದಗ್ಧೇ ತು ನೈಶೇನ ತಮಸಾ ವೃತೇ ॥ ೨೩೩ ॥

ಈಶ್ವರಾಧಿಷ್ಠಿತೇ ತ್ವಸ್ಮಿಂಸ್ತದಾ ಹ್ಯೇಕಾರ್ಣವೇ ಕಿಲ ।
ತಾವದೇಕಾರ್ಣವೇ ಜ್ಞೇಯಂ ಯಾವದ್ಧಾಸೀದಹಃ ಪ್ರಭೋಃ ॥ ೨೩೪ ॥

ರಾತ್ರಿಸ್ತು ಸಲಿಲಾವಸ್ಥಾ ನಿವೃತ್ತೌ ವಾಪ್ಯಹಃ ಸ್ಮೃತಮ್ ।
ಅಹೋರಾತ್ರಸ್ತಥೈವಾಸ್ಯ ಕ್ರಮೇಣ ಪರಿವರ್ತತೇ ॥ ೨೩೫ ॥

ಆಭೂತಸಂಪ್ಲವೋ ಹ್ಯೇಷ ಅಹೋರಾತ್ರಃ ಸ್ಮೃತಃ ಪ್ರಭೋಃ ।
ತ್ರೈಲೋಕ್ಯೇ ಯಾನಿ ಸತ್ತ್ವಾನಿ ಗತಿಮಂತಿ ಧ್ರುವಾಣಿ ಚ ॥ ೨೩೬ ॥

---

೨೩೩. ಪ್ರಪಂಚದ ಪ್ರಲಯವು ಪೂರ್ಣವಾಗಿ ಅವಸಾನಹೊಂದಿ ಪ್ರಜಾಪತಿ ದೇವನು ತನ್ನ ಸೃಷ್ಟಿವ್ಯಾಪಾರದಿಂದ ಶಾಂತನಾಗಿರಲು ಆ ಅವಸ್ಥೆಯಲ್ಲಿ ದಗ್ಧವಾದ ಭೂತಸಂಘವು ಪ್ರಕಾಶಶೂನ್ಯವೂ ರಾತ್ರಿವೇಳೆಯ ಗಾಢಾಂಧಕಾರದಿಂದ ಆವೃತವೂ ಆಗಿರುವುದು.

೨೩೪. ಆಗ ಸಂಭವಿಸುವ ಏಕಾರ್ಣವಾವಸ್ಥೆಯು ಈಶ್ವರನಿಂದ ನಿಯಮಿತವಾಗಿರುವುದು. ಪೂರ್ಣ ಸಮುದ್ರದಲ್ಲಿ ವಿಭಾಗವು ಸ್ವಲ್ಪವೂ ತೋರದಂತೆ ಪ್ರಲಯದಶೆಯಲ್ಲಿ ವಸ್ತು ವಿಭಾಗವು ಗೋಚರವಾಗುವುದಿಲ್ಲ. ಅಂತಹ ಏಕಾರ್ಣವಾವಸ್ಥೆಯು ಪ್ರಭುವಾದ ಬ್ರಹ್ಮದೇವನಿಗೆ ಅಹಃಕಾಲದ ಪರಿಮಾಣವು ಎಷ್ಟಿದ್ದಿತೋ, ಅಷ್ಟು ಸಮಯದವರೆಗೆ ಅನುವರ್ತಿಸುವುದು.

೨೩೫. ಸಲಿಲಾವಸ್ಥೆಯಿಂದ ಪ್ರಪಂಚವು ಗ್ರಸ್ತವಾಗಿರುವುದು ಬ್ರಹ್ಮದೇವನ ರಾತ್ರಿಯು. ಅಂತಹ ರಾತ್ರಿಯು ನಿವೃತ್ತಿ ಹೊಂದಿದರೆ ಅಹಸ್ಸು ಉದಯಿಸುವುದೆಂದು ಸ್ಮರಿಸಲ್ಪಟ್ಟಿದೆ. ಹೀಗೆ ಬ್ರಹ್ಮದೇವನ ಅಹೋರಾತ್ರ ಕಾಲಗಳು ಕ್ರಮವಾಗಿ ಜರುಗುತ್ತಲಿರುವುವು.

೨೩೬. ಹೀಗೆ ಪ್ರಭುದೇವನಿಗೆ ಅಹಸ್ಸು ಕಳೆದು ತಕ್ಷಣದಲ್ಲಿ ಬರುವ ರಾತ್ರಿಯು "ಆಭೂತಸಂಪ್ಲವ" ಎಂಬ ನಾಮಾಂಕನದಿಂದ ಸ್ಮರಿಸಲ್ಪಟ್ಟಿದೆ. ಅಹಃಕಾಲದಲ್ಲಿ ಗತಿಯಿರುವುದರಿಂದ ಜಂಗಮವೂ, ಗತಿರಹಿತವಾದುದರಿಂದ ಸ್ಥಾವರವೂ ಆದ ಪ್ರಾಣಿಗಳು ತ್ರೈಲೋಕ್ಯದಲ್ಲಿ ವಾಸಿಸುವುವು.

ಆಭೂತೇಭ್ಯಃ ಪ್ರಲೀಯಂತೇ ತಸ್ಮಾದಾಭೂತಸಂಪ್ಲವಃ ।
ಅತೀತಾ ವರ್ತಮಾನಾಶ್ಚ ತಥೈವಾನಾಗತಾಃ ಪ್ರಜಾಃ ॥ ೨೩೭ ॥

ದಿವ್ಯಸಂಖ್ಯಾ ಪ್ರಸಂಖ್ಯಾತಾ ಅಪರಾರ್ಧಗುಣೀಕೃತಾ ।
ಪರಾರ್ಧಂ ದ್ವಿಗುಣಂ ಚಾಪಿ ಪರಮಾಯುಃ ಪ್ರಕೀರ್ತಿತಮ್ ॥ ೨೩೮ ॥

ಏತಾವಾನ್ ಸ್ಥಿತಿಕಾಲಸ್ತು ಹ್ಯಜಸ್ಯೇಹ ಪ್ರಜಾಪತೇಃ ।
ಸ್ಥಿತ್ಯಂತಂ ಪ್ರತಿಸರ್ಗಶ್ಚ ಬ್ರಹ್ಮಣಃ ಪರಮೇಷ್ಠಿನಃ ॥ ೨೩೯ ॥

ಯಥಾ ವಾಯುಪ್ರವೇಗೇನ ದೀಪಾರ್ಚಿರುಪಶಾಮ್ಯತಿ ।
ತಥೈವ ಪ್ರತಿಸರ್ಗೇಣ ಬ್ರಹ್ಮಾ ಸಮುಪಶಾಮ್ಯತಿ ॥ ೨೪೦ ॥

ತಥಾ ಸ್ವಪ್ರತಿಸಂಸೃಷ್ಟೇ ಮಹದಾದೌ ಮಹೇಶ್ವರೇ ।
ಮಹತ್ಪ್ರಲೀಯತೇಽವ್ಯಕ್ತೇ ಗುಣಸಾಮ್ಯಂ ತತೋ ಭವೇತ್ ॥ ೨೪೧ ॥

---

೨೩೭. ಆ ಪ್ರಾಣಿಗಳು ತಮ್ಮ ಉಪಾದಾನ ಕಾರಣವಾದ ಭೂತಗಳ ಸಹಿತವಾಗಿ ನಾಶಹೊಂದುವುದರಿಂದ "ಆಭೂತಸಂಪ್ಲವ" ಎಂಬ ಅನ್ವರ್ಥನಾಮವು ಬಂದಿರುವುದು. ಈ ರೀತಿಯಾಗಿ ಹೇಳಿರುವ ದಿವ್ಯ ಸಂಖ್ಯೆಯಲ್ಲಿ ಭೂತ-ಭವಿಷ್ಯತ್-ವರ್ತಮಾನರಾದ ಪ್ರಜಾಕೋಟಿಯು ಅಂತರ್ಗತವಾಗಿದೆ.

೨೩೮. ಹೀಗೆ ಪರಾರ್ಧ ಸಂಖ್ಯೆಯಿಂದ ಗುಣಿಸಲ್ಪಟ್ಟು ದ್ವಿಗುಣವಾದ ದಿವ್ಯ ಕಾಲ ಸಂಖ್ಯೆಯು ಹೇಳಲ್ಪಟ್ಟಿದೆ, ಬ್ರಹ್ಮದೇವನಿಗೆ ಇಂತಹ ದ್ವಿಗುಣವಾದ ಪರಾರ್ಧ ಕಾಲವು ಪರಮಾಯುಷ್ಯಗಣನೆಯೆಂದು ಹೇಳಲ್ಪಟ್ಟಿದೆ.

೨೩೯. ಸಕಲ ಪ್ರಜಾಪಾಲಕನಾದ ಬ್ರಹ್ಮದೇವನಿಗೆ ಇಷ್ಟೇ ಪರಿಮಾಣದ ಸ್ಥಿತಿ ಕಾಲವು. ಹಾಗೆ ಸ್ಥಿತಿ ಕಾಲವು ಕಳೆದ ತರುವಾಯ ಪರಮಸ್ಥಾನದಲ್ಲಿರುವ ಬ್ರಹ್ಮದೇವನ ಪ್ರತಿಸರ್ಗ (ಲಯ) ವು ಸಂಭವಿಸುತ್ತದೆ.

೨೪೦. ಪ್ರಬಲವಾದ ಗಾಳಿಯ ಆಘಾತದಿಂದ ದೀಪಜ್ವಾಲೆಯು ಹೇಗೆ ಆರಿಹೋಗುವುದೋ, ಹಾಗೆಯೇ ಕಾಲಗಣನಾವಶದಿಂದ ಒದಗುವ ಪ್ರತಿಸರ್ಗ ದಶೆಯಿಂದ ಬ್ರಹ್ಮನು ಶಾಂತನಾಗುವನು.

೨೪೧. ಆಗ ಬ್ರಹ್ಮದೇವನಿಂದ ಸೃಷ್ಟಿಯಾದ ತತ್ತ್ವ ಸೃಷ್ಟಿಯಲ್ಲಿ ಇತರ ತತ್ತ್ವಗಳು ಕ್ರಮವಾಗಿ ವ್ಯಾಪಕವೂ, ನಿಯಾಮಕವೂ ಆದ ಮಹತ್ತತ್ತ್ವದಲ್ಲಿ ಲಯಹೊಂದಿ ಮಹತ್ತತ್ತ್ವವು ಅವ್ಯಕ್ತಕಾರಣದಲ್ಲಿ ಲಯಹೊಂದುವುದು. ಆಗ ಸತ್ತ್ವರಜಃ-ತಮೋಗುಣಗಳ ಸಾಮ್ಯಾವಸ್ಥೆಯು ಉಂಟಾಗುವುದು.

ಇತ್ಯೇಷ ವಃ ಸಮಾಖ್ಯಾತೋ ಮಯಾ ಹ್ಯಾಭೂತಸಂಪ್ಲವಃ ।
ಬ್ರಹ್ಮನೈಮಿತ್ತಿಕೋ ಹ್ಯೇಷ ಸಂಪ್ರಕ್ಷಾಲನಸಂಯಮಃ ।
ಸಮಾಸೇನ ಸಮಾಖ್ಯಾತೋ ಭೂಯಃ ಕಿಂ ವರ್ಣಯಾಮಿ ವಃ ॥೨೪೨॥

ಯ ಇದಂ ಧಾರಯೇನ್ನಿತ್ಯಂ ಶೃಣುಯಾದ್ವಾಪ್ಯಭೀಕ್ಷ್ಣಶಃ ।
ಕೀರ್ತಯೇದ್ವರ್ಣಯೇದ್ವಾಪಿ ಮಹತೀಂ ಸಿದ್ಧಿಮಾಪ್ನುಯಾತ್ ॥ ೨೪೩ ॥

ಇತಿ ಶ್ರೀ ಬ್ರಹ್ಮಾಂಡಪುರಾಣೇ ಉತ್ತರಾರ್ಧೇ
ಪಂಚಸಪ್ತತಿತಮೋಽಧ್ಯಾಯಃ

---

೨೪ ಈ ರೀತಿಯಾಗಿ ನಿಮಗೆ ನನ್ನಿಂದ ಆಭೂತಸಂಪ್ಲವವೆಂಬ ಪ್ರಲಯ ದಶೆಯು ಉಪದೇಶಿಸಲ್ಪಟ್ಟಿರುವುದು. ಈ ಪ್ರಲಯ ರಚನೆಯು ಬ್ರಹ್ಮದೇವನೆಂಬ ನಿಮಿತ್ತ ಕಾರಣದಿಂದ ಜನಿಸುವುದು.

೨೪೩. ಇಂತಹ ಪ್ರಲಯದ ಸಂಭವವನ್ನು ಸಂಗ್ರಹವಾಗಿ ಹೇಳಿರುತ್ತೇನೆ. ಮುಂದೆ ಇನ್ನಾವ ವಿಷಯವನ್ನು ಕೇಳಬೇಕೆಂದು ನೀವು ಜಿಜ್ಞಾಸೆಯಿಂದಿರುವಿರೋ, ಅದನ್ನು ಅನುಸರಿಸಿ ಪುರಾಣಾರ್ಥವನ್ನು ವರ್ಣಿಸುತ್ತೇನೆ.

ಬ್ರಹ್ಮಾಂಡಪುರಾಣದ ಉತ್ತರಾರ್ಧದಲ್ಲಿ ಎಪ್ಪತ್ತೈದನೆಯ ಅಧ್ಯಾಯವು
ಸಮಾಪ್ತವು.